# ಶ್ರೀ ಸ್ಕಂದ ಮಹಾಪುರಾಣ

ಪಂ. ಪಂಢರೀನಾಥಾಚಾರ್ಯ ಗಲಗಲಿ





ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಶ್ರೀ ಸ್ಕಂದ ಮಹಾಪುರಾಣ

ಭಾಗ-೧

ಅನುವಾದ-ಲೇಖಕರು

ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ,

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮಿ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ

-: ಪ್ರಕಾಶಕರು :-

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 6320014 ಫ್ಯಾಕ್ಸ್ : 0091-80-6321416

SRI SKANDA MAHĀPURĀṆA of Bhagavān Sri Vedavyāsā,
Edited and Translated in to Kannada by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathāchārya Galagali
Vishveswara Nagar, Shanti Colony, Hubli-580032 Ph : (0836) 250250

First Edition : 1967

Second Edition : 2003

No. of Pages : xx + 344

No. of Copies : 1,000



Price : Rs. 180 = 00

Printed at : **SRI VENKATESHWARA PRINTERS**
No. 3, Yellappa Road, Susheela Road Cross
Chick Mavalli, BANGALORE-560 004
Phone : 6573001

# ಪ್ರಸ್ತಾವನೆ

ಭಾರತೀಯ ಧರ್ಮ, ಸಂಸ್ಕೃತಿ ಹಾಗೂ ಇತಿಹಾಸ ದೃಷ್ಟಿಯಿಂದ ಪುರಾಣಗಳಿಗೆ ವಿಶಿಷ್ಟಸ್ಥಾನವುಂಟು. ವೇದ, ಸ್ಮೃತಿಗಳ ಅನಂತರ ಪುರಾಣಗಳೇ ಭಾರತೀಯರ ಆಚಾರ, ವಿಚಾರ, ಸಂಪ್ರದಾಯಗಳಿಗೆ ಆಧಾರಭೂತವಾದ ಪ್ರಮಾಣಗ್ರಂಥಗಳಾಗಿವೆ. **''ಇತಿಹಾಸ-ಪುರಾಣಾಭ್ಯಾಂ ವೇದಂ ಸಮುಪ ಬೃಹಂಯೇತ್''** ಎಂದು ಹೇಳಿದ ಪ್ರಕಾರ ವೈದಿಕದರ್ಶನಕ್ಕೆ ನಿದರ್ಶನಗಳನ್ನು ಪುರಾಣಗಳು ಪ್ರದರ್ಶನ ಮಾಡುತ್ತವೆ. ವೇದಾರ್ಥಗಳು ವೇದ್ಯವಾಗುವುದು ಪುರಾಣಗಳಿಂದಲೇ.

ಮಹಾತ್ಮರಾದ ಭಗವಾನ್ ವೇದವ್ಯಾಸರು ರಚಿಸಿದ ಹದಿನೆಂಟು ಪುರಾಣಗಳಲ್ಲಿ ಅತ್ಯಂತ ದೊಡ್ಡದಾದ ಪುರಾಣವೆಂದರೆ ಸ್ಕಂದ ಪುರಾಣ. ಪರಮೇಶ್ವರನ ವರಕುಮಾರನಾದ ಕುಮಾರ ಸ್ವಾಮಿ ಅರ್ಥಾತ್ ಸ್ಕಂದದೇವನ ಚರಿತ್ರೆಯನ್ನು ನಿರೂಪಿಸ ಹೊರಟ ಈ ಮಹಾಮಹತ್ತರವಾದ ಪುರಾಣದಲ್ಲಿ ಶಿವ-ವಿಷ್ಣು ಮುಂತಾದ ಬೇರೆ ಎಲ್ಲ ದೇವಧಿದೇವತೆಗಳ ಚಾರುಚರಿತ್ರೆಗಳೂ ಚೇತೋಹಾರಿಯಾದ ಶೈಲಿಯಲ್ಲಿ ರಸಾಳವಾಣಿಯಿಂದ ಚಿತ್ರಿತವಾಗಿವೆ. ಅನೇಕಾನೇಕ ರಾಜವಂಶ, ಮುನಿಕುಲ, ಶ್ರೀಸಾಮಾನ್ಯರ ಬದುಕಿನ ಬಗೆಬಗೆಯ ಬವಣೆ, ಸೈರಣೆ. ಉತ್ಥಾನ-ಪತನ, ಪುರೋಗತಿ-ಪರಾಗತಿ, ಸುಖ-ದುಃಖ, ಕಷ್ಟ-ನಷ್ಟ, ಸಂಸ್ಕೃತಿ-ವಿಕೃತಿ, ಸಂತಾಪ-ಸಂತಸ ಮುಂತಾದ ಅವಸ್ಥಾಂತರಗಳನ್ನು ಸುರುಳಿ ಬಿಚ್ಚಿ ತೋರಿಸುತ್ತ ಈ ಪುರಾಣವು ಮನುಕುಲವು ನಡೆದುಬಂದ ದಾರಿಯ ಗೆರೆ ಗುರುತುಗಳನ್ನು ನಿಚ್ಚಳವಾಗಿ ಕಾಣಿಸುತ್ತದೆ. ದೇವ, ಮುನಿ, ಋಷಿ, ರಾಜರಂತೆ ದೀನ, ದರಿದ್ರ, ವೇಶ್ಯೆ, ಚಂಡಾಲ, ಪತಿತ ದಲಿತರ ಯಾತನಾಮಯವಾದ ದಾರುಣ ಜೀವನದ ಹೋರಾಟ ಅಪಾಯ ಉಪಾಯ ಉದ್ಧಾರ ಉತ್ಕರ್ಷಗಳ ಚಿತ್ರಮಾಲೆಗಳನ್ನು ಕಣ್ಣೆದುರು ಬಿಡಿಸಿ ಎಲ್ಲರೂ ಕೈವಲ್ಯದತ್ತ ಅನಿರ್ಬಂಧವಾಗಿ ಸಾಗಿ ಸಿದ್ಧಿಪಡೆಯುವ ಸತ್ಯದ ಸತ್ಪಥ ಮುಕ್ತಿಯಮಂದಿರ ಮುಕ್ತದ್ವಾರವಾಗಿದೆ. ಎಲ್ಲ ಜಾತಿಜನಾಂಗದವರಿಗೂ ಎಂದು ಉದ್ಘೋಷಿಸುತ್ತದೆ ಈ ಸ್ಕಂದ ಪುರಾಣ.

ಈ ಪುರಾಣದ ಮುಖ್ಯ ಪ್ರತಿಪಾದ್ಯ ದೇವತೆ ಸ್ಕಂದ ಮತ್ತು ಅವನ ತಂದೆ ಪರಶಿವ. ಮಹಾಭಾರತದಂತೆ ಒಂದು ಲಕ್ಷ ಶ್ಲೋಕಾತ್ಮಕವಾದ ಈ ಬೃಹದ್ಗ್ರಂಥದಲ್ಲಿ ಅಧ್ಯಾತ್ಮ, ನೀತಿ, ನಿಯಮ, ದೈವವಾದ, ಪೌರುಷವಾದ, ಪ್ರಯತ್ನ ಪ್ರಾಧಾನ್ಯ, ವಿಧಿವಿಲಾಸ, ದುರಾಚಾರದ ದುಷ್ಪರಿಣಾಮ, ಸದಾಚಾರದ ಮಧುರಫಲ, ಸತ್ಯ ಅಹಿಂಸೆ ಸದಾಚಾರ

ಪರೋಪಕಾರಗಳ ಮಹತಿ, ಕಪಟ ಕ್ರೌರ್ಯ ನೈಚ್ಯ ನೈಷ್ಠುರ್ಯಗಳ ಜಘನ್ಯತೆ ಮುಂತಾದವುಗಳು ಒಳ್ಳೊಳ್ಳೆ ದೃಷ್ಟಾಂತ ಹಾಗೂ ನೀತಿ ವಚನಗಳ ಮೂಲಕ ಜನಮನದಲ್ಲಿ ಬಿಂಬಿಸುವಂತೆ ಸುಂದರವಾಗಿ ನಿರೂಪಿಸಲ್ಪಟ್ಟಿವೆ.

ಹದಿನೆಂಟು ಪುರಾಣಗಳಲ್ಲಿಯೇ ಗಾತ್ರದಲ್ಲಿ ಇಷ್ಟು ದೊಡ್ಡದಾದ ಪುರಾಣವಿಲ್ಲ. ಅಷ್ಟೇ ಏಕೆ! ಸಮಗ್ರ ಭಾರತೀಯ ವಾಙ್ಮಯದಲ್ಲಿಯೇ ಮಹಾಭಾರತ ಬಿಟ್ಟು ಇಷ್ಟೊಂದು ಬೃಹತ್ತರ ಮತ್ತುಮಹತ್ತರ ಗ್ರಂಥವಿಲ್ಲ ಎಂದರೆ ಅತಿಶಯೋಕ್ತಿ ಅಲ್ಲ.

ಈ ಸ್ಕಂದ ಪುರಾಣವು ಬಹಳ ದಿನಗಳ ಹಿಂದೆ ಸಂಸ್ಕೃತದ ದೇವನಾಗರಿ ಲಿಪಿಯಲ್ಲಿ ಮುಂಬೈ ವೆಂಕಟೇಶ್ವರ ಪ್ರಿಂಟಿಂಗ್ ಪ್ರೆಸ್ಸಿನಲ್ಲಿಯೂ, ಬಂಗಾಲದ ವಂಗವಾಸಿ ಮುದ್ರಣಾಲಯದಲ್ಲಿಯೂ ಮುದ್ರಿತವಾಗಿತ್ತು. ಇತ್ತೀಚೆಗೆ ಕೋಲ್ಕತ್ತ ಲುಧಿಯಾನಾ ಮುಂತಾದ ಕಡೆಗಳಲ್ಲಿಯೂ ಮುದ್ರಿತವಾಗಿದೆ. ಈಗ ಮುದ್ರಿತವಾದ ಸ್ಕಂದ ಪುರಾಣದಲ್ಲಿ ಏಳು ಖಂಡಗಳಿದ್ದು ಇದು ಮಹಾಪುರಾಣ ಎಂದು ಪ್ರಸಿದ್ಧವಾಗಿದೆ. ಮಹಾಪುರಾಣದ ಲಕ್ಷಣಗಳೆಲ್ಲವೂ ಇದರಲ್ಲಿ ಇರುತ್ತವೆ. ಅವುಗಳನ್ನೇ ನಾವು ನಮ್ಮ ಈ ಅನುವಾದ ಕಾರ್ಯಕ್ಕೆ ಮೂಲಮಾತೃಕೆಗಳನ್ನಾಗಿ ಹಿಡಿದಿದ್ದೇವೆ.

ಆದರೆ ಸ್ಕಂದ ಪುರಾಣಸಂಹಿತಾತ್ಮಕ ಭಾಗವೂ ಬಹು ದೊಡ್ಡದಿದೆ. ಸಂಹಿತಾತ್ಮಕ ಸ್ಕಂದ ಪುರಾಣವು ಉಪಪುರಾಣ ಎಂದು ಕೆಲವರು ಹೇಳುವದು ಪೌರಾಣಿಕ ವಾಙ್ಮಯದ ಗಾಢಅಜ್ಞಾನ ಮೂಲಕವೇ ಸರಿ. ಈ ಸಂಹಿತಾತ್ಮಕ ಸ್ಕಂದ ಪುರಾಣವು ಇಂದು ಸಂಪೂರ್ಣವಾಗಿ ಉಪಲಬ್ಧವಿಲ್ಲದಿದ್ದರೂ ಈಗ ದೊರೆತಷ್ಟು ಭಾಗವೂ ಈ ಪುರಾಣದ ಮೇಲ್ಮೆ ಮಹತಿಗೆ ಸಾಕ್ಷಿಯಾಗಿದೆ. ಮಹಾಮುನೀಷಿ ಮಾಧವಾಚಾರ್ಯರು ಸಂಹಿತಾತ್ಮಕವಾದ ಸ್ಕಂದ ಪುರಾಣದಲ್ಲಿಯ ಸೂತ ಸಂಹಿತೆಗೆ 'ಸೂತ ಸಂಹಿತಾತಾತ್ಪರ್ಯ ದೀಪಿಕಾ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಆದುದರಿಂದ ಖಂಡಾತ್ಮಕ ಸ್ಕಂದ ಪುರಾಣ ಸಂಹಿತಾತ್ಮಕ ಸ್ಕಂದ ಪುರಾಣ ಎರಡೂ ಕೂಡಿಯೇ ಒಂದು ಸ್ಕಂದಮಹಾಪುರಾಣವಾಗಿದೆ ಎಂಬುದು ನಿರ್ವಿವಾದ.

ಅದಕ್ಕಾಗಿ ಸ್ಕಂದ ಮಹಾಪುರಾಣವನ್ನು ಕನ್ನಡಕ್ಕೆ ಇಡಿಯಾಗಿಯೇ ಇಳಿಸಲಿಕ್ಕೆ ಹೊರಟ ನಾವು ಮೊದಲು ಸಂಪೂರ್ಣವಾಗಿ ಉಪಲಬ್ಧವಾದ ಹಾಗೂ ಮುದ್ರಿತವಾದ ಖಂಡಾತ್ಮಕ ಭಾಗವನ್ನು ಪ್ರಕಟಿಸಲು ಮೊದಲು ಮಾಡಿದ್ದೇವೆ. ಅನಂತರ ಸಂಹಿತಾತ್ಮಕ ಭಾಗವನ್ನೂ ಕನ್ನಡಿಸಿ ಕೊಡಲಾಗುವುದು.

ಮುಂಬೈ ವೆಂಕಟೇಶ್ವರ ಪ್ರೆಸ್ ಮತ್ತುವಂಗವಾಸಿ ಪ್ರೆಸ್ಸಿನವರು ಮುದ್ರಿಸಿದ ಎರಡೂ ಖಂಡಾತ್ಮಕ ಸ್ಕಂದ ಪುರಾಣಗಳಲ್ಲಿ ಶ್ಲೋಕಗಳ ಸಂಖ್ಯೆಯು ಸಾಮಾನ್ಯವಾಗಿ ಸಮನಾಗಿದೆ. ಎರಡರಲ್ಲಿಯೂ (೧) ಮಾಹೇಶ್ವರ ಖಂಡ (೨) ವೈಷ್ಣವ ಖಂಡ (೩) ಬ್ರಾಹ್ಮಖಂಡ (೪) ಕಾಶೀ ಖಂಡ (೫) ಆವಂತ್ಯ ಖಂಡ (೬) ನಾಗರ ಖಂಡ

(೭) ಪ್ರಭಾಸ ಖಂಡ ಎಂದು ಏಳು ವಿಭಾಗಗಳು ಇರುತ್ತವೆ. ಇವುಗಳನ್ನೇ ಮಹೇಶ್ವರ ಖಂಡ, ವಿಷ್ಣುಖಂಡ, ಬ್ರಹ್ಮಖಂಡ ಎಂದೂ ಕರೆಯುತ್ತಾರೆ.

ಇವುಗಳಲ್ಲಿ ಮೊದಲನೆಯದಾದ ಮಾಹೇಶ್ವರ ಖಂಡದಲ್ಲಿ ಕೇದಾರಖಂಡ, ಕುಮಾರಿಕಾ ಖಂಡ, ಅರುಣಾಚಲ ಮಾಹಾತ್ಮ್ಯ ಖಂಡ (ಪೂರ್ವಾರ್ಧ ಉತ್ತರಾರ್ಧ ಸಹಿತ) ಎಂದು ಮೂರು ಉಪಖಂಡಗಳು ಇರುತ್ತವೆ.

ಎರಡನೆಯದಾದ ವೈಷ್ಣವ ಖಂಡದಲ್ಲಿ ವೆಂಕಟಾಚಲ ಮಹಾತ್ಮ್ಯ ಅಥವಾ ಭೂವರಾಹಖಂಡ, ಉತ್ಕಲಖಂಡ ಅಥವಾ ಪುರುಷೋತ್ತಮ ಮಾಹಾತ್ಮ್ಯ, ವಿಶಾಲಾ ಖಂಡ ಅಥವಾ ಬದರಿಕಾಶ್ರಮ ಕ್ಷೇತ್ರ ಮಾಹಾತ್ಮ್ಯ, ಕಾರ್ತಿಕ ಮಾಸ ಮಾಹಾತ್ಮ್ಯ ವೈಶಾಖ ಮಾಸ ಮಾಹಾತ್ಮ್ಯ, ಅಯೋಧ್ಯಾ ಮಾಹಾತ್ಮ್ಯ ಎಂದು ಉಪವಿಭಾಗಗಳು ಇರುತ್ತವೆ.

ಮೂರನೆಯದಾದ ಬ್ರಾಹ್ಮಖಂಡದಲ್ಲಿ ಸೇತು ಮಾಹಾತ್ಮ್ಯ ಖಂಡ, ಧರ್ಮಾರಣ್ಯ ಖಂಡ, ಚಾತುರ್ಮಾಸ್ಯ ಮಹಾತ್ಮ್ಯಖಂಡ, ಬ್ರಹ್ಮೋತ್ತರ ಖಂಡ ಎಂದು ನಾಲ್ಕು ವಿಭಾಗಗಳು ಇರುತ್ತವೆ.

ನಾಲ್ಕನೆಯದಾದ ಕಾಶೀಖಂಡದಲ್ಲಿ ಪೂವಾರ್ಧ ಉತ್ತರಾರ್ಧ ಎಂದು ಎರಡು ಭಾಗಗಳು ಇದ್ದು ಇದರಲ್ಲಿ ಕಾಶೀ ಕ್ಷೇತ್ರದ ಮಹಿಮೆ ಶ್ರೀ ಮಹಾದೇವರ ಮಹಾಮಹಿಮೆ ಗಳೂ ವರ್ಣಿಸಲ್ಪಟ್ಟಿರುತ್ತವೆ.

ಐದನೆಯದಾದ ಆವಂತೀ ಖಂಡ ಅಥವಾ ಆವಂತ್ಯ ಖಂಡದಲ್ಲಿ ಆವಂತೀ ಕ್ಷೇತ್ರ ಮಾಹಾತ್ಮ್ಯ, ಚತುರಶೀತಿಲಿಂಗ ಮಾಹಾತ್ಮ್ಯ (ಎಂಬತ್ನಾಲ್ಕು ಲಿಂಗಮಹಿಮೆ) ಮತ್ತು ರೇವಾಖಂಡಗಳು ಇರುತ್ತವೆ. ಈ ರೇವಾಖಂಡದ ಕೊನೆಯ ಭಾಗದಲ್ಲಿಯೇ ಜಗತ್ಪ್ರಸಿದ್ಧವಾದ ಸತ್ಯನಾರಾಯಣ ಕಥೆ ಇರುತ್ತದೆ. ಆದರೆ ಇದು ಎಲ್ಲ ಪ್ರತಿಗಳಲ್ಲಿಯೂ ಇರುವದಿಲ್ಲ. ಆರನೆಯದಾದ ನಾಗರಖಂಡದಲ್ಲಿ ಎಲ್ಲ ತೀರ್ಥಗಳ ಮಹಿಮಾ ವರ್ಣನೆ ಬರುತ್ತದೆ.

ಏಳನೆಯದಾದ ಪ್ರಭಾಸಖಂಡದಲ್ಲಿ ಏಳು ಭಾಗಗಳು ಇರುತ್ತವೆ. (೧) ಮಾಹೇಶ್ವರ ಭಾಗ (ಇದರಲ್ಲಿ ಕುಮಾರಸ್ವಾಮಿಯ ಮಾಹಾತ್ಮ್ಯವನ್ನು ಚೆನ್ನಾಗಿ ಬಣ್ಣಿಸಲಾಗಿದೆ). (೨) ವೈಷ್ಣವ ಭಾಗ (೩) ಬ್ರಾಹ್ಮ ಮಾಹಾತ್ಮ್ಯ (೪) ಕಾಶೀ ಮಾಹಾತ್ಮ್ಯ (೫) ರೇವಾ ಉಜ್ಜೈನೀ ಮಾಹಾತ್ಮ್ಯ (೬) ನಾಗರ ಭಾಗ (೭) ಪ್ರಾಭಾಸಿಕ ಭಾಗ (ಈ ಭಾಗದಲ್ಲಿ ಪ್ರಭಾಸ ಕ್ಷೇತ್ರ ಮತ್ತು ದ್ವಾರಕಾ ಮೊದಲಾದ ಇತರ ತೀರ್ಥಕ್ಷೇತ್ರಗಳ ಹಾಗೂ ಮಹಾದೇವರ ಮತ್ತು ಇತರ ದೇವತೆಗಳ ಮಹಿಮೆಗಳು ವರ್ಣಿತವಾಗಿವೆ). ಇದು ನಾವು ಅನುವಾದಿಸುತ್ತಲಿರುವ ಸ್ಕಂದ ಪುರಾಣದ ಏಳು ಖಂಡಗಳ ಸಂಕ್ಷಿಪ್ತ ರೂಪರೇಷೆ.

ನಾವು ಪ್ರಕೃತ ಸ್ಕಂದ ಪುರಾಣದ ಕನ್ನಡ ಪರಿವರ್ತನೆಯ ಕಾರ್ಯವನ್ನು ಕೈಕೊಳ್ಳುವಾಗ ವಂಗವಾಸಿ ಪ್ರೆಸ್ಸು, ವೆಂಕಟೇಶ್ವರ ಪ್ರೆಸ್ (ಮುಂಬೈ), ಮನಸುಖರಾವ ಮೋರ (ಕ್ಲಾಯ್ವ ರೋಡ, ಕಲಕತ್ತಾ) ಮುದ್ರಣಾಲಯ ಲಖನೌದ ನವಲಕಿಶೋರ ಪ್ರೆಸ್‌ಗಳಲ್ಲಿ ಮುದ್ರಿತವಾದ ಸಂಸ್ಕೃತ ಸ್ಕಂದಪುರಾಣದ ಪ್ರತಿಗಳನ್ನೂ ಹಾಗೂ ನಮ್ಮಲ್ಲಿ ಇರುವ ಪಂಡಿತ ಕುಂದರಗೀ ಕೇಶವಾಚಾರ್ಯರ ಮನೆಯ ಪ್ರತಿಯನ್ನೂ, ಮೈಸೂರಿನ ದಿ. ಎಂ. ಪದ್ಮನಾಭಾಚಾರ್ಯರ ಮನೆಯ ಸಂಸ್ಕೃತ ಗ್ರಂಥ ಸಂಗ್ರಹದ ಪ್ರತಿಯನ್ನೂ ಆಧರಿಸಿ ಪಂಡಿತಮಂಡಲಿಯೊಡನೆ ಸಂಶೋಧಿಸಿ ಮತ್ತೆ ಮತ್ತೆ ಪರೀಕ್ಷಿಸಿ, ಪಾಠಾಂತರ ಭಾಷಾಂತರಗಳ ಪರಿಶೋಧನೆಯ ಮೂಲಕ ಶುದ್ಧ ಪಾಠವನ್ನು ಕಂಡುಹಿಡಿದು ಈ ಕನ್ನಡ ಪರಿವರ್ತನ ಕಾರ್ಯವನ್ನು ಕೈಕೊಂಡಿದ್ದೇವೆ.

ನಮಗೆ ದೊರೆತ ಎರಡು ಹಸ್ತಪ್ರತಿಗಳ ದಾಕ್ಷಿಣಾತ್ಯ ಪಾಠಗಳಿಗೂ ಮುದ್ರಿತವಾದ ಕೆಲವು ಸ್ಕಂದ ಪುರಾಣ ಪ್ರತಿಗಳಿಗೂ ಪಾಠಾಂತರ ಅಧ್ಯಾಯ ಹಾಗೂ ಶ್ಲೋಕಗಳಲ್ಲಿ ಅಲ್ಲಲ್ಲಿ ವ್ಯತ್ಯಾಸ ವೈಪರೀತ್ಯ ವೈಸಾದೃಶ್ಯಗಳು ಕಂಡು ಬಂದಿರುತ್ತವೆ. ಅಂಥ ಸಂದರ್ಭಗಳಲ್ಲಿ ಮೇಲ್ಕಾಣಿಸಿದ ಪಂಡಿತ ಮಂಡಲಿಯವರೊಡನೆ ವಿಚಾರ ವಿಮರ್ಶೆ ಮಾಡಿ ಒಂದು ನಿರ್ಣಯಕ್ಕೆ ಬರಲಾಗಿದೆ. ಉಳಿದ ಭಾಗಗಳಲ್ಲೆಲ್ಲ ಗೋರಖಪುರದ ಹಿಂದೀ ಸಂಸ್ಕರಣದವರು ಅನುಸರಿಸಿದ ವೆಂಕಟೇಶ್ವರ ಮತ್ತು ನವಲ ಕಿಶೋರ ಕಲಕತ್ತಾ ಪ್ರತಿಗಳ ಪಾಠಗಳನ್ನು ವಿವಾದವಿಲ್ಲದಲ್ಲಿ ಪ್ರಮಾಣ ಎಂದು ಹಿಡಿದು ತ್ವರಿತ ಗತಿಯಿಂದ ಕನ್ನಡೀಕರಿಸುತ್ತ ಹೋಗಿದ್ದೇವೆ.

ಮುಂಬೈ ವೆಂಕಟೇಶ್ವರ ಪ್ರೆಸ್ಸಿನಲ್ಲಿ ಈಗ ಮುದ್ರಿತವಾದ ಸ್ಕಂದ ಪುರಾಣಗಳಲ್ಲಿಯ ಖಂಡ ವಿಭಾಗವು ಪ್ರಾಯಶಃ ನಾರದ ಪುರಾಣದಲ್ಲಿ ಹೇಳಿದ ಸ್ಕಂದ ಪುರಾಣದ ಖಂಡ ವಿಭಾಗಕ್ಕೆ ಅನುಗುಣವಾಗಿ ಇರುತ್ತದೆ. ಆದರೆ ನಾರದ ಪುರಾಣದಲ್ಲಿ ವಿಷ್ಣುಖಂಡದಲ್ಲಿ ಇದೆ ಎಂದು ಹೇಳಲಾದ ಮಧುರಾಮಾಹಾತ್ಮ್ಯ ಮತ್ತು ಮಾಘ ಮಾಹಾತ್ಮ್ಯಗಳು ಮಾತ್ರ ಮುಂಬೈಯಲ್ಲಿ ಮುದ್ರಿತ ಸ್ಕಂದ ಪುರಾಣದ ಪ್ರತಿಯಲ್ಲಿ ಇರುವದಿಲ್ಲ. ಉಳಿದುದೆಲ್ಲವೂ ನಾರದೀಯದಲ್ಲಿ ಹೇಳಿದಂತೆಯೇ ಇರುತ್ತವೆ.

ಖಂಡಾತ್ಮಕವಾದ ಸ್ಕಂದ ಪುರಾಣದಂತೆ ಸಂಹಿತಾತ್ಮಕವಾದ ಸ್ಕಂದ ಪುರಾಣವೂ ಅತ್ಯಂತ ಪ್ರಾಚೀನವೂ ಶಿವ ಸ್ಕಂದ ಮುಂತಾದ ದೇವತೆಗಳ ಮಹಾಮಹಿಮಾ ಪ್ರತಿಪಾದಕವೂ ಮಹಾಪುರಾಣ ಲಕ್ಷಣಗಳಿಂದ ಉಪಪನ್ನವೂ ಆಗಿದೆ. ಇವುಗಳಲ್ಲಿ ಸನತ್ಕುಮಾರ ಸಂಹಿತಾ, ಶಾಂಕರೀ ಸಂಹಿತಾ, ಸೂತ ಸಂಹಿತೆಗಳು ಭಾಗಶಃ ಉಪಲಬ್ಧವಿರುತ್ತವೆ. ಸ್ಕಂದ ಪುರಾಣದ ಅಗಸ್ತ್ಯ ಸಂಹಿತಾ ಅಥವಾ ಶಾಂಕರೀ ಸಂಹಿತೆಯಲ್ಲಿಯ ಹಾಲಾಸ್ಯ ಮಾಹಾತ್ಮ್ಯದಲ್ಲಿ ಸಂಹಿತಾತ್ಮಕವಾಗಿ ಸ್ಕಂದ ಪುರಾಣವನ್ನು ವಿಭಾಗಿಸಲಾಗಿದೆ. (೧) ಸನತ್ಕುಮಾರ ಸಂಹಿತಾ (೨) ಸೂತ ಸಂಹಿತಾ (೩) ಶಾಂಕರೀ ಸಂಹಿತಾ

(೫) ವೈಷ್ಣವೀ ಸಂಹಿತಾ (೫) ಬ್ರಾಹ್ಮೀ ಸಂಹಿತಾ (೬) ಸೌರ ಸಂಹಿತಾ ಎಂದು ಆರು ವಿಭಾಗಗಳನ್ನು ತೋರಿಸಲಾಗಿದೆ. ಸ್ಕಂದ ಪುರಾಣ ಶಂಕರ ಸಂಹಿತೆಯಲ್ಲಿಯ ಶಿವ ರಹಸ್ಯ ಖಂಡದ ಏಳು ಉಪ ಖಂಡಗಳಲ್ಲಿ ಒಂದಾದ ಸಂಭವ ಅಥವಾ ಶಾಂಭವ ಖಂಡದಲ್ಲಿ ಹಾಲಾಸ್ಯ ಮಾಹಾತ್ಮ್ಯದಲ್ಲಿ ನಿರೂಪಿಸಿದಂತೆಯೇ ಸ್ಕಂದ ಪುರಾಣವು ಆರು ಸಂಹಿತಾತ್ಮಕವಾಗಿದೆ ಎಂದು ಹೇಳಲಾಗಿದೆ. ಆದರೆ ಅಲ್ಲಿ ಐದನೇ ಸ್ಥಾನದಲ್ಲಿದ್ದ ಬ್ರಾಹ್ಮೀ ಸಂಹಿತೆಯನ್ನು ಇಲ್ಲಿ ಮೂರನೆಯದಾಗಿ ಹೇಳಿ, ಅಲ್ಲಿ ಮೂರನೆಯದಾದ ಸಾಂಕರೀ ಸಂಹಿತೆಯನ್ನು ಐದನೆಯ ಸಂಹಿತೆ ಎಂದು ಇಲ್ಲಿ ಹೇಳಲಾಗಿದೆ. ಈ ಸಂಭವ ಖಂಡದಲ್ಲಿ ಈ ಆರೂ ಸಂಹಿತೆಗಳ ಶ್ಲೋಕಗಳ ಸಂಖ್ಯೆಯನ್ನು ಕೆಳಗಿನಂತೆ ಕೊಡಲಾಗಿದೆ.

| | | |
|---|---|---|
| ಸನತ್ಕುಮಾರ ಸಂಹಿತಾ | ೫೫೦೦೦ | ಶ್ಲೋಕ ಅಥವಾ ಗ್ರಂಥಗಳು |
| ಸೂತ ಸಂಹಿತಾ | ೬೦೦೦ | ,, |
| ಬ್ರಾಹ್ಮೀ ಸಂಹಿತಾ | ೩೦೦೦ | ,, |
| ವೈಷ್ಣವೀ ಸಂಹಿತಾ | ೫೦೦೦ | ,, |
| ಶಾಂಕರೀ ಸಂಹಿತಾ | ೩೦೦೦೦ | ,, |
| ಸೌರ ಸಂಹಿತಾ | ೧೦೦೦ | ,, |
| ಒಟ್ಟು | ೧೦೦೦೦೦ | |

ಹಾಲಾಸ್ಯ ಮಾಹಾತ್ಮ್ಯದ ಪ್ರಕಾರ ಸ್ಕಂದ ಪುರಾಣದ ಆರೂ ಸಂಹಿತೆಗಳ ಒಟ್ಟು ಸಂಖ್ಯೆ ಒಂದು ಲಕ್ಷ ಶ್ಲೋಕಗಳಷ್ಟಾಗುತ್ತದೆ. ಗಾತ್ರದಲ್ಲಿ ಮಹಾಭಾರತಕ್ಕೆ ಸಮನಾಗಿ ನಿಲ್ಲುವದು ಈ ಸ್ಕಂದಪುರಾಣ. ಇದೇ ಸಂಹಿತಾ ವಿಭಾಗದಲ್ಲಿಯ ಸೂತ ಸಂಹಿತೆಗೆ ಶ್ರೀ ಮಾಧವಾಚಾರ್ಯರು 'ಸೂತ ಸಂಹಿತಾ ತಾತ್ಪರ್ಯದೀಪಿಕಾ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಇದರ ಮೇಲಿಂದ ಕ್ರಿಸ್ತಶಕ ಹದಿಮೂರನೇ ಶತಮಾನಕ್ಕಿಂತ ಮೊದಲೇ ಸ್ಕಂದ ಪುರಾಣವು ಆರು ಸಂಹಿತಾ ರೂಪವಾಗಿ ವಿಭಾಗಿಸಲ್ಪಟ್ಟಿದ್ದಿತೆಂದು ನಿಶ್ಚಿತವಾಗುತ್ತದೆ. ಈ ಸೂತ ಸಂಹಿತೆಯಲ್ಲಿ ಕೊಟ್ಟ ಸ್ಕಂದ ಪುರಾಣದ ಸಂಹಿತೆಗಳ ಶ್ಲೋಕಸಂಖ್ಯೆ ಮಾತ್ರ ಹಾಲಾಸ್ಯ ಮಾಹಾತ್ಮ್ಯಕ್ಕಿಂತ ಭಿನ್ನವಾಗುತ್ತದೆ.

| | | |
|---|---|---|
| ಸನತ್ಕುಮಾರ ಸಂಹಿತಾ | ೩೬೦೦೦ | ಶ್ಲೋಕ ಸಂಖ್ಯೆ |
| ಸೂತ ಸಂಹಿತಾ | ೬೦೦೦ | ,, |
| ಶಾಂಕರೀ ಸಂಹಿತಾ | ೩೦೦೦೦ | ,, |
| ವೈಷ್ಣವೀ ಸಂಹಿತಾ | ೫೦೦೦ | ಶ್ಲೋಕ ಸಂಖ್ಯೆ |
| ಬ್ರಾಹ್ಮೀ ಸಂಹಿತಾ | ೩೦೦೦ | ,, |
| ಸೌರ ಸಂಹಿತಾ | ೬೦೦೦ | ,, |
| ಒಟ್ಟು | ೮೬೦೦೦ | |

ಈ ಸೂತ ಸಂಹಿತೆಯ ಪ್ರಕಾರ ಸ್ಕಂದ ಪುರಾಣದ ಒಟ್ಟು ಶ್ಲೋಕ ಸಂಖ್ಯೆ ಎಂಬತ್ತಾರು ಸಾವಿರ ಆಗುತ್ತದೆ.

ಇದೇ ಸ್ಕಂದ ಪುರಾಣದ ಸನತ್ಕುಮಾರ ಸಂಹಿತೆಯ ಕಾಲಿಕಾ ಖಂಡದಲ್ಲಿ ಈ ಪುರಾಣದಲ್ಲಿ ಆರು ಸಂಹಿತೆಗಳೂ ಐವತ್ತು ಖಂಡಗಳೂ ಇರುತ್ತವೆ ಎಂದು ಹೇಳಲಾಗಿದೆ.

ಸೌರ ಸಂಹಿತೆಯಲ್ಲಿಯೂ ಈ ಸ್ಕಂದ ಪುರಾಣವು ಮೇಲಿನಂತೆ ಆರು ಸಂಹಿತೆ ಐವತ್ತು ಖಂಡಗಳನ್ನು ಒಳಗೊಂಡಿದೆ ಎಂದು ನಿರೂಪಿಸಲಾಗಿದೆ. ಆದರೆ ಸೌರ ಸಂಹಿತೆಯ ಶ್ಲೋಕ ಸಂಖ್ಯೆ ಮಾತ್ರ ೧೦೦೦ ಎಂದಿದೆ. ಇದರ ಮೇಲಿಂದ ಸ್ಕಂದಪುರಾಣದ ಒಟ್ಟು ಶ್ಲೋಕ ಸಂಖ್ಯೆ ೮೧೦೦೦. ಸನತ್ಕುಮಾರ ಸಂಹಿತೆಯಲ್ಲಿ ಅಂತರ್ಭೂತವಾದ ಕಾಲಿಕಾ ಖಂಡದಲ್ಲಿ ಇವೆಲ್ಲದಕ್ಕಿಂತ ತುಸು ಭಿನ್ನವಾದ ಸ್ಕಂದಪುರಾಣದ ಖಂಡ ಶ್ಲೋಕಗಳನ್ನೂ ಕೊಟ್ಟಿದ್ದಾರೆ.

## ಈ ಕಾಲಿಕಾ ಖಂಡದಲ್ಲಿ ಹೇಳಿದಂತೆ ಸ್ಕಂದಪುರಾಣದ ಖಂಡ ಶ್ಲೋಕಗಳ ಪ್ರಮಾಣ

(೧) ಸನತ್ಕುಮಾರ ಸಂಹಿತಾ (೨) ಸೂತ ಸಂಹಿತಾ (೩) ಶಾಂಕರಿ ಸಂಹಿತಾ (೪) ವೈಷ್ಣವೀ ಸಂಹಿತಾ (೫) ಬ್ರಾಹ್ಮೀ ಸಂಹಿತಾ (೬) ಸೌರ ಸಂಹಿತಾ.

(೧) ಸನತ್ಕುಮಾರ ಸಂಹಿತಾದಲ್ಲಿ ೨೫ ಖಂಡಗಳು ಇದ್ದು ೫೦೦೦೦ ಶ್ಲೋಕಗಳು ೧೦೦೦ ಅಧ್ಯಾಯಗಳು ಇರುತ್ತವೆ.

(೨) ಸೂತ ಸಂಹಿತೆಯಲ್ಲಿ ೭೬ ಅಧ್ಯಾಯಗಳಿದ್ದು ಶಿವಮಾಹಾತ್ಮ್ಯ ಖಂಡ, ಜ್ಞಾನಯೋಗಖಂಡ, ಮುಕ್ತಿಖಂಡ, ಯಜ್ಞವೈಭವಖಂಡ ಎಂದು ನಾಲ್ಕು ವಿಭಾಗಗಳು ಇರುತ್ತವೆ. ನಾಲ್ಕನೆಯದಾದ ಯಜ್ಞ ವೈಭವಖಂಡದಲ್ಲಿ ಅಧೋ ಭಾಗ ಉಪರಿ ಭಾಗ ಎಂದು ಮತ್ತೆ ಎರಡು ಭಾಗಗಳಿದ್ದು ಎರಡನೆಯ ಉಪರಿ ಭಾಗದಲ್ಲಿ ಬ್ರಾಹ್ಮ ಗೀತಾ ಸೂತಗೀತಾ ಎಂಬ ಮತ್ತೆರಡು ವಿಭಾಗಗಳನ್ನು ಹೇಳಿದ್ದಾರೆ.

(೩) ಮೂರನೆಯದಾದ ಶಾಂಕರ ಸಂಹಿತೆಯಲ್ಲಿ ಇಪ್ಪತ್ತೊಂದು ಖಂಡಗಳಿದ್ದು ಎರಡು ಸಾವಿರ ಅಧ್ಯಾಯಗಳು ಇರುತ್ತವೆ.

(೪) ನಾಲ್ಕನೆಯದಾದ ವೈಷ್ಣವೀ ಸಂಹಿತೆಯಲ್ಲಿ ಮೂರುನೂರು ಅಧ್ಯಾಯಗಳು.

(೫) ಐದನೆಯದಾದ ಬ್ರಾಹ್ಮೀ ಸಂಹಿತೆಯಲ್ಲಿ ಮೂರು ಸಾವಿರ ಶ್ಲೋಕಗಳು.

(೬) ಆರನೆಯ ಸೌರಸಂಹಿತೆಯಲ್ಲಿ (೬೦೦೦೦) ಅರವತ್ತು ಸಾವಿರ ಶ್ಲೋಕಗಳು ಇರುತ್ತವೆ ಎಂದು ಹೇಳಲಾಗಿದೆ. ಸೌರಸಂಹಿತೆಯಲ್ಲಿ ಒಂದು ಸಾವಿರ ಶ್ಲೋಕಗಳಿವೆ ಎಂದು ಬೇರೆ ಖಂಡಗಳಲ್ಲಿ ಬಂದಿರುತ್ತದೆ.

ಹೀಗೆ ಸಂಹಿತಾತ್ಮಕವಾದ ಸ್ಕಂದ ಪುರಾಣದ ಬೇರೆ ಬೇರೆ ಭಾಗಗಳಲ್ಲಿ ಸ್ಕಂದ ಪುರಾಣದ ಖಂಡ, ಅಧ್ಯಾಯ, ಶ್ಲೋಕಗಳ ಸಂಖ್ಯೆಯಲ್ಲಿ ವ್ಯತ್ಯಾಸವು ಕಂಡುಬರುತ್ತದೆ.

**ಕಾಲಕಾ ಖಂಡದ ವಿಷಯ ವಿಸ್ತಾರ**

ಸನತ್ಕುಮಾರ ಸಂಹಿತೆಯಲ್ಲಿ ಬರುವ ಕಾಲಿಕಾ ಖಂಕಡದಲ್ಲಿ ಭಗವಾನ್ ಪರಮೇಶ್ವರನ ಮಹಿಮೆಯ ವಿಷಯದಲ್ಲಿ ಅನೇಕ ಆಖ್ಯಾನ ಉಪಾಖ್ಯಾನಗಳಿದ್ದು ಐದುನೂರು ನದಿಗಳ ಉಗಮಾಗಮಗಳ ಉಲ್ಲೇಖವಿರುತ್ತದೆ ಮತ್ತು ಭಿನ್ನ ಭಿನ್ನ ಜಾತಿ ಮತ ಆಚಾರ ಸಂಪ್ರದಾಯ ಕರ್ತವ್ಯ ಕರ್ಮಗಳ ಬೋಧನೆ ಇರುತ್ತದೆ. ಮತ್ತು ಭಾರತದ ಬೇರೆ ಬೇರೆ ದೇಶಾಚಾರ ಕುಲಾಚಾರಗಳ ವಿವರಣೆಯು ಬರುತ್ತದೆ. ಜಾಗತಿಕ ಭೂಗೋಲ ವರ್ಣನೆಯೂ ವಿಸ್ತಾರವಾಗಿ ಇಲ್ಲಿ ಬಂದಿದೆ. ಇದರಲ್ಲಿ (೧) ಕ್ಷೇತ್ರಖಂಡ, (೨) ತೀರ್ಥಖಂಡ (೩) ಕಾಶೀಖಂಡ (೪) ಸಹ್ಯಾದ್ರಿಖಂಡ (೫) ಹಿಮಾಚಲ ಖಂಡ (೬) ಮಲಯಾಚಲ ಖಂಡ (೭) ವಿಂಧ್ಯಾದ್ರಿ ಖಂಡ (೮) ಮೋಕ್ಷ ಖಂಡ (೯) ಪ್ರಭಾಸ ಖಂಡ (೧೦) ಪುಷ್ಕರ ಖಂಡ (೧೧) ನಾಗರ ಖಂಡ (೧೨) ನರ್ಮದಾಖಂಡ (೧೩) ಶ್ರೀ ಶೈಲಖಂಡ (೧೪) ಅವಂತಿ ಖಂಡ (೧೫) ಗೌರೀ ಖಂಡ (೧೬) ಕುರುಕ್ಷೇತ್ರ ಖಂಡ (೧೭) ಕೇದಾರಖಂಡ (೧೮) ಹರಿದ್ವಾರ ಖಂಡ (೧೯) ಸೇತುಮಾಹಾತ್ಮ್ಯ ಖಂಡ (೨೦) ಕಾಳೀಖಂಡ (೨೧) ವ್ರತೋಪಾಖ್ಯಾನ ಖಂಡ (೨೨) ನದೀಖಂಡ (೨೩) ಧರ್ಮಖಂಡ (೨೪) ದೇಶಖಂಡ (೨೫) ವರ್ಷ ಖಂಡ. ಹೀಗೆ ಇಪ್ಪತ್ತೈದು ಖಂಡಗಳು ಇರುತ್ತವೆ. ಹೀಗೆ ಗಾತ್ರದಲ್ಲಿ ಬೃಹತ್ತರ ಮಹಿಮೆಯಲ್ಲಿ ಮಹತ್ತರವಾದ ಈ ಸ್ಕಂದಪುರಾಣದಲ್ಲಿ ಅಂತರ್ಗತ ಎಂದು ಹೇಳಲಾದ ಎಷ್ಟೋ ಪುರಾಣ ವಿಭಾಗಗಳ ಉಪ ಸಂಹಿತೆಗಳೂ ಖಂಡೋಪಖಂಡಗಳೂ ದೇಶದ ಅನೇಕ ಕಡೆಗಳಲ್ಲಿ ಮುದ್ರಿತ ಅಮುದ್ರಿತ ಹಸ್ತಪ್ರತಿ ರೂಪದಲ್ಲಿ ಉಪಲಬ್ಧವಿರುತ್ತವೆ.

ಅಂಬಿಕಾ ಖಂಡ, ತಾಪೀಖಂಡ, ಕನಕಾದ್ರಿಖಂಡ, ಭೀಮಾಖಂಡ, ಶಿವರಹಸ್ಯ ಖಂಡ, ಸಹ್ಯಾದ್ರಿ ಖಂಡ, ಬೃಹದ್ ಬ್ರಹ್ಮೋತ್ತರ ಖಂಡ, ಪರ್ವತ ಖಂಡ, ಅಯೋಧ್ಯಾ ಖಂಡ, ಮಥುರಾ ಖಂಡ, ನಿರ್ವಾಣ ಖಂಡ, ಉಮಾಖಂಡ, ಪರಶುರಾಮ ಖಂಡ, ಭೂಖಂಡ, ಪೌಂಡ್ರ ಖಂಡ, ಚಮತ್ಕಾರ ಖಂಡ, ಕರತೋಯಾ ಮಾಹಾತ್ಮ್ಯ ಮುಂತಾದ ಪುರಾಣಾಖ್ಯಾನಗಳು ಸ್ಕಂದ ಪುರಾಣಾಂತರ್ಗತ ಎಂಬ ಪ್ರಸಿದ್ಧಿಯನ್ನು ಪಡೆದಿವೆ.

ಈ ಸ್ಕಂದ ಪುರಾಣದ ಕಾಲದ ಬಗ್ಗೆ ಹೇಳುತ್ತ ಪಾಶ್ಚಾತ್ಯ ವಿಮರ್ಶಕರು ಕ್ರಿಸ್ತಶಕದ ಏಳನೆಯ ಶತಮಾನದಲ್ಲಿ ಇದು ರೂಪಗೊಂಡಿದೆ ಎಂದು ವಾದಿಸುತ್ತಾರೆ. ಆದರೆ ಅನೇಕಾನೇಕ ಪ್ರಾಚೀನ ನಿಬಂಧಕಾರರೂ ಸ್ಮೃತಿಕಾರರೂ ಸ್ಕಂದ ಪುರಾಣದಿಂದ ಸಾವಿರಾರು ಸಂಖ್ಯೆಯಲ್ಲಿ ಪದ್ಯಗಳನ್ನು ಎತ್ತಿ ಉದಾಹರಿಸಿದ್ದನ್ನು ನೋಡಿದರೆ ಸಂಹಿತಾರೂಪದಲ್ಲಿ ಇದು ಅತ್ಯಂತ ಪ್ರಾಚೀನತಮವಾದ ಪುರಾಣ ಎಂಬುವದು ಸ್ಪಷ್ಟವಾಗುವದು.

ರಘುನಂದನ, ವಾಚಸ್ಪತಿಮಿಶ್ರ, ಗೋವಿಂದಾನಂದ, ಶ್ರೀಮಧ್ವಾಚಾರ್ಯ, ವಿಜ್ಞಾನೇಶ್ವರ, ಜೀಮೂತವಾಹನ, ಅಪರಾರ್ಕ, ಬಲ್ಲಾಳ ಸೇನ, ದೇವಣಭಟ್ಟ, ಮಾಧವಾಚಾರ್ಯ, ಮದನಪಾಲ, ಹೇಮಾದ್ರಿ, ಶೂಲಪಾಣಿ ಮುಂತಾದ ಅನೇಕ ಧರ್ಮಶಾಸ್ತ್ರ ನಿಬಂಧಕಾರರು ತಮ್ಮ ಕಾಲ ವಿವೇಕ, ಸ್ಮೃತಿಚಂದ್ರಿಕಾ ಮದನಪಾರಿಜಾತ ದಾನಸಾಗರ, ಅದ್ಭುತಸಾಗರ, ಕಾಲ ನಿರ್ಣಯ, ವ್ರತಕಾಲ ವಿವೇಕ ಚತುರ್ವರ್ಗ ಚಿಂತಾಮಣಿ, ದೀಪಕಲಿಕಾ, ದೋಲಾಯಾತ್ರಾ ವಿವೇಕ, ಶ್ರಾದ್ಧ ಕ್ರಿಯಾ ಕೌಮುದಿ, ಶುದ್ಧಿ ಕ್ರಿಯಾಕೌಮುದಿ ಮುಂತಾದ ಗ್ರಂಥಗಳಲ್ಲಿ ಸ್ಕಂದ ಪುರಾಣದ ವಿಷ್ಣುಖಂಡ, ನಾಗರ ಖಂಡ, ಪ್ರಭಾಸ ಖಂಡ, ಕಾಳೀ ಖಂಡ ಮುಂತಾದ ಸ್ಕಂದ ಪುರಾಣದ ಭಾಗಗಳಿಂದ ಅನೇಕ ಪದ್ಯಗಳನ್ನು ಉದ್ಧರಿಸಿರುತ್ತಾರೆ. ಮತ್ತು ಅನೇಕ ಪ್ರಾಚೀನ ತಾಂತ್ರಿಕ ಗ್ರಂಥಗಳಲ್ಲಿಯೂ ಸ್ಕಂದ ಪುರಾಣದ ಮಂತ್ರ ತಂತ್ರ ವಿಧಿ ವಿಧಾನಗಳ ಉದ್ಧರಣೆಯು ಕಂಡು ಬರುವುದರಿಂದ ಈ ಸ್ಕಂದ ಪುರಾಣವು ಕ್ರಿಸ್ತಪೂರ್ವ ಮೂರು ಸಾವಿರ ವರ್ಷಗಳ ಹಿಂದೆ ಭಗವಾನ್ ಬಾದರಾಯಣರಿಂದ ಸಂಹಿತಾರೂಪವಾಗಿ ರಚಿಸಲ್ಪಟ್ಟಿತು ಎಂದು ಒಪ್ಪಲೇ ಬೇಕಾಗುತ್ತದೆ. ಮುಂದೆ ಕಾಲಕ್ರಮದಿಂದ ಸಂಹಿತಾ ಭಾಗವು ಲುಪ್ತವಾಗತೊಡಗಿದಾಗ ಆಳಿದುಳಿದ ಸಂಹಿತೆಗಳ ಆಧಾರದ ಮೇಲೆ ಖಂಡಶಃ ಅಸ್ತಿತ್ವದಲ್ಲಿ ಬಂದ ಸ್ಕಂದ ಪುರಾಣವು ಕ್ರಿಸ್ತಶಕದ ಪ್ರಾರಂಭ ಕಾಲದಲ್ಲಿ ಈಗಿದ್ದ ರೂಪಕ್ಕೆ ಇಳಿದಿರಬಹುದು. ಆದರೂ ಈಗಲೂ ಸಂಹಿತಾ ಭಾಗದಲ್ಲಿದ್ದ ಸ್ಕಂದ ಪುರಾಣವೂ ಅಲ್ಪಸ್ವಲ್ಪ ವ್ಯತ್ಯಸ್ತ ರೂಪದಲ್ಲಿ ಈಗಲೂ ಮುದ್ರಿತ ಹಾಗೂ ಅಮುದ್ರಿತ ಹಸ್ತಪ್ರತಿ ರೂಪದಲ್ಲಿ ದೊರಕುತ್ತಲಿದೆ. ಮುಂದಿನ ಕೆಲವು ಸಂಪುಟಗಳಲ್ಲಿ ಅವನ್ನೂ ಕ್ರೋಢೀಕರಿಸಿ ಕನ್ನಡಿಸಿ ಕೊಡುವ ಸಂಕಲ್ಪ ಮಾಡಲಾಗಿದೆ. ಪ್ರಕೃತ ಸ್ಕಂದ ಪುರಾಣದ ಪಾಂಡುಲಿಪಿಗಳ ಪಾಠಾಂತರ ಸಂಶೋಧನ ಭಾಷಾಂತರ, ಮುದ್ರಣ ಪ್ರತಿಯ ಪರಿಶೋಧನೆ, ಪ್ರೂಫ್ ತಪಾಸಣೆ, ಕಠಿಣ ಪದ್ಯಗಳ ಅರ್ಥೈಸುವಿಕೆ ಮುಂತಾದ ಕಾರ್ಯಗಳಲ್ಲಿ ನಮಗೆ ಬೆಂಬಲವಾಗಿ ನಿಂತು ತಲೆಬೇನೆ ತರಿಸುವ ಈ ಕಾರ್ಯವನ್ನು ಬೇಸರಿಸದೇ ಮಾಡಿ ಗ್ರಂಥವು ಪ್ರಕಟಿತವಾಗಲಿಕ್ಕೆ ಅನುಕೂಲ ಮಾಡಿಕೊಟ್ಟ ಪಂಡಿತ ಅಣ್ಣಯ್ಯಾಚಾರ್ಯ ಗಲಗಲಿ ಹಾಗೂ ಪಂಡಿತ ಎಚ್. ಎಸ್. ಪುರಾಣಿಕ, ವಿದ್ವಾನ್ ಭೀಮಭಟ್ ಸಾಣೂರ, ಪಂಡಿತ ಶ್ರೀ ಸಗರಿ ರಾಘವೇಂದ್ರಾಚಾರ್ಯ, ಪಂಡಿತ ನಾರಾಯಣಾಚಾರ್ಯ ಗಲಗಲಿ, ಪಂ. ಜಿ. ಎಸ್. ಗೋವರ್ಧನಾಚಾರ್ಯ, ಜಿ. ಪಿ. ಗೋಪಿನಾಥ, ಸೌ. ವಾಣೀ ತೇರಗಾಂವಕರ, ಕೇ. ಹಣಮಂತರಾವ, ಶ್ರೀ ಕುಲಕರ್ಣಿ, ಶ್ರೀ ಎನ್. ಎಸ್. ಗದಗಕರ ಮುಂತಾದ ವಿದ್ವನ್ಮಣಿಗಳಿಗೆಲ್ಲ ಕೃತಜ್ಞರಾಗಿದ್ದೇವೆ ಮತ್ತು ಹಗಲಿರುಳೂ ಕುಳಿತು ಪ್ರೆಸ್ ಕಾಪಿಯನ್ನು ಸಿದ್ಧಪಡಿಸಿದ ಜಿ. ಮಮತಾ, ಪಿ. ಮಂಜರೀ, ಚಿ. ವಂದನಾ ಈ ಮೂವರಿಗೂ ಈ ಗ್ರಂಥ ಪ್ರಕಾಶನ ಕಾರ್ಯದಲ್ಲಿ ಶ್ರೇಯಸ್ಸು ಆಂಶಿಕವಾಗಿ ಸಲ್ಲಬೇಕು.

# ಕೃತಜ್ಞತಾ ಸಮರ್ಪಣೆ
## (ಮೊದಲನೇ ಮುದ್ರಣ)

ನನಗೆ ಈ ಸ್ಕಂದ ಪುರಾಣವನ್ನು ಬರೆಯಲಿಕ್ಕೆ ಪ್ರೇರಣೆಯಾದುದು ಸ್ಕಂದ ಸ್ವಾಮಿಯ ಕ್ಷೇತ್ರವಾದ ಸಂಡೂರು ಗ್ರಾಮದಲ್ಲಿ. ಸಂಡೂರಿನ ಮಹಾರಾಜರೂ ಹಾಗೂ ಯುವರಾಜರು ಆದ ಮಾನ್ಯ ಮಂತ್ರಿ ಘೋರ್ಪಡೆಯವರು ಗಣೇಶಚತುರ್ಥಿಯ ಸಂದರ್ಭದಲ್ಲಿ ನನ್ನನ್ನು ಬರಮಾಡಿಕೊಂಡು ಕುಮಾರಸ್ವಾಮಿಯ ದರ್ಶನ ಮಾಡಿಸಿ ನಾನು ಬರೆಯಬೇಕೆಂದಿರುವ ಸ್ಕಂದ ಪುರಾಣದ ಸಂಶೋಧನೆ ಹಾಗೂ ಲೇಖನಕ್ಕೆ ಎಲ್ಲ ರೀತಿಯಿಂದಲೂ ಪ್ರೋತ್ಸಾಹ, ಸಹಾಯ, ಸಹಕಾರ ನೀಡಿ ಈ ಪುರಾಣದ ಮೊದಲನೇ ಮುದ್ರಣ ಪೂರ್ಣಗೊಳ್ಳಲು ಧನಸಹಾಯ ಮಾಡಿದ್ದಾರೆ. ಈ ರಾಜ ಕುಟುಂಬಕ್ಕೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಈ ದ್ವಿತೀಯ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮುದ್ರಿಸಿರುವ ಶ್ರೀ **ವೆಂಕಟೇಶ್ವರ ಪ್ರಿಂಟರ್ಸ್**, ನಂ. 3, ಯಲ್ಲಪ್ಪ ರಸ್ತೆ, ಚಿಕ್ಕಮಾವಳ್ಳಿ (ಸುಶೀಲ ರಸ್ತೆ ಕ್ರಾಸ್), ಬೆಂಗಳೂರು-560 004 ಇದರ ಮಾಲೀಕರಾದ **ಮುದ್ರಣ ಪ್ರಶಸ್ತಿ ವಿಜೇತ ಕೆ.ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ** ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತು ವರ್ಷದ ಅನುಭವ, ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ.

ಇದೆಲ್ಲಕ್ಕೂ ಬಹುಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಶ್ರೀಮಾನ್ ಕೆ.ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ ಹಾಗೂ ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀಮಾನ್ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ.

ಮಹಾಮಹೋಪಾಧ್ಯಾಯ

4–5–2003 **ಶ್ರೀ ಪಂಢರೀನಾಥಾಚಾರ್ಯ ಗಲಗಲಿ**

ಹುಬ್ಬಳ್ಳಿ **ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ**-580 032

# ಕೃತಜ್ಞತಾ ಸಮರ್ಪಣೆ
## (ದ್ವಿತೀಯ ಮುದ್ರಣ)

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಶು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತುಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಶ್ರೀಖೋಡೆಯವರ ಸೊತ್ತಾಗಿದೆ.

ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತಪೂರ್ವವಾದ **'ನ ಭೂತೋ ನ ಭವಿಷ್ಯತಿ'** ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚಹಸಿರಾಗಿಯೇ ಇದೆ.

ಮುಖ್ಯವಾಗಿ ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದಾರಪರ್ವತವನ್ನು ಹೊತ್ತಂತೆ ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ ಇನ್ನೂ ಜನರಿಗೆ ಗೊತ್ತಿಲ್ಲ. ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು

ಪುರಂದರದಾಸ, ಕನಕದಾಸ, ಜಗನ್ನಾಥದಾಸರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭಾವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜಿನಿಯರಿಂಗ್ ಪದವಿ ಪಡೆದಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳನ್ನು ಸ್ವತಃ ಭೇಟಿ ಮಾಡಿ, ಆ ಎಲ್ಲಾ ಭವನಗಳ ವಿನ್ಯಾಸದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಚರ್ಚಿಸಿ, ಶ್ರೀಹರಿಖೋಡೆಯವರೇ ವಿನ್ಯಾಸ ಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ ಖೋಡೇಸ್ ಕಾಂಟ್ಯಾಕ್ಟ್ ಸೆಂಟರ್ ಎಂಬ ಕಂಪ್ಯೂಟರ್ ಭವನದಲ್ಲಿ ಮೂರು ಸಾವಿರ ಕಂಪ್ಯೂಟರ್ ಇಂಜಿನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ.

ಆದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರವರ್ಗಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ; ವಿಜಯ, ವೀರ್ಯ ಸೌಭಾಗ್ಯಗಳನ್ನು ಇತ್ತು ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

4–5–2003<br>ಹುಬ್ಬಳ್ಳಿ

ಮಹಾಮಹೋಪಾಧ್ಯಾಯ<br>**ಪಂಢರೀನಾಥಾಚಾರ್ಯ ಗಲಗಲಿ**

# ವಿಷಯಾನುಕ್ರಮಣಿಕಾ

## ವಿಷಯಾನುಕ್ರಮಣಿಕಾ

ಅಧ್ಯಾಯ ಪುಟಸಂಖ್ಯೆ

ಓಂ ನಮೋ ಭಗವತೇ ವೇದವ್ಯಾಸಾಖ್ಯ ವಿಷ್ಣವೇ

# ಶ್ರೀ ಸ್ಕಂದ ಮಹಾಪುರಾಣ

ಓಂ ನಮಃ ಶಿವಾಯ

ಅಧ್ಯಾಯ - 1

## ಮಾಹೇಶ್ವರ ಖಂಡ

### ಕೇದಾರ ಖಂಡ

**ಮಹಾಮಹಿಮ ಮಹಾದೇವರ ಮಾಹಾತ್ಮ್ಯ**
**ಶಿವನೊಡನೆ ದಕ್ಷ ಪ್ರಜಾಪತಿಯ ದ್ವೇಷ**
**ದಕ್ಷನ ಯಜ್ಞಕ್ಕೆ ಸತೀದೇವಿಯ ಪ್ರಯಾಣ**

**ಯಸ್ಯಾಜ್ಞಯಾ ಜಗತ್ ಸೃಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

ಮಹಾರುದ್ರದೇವರಿಗೆ ನಮಸ್ಕಾರ. ಪಿನಾಕ ಎಂಬ ಹೆಸರಿನ ಬಿಲ್ಲನ್ನು ಧರಿಸಿದ್ದಾನೆ ಆ ಶಿವ. ಆದುದರಿಂದ 'ಪಿನಾಕಿ' ಎಂದು ಹೆಸರು ಆತನಿಗೆ. ಈ ಪ್ರಪಂಚವನ್ನೆಲ್ಲ ಬ್ರಹ್ಮ ಸೃಜಿಸುವದು ಆ ಪರಮೇಶ್ವರನ ಆಜ್ಞೆಯಿಂದಲೇ. ಹರಿಯೂ ಅಷ್ಟೇ. ಆ ಪರಶಿವನ ಆಜ್ಞೆಯಿಂದಲೇ ಈ ಜಗತ್ತಿನ ಸಂರಕ್ಷಣೆ ಗೈಯುವನು ಈ ವಿಷ್ಣು. ಸ್ವಯಂ ಕಾಲರುದ್ರ ಎಂಬ ಹೆಸರಿನಿಂದ ತಾನೇ ಶಿವ ಸಂಹಾರಗೈಯುವನು ಈ ವಿಶ್ವವನ್ನೆಲ್ಲ. ಇಂಥ ಈ ಚರಾಚರ ಪ್ರಪಂಚದ ಸೃಷ್ಟಿ ಸ್ಥಿತಿ, ಸಂಹಾರಾದಿಗಳಿಗೆ ಕಾರಣಕರ್ತನಾದ ಪರಮೇಶ್ವರನಿಗೆ ನಮ್ಮ ನಮಸ್ಕಾರ.

ನೈಮಿಷಾರಣ್ಯ ತೀರ್ಥಗಳಲ್ಲಿ ಉತ್ತಮ, ಕ್ಷೇತ್ರಗಳಲ್ಲಿ ಶ್ರೇಷ್ಠ. ಅನೇಕ ಸಾವಿರ ವರ್ಷಗಳ ಹಿಂದಿನ ಮಾತು.

ಅನೇಕಾನೇಕ ಮುನಿಮಹರ್ಷಿಗಳೂ, ತೀಕ್ಷ್ಣ ತಪಸ್ವಿಗಳೂ ಅಲ್ಲಿ ಕೂಡಿದರು. ಶೌನಕ ಎಂಬ ಮುನಿ ಮುಂದಾಳು ಆ ತಪಸ್ವಿಗಳ ತಂಡಕ್ಕೆ. ಅವರೆಲ್ಲರೂ ವಿಚಾರ ಮಾಡಿ ಒಂದು ದೊಡ್ಡ ಯಜ್ಞವನ್ನು ಕೈಗೊಂಡರು. ಅದು ಹೋಮಕುಂಡದಲ್ಲಿ ಬರಿ ತುಪ್ಪ ಹೊಯ್ಯುವ ಯಜ್ಞವಾಗಿರಲಿಲ್ಲ. ಅದೊಂದು ಜ್ಞಾನಯಜ್ಞ. ಶಾಸ್ತ್ರ ಪುರಾಣ ಪುಣ್ಯಕಥೆಗಳ ನಿತ್ಯ ನಿರಂತರ ಪಾಠ ಪ್ರವಚನ, ಶ್ರವಣ, ಮನನಗಳೇ

ಅವರೆಲ್ಲರೂ ಮಾಡುವ ಯಜ್ಞಕಾರ್ಯ. ಈ ಜ್ಞಾನ ಯಜ್ಞಕ್ಕೆ ಕಾಲದ ಮಿತಿ ಇಲ್ಲ. ಸಾವಿರ ಯಜ್ಞ, ಸಾವಿರಾರು ವರ್ಷ ನಡೆಯುವ ನಿತ್ಯಯಜ್ಞ. ಈ ಯಜ್ಞದಲ್ಲಿ ಭಾಗವಹಿಸಿದವರಲ್ಲಿ ಮೇಲು - ಕೀಳು ಇಲ್ಲ. ಜ್ಞಾನ ಯಜ್ಞದಲ್ಲಿ ದೀಕ್ಷೆ ಪಡೆದವರೆಲ್ಲರೂ ಸಮಾನರೇ. ಎಲ್ಲರೂ ಜ್ಞಾನಸತ್ರದ ದಕ್ಷ ದೀಕ್ಷಿತರೇ. ಇಂಥ ವೀತರಾಗ ಮುನಿಗಳು, ಪೂತಾತ್ಮ ಮಹರ್ಷಿಗಳು. ನಿರಂತರಜ್ಞಾನ ಸತ್ರ, ನಿತ್ಯಪುಣ್ಯಶ್ರವಣ. ಸದಾ ಸತ್ಸಂಗ ಕೇಳಬೇಕೆ! ತಂಡತಂಡವಾಗಿ ಜನ ಎಲ್ಲೆಡೆಯಿಂದ ಆಗಮಿಸಿದರು. ಒಂದು ದಿನ ಲೋಮಶ ಮುನಿ ಅಲ್ಲಿಗೆ ಬಂದರು. ಅವರು ಮಹಾಮನೀಷಿ. ಭಗವಾನ್ ವೇದವ್ಯಾಸರ ಸಾಕ್ಷಾತ್ ಶಿಷ್ಯ. ವ್ಯಾಸಜ್ಞಾನ ಭಂಡಾರವನ್ನೆಲ್ಲ ತಲೆಯಲ್ಲಿ ತುಂಬಿಕೊಂಡವರು.

ನೈಮಿಷಾರಣ್ಯದಲ್ಲಿ ನಡೆಯುವ ಜ್ಞಾನ ಸತ್ರದ ಸಮಾಚಾರ ತಲುಪಿತು, ಈ ಲೋಮಶರ ಕಿವಿಗೆ. ಅವರಿಗೆ ಇನ್ನಿಲ್ಲದ ಕುತೂಹಲ ಈ ಜ್ಞಾನ ಯಜ್ಞದ ಬಗೆಗೆ. ಇದೊಂದು ಹೊಸ ಬಗೆಯ ಯಜ್ಞ. ಇದರಲ್ಲಿ ಪಶುಬಲಿ ಇಲ್ಲ, ಹೊಗೆ ಇಲ್ಲ, ಹೋಮವಿಲ್ಲ, ಹಿಂಸೆಯಿಲ್ಲ, ಪರಮ ಸಾತ್ವಿಕ ಯಜ್ಞ. ಜ್ಞಾನ-ಯಜ್ಞ ಎಂಬ ಹೆಸರೇ ಲೋಮಶರಿಗೆ ತೃಪ್ತಿ ತಂದಿತು. ಅದನ್ನು ಕಣ್ಣಿಂದ ನೋಡಬೇಕೆಂಬ ಕುತೂಹಲ ಮಹಾಮುನಿಗೆ. ಆ ಉತ್ಕಂಠೆಯನ್ನು ತಡೆಯಲಾರದಾಯಿತು. ನೇರವಾಗಿ ಬಂದುಬಿಟ್ಟರು ನೈಮಿಷದ ಈ ಜ್ಞಾನ ಸತ್ರಕ್ಕೆ. ಅಲ್ಲಿ ನೆರೆದ ಮುನಿಗಳಿಗೆಲ್ಲ ಅತ್ಯಾಶ್ಚರ್ಯ. ಜ್ಞಾನಮೇರು ಲೋಮಶರು ತಾವಾಗಿ ಐತಂದಿದ್ದಾರೆ. ಯಜ್ಞ ದೀಕ್ಷಿತರೆಲ್ಲ ತಮ್ಮ ಕಣ್ಣು ತಾವೇ ನಂಬದಂತಾದರು. ಎಲ್ಲರ ಹೃದಯಲ್ಲಿಯೂ ತೃಪ್ತಿಯ ತಾಂಡವ. ಕಂಗಳಲ್ಲಿ ಉಲ್ಲಾಸ, ಮುಖದಲ್ಲಿ ಪ್ರಸನ್ನತೆ.

ಮುನಿಮಂಡಲವೆಲ್ಲ ಒಮ್ಮೆಲೆ ಎದ್ದು ನಿಂತಿತು. ಲೋಮಶರ ಸ್ವಾಗತಕ್ಕೆ ಅರ್ಘ್ಯ ಬಂದಿತು. ಪಾದ್ಯ ನಿವೇದಿತ, ಮಧುಪರ್ಕ ಸಮರ್ಪಿತ, ಉಚ್ಚತರ ಆಸನ, ಸಂಭ್ರಮದ ಸ್ವಾಗತ, ಆದರದ ಉಪಚಾರ. ಅನಂತರ ಎಲ್ಲರದೂ ಪ್ರಣಾಮಾಂಜಲಿ. ಒಲುಮೆಯ ಬಿನ್ನವತ್ತಳೆ ''ಮಹನೀಯರೇ, ತಮ್ಮ ಮುಖದಿಂದ ಶಿವಧರ್ಮವನ್ನು ನಾವು ಕೇಳಬೇಕು. ವಿಸ್ತಾರವಾಗಿ ತಾವು ಶಿವರಹಸ್ಯವನ್ನು ಹೇಳಬೇಕು ನಮಗೆ''.

ಲೋಮಶರಿಗೆ ಪರಮಾನಂದ. ಹರನ ಬಗೆಗೆ ಹೇಳುವುದೆಂದರೆ ಅವರಿಗೆ ಹಿಗ್ಗು. ಅದರಲ್ಲಿ ಕೇಳುವವರು ಶೌನಕರಂಥ ಪರಮ ಜ್ಞಾನಿಗಳು. ಮಹಾಮನೀಷಿ ಮಹರ್ಷಿಗಳೆಲ್ಲರೂ ಶ್ರೋತಾರರು, ಇನ್ನೇನು ಬೇಕು! ಉತ್ಸಾಹ ಇಮ್ಮಡಿಸಿತು. ಆನಂದ ನೂರ್ಮಡಿಸಿತು. ಅವರ ಹೃದಯಾಂತರಂಗದ ಗಂಗೋತ್ರಿಯಿಂದ ಜ್ಞಾನಗಂಗೆ ತರಂಗತರಂಗವಾಗಿ ವಾಚೋವೀಚೀರೂಪದಿಂದ ಹೊರಹೊಮ್ಮಿ ಹರಿಯತೊಡಗಿತು.

**ಲೋಮಶ :** ಶಿವ ಪರಮಪುರುಷ. ಹದಿನೆಂಟು ಪುರಾಣಗಳು ಅವನ ಮಹಾ ಮಹಿಮೆಯನ್ನೇ ಉಗ್ಗಡಿಸುತ್ತವೆ. ಅವನ ಬಣ್ಣನೆಯನ್ನು ಸಂಪೂರ್ಣವಾಗಿ ಯಾರು ಮಾಡಬಲ್ಲರು ! 'ಶಿವ' ಎಂಬೆರಡು ಅಕ್ಷರಗಳನ್ನು ಉಚ್ಚರಿಸಿದ ಮಾತ್ರಕ್ಕೆ ಸ್ವರ್ಗ. ಭಕ್ತಿಯಿಂದ ಧ್ಯಾನಿಸಿದರೆ ಅಪವರ್ಗ ಅರ್ಥಾತ್ ಮೋಕ್ಷ.

**ಶಿವೇತಿ ದ್ವ್ಯಕ್ಷರಂ ನಾಮ ವ್ಯಾಹರಿಷ್ಯಂತಿ ಯೇ ಜನಾಃ ।**
**ತೇಷಾಂ ಸ್ವರ್ಗಶ್ಚ ಮೋಕ್ಷಶ್ಚ ಭವಿಷ್ಯತಿ ನ ಚಾನ್ಯಥಾ ॥''**

ಶಿವನಾಮದ ಧ್ಯಾನ ಮಾಡುವವರಿಗೆ ಸ್ವರ್ಗ ಮೋಕ್ಷ ಎರಡೂ ಕರತಲಾಮಲಕ. ಈ ವಿಷಯದಲ್ಲಿ ಸಂದೇಹವೇ ಇಲ್ಲ.

ಈ ಮಹಾದೇವ ದೇವತೆಗಳ ಪಾಲಕ. ಸರ್ವಪ್ರಪಂಚಕ್ಕೇ ಶಾಸಕ. ಜನರಿಗಾಗಿ ತನ್ನ ಸರ್ವಸ್ವವನ್ನೂ ಸಮರ್ಪಣೆಗೈದ ಮಹಾದಾನೀ. ತನ್ನ ಸರ್ವಸ್ವನ್ನೂ ಕೊಡುವುದರಿಂದ ಅವನಿಗೆ 'ಸರ್ವ' ಅಥವಾ 'ಶರ್ವ' ಎಂಬ ಹೆಸರು. ಪರರಿಗಾಗಿ ತನ್ನ ಸರ್ವಾರ್ಪಣ ಮಾಡುವ ಉದಾರ ವ್ಯಕ್ತಿಗಳು ಆ ಶಂಕರನ ಹೊರತು ಈ ಜಗತ್ತಿನಲ್ಲಿ ಬೇರೆ ಯಾರಿರುವರು? ಲೋಕ ಕಲ್ಯಾಣಕ್ಕಾಗಿ ಸದಾ ಸಿದ್ಧನಾದ ಆ ಶಂಭುವನ್ನು ಭಜನೆ ಮಾಡುವ ಜನರೇ ಧನ್ಯ. ಈ ಪರಶಿವನ ಮೈಮೆ ಅಗಾಧ, ಗೈಮೆ ಅಮಿತ. ಪ್ರಪಂಚವನ್ನೇ ನಾಶ ಮಾಡುವ ವಿಷವನ್ನು ಲೋಕಕಲ್ಯಾಣಕ್ಕಾಗಿ ಕುಡಿದು ನಿಂತ ಈ ಮಹಂತ, ದರ್ಪಾಂಧನಾದ ಕಂದರ್ಪನ ಯತ್ನವನ್ನು ವಿಧ್ವಂಸಗೈದ, ಕಾಲನನ್ನು ಕೊಚ್ಚಿಹಾಕಿದ, ಶ್ವೇತರಾಜನನ್ನು ಸಂಕಟದಿಂದ ರಕ್ಷಿಸಿದ. ಒಂದೇ ಎರಡೇ ಎಷ್ಟೆಂದು ಬಣ್ಣಿಸಲಿ ಈ ಮಹೇಶ್ವರನ ಮಹಿಮೆಗಳನ್ನು ! ಪೂರ್ತಿಯಾಗಿ ಬಣ್ಣಿಸಬಲ್ಲವರಾದರೂ ಯಾರು ಈ ಶಿವಲೀಲೆಗಳನ್ನು ?

**ಮುನಿಗಳು :** ''ಪೂಜ್ಯರೇ ! ಭಗವಾನ್ ಶಂಕರನು ವಿಷವನ್ನು ಕುಡಿದನೆ? ಆಶ್ಚರ್ಯ! ಆಶ್ಚರ್ಯ! ಅದೆಂತು ವಿಷಪಾನ ಮಾಡಿದ ! ದಕ್ಷ ಸರ್ವಕಾರ್ಯಗಳಲ್ಲೂ ದಕ್ಷ. ಅವನ ಯಜ್ಞವನ್ನು ಹಾಳು ಮಾಡಿದ್ದೇಕೆ ಈ ಹರನು ? ಇದೆಲ್ಲವನ್ನು ಕೇಳಲು ನಮಗೆ ಅತೀವ ಉತ್ಕಂಠೆ. ತಾವು ಹೋಗಲಾಡಿಸಿರಿ ಈ ನಮ್ಮ ಕುತೂಹಲವನ್ನು.

**ಲೋಮಶ :** ''ಮುನಿಗಳೇ, ನಾನು ಹೇಳುವುದು ಬಹಳ ಹಿಂದಿನ ಕಾಲದ ಸಂಗತಿ. ದಕ್ಷನು ಒಬ್ಬ ಪ್ರಜಾಪತಿ. ಅವನಿಗೆ ಈ ಅಪೂರ್ವವಾದ ಪ್ರಜಾಪತಿ ಪಟ್ಟವನ್ನು ಕಟ್ಟಿದವನು ಆ ಚತುರ್ಮುಖ. ಅವನು ದಕ್ಷನಿಗೆ ಆಜ್ಞೆ ಮಾಡಿದ. ''ನಿನ್ನ ಮಗಳಾದ ಸತೀದೇವಿಯನ್ನು ಶಂಕರನಿಗೆ ಕೊಟ್ಟು ಮದುವೆ ಮಾಡು.'' ಪ್ರಜಾಪತಿಗಳಿಗೆಲ್ಲ ಪರಮೇಷ್ಠಿಯ ಆಜ್ಞೆ ಶಿರೋಧಾರ್ಯ, ಅನಿವಾರ್ಯ, ಅನುಲ್ಲಂಘ್ಯ, ಆಜ್ಞೆಗೆ ತಲೆಬಾಗಿದ ದಕ್ಷ, ತನ್ನ ಕನ್ಯಾಮಣಿಯನ್ನು ಕೈಲಾಸಪತಿಗೆ ಧಾರೆಯೆರೆದ.

ಒಂದು ದಿನ ದಕ್ಷ ಪ್ರಜಾಪತಿ ಸಂಚಾರ ಹೊರಟ. ಸಂಚಾರ ಕ್ರಮದಿಂದ ನೈಮಿಷಾರಣ್ಯಕ್ಕೂ ಬಂದ. ಅಲ್ಲಿಯ ಮುನಿಗಳಿಂದ ದಕ್ಷ ಪ್ರಜಾಪತಿಗೆ ಅದ್ಭುತ ಸ್ವಾಗತ, ಸಾದರ ಸತ್ಕಾರ. ದೇವಾಧಿದೇವತೆಗಳೂ ಪ್ರಜಾಪತಿಯ ಈ ಸತ್ಕಾರ ಸಮಾರಂಭಕ್ಕೆ ದಯಮಾಡಿಸಿದ್ದರು. ಎಲ್ಲರೂ ಹೊಗಳಿದರು. ಸರ್ವರೂ ಸಾಷ್ಟಾಂಗ ಹಾಕಿದರು ಆ ದಕ್ಷ ಪ್ರಜಾಪತಿಗೆ. ದಕ್ಷ ಪ್ರಜಾಪತಿಯು ಹೆಮ್ಮೆ ಹಾಗೂ ಹರ್ಷದಿಂದ ತನ್ನ ದೃಷ್ಟಿಯೆತ್ತಿ ಆ ಎಲ್ಲ ಸುರಾಸುರ, ಸಿದ್ಧ ಪುರುಷರ ಬದ್ಧಾಂಜಲಿಗಳನ್ನು ನಿರೀಕ್ಷಿಸಿದ.

ಎಲ್ಲರ ಕರಕಮಲಗಳೂ ಸಂಪುಟಾಕಾರವಾಗಿ ನಮಸ್ಕಾರ ಮುದ್ರೆಯನ್ನು ತಳೆದಿದ್ದವು. ಅಷ್ಟು ಜನರಲ್ಲಿ ಎರಡು ಕೈಗಳು ಮಾತ್ರ ಜೋಡಿಸದೇ ಇದ್ದುದ್ದು ಪ್ರಜಾಪತಿಗೆ ಕಂಡುಬಂದಿತು. ತನಗೆ ಕೈಮುಗಿಯದ, ತಲೆಬಾಗದ ಹೆಮ್ಮೆ ಹಮ್ಮುಗಳುಳ್ಳ ವ್ಯಕ್ತಿ ಯಾರೆಂದು ಹುಬ್ಬುಗಂಟಿಕ್ಕಿ ದಕ್ಷ ನೋಡಿದ. ಅವನು ಬೇರೇ ಯಾರೂ ಆಗಿರದೆ ತನ್ನ ಅಳಿಯನಾದ ಸಾಕ್ಷಾತ್ ಶಂಕರನೇ. ಕೂಡಲೇ ದಕ್ಷನ ಕಣ್ಣು ಕಿಡಿಕಾರಿದವು. ಹೃದಯದಲ್ಲಿ ಸಿಟ್ಟು ಸಿಡಿಲಾಗಿ ಧಗಧಗಿಸಿತು. ರೋಷದ ಕಿಡಿಗಳು ನುಡಿಗಳಾಗಿ ಹೊರಹೊಮ್ಮಿದವು. - ''ಇಲ್ಲಿ ನೆರೆದ ದೇವತೆಗಳು ನನಗೆ ನಮಿಸಿದ್ದಾರೆ. ದೈತ್ಯರು ವಂದಿಸಿದ್ದಾರೆ. ಋಷಿಗಳು ದೀರ್ಘದಂಡ ಹಾಕಿದ್ದಾರೆ. ಇಲ್ಲಿರುವ ಬ್ರಾಹ್ಮಣೋತ್ತಮರೆಲ್ಲರೂ ಬಾಗಿ ನಿಂತಿದ್ದಾರೆ. ಆದರೆ, ಈ ಶಂಕರನನ್ನು ನೋಡಿರಿ. ತಲೆಯನ್ನು ತಗ್ಗಿಸಿಲ್ಲ. ಕೈಯನ್ನೂ ಜೋಡಿಸಿಲ್ಲ. ಇವನ ದೌಷ್ಟ್ಯ ಎಷ್ಟು? ಇವನ ಧಾರ್ಷ್ಟ್ಯ ಎಂತಹುದು? ಭೂತಗಳ ಒಡೆಯನಲ್ಲವೆ ಈ ಶಿವ! ಪ್ರೇತ ಪಿಶಾಚಿಗಳ ಯಜಮಾನ. ಇವನ ಸುತ್ತಮುತ್ತಲೂ ಭೂತ - ಪ್ರೇತ ಪರಿವಾರವು ಯಾವಾಗಲೂ ಕುಣಿಯುತ್ತಿರುತ್ತದೆ. ತಾನು ಬಹಳ ದೊಡ್ಡ ಮನುಷ್ಯನೆಂದು ತಾನೇ ತಿಳಿದಿದ್ದಾನೆ. ಆದುದರಿಂದ ನಾನು ಇಂದು ಈಗಲೇ ಶಾಪ ಕೊಟ್ಟುಬಿಡುವೆನು. ಬ್ರಾಹ್ಮಣಶ್ರೇಷ್ಠರೇ! ನನ್ನ ಮಾತನ್ನು ಕೇಳಿರಿ. ಅದನ್ನು ನಡೆಸಿರಿ. ಇಂದಿನಿಂದ ಈ ರುದ್ರನನ್ನು ಯಜ್ಞಗಳಿಂದ ನಾನು ಬಹಿಷ್ಕರಿಸಿದ್ದೇನೆ. ಇವನಿಗೆ ಯಾರೂ ಯಜ್ಞಗಳಲ್ಲಿ ಆಹುತಿಯನ್ನು ನೀಡಬೇಡಿರಿ''.

ಪ್ರಜಾಪತಿ ಪದವಿಯಲ್ಲಿ ಪಟ್ಟಾಭಿಷಿಕ್ತನಾದ ದಕ್ಷಪ್ರಜಾಪತಿಯ ಈ ದರ್ಪೋಕ್ತಿಯನ್ನು ಕೇಳಿ ಶಿವಭಕ್ತನಾದ ನಂದಿ ಸಿಡಿದೆದ್ದ. ಮಾತು ಬೆಂಕಿಯಂತೆ ಅವನ ಮುಖದಿಂದ ಸಿಡಿದು ಬಂತು ''ಮೂರ್ಖಾ ! ನನ್ನ ಒಡೆಯನಾದ ಈ ಪರಮೇಶನನ್ನು ಯಜ್ಞಭಾಗದಿಂದ ವಂಚಿತನನ್ನಾಗಿ ಮಾಡಿದೆಯಾ ! ಯಜ್ಞವು ಪವಿತ್ರವಾಗುವುದು ಈ ಶಿವನ ನಾಮದಿಂದ, ದಾನವು ಸಫಲವಾಗುವುದು ಈ ದೇವನ ದಯೆಯಿಂದ. ತಪಸ್ಸು ಸಿದ್ಧಿಯಾಗುವುದು ಈ ದೇವನ ಅನುಗ್ರಹದಿಂದ, ತೀರ್ಥಗಳು ಪವಿತ್ರವಾಗುವುದು ಇವನ ಸನ್ನಿಧಿಯಿಂದ. ಇಂಥ ಪವಿತ್ರ ಮೂರ್ತಿಗೆ ಶಾಪವೆ ! ದುರ್ಬುದ್ಧಿಯ ದಕ್ಷನೇ! ಎಲ್ಲಿ ಮಹೇಶ್ವರನಿಗೆ ಭಾಗವಿಲ್ಲವೋ ಆ ಯಜ್ಞವೆಲ್ಲವೂ ವ್ಯರ್ಥವಾಗಿ ಹೋಗಲಿ.'' ಹೀಗೆ ನಂದಿಯು ಕ್ರೋಧಾಂಧನಾಗಿ ಪ್ರತಿಶಾಪ ಕೊಡುತ್ತಿರುವುದನ್ನು ನೋಡಿ ಶಾಂತಮೂರ್ತಿಯಾದ ಶಂಕರನು ಅವನನ್ನು ಸಂತೈಸುತ್ತ ಹೇಳಿದನು: ''ಸಾಧು ಸಜ್ಜನರಾದವರು ಸಿಟ್ಟಿಗೆ ಎಳಬಾರದು. ದಕ್ಷನ ಶಾಪದಿಂದ ನೀನೇಕೆ ಇಷ್ಟು ಕುಪಿತನಾಗಿರುವೆ? ಅದರಿಂದ ನನಗೇನಾಗಬೇಕಾಗಿದೆ? ನಾನೇ ಯಜ್ಞರೂಪನಲ್ಲವೆ! ಯಜ್ಞವನ್ನು ಮಾಡಿಸುವವನೂ, ಮಾಡುವವನೂ ಆಚಾರ್ಯನೂ ನಾನೇ, ಯಜ್ಞಾಂಗನೂ ನಾನೇ. ಈ ದೃಷ್ಟಿಯಿಂದ ನನ್ನನ್ನು ಬಹಿಷ್ಕರಿಸಲು ಶಕ್ಯವಿಲ್ಲ. ಇನ್ನೊಂದು ರೀತಿಯಿಂದ ವಿಚಾರಿಸಿದರೆ, ನಾನು ಸರ್ವವ್ಯಾಪ್ತ. ಯಾವುದೇ ವಸ್ತುವಿನಲ್ಲಿ ನಿಯಂತ್ರಿತನಲ್ಲ. ನಿಬದ್ಧನಲ್ಲ. ನಾನು ಎಲ್ಲದರ ಆಚೆ ಸರ್ವಾತೀತನಾಗಿ

ಇರುವೆ. ಆದುದರಿಂದ ನಾನು ಯಜ್ಞಬದ್ಧನೂ ಅಲ್ಲ ಯಜ್ಞಾತೀತ ಯಜ್ಞಬಾಹ್ಯ. ಇಂಥ ನನಗೆ ಈ ದಕ್ಷನ ಶಾಪವು ಏನು ಮಾಡೀತು?'' ಮಹಾದೇವ ಈ ಮಾರ್ಮಿಕ ನುಡಿಗಳನ್ನು ಆಲಿಸಿ ಶಾಂತನಾದ ಆ ನಂದೀಶ್ವರ. ವಿವೇಕೋದಯವಾಗಿತ್ತು ಆ ಶಿವನ ವಾಹನಕ್ಕೆ. ಇತ್ತ ದಕ್ಷ ಪ್ರಜಾಪತಿಯಲ್ಲಿ ಕ್ರೋಧ ಉಕ್ಕುತ್ತಲೇ ಇತ್ತು. ಕಣ್ಣಿನಲ್ಲಿ ಕೆಂಪು ಏರುತ್ತಲೇ ಇತ್ತು. ಕೋಪಾಟೋಪದಲ್ಲಿ ಸಾಧುಸಂತರ ಆ ಸಭೆಯನ್ನೇ ಬಿಟ್ಟು ಹೊರನಡೆದ. ತನಗೆ ನಮಸ್ಕಾರ ಮಾಡದ ರುದ್ರದೇವನನ್ನು ಮರೆಯುವುದು ಅಶಕ್ಯವಾಯಿತು ಅವನಿಗೆ. ನೆನೆದಂತೆಲ್ಲ ಹೃದಯದಲ್ಲಿ ಕೋಪ ಭುಗಿಲೆನ್ನುತ್ತಿತ್ತು. ಶಂಕರ ಎಂದರೆ ಅವನು ಬೆಂಕಿಯಾಗುತ್ತಿದ್ದ. ಹರಭಕ್ತನನ್ನು ನಿಂದಿಸುವುದು ನಿರ್ಭರ್ತ್ಸನೆಗೈಯುವುದು ಅವನ ಉದ್ಯೋಗವಾಯಿತು. ಈ ಶಿವನಿಗೆ ಪ್ರತೀಕಾರವನ್ನು ಹೇಗೆ ಮಾಡಬೇಕೆಂದು ಅವನು ಯೋಚಿಸತೊಡಗಿದ.

ಕೆಲಸಮಯ ಕಳೆಯಿತು. ದಕ್ಷ ತನ್ನ ದುರ್ಬುದ್ಧಿ ಓಡಿಸಿದ. ಹೊಸ ಹಂಚಿಕೆ ಹೊಳೆಯಿತು. ಮಹತ್ತರವಾದ ಯಜ್ಞ ಒಂದನ್ನು ಹಮ್ಮಿಕೊಂಡ ಆ ಪ್ರಜಾಪತಿ. ಅದಕ್ಕಾಗಿ ಎಲ್ಲ ತಪಸ್ವಿಗಳಿಗೂ ಆಮಂತ್ರಣ. ಋಷಿ, ಮುನಿಗಳಿಗೆಲ್ಲ ಆಹ್ವಾನ, ಸುರಾಸುರರಿಗೆಲ್ಲ ಆಗ್ರಹದ ಕರೆ. ಪ್ರಜಾಪತಿಯ ಒತ್ತಾಯದ ಬಿನ್ನಹವನ್ನು ಮನ್ನಿಸದವರಾರು? ಈ ಮಹಾಯಜ್ಞಕ್ಕೆ ವಶಿಷ್ಠರು ಬಂದರು. ಅಗಸ್ತ್ಯರು ಐತಂದರು, ಕಶ್ಯಪರು, ಆಗಮಿಸಿದರು. ಅತ್ರಿಮುನಿಗಳು ಉಪಸ್ಥಿತರಾದರು. ದಧೀಚಿಮುನಿಗಳು ದಯಮಾಡಿಸಿದರು. ವಾಮದೇವ, ಭೃಗು, ಭಾರದ್ವಾಜ, ಗೌತಮ ಎಲ್ಲ ಮುನಿಗಳೂ ಅಲ್ಲಿಗೆ ಬಂದಿಳಿದರು. ಭಗವಾನ್ ವೇದವ್ಯಾಸರು ಕೂಡ ಈ ಸುಸಂದರ್ಭವನ್ನು ತಪ್ಪಿಸಿಕೊಳ್ಳಲಿಲ್ಲ. ಇವರಲ್ಲದೇ ಸಹಸ್ರ ಸಂಖ್ಯೆಯಲ್ಲಿ ಮಹರ್ಷಿಗಳೂ ಅಲ್ಲಿ ನೆರೆದರು. ಎಂಟೂ ಲೋಕ ಪಾಲಕರು, ಅಷ್ಟಾವಸುಗಳು, ನಲವತ್ತೊಂಬತ್ತು ಮರುದ್ಗಣಗಳು, ಮೂವತ್ಮೂರು ಕೋಟಿ ದೇವತೆಗಳು, ವಿದ್ಯಾಧರರು , ಸಾಧ್ಯರು ಮುಂತಾದವರು ಆ ಯಜ್ಞ ಮಂಟಪದಲ್ಲಿ ಕಿಕ್ಕಿರಿದು ತುಂಬಿದರು.

ಮುಖ್ಯವಾಗಿ ಅಲ್ಲಿ ಆಗಮಿಸಿದ ಮಹಾಪುರುಷರ ಸಾಲಿನಲ್ಲಿ ಗಣ್ಯ ವ್ಯಕ್ತಿಗಳೆಂದರೆ, ಸತ್ಯಲೋಕದಿಂದ ಬಂದ ಬ್ರಹ್ಮ, ವೈಕುಂಠದಿಂದ ಇಳಿದ ಭಗವಾನ್ ವಿಷ್ಣು, ಶಚೀ ರಾಣಿಯ ಒಡಗೂಡಿ ಬಂದ ದೇವೇಂದ್ರ, ರೋಹಿಣೀಚಂದ್ರ ದಂಪತಿಗಳು, ವರುಣ ದಂಪತಿಗಳು, ಸ್ವಾಹಾ ಸ್ವಧಾ ಇಬ್ಬರು ಮಡದಿಯರೊಡಗೂಡಿ ಬಂದ ಅಗ್ನಿದೇವ, ಪುಷ್ಪಕ ವಿಮಾನದಲ್ಲಿ ಹಾರಿ ಬಂದ ಕುಬೇರ ಮುಂತಾದವರು ಎದ್ದು ಕಾಣುತ್ತಿದ್ದರು. ಈ ಎಲ್ಲ ಅತಿಥಿ ಮಹನೀಯರಿಗಾಗಿ ವಿಶ್ವಕರ್ಮನು ದಿವ್ಯ ಭವ್ಯವಾದ ಭವನಗಳನ್ನು ನಿರ್ಮಿಸಿದ್ದನು. ಬೇರೆ ಬೇರೆಯಾಗಿ ನಿರ್ಮಿತವಾದ ಈ ಅರಮನೆ ನೆರೆಮನೆಗಳಲ್ಲಿ ಎಲ್ಲ ಅತಿಥಿ ಅಭ್ಯಾಗತರು ಯಥಾ ಯೋಗ್ಯ ಸ್ಥಾನಗಳಲ್ಲಿ ನಿವಿಷ್ಟ ಪ್ರವಿಷ್ಟರಾದರು. ಈ ದಕ್ಷಯಜ್ಞವು ಪ್ರಾರಂಭವಾದದ್ದು ಕನಖಲತೀರ್ಥದಲ್ಲಿ. ಭೃಗು ಮೊದಲಾದ ತಪಸ್ವಿಗಳನ್ನು ಕರೆದು ಋತ್ವಿಜರನ್ನಾಗಿ ನಿಯಮಿಸಲಾಯಿತು. ಮಂಗಲಾಚಾರದ ಎಲ್ಲ ವಿಧಿ ವಿಧಾನಗಳನ್ನು ಮಾಡಿ ಯಜ್ಞ ದೀಕ್ಷೆಯನ್ನು ಕೈಕೊಂಡ ಆ ಪ್ರಜಾಪತಿ.

ಬ್ರಾಹ್ಮಣರು ಸ್ವಸ್ತಿವಾಚನವನ್ನು ಹೇಳಿದರು. ಈ ಸಂದರ್ಭದಲ್ಲಿ ದಧೀಚಿ ಮಹರ್ಷಿಗಳು ದಕ್ಷನನ್ನು ಸಂಬೋಧಿಸಿ ನುಡಿದರು. ''ಪ್ರಿಯ ಪ್ರಜಾಪತಿಯೇ, ದೇವಾಧಿದೇವತೆಗಳೆಲ್ಲರೂ ನಿನ್ನ ಈ ಯಜ್ಞಕ್ಕೆ ಆಗಮಿಸಿದ್ದಾರೆ. ಸಂತೋಷ. ಎಲ್ಲ ಲೋಕಪಾಲಕರು ಬಂದಿದ್ದಾರೆ. ಇದು ಹೆಮ್ಮೆಯ ವಿಷಯವೇ. ಇನ್ನೂ ಹಲವಾರು ದೇವರ್ಷಿಗಳು, ಮಹರ್ಷಿಗಳು ಆಗಮಿಸಿದ್ದು ಹರ್ಷದ ವಿಷಯವೇ.

ಆದರೆ, ಮಹಾತ್ಮನಾದ ಶಂಕರನು ಇಲ್ಲಿ ಬಾರದೆ ಇದ್ದುದರಿಂದ ಈ ನಿನ್ನ ಯಜ್ಞಕ್ಕೆ ಶೋಭೆಯೇ ಇಲ್ಲದಂತಾಗಿದೆ. ಆ ಗಂಗಾಧರನಿಲ್ಲದಿದ್ದರೆ ಮಂಗಲವೂ ಅಮಂಗಲ. ಅವನ ಸನ್ನಿಧಾನ ಮಾತ್ರದಿಂದ ಎಂಥ ಅಮಂಗಲವೂ ಪರಮಮಂಗಳ ಸ್ವರೂಪ ವಾಗುವುದು. ಅಂಥ ಸಾಕ್ಷಾತ್ ವಿರೂಪಾಕ್ಷನು ಇಲ್ಲಿ ಬಂದು ನಮಗೆ ಏಕೆ ದರ್ಶನವನ್ನು ದಯಪಾಲಿಸುವುದಿಲ್ಲ? ಆದುದರಿಂದ ನೀನು ಈಗಲೇ ಹೋಗು, ಒಬ್ಬನೇ ಹೋಗಬೇಡ, ಈ ವಿಷ್ಣುವನ್ನು ಕರೆದುಕೊಂಡು ಹೋಗು. ಇಂದ್ರನೂ ಜೊತೆಗೆ ಇರಲಿ. ಹೇಗಾದರೂ ಮಾಡಿ ಆ ಪರಶಿವನು ಇಲ್ಲಿ ಬರುವಂತೆ ಮಾಡಿರಿ. ಅವನು ಬಂದರೆ, ಈ ನಿನ್ನ ಯಜ್ಞವು ಪಾವನವಾಗುವುದು ಹಾಗೂ ಸಾರ್ಥಕವಾಗುವುದು.''

ದಧೀಚಿ ಮುನಿಯ ಮಾತನ್ನು ಕೇಳಿ, ದಕ್ಷನ ಕೋಪ ಕೆರಳಿತು. ಹೃದಯದಲ್ಲಿ ದ್ವೇಷದ ಜ್ವಾಲಾಮುಖಿ ವಿಷಕಾರುತ್ತಿದ್ದರೂ ಮುಖದಲ್ಲಿ ಮಂದಹಾಸ ತೇಲಿಸುತ್ತಾ ಅವನು ನುಡಿದನು. ''ಎಲ್ಲ ದೇವತೆಗಳಿಗೆ ಮೂಲ ಶ್ರೀ ಭಗವಾನ್ ವಿಷ್ಣು. ಸನಾತನ ಧರ್ಮದ ಮೂಲಾಧಾರ ಶ್ರೀ ಹರಿ. ಸರ್ವವೇದ ಪ್ರತಿಪಾದ್ಯನೂ ಇವನೇ. ಎಲ್ಲ ಧರ್ಮಕರ್ಮಗಳೂ ಫಲಪ್ರದವಾಗುವುದು ಈ ವಿಷ್ಣುವಿಗೆ ಅರ್ಪಣ ಮಾಡುವುದರಿಂದ ಮಾತ್ರ. ಅಂಥ ಸರ್ವಕಾರಣನೂ ಸರ್ವಾಧಾರನೂ ಆದ ಶ್ರೀಹರಿಯು ಇಲ್ಲಿಗೆ ಆಗಮಿಸಿದ್ದಾನೆ. ಸತ್ಯಲೋಕದಿಂದ ಪ್ರಪಂಚದ ಪಿತಾಮಹನಾದ ಬ್ರಹ್ಮದೇವನು ಇಲ್ಲಿ ಆಗಮಿಸಿದ್ದಾನೆ. ಅವನ ಜೊತೆಗೆ ವೇದಗಳು ಇಲ್ಲಿ ಪ್ರತ್ಯಕ್ಷವಾಗಿ ಸನ್ನಿಹಿತವಾಗಿವೆ. ಇದಲ್ಲದೆ ತಮ್ಮಂಥ ಪೂತಾವದಾತ ಮಹರ್ಷಿಗಳು ಇಲ್ಲಿ ಬಿಜಯಂಗೈಸಿದ್ದೀರಿ. ಇನ್ನೇನು ಬೇಕು ! ವೇದ ಶಾಸ್ತ್ರಗಳನ್ನೆಲ್ಲ ಅರಿತು ಆಚರಣೆ ಗೈದು ಆತ್ಮಾಪರೋಕ್ಷವನ್ನು ಪಡೆದ ಮಹಾಮಹನೀಯರು ಎಲ್ಲರೂ ಮತ್ತು ಸ್ವಯಂ ಬ್ರಹ್ಮಾತ್ಮ ಪರಮಾತ್ಮರೆಲ್ಲರೂ ಇಲ್ಲಿ ಉಪಸ್ಥಿತರಿರುವಾಗ ಆ ಶಂಕರನೇಕೆ ಬೇಕು? ಪೂಜ್ಯರೇ, ತಾವೆಲ್ಲರೂ ಕೂಡಿ ಈ ನನ್ನ ಯಜ್ಞವನ್ನು ಸಾಂಗಗೊಳಿಸಿರಿ.''

ಆಗ ಮಹರ್ಷಿ ದಧೀಚಿ ಮುನಿಗಳು ಎದ್ದು ನಿಂತು ಉಚ್ಚಸ್ವರದಲ್ಲಿ ಘೋಷಿಸಿದರು. ''ದೇವಾಧಿದೇವತೆಗಳ ಹಾಗೂ ಮಹರ್ಷಿಗಳ ಸರ್ವಸಾಮಾನ್ಯ ಈ ಸಮುದಾಯದಲ್ಲಿ ಮಹಾದೇವನನ್ನು ಆಮಂತ್ರಿಸದಿರುವುದು ಅನ್ಯಾಯ. ಪರಮ ಅನ್ಯಾಯ. ಶಾಂತಂ ಪಾಪಂ. ಶಾಂತಂ ಪಾಪಂ. ಶಂಕರನಿಲ್ಲದ ಈ ಯಜ್ಞವು ಭಯಂಕರವೇ ಸರಿ. ಈ ಯಜ್ಞಕ್ಕೆ ದೊಡ್ಡ ವಿಘ್ನ ಒದಗಿ ಇದು ಹಾಳಾಗುವುದರಲ್ಲಿ

ಸಂದೇಹವೇ ಇಲ್ಲ'' ಹೀಗೆ ಹೇಳಿ ದಧೀಚಿ ಮಹರ್ಷಿಗಳು ಆ ಯಜ್ಞಶಾಲೆಯಿಂದ ಹೊರಬಿದ್ದು ತಮ್ಮ ಆಶ್ರಮದ ಕಡೆ ಹೊರಟು ಹೋದರು. ದಕ್ಷ ಪ್ರಜಾಪತಿಯು ಆ ಮಹಾಮುನಿಗಳನ್ನು ಉಪಹಾಸಗೈದು ''ವಿಪ್ರೋತ್ತಮರೇ, ಈ ದಧೀಚಿ ಮುನಿಯು ಶಿವ ಪಾಖಂಡಿ. ಎಂದಿನಿಂದಲೂ ಇವನು ಆ ಪರಮೇಶ್ವರನ ಪಕ್ಷಪಾತಿಯೇ. ಅವನು ಹೋದರೆ ಹೋಗಲಿ. ಇಲ್ಲಿ ನೆರೆದ ನೀವೆಲ್ಲರೂ ನಿಜವಾದ ವೈದಿಕ ಸಿದ್ಧಾಂತವನ್ನು ಅರಿತವರು. ವೇದೋಕ್ತ ಕರ್ಮಕಲಾಪಗಳಲ್ಲಿ ನುರಿತವರು. ನಿಮ್ಮೆಲ್ಲ ಮಹಾ ಮನೀಷಿಗಳ ಸತ್ಸಮುದಾಯಕ್ಕೆ ಈ ಸಾಕ್ಷಾತ್ ವಿಷ್ಣು ಪರಮಾತ್ಮನು ಅಗ್ರೇಸರನಾಗಿ ಕುಳಿತುಕೊಂಡಿದ್ದಾನೆ. ತಾವೆಲ್ಲರೂ ಯಜ್ಞವನ್ನು ಸಾಂಗಗೊಳಿಸಿರಿ''. ದಕ್ಷಪ್ರಜಾಪತಿಯು ಮಹಾಮುನಿಗಳನ್ನು ಕುರಿತು ಹೇಳಿದ ಮಾತು ಬಿನ್ನಹ ರೂಪವಾಗಿರಲಿಲ್ಲ. ಆಜ್ಞೆಯ ಆಗ್ರಹ ಅವನ ಒಂದೊಂದು ಶಬ್ದಗಳಲ್ಲೂ ಒಡೆದು ಕಾಣುತ್ತಿತ್ತು. ಪ್ರಜಾಪತಿಯ ಆಜ್ಞೆ. ಅಲ್ಲಿಯ ಋಷಿಗಳಿಗೂ ಋತ್ವಿಜರಿಗೂ ಗತ್ಯಂತರವೇ ಇರಲಿಲ್ಲ. ಅವನ ಆದೇಶದಂತೆ ವಿಪ್ರೋತ್ತಮರು ಯಜ್ಞಕಾರ್ಯವನ್ನು ಪ್ರಾರಂಭಿಸಿದರು.

ಇದೇ ಸಮಯದಲ್ಲಿ ದಕ್ಷಪ್ರಜಾಪತಿಯ ಮಗಳಾದ ಸತೀದೇವಿಯು ಗಂಧ ಮಾದನಪರ್ವತದ ಮೇಲೆ ತನ್ನ ಗೆಳತಿಯರೊಂದಿಗೆ ಹೂಗಳನ್ನು ಕೀಳುತ್ತಿದ್ದಳು. ಆಗ ರೋಹಿಣೀ ಚಂದ್ರ ದಂಪತಿಗಳು ಎಲ್ಲಿಯೋ ಹೊರಟದ್ದು ಆವಳ ಕಣ್ಣಿಗೆ ಬಿದ್ದಿತು. ಸತೀದೇವಿಯು ತನ್ನ ಗೆಳತಿ ವಿಜಯಾಕುಮಾರಿಗೆ ಹೇಳಿದಳು. ''ಸಖಿ, ಈ ರೋಹಿಣೀ ಚಂದ್ರರ ಜೋಡಿ ಎಲ್ಲಿಗೆ ಹೋಗುತ್ತಿರಬಹುದು? ನೀನು ಬೇಗನೇ ಹೋಗಿ ಅವರನ್ನು ವಿಚಾರಿಸು. ಅವರ ಗಂತವ್ಯ ಪ್ರದೇಶ ಯಾವುದು ತಿಳಿದುಕೊಂಡು ಬಾ''? ಮಹಾದೇವಿಯ ಅಪ್ಪಣೆ ಪಡೆದು ವಿಜಯಾಕುಮಾರಿಯು ಚಂದ್ರಮನ ಬಳಿಗೆ ಐತಂದಳು. ವಿನಯದಿಂದ ಪ್ರಶ್ನಿಸಿದಳು. ''ತಾವು ಎಲ್ಲಿಗೆ ಹೊರಟಿರುವಿರಿ?'' ಚಂದ್ರದೇವನು ದಕ್ಷಪ್ರಜಾಪತಿಯ ಯಜ್ಞದ ವಾರ್ತೆಯನ್ನೆಲ್ಲ ತಿಳಿಸಿದನು. ಯಜಮಾನನ ಅತ್ಯಾಗ್ರಹದ ಆಮಂತ್ರಣದ ಮೇರೆಗೆ ಚಂದ್ರಲೋಕದಿಂದ ಇಳಿದು ನಾವು ಆ ದಕ್ಷಯಜ್ಞಕ್ಕೆ ಹೊರಟಿದ್ದೇವೆ ಎಂದು ಹೇಳಿದನು.

ವಿಜಯಾಕುಮಾರಿಯು ಒಡನೆ ತಿರುಗಿಬಂದು ತನ್ನ ಒಡತಿಗೆ ಚಂದ್ರನು ತಿಳಿಸಿದ ಸಮಾಚಾರವನ್ನೆಲ್ಲ ತಿಳಿಸಿದಳು. ಅದನ್ನು ಕೇಳಿ ಆ ಸತೀಮಣಿಗೆ ಆಶ್ಚರ್ಯದ ಆಘಾತ. ಅಪಮಾನದ ವಜ್ರಾಘಾತ ''ಓಹ್ ! ಇದು ಹೇಗೆ ಸಾಧ್ಯ. ನನ್ನ ತಂದೆ ಮನೆಯಲ್ಲಿ ಯಜ್ಞ. ಲೋಕಲೋಕಾಂತರದ ಜನರಿಗೆಲ್ಲ ಆಮಂತ್ರಣ. ದೇಶಾಂತರದ ಬಂಧು ಮಿತ್ರರಿಗೆಲ್ಲ ಆಹ್ವಾನ. ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗೆ ಒಂದೂ ಆಹ್ವಾನ ಅಥವಾ ಆಮಂತ್ರಣದ ಎರಡಕ್ಷರ ಕೂಡ ಇಲ್ಲ ! ಇದೆಂಥ ವಿಪರ್ಯಾಸ ! ಏನು ಕಾರಣವಿದ್ದೀತು ನನ್ನ ತಂದೆ ನನ್ನನ್ನು ಕರೆಯದಿರಲು ! ನನ್ನ ತಾಯಿಗಾದರೂ ಈ ಬಡಪಾಯಿ ಮಗಳ ನೆನಪಾಗಬಾರದೆ ! ತವರುಮನೆಯ ಬಳಗದವರೆಲ್ಲರೂ ಈ ದಾಕ್ಷಾಯಣಿಯನ್ನು ಮರೆತೇ ಬಿಟ್ಟರೆ ? ಅವರೆಲ್ಲರೂ ಕೂಡಿ ನಾನು ಬರಬಾರದೆಂದೇ

ಬುದ್ಧಿಪೂರ್ವಕವಾಗಿಯೇ ಬಿಟ್ಟಿರಬಹುದೇ ? ಛೇ ಅದಂತೂ ಸಾಧ್ಯವಿಲ್ಲ. ಹೀಗೆ ಎಲ್ಲರೂ ಕೂಡಿ ನನ್ನನ್ನು ಬಹಿಷ್ಕರಿಸಲಿಕ್ಕೆ ನಾನು ಮಾಡಿದ್ದಾದರೂ ಏನು? ಏನೂ ಮಾಡದಿದ್ದಾಗ ಅವರು ನನ್ನನ್ನು ಬಿಟ್ಟಿದ್ದೇಕೆ? ನನಗಂತೂ ತಿಳಿಯದಂತಾಗಿದೆ. ಪತಿಯಾದ ಪ್ರಭು ಪರಮೇಶ್ವರನನ್ನು ಕೇಳಿಬರುವೆನು.'' ಹೀಗೆ ನಿಶ್ಚಯಿಸಿ ಸತೀದೇವಿಯು ತನ್ನ ಸಖಿಯರೊಂದಿಗೆ ಮಹಾದೇವರು ಮಂಡಿಸಿದ ಸಭಾಮಂಟಪಕ್ಕೆ ಆಗಮಿಸಿದಳು.

ಮಂಟಪದ ಮಧ್ಯದ ಮಹಾಪೀಠದಲ್ಲಿ ಮಂಡಿಸಿದ್ದಾರೆ ಮಹೇಶ್ವರ, ಅಕ್ಕಪಕ್ಕದಲ್ಲಿ ಚಂಡ, ಮುಂಡ, ನಂದಿ, ಸ್ಕಂದ. ಸುತ್ತಲೂ ಬಾಣ, ಭೃಂಗಿ, ಮಹಾಕಾಲ, ಮಹಾರುದ್ರ, ಮಹಾಮುಂಡ, ಮಹಾಶಿರ, ಧೂಮ್ರಾಕ್ಷ, ಧೂಮಕೇತು, ಧೂಮಪಾದ ಮುಂತಾದ ಗಣಾಧೀಶರು ಓಲೈಸುತ್ತಿದ್ದಾರೆ. ಇವರ ಮಧ್ಯದಲ್ಲಿ ವಿರಾಜಮಾನನಾದ ಪರಮೇಶ್ವರನ ಬಳಿ ಸಾರಿದಳು ದಾಕ್ಷಾಯಣಿ. ಮಹೇಶ ಆದರದಿಂದ ಸ್ವಾಗತಿಸಿದ, ಪ್ರೀತಿಯಿಂದ ಮಾತನಾಡಿಸಿದ, ಮುಗುಳುನಗೆ ಬೀರಿ ಪ್ರಶ್ನಿಸಿದ ''ಪ್ರೇಯಸಿ, ಈಗ ನೀನು ಇಲ್ಲಿ ಬರಲು ಕಾರಣವೇನು?''

**ಸತೀದೇವಿ :** ''ದೇವ ದೇವ, ನಮ್ಮ ತಂದೆಯ ಮನೆಯಲ್ಲಿ ದೊಡ್ಡದಾದ ಒಂದು ಯಜ್ಞ ನಡೆದಿದೆ. ಎಲ್ಲೆಲ್ಲಿಂದಲೊ ಜನ ಬರುತ್ತಿದ್ದಾರೆ, ಮಾವನ ಮನೆಯ ಮಹಾಕಾರ್ಯಕ್ಕೆ ಹೋಗಬೇಕೆಂದು ತಮಗೆ ಅನಿಸುವದಿಲ್ಲವೆ? ಅದಕ್ಕಾಗಿ ತಮಗೆ ಆಮಂತ್ರಣ ಬಂದಿಲ್ಲ ಎಂಬುದೇನೋ ನಿಜ. ಆದರೆ ನನ್ನ ಮೇಲಿನ ಪ್ರೀತಿಗಾದರೂ ತಾವು ಅಲ್ಲಿಗೆ ದಯಮಾಡಿಸಲಾರಿರಾ?'' ಪ್ರಿಯತಮೆಯ ಈ ನಲುಮೆಯ ನುಡಿಯನ್ನು ಆಲಿಸಿ ಮಹಾದೇವನು ಸ್ವಸ್ಥ ಮನಸ್ಸಿನಿಂದ ಉತ್ತರಿಸಿದನು. ''ಕಲ್ಯಾಣಿ, ನಿಮ್ಮ ತಂದೆಯ ದೃಷ್ಟಿಯಲ್ಲಿ ಆತ್ಮೀಯರು, ಮಾನವೀಯರು ಆದವರಿಗೆಲ್ಲ ಮಹೋತ್ಸವದ ಕರೆಯು ಹೋಗಿದೆ. ಬುದ್ಧಿಪೂರ್ವಕವಾಗಿಯೇ ನಿಮ್ಮ ತಂದೆ ನನಗೆ ಆಹ್ವಾನವನ್ನು ಕಳಿಸಿಲ್ಲ. ನಮಗೆ ಆಹ್ವಾನವನ್ನು ಕಳಿಸದಿರುವದೇ ನಮ್ಮ ಮೇಲಿರುವ ಅನಾದರ ಹಾಗೂ ದ್ವೇಷ ಭಾವನಗಳಿಗೆ ದ್ಯೋತಕವಾಗಿದೆ. ಇಂಥ ಪ್ರಸಂಗದಲ್ಲಿ ಆಹ್ವಾನವಿಲ್ಲದೆ ನಾವು ಅಲ್ಲಿ ಹೋದರೆ ನಮ್ಮನ್ನು ಅವಮಾನಿಸುವುದು ಖಂಡಿತ. ಅಪಮಾನವೆಂದರೆ ಮಾನವನಿಗೆ ಮರಣಕ್ಕಿಂತ ಹೆಚ್ಚು ದುಃಖದಾಯಕ.

**ಅನಾಹೂತಾಶ್ಚ ಯೇ ಸುಭ್ರು ಗಚ್ಛಂತಿ ಪರಮಂದಿರಮ್ ।**
**ತೇಽಪಮಾನಂ ಪ್ರಾಪ್ನುವಂತಿ ಮರಣಾದಧಿಕಂ ತತಃ ॥**

ಆಮಂತ್ರಣವಿಲ್ಲದೆ ಬೇರೆಯವರ ಮನೆಗೆ ಹೋಗುವವರು ಮರಣಕ್ಕಿಂತ ಮಿಗಿಲಾದ ಅಪಮಾನ ಹಾಗೂ ಧಿಕ್ಕಾರವನ್ನು ಹೊಂದುತ್ತಾರೆ. ಹೆರವರ ಮನೆಗೆ ಹೇಳಿ ಕಳಿಸದೇ ಇದ್ದಾಗ ಹೋದರೆ, ದೇವೇಂದ್ರನೂ ಕೂಡ ಮಾನಗೇಡಿಯಾಗುವ ಪ್ರಸಂಗವು ಬರುವದು. ಆದ್ದರಿಂದ ಪ್ರಿಯೆ, ನೀನು ನಿಮ್ಮ ತಂದೆಯ ಮನೆಗೆ ಹೋಗುವುದು ಬೇಡ''.

ಭಗವಾನ್ ಶಂಕರನ ಮಾತುಗಳನ್ನು ಕೇಳಿ ಆ ರಮಣೀಮಣಿಯ ಮನಸ್ಸಿನಲ್ಲಿ ರೋಷವು ಉಕ್ಕೇರಿತು. ತನ್ನ ತಂದೆಯ ವಿಷಯದಲ್ಲಿ ಅಂತರಂಗದಲ್ಲಿ ತುಂಬಿದ ರೋಷ ರೊಚ್ಚುಗಳನ್ನು ಬಿಚ್ಚಿ ತೋರಿಸುತ್ತ ಕಿಡಿನುಡಿಗಳಲ್ಲಿ ಅವಳು ಪತಿಗೆ ಹೇಳಿದಳು. ''ನಾಥ, ಎಲ್ಲ ಯಜ್ಞಯಾಗಾದಿಗಳಿಗೆ ಪುಣ್ಯಫಲ ಪ್ರದಾತರಾದ ದೇವ ದೇವೇಶ್ವರರು ನೀವೇ ಅಲ್ಲವೆ ? ಇಂಥ ನಿಮಗೆ ದುರಾಚಾರಿಯಾದ ನನ್ನ ತಂದೆ ಆಮಂತ್ರಣವನ್ನೇ ಕಳಿಸಲಿಲ್ಲವಲ್ಲ ! ಅವನ ಮನದ ಮಡುವಿನಲ್ಲಿ ಯಾವ ದುರ್ಭಾವನೆಯ ಹಾವು ಅಡಗಿದೆ! ಅವನು ಏಕೆ ತಮ್ಮನ್ನು ಆಮಂತ್ರಿಸಲಿಲ್ಲ? ಇದನ್ನು ನಾನು ತಿಳಿಯಬೇಕಾಗಿದೆ. ನಾನೀಗಲೇ ಯಜ್ಞಮಂಟಪಕ್ಕೆ ಹೋಗುತ್ತೇನೆ. ತಾವು ಅಪ್ಪಣೆ ಕೊಡಿರಿ''.

**ಮಹಾದೇವ :** ''ವ್ರತಾನುಷ್ಠಾನ ಶೀಲಳೇ, ನಿನಗೆ ಹೋಗಲೇಬೇಕು ಎನಿಸಿದರೆ ನಮ್ಮ ವಾಹನವಾದ ನಂದೀಶ್ವರನ ಮೇಲೆ ಆರೋಹಣ ಮಾಡು. ನನ್ನ ಪ್ರಮಥ ಗಣಗಳು ನಿನ್ನ ಜೊತೆಗೆ ಹೊರಡಲಿ. ನಾನು ಅನುಜ್ಞೆ ನೀಡಿದ್ದೇನೆ. ಈಗಲೇ ನೀನು ತವರು ಮನೆಗೆ ಪಯಣವನ್ನು ಕೈಕೊಳ್ಳು.'' ಶಿವನ ಆಜ್ಞೆಯಾದ ಬಳಿಕ ಕೇಳುವದೇನು! ಅರವತ್ತು ಸಾವಿರ ರುದ್ರಗಣ, ದೇವಿಯ ಬೆಂಬಲಕ್ಕೆ ಸುತ್ತಲೂ ಗಣಾಧೀಶರು, ಮಧ್ಯದಲ್ಲಿ ಮಹಾದೇವಿ. ದಕ್ಷ ಧಾಮದೆಡೆಗೆ ಒಂದು ದೊಡ್ಡ ದಂಡಯಾತ್ರೆಯೆ ಹೊರಟಿತು. ದೇವಿಯು ಅತ್ತಹೋದ ಬಳಿಕ ಮಹಾದೇವರ ಮುಖದಿಂದ ನಿಟ್ಟುಸಿರು, ನಿರಾಶೆಯ ಉದ್ಗಾರ. ಬೇಡವೆಂದರೂ ಕೇಳಲಿಲ್ಲ. ನನ್ನ ಹೃದಯದರಸಿ ''ತಂದೆಯ ಮನೆಗೆ ತಾನಾಗಿಯೇ ಹೋಗಿದ್ದಾಳೆ. ಅಲ್ಲಿ ಆಗುವದು ಅವಳ ತಿರಸ್ಕಾರ'' ನನ್ನ ಧಿಕ್ಕಾರ. ಅವೆರಡೂ ಅವಳಿಗೆ ಅಸಹನೀಯ. ನನ್ನ ನಿಂದೆಯನ್ನು ಕೇಳಲಾರಳು, ನನ್ನ ಅವಮಾನವನ್ನು ತಾಳಲಾರಳು, ಪತಿಪ್ರಾಣೆ ಆ ಸತೀದೇವಿ. ತಂದೆಯ ಮನೆಗೆ ಹೋದ ಸತಿ ಇನ್ನು ಹಿಂದಿರುಗಲಾರಳು. ಮಾತೃಗೃಹವೇ ಅವಳಿಗೆ ಮೃತ್ಯುಗೃಹ''.

## ಸತಿಯ ಅಗ್ನಿ ಪ್ರವೇಶ, ದಕ್ಷ ಯಜ್ಞ ಧ್ವಂಸ ಪುನಃ ದಕ್ಷನ ಮೇಲೆ ಕೈಲಾಸ ಪತಿಯ ಕೃಪಾದೃಷ್ಟಿ

ಸತೀದೇವಿಯ ದಕ್ಷನ ರಾಜಧಾನಿ ತಲುಪಿದಳು. ಅಲ್ಲಿ ಅದ್ಭುತವಾದ ಯಜ್ಞ. ನೋಡಿದಲ್ಲೆಲ್ಲ ದೀಪಗಳ ಝಗಮಗಾಟ. ಎಲ್ಲೆಡೆಗೂ ಹದಿನಾಲ್ಕು ಲೋಕಗಳ ವಿವಿಧ ನರನಾರಿಯರ ಸಮಾಗಮ, ಉತ್ಸಾಹದ ಮಹಾಪೂರ, ಸಂಭ್ರಮದ ಸಮಾರಂಭ, ವಿಲಾಸದ ಉಲ್ಲಾಸ, ಕೌತುಕದ ಕಳಸ. ಇದನ್ನೆಲ್ಲ ಕಂಡು ದೇವಿಗೆ ಅತ್ಯಾಶ್ಚರ್ಯ. ಮನೆಯ ಬಾಗಿಲ ಬಳಿ ನಂದಿಯ ಹೆಗಲಿನಿಂದ ಇಳಿದಳು. ನಾಲ್ಕೂ ಕಡೆ ಹುಡುಕು ನೋಟ. ತಂದೆ, ತಾಯಿ ಬಂಧುಬಳಗ ಎಲ್ಲರೂ ಉತ್ಸಾಹದ ತೆರೆಗಳಲ್ಲಿ. ತಾಯಿ ತಂದೆಗಳಿದ್ದಲ್ಲಿಗೆ ಧಾವಿಸಿದಳು ಸತೀಮಣಿ. ತಲೆಬಾಗಿ ವಂದಿಸಿದಳು. ಪ್ರಸನ್ನ ಮನಸ್ಸಿನಿಂದ ಮಾತನಾಡಿದಳು. ''ತಾತ, ನಿನ್ನ ಮನೆಯಲ್ಲಿ ಇಂಥ ಮಹಾನ್ ಯಜ್ಞ. ನನಗೆ ಮಹಾನ್ ಆನಂದ. ಆದರೆ ಇದೇನು? ಇಷ್ಟೆಲ್ಲ ಲೋಕತ್ರಯ ಜನರನ್ನು ಆಮಂತ್ರಿಸಿ ಕರೆಸಿದ ನೀನು ನನ್ನ ಪತಿ ಪರಮೇಶ್ವರನನ್ನು ಕರೆ ಕಳುಹಲಿಲ್ಲ. ಈ

ಚರಾಚರ ಜಗತ್ತು ಯಾರಿಂದ ಧೃತೋಧ್ಧೃತವಾಗಿದೆ ಆ ಶಂಕರ ಲೋಕಕ್ಕೆಲ್ಲ ಕ್ಷೇಮಂಕರನಲ್ಲವೆ? ಅವನನ್ನೇಕೆ ಈ ಮಹಾ ಯಜ್ಞಕ್ಕೆ ನೀವು ಆಮಂತ್ರಿಸಲಿಲ್ಲ? ತಂದೆಗೆ ಹೀಗೆ ಸವಾಲು ಹಾಕಿ ಆ ಸತೀದೇವಿಯು ಮಹರ್ಷಿ ಮಂಡಲದೆಡೆಗೆ ಮುಖಮಾಡಿ ತುಸು ಮುನಿಸಿನಿಂದಲೇ ಮಾತನಾಡಿದಳು. ''ಭೃಗುಮಹರ್ಷಿಯೆ, ನಿಮಗೆ ಭಗವಾನ್ ಶಂಕರನ ಪರಿಚಯವಿಲ್ಲವೇ? ಧೀಮಂತರಾದ ಕಶ್ಯಪರೇ, ಆ ಮಹಾದೇವನನ್ನು ನೀವು ಅರಿತಿಲ್ಲವೆ? ಅತ್ರಿಗಳಿಗೆ ಆ ತ್ರಿನೇತ್ರನು ಅಪರಿಚಿತನೆ? ವಶಿಷ್ಠರಿಗೆ ಗೊತ್ತಿಲ್ಲವೇ ಆ ಮಹಾದೇವ? ಕಣ್ವರು ಕಾಣರೇ ಕೈಲಾಸಪತಿಯ ಮಹಿಮೆ! ದೇವೇಂದ್ರ, ನೀನು ಮರೆತೆಯಾ ಆ ದೇವದೇವನನ್ನು!. ಭಗವಾನ್ ವಿಷ್ಣುವೇ, ಮಹಾದೇವನ ಮಹಿಮೆಯನ್ನು ಚೆನ್ನಾಗಿ ಬಲ್ಲವರು ನೀವಲ್ಲವೆ ! ಬ್ರಹ್ಮದೇವ, ನೀವು ತಿಳಿಯಲಾರಿರಾ ಆ ಪರಶಿವನ ಪರಾಕ್ರಮವನ್ನು?'' ಸತೀದೇವಿಯ ಆಕ್ಷೇಪೋಕ್ತಿಯ ಅಧಿಕ್ಷೇಪವನ್ನು ಕೇಳಿ ದಕ್ಷನ ಕಣ್ಣು ಕೆಂಪಾದವು. ಅವನು ಸಿಡಿದು ನುಡಿದ. ''ಭದ್ರೆ, ಸಾಕು ನಿಲ್ಲಿಸು ಈ ನಿನ್ನ ತಲೆಹರಟೆ. ಈ ನಿನ್ನ ಬಾಯಿ ಮಾತಿನ ಬಡಬಡಿಕೆಯಿಂದ ಯಾರಿಗೆ ಏನು ಲಾಭ? ಈಗ ಇಲ್ಲಿ ನೀನು ಬರುವದು ಬೇಕಾಗಿರಲಿಲ್ಲ. ನಿನಗೆ ಇಲ್ಲಿ ಬರಲು ಯಾರು ಹೇಳಿದರು? ಏಕೆ ಬಂದೆ? ಬಂದ ಬಳಿಕ ಇಲ್ಲಿ ಬೇಕಾದರೆ ಇರು ಇಲ್ಲವಾದರೆ ಹೊರಟು ಹೋಗು. ಆ ನಿನ್ನ ಪತಿಯದೊ ದಿವ್ಯರೂಪ. ಹೆಸರು ಬೇರೆ ಅವನಿಗೆ ಶಿವ ಎಂತೆ. ಅಮಂಗಲದ ಮೂರ್ತಿ ಆ ನಿನ್ನ ಶಿವ. ಆ ಶಿವ ಎಂಬ ಹೆಸರೇ ದಂಡ ಆ ನಿನ್ನ ಗಂಡನಿಗೆ. ಅವನೇನು ಕುಲೀನನೇ ? ವೇದಗಳಿಂದ ಬಹಿಷ್ಕೃತ. ಮೇಲೆ ಭೂತ ಪ್ರೇತ ಪಿಶಾಚಗಳ ರಾಜ. ಪಿಶಾಚ ಪತಿಯೆಂದೇ ನಿನ್ನ ಗಂಡನಿಗೆ ನಾನು ಆಮಂತ್ರಣವನ್ನು ಕೊಡಲಿಲ್ಲ.''

ಸತೀದೇವಿಯು ನಿಜವಾಗಿ ವಿಶ್ವವಂದಿತಳು. ಆದರೆ ಈಗ ಮಾತ್ರ ತಾತ ನಿಂದಿತಳು. ತಂದೆ ಮಾಡಿದ ಪತಿನಿಂದೆಯಿಂದ ಅವಳ ಮನಸ್ಸು ನೊಂದುಹೋಯಿತು. ಅವಮಾನದಿಂದ ಹೃದಯ ಬೆಂದುಹೋಯಿತು. ನಿಯಂತ್ರಣ ಮಾಡಲು ಆಗದಷ್ಟು ಸಿಟ್ಟು ಅವಳ ನೆತ್ತಿಗೇರಿತು. ಅವಳು ತನ್ನ ಮನದಲ್ಲಿಯೇ ಯೋಚಿಸಿದಳು. ''ಮಹಾದೇವರ ನಿಂದೆಯನ್ನು ಮಾಡಿದವನು ನೇರವಾಗಿ ಹೋಗುವನು ನರಕಕ್ಕೆ. ಆ ಶಿವನಿಂದೆಯನ್ನು ಸುಮ್ಮನೆ ಕುಳಿತು ಕೇಳುವವನಿಗೂ ಅದೇ ದುರ್ಗತಿ.

**ಯೋ ನಿಂದತಿ ಮಹಾದೇವಂ ನಿಂದ್ಯಮಾನಂ ಶೃಣೋತಿ ಚ ।**
**ತಾವುಭೌ ನರಕಂ ಯಾತೋ ಯಾವಚ್ಚಂದ್ರ ದಿವಾಕರೌ ॥**

ಮಹಾದೇವರ ನಿಂದೆಯನ್ನು ಮಾಡಿದವರೂ, ಅದನ್ನು ಕೇಳುವವರೂ ಸೂರ್ಯ ಚಂದ್ರರಿರುವವರೆಗೆ ನರಕದಲ್ಲಿ ಕೊಳೆಯುವರು ಎಂದು ಶಾಸ್ತ್ರವಚನವಿದೆ. ಇಂದು ನಾನು ಆ ಇಂದುಧರನ ನಿಂದೆಯನ್ನು ನನ್ನ ಕಿವಿಯಿಂದ ಕೇಳಿದ್ದೇನೆ. ದೊಡ್ಡವರ ದೂಷಣೆಯನ್ನು ಕೇಳಿದ ಈ ದೇಹವನ್ನು ಇಲ್ಲಿಯೇ ಬಿಟ್ಟುಬಿಡುವೆನು. ಬೆಂಕಿಯಲ್ಲಿ ಬಿದ್ದು ಹರನಿಂದಾಶ್ರವಣದಿಂದ ದೂಷಿತವಾದ ಈ ಶರೀರವನ್ನು ಸುಟ್ಟು ಹಾಕುವೆನು,'' ಹೀಗೆ ಆಲೋಚಿಸುತ್ತ ಆ ಮಹಾಸತಿಯು ಶಿವೋರುದ್ರಃ ಶಂಭುರೀಶಃ ಕಪಾಲೀ

ಶಂಕರಃ ಪ್ರಭುಃ ಗಂಗಾಧರೊಂಧಕರಿಪುಃ ಕೈಲಾಸಾಧಿಪತಿಪ್ರಭುಃ'' ಎಂದು ಮುಂತಾಗಿ ತನ್ನ ಪತಿಯ ಪವಿತ್ರ ನಾಮಗಳನ್ನುಚ್ಚರಿಸುತ್ತ **''ಹರಹರ ಮಹಾದೇವ ಶಂಭೋ ಶಂಕರ ಪಾಹಿಮಾಂ ಕ್ಷಮಸ್ವ ಮಾಂ ''** ಎಂದು ಹೇಳುತ್ತ ಅಗ್ನಿ ಪ್ರವೇಶ ಮಾಡಿದಳು. ಅದನ್ನು ಕಂಡು ಅಲ್ಲಿ ನೆರೆದ ಶಿವನ ಅನುಚರರಾದ ಗಣಾಧೀಶರೆಲ್ಲರೂ ಹಾಹಾಕಾರ ಮಾಡತೊಡಗಿದರು. ಇಂದ್ರಾದಿ ದೇವತೆಗಳು ದಿಗ್ಭ್ರಾಂತರಾದರು. ವಿಶ್ವೇದೇವತೆಗಳು ಹೌಹಾರಿದರು. ಅಶ್ವಿನೀಕುಮಾರರು ಕಿಂಕರ್ತವ್ಯ ಮೂಢರಾದರು. ಲೋಕಪಾಲಕರು ಸ್ತಂಭೀಭೂತರಾದರು. ಉಳಿದೆಲ್ಲ ಋಷಿಗಳು, ಋತ್ವಿಜರು, ಮುನಿಗಳು, ಭಯಭ್ರಾಂತರಾಗಿ, ದುಃಖಾಕ್ರಾಂತರಾದರು.

ಈ ಅವಧಿಯಲ್ಲಿ ದೇವಮುನಿ ನಾರದರು ಕೈಲಾಸಪತಿಯ ಬಳಿಗೆ ಬಂದರು. ದಕ್ಷನ ಮನೆಯಲ್ಲಿ ನಡೆದ ದಾಕ್ಷಾಯಣಿಯ ದೇಹದಾಹದ ಸಮಾಚಾರವನ್ನು ಅಕ್ಷರಶಃ ಪರಶಿವನ ಎದುರು ಬಿತ್ತರಿಸಿದರು. ಕೇಳಿದ ಕೂಡಲೇ ಶಿವನ ಕರಳು ಕುದಿದು ಹೋದವು. ಪತಿ ಪರಮೇಶ್ವರನಾದ ಶಿವ, ವಿಶ್ವಸಂಹಾರಿಯಲ್ಲವೆ ! ಚಟ್ಟನೇ ತನ್ನ ತಲೆಯಿಂದ ಒಂದು ಜಡೆಯನ್ನು ಕಿತ್ತಿ ಆ ಮಹೇಶ್ವರನು ಪರ್ವತದ ಶಿಖರದ ಮೇಲೆ ಅಪ್ಪಳಿಸಿದನು. ಅವನ ಜಡೆಯ ಆಸ್ಫಾಲನೆಯಿಂದ ವೀರಭದ್ರನು ತಕ್ಷಣ ಪ್ರಕಟನಾದನು. ಮಹಾಭಯಂಕರವಾಗಿತ್ತು ಅವನ ರೂಪ. ಮರುಕ್ಷಣದಲ್ಲಿಯೇ ಕರಾಳ ಮುಖದ ಕಾಳಿಯ ಪ್ರಾದುರ್ಭಾವ. ಅವಳ ಸುತ್ತಲೂ ಕೋಟ್ಯಾವಧಿ ಭೂತಗಳು, ಕ್ರೋಧಾಂಧನಾದ ಆ ಕಾಲರುದ್ರನ ನಿಟ್ಟುಸಿರಿನಿಂದ ನೂರಾರು ತರಹದ ಜ್ವರಗಳ ಉತ್ಪತ್ತಿ. ಹದಿಮೂರು ಬಗೆಯ ಸನ್ನಿಪಾತ ರೋಗಗಳ ಅಭಿವೃದ್ಧಿ. ಭೂತಪ್ರೇತಗಳ ವಿಕಟ ನಾಟ್ಯ. ಈ ಸಂದರ್ಭದಲ್ಲಿ ವೀರಭದ್ರನ ವಿನಮ್ರ ನಿವೇದನೆ. ''ಪ್ರಭುಗಳು ಅಪ್ಪಣೆ ನೀಡಬೇಕು. ಈ ತಮ್ಮ ಸೇವಕನು ಯಾವ ಕಾರ್ಯವನ್ನು ಮಾಡಬೇಕು?'' ಕಾಲಾಂತಕನ ಕಂಠ ಸಿಡಿದು ನುಡಿ ಹೊರಬಿದ್ದಿತು - ''ಬಲಿಷ್ಠ ವೀರಭದ್ರ, ಬೇಗ ಹೋಗು, ಧ್ವಂಸ ಮಾಡು ಆ ದಕ್ಷನ ಯಜ್ಞವನ್ನು.'' ದೇವಾಧಿದೇವನಾದ ಶಂಕರನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ನಡೆದ ವೀರಭದ್ರ. ಎಲ್ಲ ಭೂತಗಳೂ ಅವನನ್ನು ಬೆಂಬಲಿಸಿ ದಕ್ಷಪ್ರಜಾಪತಿಯ ರಾಜಧಾನಿಗೆ ದಂಡಯಾತ್ರೆ ಬೆಳೆಸಿದರು. ಕಾಳಿಕಾದೇವಿಯೂ ಅವರೊಡನಿದ್ದಳು. ಅದೇ ಸಮಯದಲ್ಲಿ ದಕ್ಷಪ್ರಜಾಪತಿ ನೆಲೆಸಿದ್ದ ಊರಲ್ಲಿ ಅನೇಕ ಅಪಶಕುನಗಳು, ಧೂಳು ಮೂಳೆಗಳಿಂದ ತುಂಬಿದ ರುಕ್ಷಗಾಳಿ ಎಲ್ಲೆಡೆ ಬೀಸುತ್ತಿತ್ತು. ಮೋಡಗಳಿಂದ ನೆತ್ತರಿನ ಮಳೆ, ದಶ ದಿಕ್ಕುಗಳಲ್ಲಿಯೂ ಕಾರ್ಗತ್ತಲೆ. ನೆಲದ ಮೇಲೆ ಸಾವಿರಾರು ಉಲ್ಕೆಗಳ ನಿಪಾತ. ದೇವತೆಗಳಿಗೆ ಗಾಬರಿ. ಇದನ್ನು ಕಂಡು ಋತ್ವಿಜರು, ಋಷಿಗಳೂ ತಲ್ಲಣಿಸಿದರು. ದಕ್ಷನೂ ಭಯಭ್ರಾಂತ. ಅವನು ಶ್ರೀಹರಿಗೆ ಶರಣು ಹೋಗಿ ವಿನಯದಿಂದ ಬೇಡಿಕೊಂಡ. ''ಮಹಾಪ್ರಭೋ, ಈ ಸಮಯದಲ್ಲಿ ನಿನ್ನ ಹೊರತು ನನ್ನನ್ನು ಬೇರೆ ಯಾರೂ ರಕ್ಷಿಸುವಂತಿಲ್ಲ. ಪುರುಷೋತ್ತಮ ನೀನೇ ನನ್ನನ್ನು ಈ ಭಯದಿಂದ ಮುಕ್ತನನ್ನಾಗಿ ಮಾಡು.'' ದೀನ ಮಾನನಾದ ದಕ್ಷಪ್ರಜಾಪತಿಯ ಈ ದಯನೀಯ

ಅವಸ್ಥೆಯನ್ನು ಕಂಡು ಕರುಣೆದೋರಿದ ಭಗವಾನ್ ವಿಷ್ಣು. ಅವನ ಬಿನ್ನಹವನ್ನು ಕೇಳಿ ಮೃದುವಾಗಿ ಉತ್ತರಿಸಿದ ''ಪ್ರಜಾಪತಿಯೇ, ನಿನ್ನನ್ನು ರಕ್ಷಿಸುವುದು ನನ್ನ ಕರ್ತವ್ಯವೇನೋ ನಿಜ. ಆದರೆ ನೀನು ಧರ್ಮವನ್ನು ಅರಿತವನಾದರೂ ಪರಮೇಶ್ವರನನ್ನು ನಿಂದಿಸಿದೆ. ಆ ಪರಶಿವನನ್ನು ತಿರಸ್ಕರಿಸಿದ್ದರಿಂದ ನೀನು ಮಾಡಿದ ಕಾರ್ಯವೆಲ್ಲವೂ ನಿಷ್ಫಲವೂ ನಿರರ್ಥಕವೂ ಆಗುವವು.

**ಅಪೂಜ್ಯಾ ಯತ್ರ ಪೂಜ್ಯಂತೇ ಪೂಜನೀಯೋ ನ ಪೂಜ್ಯತೆ ।**
**ತ್ರೀಣಿ ತತ್ರ ಭವಿಷ್ಯಂತಿ ದುರ್ಭಿಕ್ಷಂ ಮರಣಂ ಭಯಂ ॥**

ಪೂಜ್ಯರಾಗದ ಅಯೋಗ್ಯ ವ್ಯಕ್ತಿಗಳ ಪೂಜೆಯು ಎಲ್ಲಿ ನಡೆಯುವುದೋ ಮತ್ತು ಅತ್ಯಂತ ಪೂಜನೀಯರಾದ ಪುಣ್ಯ ಪುರುಷರ ಪೂಜೆಯು ಎಲ್ಲಿ ನಡೆಯುವುದಿಲ್ಲವೋ ಅಲ್ಲಿ ದುರ್ಭಿಕ್ಷೆ, ಮರಣ, ಭೀತಿ ಇವು ಮೂರು ಉಂಟಾಗುತ್ತವೆ ಎಂದು ಹಿರಿಯರು ಹೇಳುತ್ತಾರೆ. ಆದುದರಿಂದ ನೀನು ಸರ್ವರೀತಿಯಿಂದಲೂ ಪ್ರಯತ್ನ ಮಾಡಿ ಶಂಕರನನ್ನು ಗೌರವಿಸು. ಯಜ್ಞದಲ್ಲಿ ಆ ಪಿನಾಕಪಾಣಿಯನ್ನು ನೀನು ಆಹ್ವಾನಿಸದೇ ಇದ್ದುದರಿಂದಲೇ ಈಗ ನಿನಗೆ ಈ ಮಹತ್ತರವಾದ ಭಯವು ಪ್ರಾಪ್ತವಾಗಿದೆ. ನಾವೆಲ್ಲರೂ ಕೂಡಿಯೂ ಈ ಸಂಕಟವನ್ನು ನಿವಾರಿಸಲಾರೆವು. ಇದೆಲ್ಲವೂ ನಿನ್ನ ನೀತಿಭ್ರಷ್ಟತೆಯ ಪರಿಣಾಮ.''

ಶ್ರೀಹರಿಯು ಇಷ್ಟು ಮಾತನಾಡುತ್ತಿರುವಾಗಲೇ ಅಲ್ಲಿಗೆ ವೀರಭದ್ರನು ಆಗಮಿಸಿದನು. ಅವನೊಟ್ಟಿಗೆ ಕಾಳೀ, ಕಾತ್ಯಾಯನಿ, ಈಶಾನಿ, ಚಾಮುಂಡಿ, ಮರ್ದಿನಿ, ಭದ್ರಕಾಳಿ, ಭದ್ರಾ, ತ್ವರಿತಾ, ವೈಷ್ಣವಿ, ಮುಂತಾದ ಒಂಭತ್ತು ದುರ್ಗಾದೇವಿಯರೂ, ದೊಡ್ಡದಾದ ಭೂತಪ್ರೇತಗಳ ಪರಿವಾರವೂ ಬಂದುಬಿಟ್ಟಿತು. ಇವರಲ್ಲದೇ ಶಾಕಿನಿ, ಡಾಕಿನಿ, ಭೂತ, ಪ್ರಮಥ, ಗುಹ್ಯಕ, ಕೂಷ್ಮಾಂಡ, ಕರ್ಪಟ, ವಕುಟ, ಬ್ರಹ್ಮರಾಕ್ಷಸ, ಭೈರವ, ಕ್ಷೇತ್ರಪಾಲಕ, ರಾಕ್ಷಸ, ಯಕ್ಷ, ವಿನಾಯಕ ಮುಂತಾದ ಶಿವಗಣಂಗಳೂ ಅರವತ್ತುನಾಲ್ಕು ಯೋಗಿನಿಯರ ಮಂಡಲಗಳೂ ಆ ಯಜ್ಞ ಮಂಟಪದಲ್ಲಿ ಒಮ್ಮಿಂದೊಮ್ಮೆಲೇ ಉದ್ಭವವಾದವು. ಭಗವಾನ ಶಂಕರನ ಈ ಎಲ್ಲ ಅನುಚರರೂ, ದಕ್ಷಪ್ರಜಾಪತಿಯ ಬೆಂಬಲಿಗರಾದ ದೇವತೆಗಳ ಕೂಡ ಹೋರಾಟವನ್ನೇ ನಡೆಸಿದರು. ದೇವತೆಗಳೂ, ಲೋಕಪಾಲಕರೂ, ಸೇರಿಕೊಂಡು ಈ ಶಿವಸೇನೆಯೊಂದಿಗೆ ಕಲಿತನದಿಂದ ಕಾದತೊಡಗಿದರು. ಮಹಾದೇವನ ಈ ಭೂತಪ್ರೇತ, ಪಿಶಾಚ ಹಾಗೂ ಗಣಾಧೀಶ್ವರರ ಶಿವಗಣಂಗಳ ಸೇನಾಬಲವು ಪ್ರಚಂಡವೂ ಅಪರಿಮಿತವೂ ಆಗಿದ್ದಿತು. ಅದರ ಮುಂದೆ ದಕ್ಷಪ್ರಜಾಪತಿಯ ಬೆಂಬಲಿಗಿದ್ದ ಸುರಸೇನೆಯು ಅತ್ಯಲ್ಪ. ಆದರೆ ದೇವತೆಗಳು ಸಂಖ್ಯೆಯಲ್ಲಿ ಕಡಿಮೆಯಿದ್ದರೂ ಶಸ್ತ್ರಾಸ್ತ್ರದಿಂದ ಸುಸಂಪನ್ನರು. ಸುರಸಮೂಹದಲ್ಲಿಯ ಪ್ರತಿಯೊಬ್ಬನೂ ಘೋರತರವಾದ ಶಸ್ತ್ರಾಸ್ತ್ರ ಪ್ರಯೋಗದಲ್ಲಿ ಪಳಗಿದವರು. ಅತೀಭೀಕರತರವಾದ ಆಯುಧಗಳ ಪ್ರಬಲ ಪ್ರಹಾರದಿಂದ ಸಂಹಾರದ ಸತ್ರವನ್ನೇ ಆರಂಭಿಸಿದರು ಸುರಸೈನಿಕರು. ಇದೇ ವೇಳೆಯಲ್ಲಿ ದೇವತೆಗಳ ಯಜಮಾನನಾದ ದಕ್ಷಪ್ರಜಾಪತಿಯನ್ನು ಆನಂದಪಡಿಸಲಿಕ್ಕೆಂದು ಭೃಗುಋಷಿಯು ಶಿವಗಣಗಳ ಮೇಲೆ ಉಚ್ಚಾಟನ ತಂತ್ರವನ್ನು ಪ್ರಯೋಗಿಸಿದನು. ಇದರಿಂದ ಶಿವನ ಸೇನೆಯು ಪರಾಜಿತವಾಯಿತು.

ತನ್ನ ಸೇನೆಯು ಸೋತುಹೋದುದನ್ನು ಕಂಡು ವೀರಭದ್ರನಿಗೆ ಕೋಪ ಉಕ್ಕೇರಿತು. ಅವನು ಆ ಭೂತಪ್ರೇತ ಪಿಶಾಚ ಪರಿವಾರವನ್ನು ಹುರಿದುಂಬಿಸಿ ಮುಂಚೂಣಿಯಲ್ಲಿ ತಾನೇ ನಿಂತುಕೊಂಡು ತೀಕ್ಷ್ಣವಾದ ತ್ರಿಶೂಲದಿಂದ ದೇವತೆಗಳನ್ನು ಹಾಗೂ ಯಕ್ಷ ರಾಕ್ಷಸರನ್ನೂ ಕೊಚ್ಚತೊಡಗಿದನು. ಅದನ್ನು ಕಂಡು ಉತ್ಸಾಹಗೊಂಡ ಶಿವಸೇನೆಯು ದೇವತೆಗಳ ಗುಂಪಿನ ಮೇಲೆ ಎರಗಿ ಪರಾಕ್ರಮದಿಂದ ಸಂಹರಿಸತೊಡಗಿತು. ಶಿವಗಣಂಗಳ ಈ ಭೀಕರವಾದ ಶಸ್ತ್ರಾಘಾತದಿಂದ ದೇವತೆಗಳ ಬಲವೆಲ್ಲವೂ ತತ್ತರಿಸಿ ಓಡತೊಡಗಿತು. ಇಂದ್ರ ಮೊದಲಾದ ಲೋಕಪಾಲಕರೂ ಭಯಭ್ರಾಂತರಾಗಿ ಗುರು ಬೃಹಸ್ಪತ್ಯಾಚಾರ್ಯರನ್ನು ಕೇಳಿದರು. ''ಗುರುದೇವ, ಇನ್ನು ಮೇಲೆ ನಾವು ಗೆಲ್ಲುವ ಬಗೆ ಹೇಗೆ?'' ಆಗ ಬೃಹಸ್ಪತಿಯು ನಕ್ಕು ಹೇಳಿದನು: ''ವಿಷ್ಣುವೇ ಮೊದಲೇ ಹೇಳಿರಲಿಲ್ಲವೇ! ಆ ಮಾತು ಈಗ ನಿಜವಾಯಿತು. ಇಲ್ಲಿ ಬಂದ ವೀರಭದ್ರನ ಸೈನಿಕರೆಲ್ಲರೂ ಶಿವನ ಕಿಂಕರರು, ಅವನ ಸಂಪೂರ್ಣ ಬೆಂಬಲ ಹಾಗೂ ಆಶೀರ್ವಾದದ ಬಲದಿಂದ ಅವರು ಹೋರಾಡುತ್ತಿದ್ದಾರೆ. ಜಗತ್‌ಸಂಹಾರಕನಲ್ಲವೇ ಆ ಶಂಕರ ! ಅವನೇ ಇವರಿಗೆಲ್ಲ ಸಹಾಯಕನಾಗಿ ನಿಂತುಕೊಂಡಿದ್ದಾನೆ. ಆ ಶಿವನನ್ನು ಅವಮಾನಿಸಿದ ದಕ್ಷನ ಬೆಂಬಲಕ್ಕೆ ನಿಂತ ನಿಮ್ಮನ್ನು ಅವನು ಸಂಹರಿಸದೇ ಬಿಡಲಾರ.''

ದೇವಗುರುವಿನ ಈ ಮಾತನ್ನು ಕೇಳಿ ಇಂದ್ರನೇ ಮೊದಲಾದ ಲೋಕಪಾಲಕರು ಚಿಂತಾಕ್ರಾಂತರಾದರು. ವೀರಭದ್ರನು ಇಮ್ಮಡಿಸಿದ ಉತ್ಸಾಹದಿಂದ ದೇವಸೇನೆಯ ಮೇಲೆ ಎರಗಿ ವೀರಾವೇಶದಿಂದ ಎಲ್ಲರನ್ನೂ ಕೊಲ್ಲತೊಡಗಿದನು. ಅವನ ಬಾಣ ಪ್ರಹಾರದಿಂದ ತಾಡಿತಪೀಡಿತರಾದ ದೇವಗಣಗಳು ದಿಕ್ಕೆಟ್ಟು ಓಡಿದರು. ಲೋಕಪಾಲಕರೂ ಪಲಾಯನ ಹೇಳಿದರು. ವಿಷ್ಣುವೂ ಅಲ್ಲಿಂದ ಹೊರಟುಹೋದ. ಆಗ ವೀರಭದ್ರನು ತನ್ನ ಶಿವಸೇನೆಯೊಂದಿಗೆ ಯಜ್ಞಶಾಲೆಯನ್ನು ಹೊಕ್ಕನು.

ಗಣಾಧೀಶರು ಅಲ್ಲಿರುವ ದೇವತೆಗಳನ್ನೂ, ಋತ್ವಿಜರನ್ನೂ, ಋಷಿಗಳನ್ನೂ ಹೊಡೆದೋಡಿಸಿದರು. ಮಹಾಮಹರ್ಷಿ ಭೃಗುಮುನಿಯನ್ನು ಹಿಡಿದೆಳೆದರು. ನೆಲದ ಮೇಲೆ ಬೀಳಿಸಿ ಅವನ ಗಡ್ಡವನ್ನು ಕಿತ್ತಿದರು. ಮೀಸೆಯನ್ನು ಕಿತ್ತಿದರು. ತನ್ನೆಡೆಗೆ ಹಲ್ಲು ತೆರೆದು ಉಪಹಾಸಗೈದ ಪೂಷನ್ನನ ಎಲ್ಲ ಹಲ್ಲುಗಳನ್ನು ಮುರಿದು ಹಾಕಿದರು. ಅಗ್ನಿಯ ಮಡದಿಯರಾದ ಸ್ವಧಾ, ಸ್ವಾಹಾರನ್ನು ಅವಮಾನಿತರನ್ನಾಗಿ ಮಾಡಿದರು. ಇದನ್ನೆಲ್ಲ ನೋಡಿ ಭಯಾಕ್ರಾಂತನಾದ ದಕ್ಷಪ್ರಜಾಪತಿಯು ಯಜ್ಞ ವೇದಿಕೆಯ ಕೆಳಗೆ ಅಡಗಿಕೊಂಡನು. ಅಂತರ್‌ವೇದಿಯಲ್ಲಿ ಅಡಗಿ ನಡುಗುತ್ತ ಕುಳಿತ ದಕ್ಷನನ್ನು ವೀರಭದ್ರನು ಎಳೆದು ಹೊರಗೆ ತಂದನು. ಖಡ್ಗದಿಂದ ಅವನ ತಲೆಯನ್ನು ಕಡಿದನು. ಕ್ರೋಧಾಂಧನಾದ ವೀರಭದ್ರನು ಕತ್ತರಿಸಿದ ದಕ್ಷನ ಶಿರಸ್ಸನ್ನು ಅಗ್ನಿಕುಂಡದಲ್ಲಿ ಒಗೆದುಬಿಟ್ಟನು. ದಕ್ಷನ ಮಸ್ತಕವು ಯಜ್ಞಾಗ್ನಿಯಲ್ಲಿ ದಹಿಸುತ್ತಿರುವುದನ್ನು ಕಂಡು ಅಳಿದುಳಿದ ಎಲ್ಲ ದೇವತೆಗಳೂ ದಿಕ್ಕು ಸಿಕ್ಕ ಕಡೆ ಓಡಿಹೋದರು. ಚಂದ್ರ, ಸೂರ್ಯ, ನಕ್ಷತ್ರ, ಗ್ರಹಮಂಡಲ ಎಲ್ಲರನ್ನೂ ಗಣಾಧೀಶರು ಬೆನ್ನಟ್ಟಿಹೊಡೆದರು ಓಡಿಸಿದರು.

ತನ್ನ ಪುತ್ರನಾದ ದಕ್ಷಪ್ರಜಾಪತಿಯ ಈ ದುರವಸ್ಥೆಯನ್ನು ಕಂಡು ಬ್ರಹ್ಮದೇವನು ಕೂಡ ಮರುಮಾತನಾಡದೆ ಸತ್ಯಲೋಕಕ್ಕೆ ತೆರಳಿದನು. ಅಲ್ಲಿಯೂ ಅವನಿಗೆ ಶಾಂತಿ ದೊರೆಯಲಿಲ್ಲ. ಮುಂದೆ ಏನು ಮಾಡಬೇಕು ತಿಳಿಯದಾಯಿತು ಆ ಪಿತಾಮಹನಿಗೆ. ಕೆಲವು ಸಮಯ ಆ ಶಾರದಾಪತಿಯು ದಿಗ್ಮೂಢನಾಗಿ ಕುಳಿತು ಅನಂತರ ತನ್ನ ಹಂಸವಾಹನವನ್ನು ಆರೋಹಣ ಮಾಡಿ, ಕೈಲಾಸ ಪರ್ವತಕ್ಕೆ ತೆರಳಿದನು. ಅಲ್ಲಿ ನಂದೀಶ್ವರನೊಂದಿಗೆ ಏಕಾಂತದಲ್ಲಿ ಸದಾಶಿವನ ದರ್ಶನವನ್ನು ಪಿತಾಮಹನು ಮಾಡಿಕೊಂಡನು. ತಲೆಯ ಮೇಲೆ ಚಂದ್ರ ಹಾಗೂ ಗಂಗಾಪ್ರವಾಹವನ್ನು ಧರಿಸಿದ ಆ ಪರಮೇಶ್ವರನನ್ನು ನಮಸ್ಕರಿಸಿ ಬ್ರಹ್ಮದೇವರು ಸ್ತುತಿಸತೊಡಗಿದರು. ''ಜಗತ್ತಿನ ಸೃಷ್ಟಾರನಾದ ಮಹಾರುದ್ರನಿಗೆ ನಮೋನಮಃ. ವಿಶ್ವ ಕ್ಷೇಮಕ್ಕಾಗಿ ವಿಷಪಾನಗೈದ ನೀಲಕಂಠನಿಗೆ ನನ್ನ ನಮಸ್ಕಾರ. ಪ್ರಪಂಚ ಆದಿಕಾರಣನಾದ ಪರಮೇಶ್ವರನಿಗೆ ವಂದನೆ. ಭಗವನ್ ಓಂಕಾರ ವಷಟ್ಕಾರ ಸ್ವರೂಪನಾದ ನೀನೇ ಯಜ್ಞಸ್ವರೂಪಿಯು, ಯಜಮಾನನು, ಯಜ್ಞಪ್ರವರ್ತಕನು. ದೇವ ದೇವ, ಮಹಾದೇವ, ಎಲ್ಲ ಯಜ್ಞಪ್ರವರ್ತಕನಾದ ನೀನೇ ಈಗ ಯಜ್ಞನಾಶಕ್ಕೆ ಹೇಗೆ ಪ್ರವರ್ತಕನಾದೆ? ಗೋಬ್ರಾಹ್ಮಣ ಪ್ರತಿಪಾಲಕನಾದ ನೀನು ಎಲ್ಲರಿಗೂ ಸಂರಕ್ಷಕನೂ ಆಗಿರುವೆ. ದೇವತೆಗಳೆಲ್ಲರೂ ನಿನಗೆ ಶರಣು ಬಂದಿದ್ದಾರೆ. ಎಲ್ಲರನ್ನೂ ನೀನು ರಕ್ಷಿಸು-ರಕ್ಷಿಸು.''

**ಮಹಾದೇವ :** ''ಪಿತಾಮಹನೇ, ಈ ದುಷ್ಟದಕ್ಷನು ತನ್ನ ದುಷ್ಕರ್ಮದಿಂದ ತಾನೇ ಹತನಾಗಿದ್ದಾನೆ. ಇದರಲ್ಲಿ ಸಂದೇಹವಿಲ್ಲ. ತನ್ನ ಕರ್ಮದಿಂದ ಬೇರೊಬ್ಬರಿಗೆ ಕ್ಲೇಶ ಉಂಟು ಮಾಡುವವನು ತಾನೇ ನಾಶಹೊಂದುತ್ತಾನೆ. '' ಹೀಗೆ ಹೇಳಿ ಪರಮೇಶ್ವರನು ಪಿತಾಮಹನೊಂದಿಗೆ ದಕ್ಷಪ್ರಜಾಪತಿಯು ಯಜ್ಞ ಮಾಡುತ್ತಿದ್ದ ಕನಖಲತೀರ್ಥಕ್ಕೆ ಬಂದನು. ಆ ಯಜ್ಞಮಂಟಪದಲ್ಲಿ ವೀರಭದ್ರನು ನಡೆಸಿದ ಹತ್ಯಾಕಾಂಡವನ್ನು ಸ್ವಯಂ ಶಂಕರನು ನಿರೀಕ್ಷಿಸಿದನು. ಸ್ವಾಹಾ,ಸ್ವಧಾ, ಪೂಷಾ, ಭೃಗು, ಹಾಗೂ ಉಳಿದ ಋಷಿಗಳು, ಪಿತೃಗಳು, ಯಜ್ಞ ಗಂಧರ್ವ ಕಿನ್ನರರು ಛಿನ್ನವಿಚ್ಛಿನ್ನರಾಗಿ ಯಜ್ಞವೇದಿಕೆಯ ಸುತ್ತಮುತ್ತಲೂ ಬಿದ್ದುಕೊಂಡಿದ್ದರು. ಯಜ್ಞಭೂಮಿಯು ರಣಭೂಮಿಯಾಗಿ ಮಾರ್ಪಟ್ಟಿದ್ದಿತು. ಭಗವಾನ್ ಕೈಲಾಸಪತಿಯು ಬಂದದ್ದನ್ನು ಕಂಡು ವೀರಭದ್ರನು ಎಲ್ಲ ಶಿವಗಣದೊಂದಿಗೆ ದಂಡಪ್ರಣಾಮ ಮಾಡಿ ಮಹಾದೇವನ ಎದುರು ಕೈಜೋಡಿಸಿಕೊಂಡು ನಿಂತನು. ಆಗ ಶಿವನು ವೀರಭದ್ರನನ್ನು ಕುರಿತು ''ವೀರನೇ, ನೀನು ಇದನ್ನೇನು ಮಾಡಿದೆ? ದಕ್ಷಪ್ರಜಾಪತಿಯನ್ನು ಬೇಗನೇ ಇಲ್ಲಿಗೆ ತೆಗೆದುಕೊಂಡು ಬಾ.'' ಪರಮೇಶ್ವರನ ಆಜ್ಞೆಯಾದ ಕೂಡಲೇ ವೀರಭದ್ರನು ದಕ್ಷನ ದೇಹವನ್ನು ಎತ್ತಿಕೊಂಡು ಶಿವನ ಎದುರಿಗೆ ತಂದು ನಿಲ್ಲಿಸಿದನು.

**ಮಹಾದೇವ :** ''ಇವನ ತಲೆ ಎಲ್ಲಿ ಹೋಯಿತು? ಇವನು ಎಷ್ಟೇ ದುಷ್ಟನಾಗಲಿ, ಇವನ ತಲೆ ಸಿಕ್ಕರೆ ನಾವು ಮತ್ತೆ ಬದುಕಿಸುತ್ತೇವೆ. ಇವನ ಮಸ್ತಕವು ಎಲ್ಲಿಯಾದರೂ ಬಿದ್ದಿದ್ದರೆ ಹುಡುಕಿ ತಂದುಕೊಡಿರಿ.''

**ವೀರಭದ್ರ** : ''ಮಹೇಶ್ವರ, ನಾನು ಈ ದಕ್ಷಪ್ರಜಾಪತಿಯ ಮಸ್ತಕವನ್ನು ಅಗ್ನಿಕುಂಡದಲ್ಲಿ ಹೋಮಮಾಡಿ ಬಿಟ್ಟಿದ್ದೇನೆ. ಇಲ್ಲಿ ಕೇವಲ ಇದೊಂದು ಕುರಿಯ ಮುಖವು ಮಾತ್ರ ಉಳಿದಿದೆ.'' ಅದನ್ನು ಕಂಡು ಶಂಕರನು ಆ ಪಶುವಿನ ಮುಖವನ್ನೇ ದಕ್ಷನ ಕಬಂಧಕ್ಕೆ ಜೋಡಿಸಿ ಅದರಲ್ಲಿ ಜೀವ ಬರುವಂತೆ ಮಾಡಿದನು. ಆ ಪಿನಾಕಪಾಣಿಯ ದಯೆಯಿಂದ ದಕ್ಷನಿಗೆ ಹೊಸ ಜೀವನವೇ ಪ್ರಾಪ್ತವಾಯಿತು. ಅವನು ತನ್ನ ಎದುರು ನಿಂತ ಭಗವಾನ್ ಪರಮೇಶ್ವರನನ್ನು ನೋಡಿ ಲಜ್ಜೆಯಿಂದ ನಡುಗುತ್ತ ಅವನ ಪಾದಸ್ಪರ್ಶವನ್ನು ಮಾಡಿದನು. ಎರಡೂ ಕೈಗಳನ್ನು ಮುಗಿದು ಸ್ತೋತ್ರ ಮಾಡಿದನು.

**ನಮಾಮಿ ದೇವಂ ವರದಂ ವರೇಣ್ಯಂ ।**
**ನಮಾಮಿ ದೇವಾಧಿಪಮೀಶ್ವರಂ ಹರಂ ॥**

**ನಮಾಮಿ ಶಂಭುಂ ಜಗದೇಕ ಬಂಧುಂ ।**
**ನಮಾಮಿ ಸೃಷ್ಟಿಸ್ಥಿತಿ ಕಾರಣಂ ಪ್ರಭುಂ ॥**

**ನಮಾಮಿ ವಿಶ್ವೇಶ್ವರವಿಶ್ವರೂಪಂ ।**
**ಸನಾತನಂ ಬ್ರಹ್ಮ ನಿಜಾತ್ಮರೂಪಂ ॥**

**ನಮಾಮಿ ಸರ್ವಂ ನಿಜಭಾವಗಮ್ಯಂ ।**
**ವರಂ ವರೇಣ್ಯಂ ವರದಂ ನತೋಽಸ್ಮಿ ॥**

ದೇವ ದೇವೇಶ್ವರನಾದ ಶಂಕರನಿಗೆ ನಮಸ್ಕಾರ. ಭಕ್ತರಿಗೆಲ್ಲ ವರನೀಡುವ ಭಗವಂತನಿಗೆ ನಮೋನಮಃ. ಸರ್ವೈಶ್ವರ್ಯ ಸಂಪನ್ನನಾದ, ದೇವತಾ ಧುರೀಣನಿಗೆ ನಮಸ್ಕಾರ. ವಿಶ್ವಬಂಧು ಶ್ರೀ ಶಂಭುವಿಗೆ ನನ್ನ ವಂದನೆ. ವಿಶ್ವಕ್ಕೆಲ್ಲ ಅಧೀಶ್ವರನೂ, ಜಗತ್ ಸ್ವರೂಪನೂ, ಬ್ರಹ್ಮರೂಪನೂ ಆದ ಸದಾಶಿವನಿಗೆ ನನ್ನ ನಮನ. ಭಕ್ತರ ಭಾವ ಗಮ್ಯನಾದ, ಸರ್ವಾಂತರ್ಯಾಮಿಯಾದ ಶರ್ವನಿಗೆ ನನ್ನ ಪ್ರಣಾಮ. ಸರ್ವಶ್ರೇಷ್ಠನಾದ, ಎಲ್ಲ ಭಕ್ತರಿಗೂ ವರನೀಡುವ ಆ ಪರಮೇಶ್ವರನನ್ನು ನಾನು ಮತ್ತೆ ಮತ್ತೆ ನಮಸ್ಕರಿಸುತ್ತೇನೆ'' ಎಂದು ಭಗವಂತನನ್ನು ಬಗೆ ಬಗೆಯಾಗಿ ಸ್ತುತಿಸಿದನು. ದಕ್ಷಪ್ರಜಾಪತಿಯ ಈ ಸ್ತುತಿಯನ್ನು ಕೇಳಿ ಹರನು ಹೇಳಿದನು ''ಸುರೋತ್ತಮನೇ, ಆರ್ತ, ಜಿಜ್ಞಾಸು, ಅರ್ಥಾರ್ಥಿ ಮತ್ತು ಜ್ಞಾನಿ ಎಂದು ನಾಲ್ಕು ಬಗೆಯಾದ ಮಾನವರು ನನ್ನನ್ನು ಧ್ಯಾನಗೈಯುತ್ತಾರೆ. ಇವರಲ್ಲಿ ನಾಲ್ಕನೆಯವನಾದ ಜ್ಞಾನೀಪುರುಷನು ನನಗೆ ಅತ್ಯಂತ ಪ್ರಿಯತಮ. ಜ್ಞಾನವಿಲ್ಲದೆ ನನ್ನನ್ನು ಯಾರೂ ಹೊಂದಲಾರರು. ನೀನು ಕೇವಲ ಯಜ್ಞಾದಿಕರ್ಮಗಳಿಂದ ಸಂಸಾರ ಸಾಗರವನ್ನು ದಾಟಲು ಬಯಸುತ್ತಿರುವೆ, ಆದರೆ ಕೇವಲ ಕಾಮಾಸಕ್ತರಾದ ಮೂಢರು ಯಜ್ಞ, ಧಾನ, ತಪಸ್ಸು ವೇದಾಧ್ಯಯನ ಮುಂತಾದ ಯಾವುದರಿಂದಲೂ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲಾರರು. ಆದುದರಿಂದ ಮೊದಲು ನೀನು ನಿನ್ನ ಅಂತಃಕರಣವನ್ನು ಪರಿಶುದ್ಧಮಾಡಿಕೊಂಡು ಜ್ಞಾನನಿಷ್ಠನಾಗಿ ಕರ್ಮಾನುಷ್ಠಾನವನ್ನು ಮಾಡು.

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನ; ಸದಾ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಸುರಸತ್ತಮ ॥**

**ತಸ್ಮಾನ್ಮೇ ಜ್ಞಾನಿನಃ ಸರ್ವೇ ಪ್ರಿಯಾಃ ಸ್ಯುರ್ನಾತ್ರ ಸಂಶಯಃ ।**
**ವಿನಾ ಜ್ಞಾನೇನ ಮಾಂ ಪ್ರಾಪ್ತುಂ ಯತಂತೇ ತೇ ಹಿ ಬಾಲಿಶಾಃ ॥**

**ಕೇವಲಂ ಕರ್ಮಣಾ ತ್ವಂ ಹಿ ಸಂಸಾರಂ ತರ್ತುಮಿಚ್ಛಸಿ ।**
**ನ ಧ್ಯಾನೇನ ಯಜ್ಞೈಶ್ಚ ನ ದಾನೈಸ್ತಪಸಾ ಕ್ವಚಿತ್ ॥**

**ನ ಶಕುವಂತಿ ಮಾಂ ಪ್ರಾಪ್ತುಂ ಮೂಢಾಃ ಕರ್ಮವಶಾ ನರಾಃ ।**
**ತಸ್ಮಾದ್ ಜ್ಞಾನಪರೋ ಭೂತ್ವಾ ಕುರು ಕರ್ಮ ಸಮಾಹಿತಃ ॥**

**ಸುಖದುಃಖಸಮೋ ಭೂತ್ವಾ ಸುಖೀ ಭವ ನಿರಂತರಮ್ ॥**

ಕರ್ಮವಶರಾದ ಮೂಢರು ನನ್ನನ್ನು ಎಂದೂ ಹೊಂದಲಾರರು. ಆದ್ದರಿಂದ ಮೊದಲು ಜ್ಞಾನವನ್ನು ಸಂಪಾದಿಸಿ ಸಮಾಧಾನ ಚಿತ್ತದಿಂದ ಕರ್ಮಾಚರಣೆ ಮಾಡು. ಸುಖ ದುಃಖ ಎರಡನ್ನೂ ಸಮನಾಗಿ ತಿಳಿ. ಇದರಿಂದ ನಿನಗೆ ನಿರಂತರ ಸುಖವಾಗುವುದು.''

ಹೀಗೆ ಹೇಳಿ ಪರಮೇಶ್ವರನು ಆ ಕನಖಲ ತೀರ್ಥದಲ್ಲಿಯೇ ನೆಲಸಲು ದಕ್ಷನಿಗೆ ಆದೇಶಿಸಿದನು. ಬಳಿಕ ತನ್ನ ಕೈಲಾಸ ಪರ್ವತಕ್ಕೆ ಆ ನಂದಿವಾಹನನು ನಡೆದನು. ಅನಂತರ ಬ್ರಹ್ಮದೇವರು ಭೃಗು ಮೊದಲಾದ ಎಲ್ಲ ಋಷಿಗಳಿಗೂ ಜ್ಞಾನೋಪದೇಶ ಮಾಡಿದರು. ಬ್ರಹ್ಮದೇವರು ಸ್ವಸ್ಥಚಿತ್ತದಿಂದ ಸತ್ಯಲೋಕಕ್ಕೆ ಪ್ರಯಾಣ ಬೆಳೆಸಿದರು. ಮತ್ತು ಪ್ರಜಾಪತಿ ದಕ್ಷನೂ ಕೂಡ ಮಹೇಶ್ವರನ ಆದೇಶ ಉಪದೇಶಗಳಿಂದ ತನ್ನನ್ನು ತಿದ್ದಿಕೊಂಡನು. ಕೇವಲ ಕರ್ಮಮಾರ್ಗವನ್ನು ಬಿಟ್ಟು ಜ್ಞಾನಮಾರ್ಗದಿಂದ ದೇವರ ಉಪಾಸನೆ ಮಾಡಿದನು. ಅನಂತರ ಜ್ಞಾನವನ್ನು ಸಂಪಾದಿಸಿ ಧ್ಯಾನಯೋಗದಿಂದ ಶಂಕರನ ಉಪಾಸನೆಯನ್ನು ಪೂರೈಸಿದನು. ಶಿವನ ಧ್ಯಾನೈಕತಾನಲೀನ ಮಾನಸನಾದ ಆ ದಕ್ಷ ಪ್ರಜಾಪತಿಯು ಮಹೇಶ್ವರರನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಲು ಪ್ರಾರಂಭಿಸಿದನು.

## ಶಿವಪೂಜೆಯ ಮಹಿಮೆ

**ಲೋಮಶ :** ಯಾವ ಮನುಷ್ಯನು ಶಿವಮಂದಿರದ ಅಂಗಣವನ್ನು ಪೊರಕೆಯಿಂದ ಉಡುಗುವನೋ ಅವನು ನಿಶ್ಚಿತವಾಗಿ ಮಹಾದೇವನ ಲೋಕವನ್ನು ಹೊಂದಿ ವಿಶ್ವಕ್ಕೇ ವಂದನೀಯನಾಗುತ್ತಾನೆ. ಆ ಕೈಲಾಸಪತಿಗೆ ಕನ್ನಡಿಯನ್ನು ಅರ್ಪಣ ಮಾಡಿದವರು ಮುಂದೆ ಶಿವನ ಪಾರ್ಷದರು ಆಗುತ್ತಾರೆ. ಆ ಚಂದ್ರಚೂಡನಿಗೆ ಚಾಮರಸೇವೆಯನ್ನು ಸಲ್ಲಿಸುವವರು ಮುಂದೆ ಜನ್ಮಾಂತರದಲ್ಲಿ ಸೇವಕರಿಂದ ಚಾಮರವನ್ನು ಬೀಸಿಕೊಳ್ಳುವ ಭಾಗ್ಯವನ್ನು ಪಡೆಯುತ್ತಾರೆ. ಆ ಭಗವಂತನಿಗೆ ಧೂಪ ದೀಪವನ್ನಿಟ್ಟವರು ತಮ್ಮ ಮುಂದಿನ ಅನೇಕ ಕುಲಗಳನ್ನು ಉದ್ಧರಿಸುವರು. ಆ ಹರಿಹರರ ಮೂರ್ತಿಗಳ ಎದುರು ದೀಪದಾನವನ್ನು ಮಾಡಿದವರು ಭವಿಷ್ಯದಲ್ಲಿ ಅತ್ಯಂತ ತೇಜಸ್ವಿಗಳು, ವರ್ಚಸ್ವಿಗಳು ಆಗುತ್ತಾರೆ, ಹರಿಹರರಿಗೆ ನೈವೇದ್ಯ ಸಮರ್ಪಣೆ ಮಾಡಿದವರಿಗೆ

ಸಂಪೂರ್ಣ ಯಜ್ಞದ ಫಲಪ್ರಾಪ್ತಿ. ಶಿವಾಲಯದ ಜೀರ್ಣೋದ್ಧಾರದಿಂದ ಅನಂತ ಪುಣ್ಯಫಲ. ಹೊಚ್ಚ ಹೊಸದಾದ ಹರಿಹರರ ಮಂದಿರ ನಿರ್ಮಿಸಿದವರಿಗೆ ಸ್ವರ್ಗದಲ್ಲಿ ವೈಭೋಗ, ಪೃಥ್ವೀ ತಳದಲ್ಲಿಯೂ ಸರ್ವಭೋಗ ಭಾಗ್ಯ. ಶಿವಾಲಯದ ಅಂಗಣದಲ್ಲಿ ರಂಗವಲ್ಲಿ, ಸಾರಣೆ ಕಾರಣೆ ಗೋಡೆಗೆ ಬಣ್ಣ ಲೇಪನ, ಸುಣ್ಣ ಹಚ್ಚುವುದು ಮೊದಲಾದವುಗಳನ್ನು ಮಾಡಿದವರಿಗೆ ನಿಶ್ಚಿತ ಶಿವಲೋಕ ಪ್ರಾಪ್ತಿ. ದೇವಸ್ಥಾನದಲ್ಲಿ ಘಂಟೆ ಕಟ್ಟಿದವರಿಗೆ ವಿಶ್ವವಿಖ್ಯಾತಿ. ತ್ರಿಕಾಲದಲ್ಲಿ ಶಿವದರ್ಶನ ಮಾಡಿದವರಿಗೆ ಐಶ್ವರ್ಯ, ಸಂತೋಷ ಪ್ರಾಪ್ತಿ.

ಹರೇ ಹರೇ ಎಂದಾಗಲೀ, ಹರಹರ ಎಂದಾಗಲೀ ಶಿವ ಕೇಶವರ ನಾಮೋಚ್ಚಾರಗಳನ್ನು ಮಾಡಿದವರನ್ನು ಭಗವಾನ್ ಪರಮೇಶ್ವರನು ಖಂಡಿತವಾಗಿಯೂ ರಕ್ಷಣೆ ಮಾಡುವನು.

**ಹರೇ ಹರೇತಿ ನಾಮ್ನಾ ಶ್ರೀ ಶಂಭೋಶ್ಚಕ್ರಧರಸ್ಯ ಚ ।**
**ರಕ್ಷಿತಾ ಬಹವೋ ಮರ್ತ್ಯಾಃ ಶಿವೇನ ಪರಮಾತ್ಮನಾ ॥**

ಹರೆ, ಹರ ಎಂದು ವಿಷ್ಣುವಿನದಾಗಲೀ ಶಂಕರನದಾಗಲೀ, ನಾಮೋಚ್ಚಾರಣೆ ಮಾಡಿದ ಅನೇಕ ಭಕ್ತರನ್ನು ಆ ಪರಮಾತ್ಮನು ಕಲ್ಯಾಣವನ್ನುಂಟುಮಾಡಿ ರಕ್ಷಿಸಿದ್ದಾನೆ. ಆದುದರಿಂದ ಸರ್ವ ಪ್ರಯತ್ನದಿಂದಲೂ ಪರಮೇಶ್ವರನ ಪೂಜೆಯನ್ನು ಮಾಡಬೇಕು. ಬುದ್ಧಿವಂತರಾದ ಮಾನವರು ಎಲೆ, ಹೂವು, ಹಣ್ಣು, ಕೊನೆಗೆ ಒಂದು ಹನಿ ನೀರಿನಿಂದಾದರೂ ಪರಮೇಶ್ವರನ ಪೂಜೆ ಮಾಡಿದರೆ ಶಿವಸಾಮೀಪ್ಯವನ್ನೇ ಹೊಂದುತ್ತಾರೆ. ''ನಮಃ ಶಿವಾಯ'' ಎಂಬ ಪಂಚಾಕ್ಷರಿ ಮಂತ್ರವನ್ನು ಉಚ್ಚಾರ ಮಾಡುವ ಮಾನವನು ಸಾಕ್ಷಾತ್ ಶಿವನ ಸ್ವರೂಪಿಯೇ, ತ್ರಿಕಾಲದಲ್ಲಿ ಮಹಾದೇವರ ದರ್ಶನ ಮಾಡಿದರೆ ಸರ್ವಪಾಪ ಪರಿಹಾರ. ॥ ಶಿವ ॥ ಎಂಬ ಎರಡು ಅಕ್ಷರಗಳು ಮಹಾಪಾತಕಗಳ ಪರಿಹಾರಕವಾದ ಬೀಜಾಕ್ಷರಗಳು. ಶಿವಮಂದಿರಲ್ಲಿ ಪೂಜೆಯ ವೇಳೆಯಲ್ಲಿ ಬಾರಿಸಲು ನಗಾರಿಯನ್ನು, ನಗಾರಿಯ ವ್ಯವಸ್ಥೆಯನ್ನು ಮಾಡುವವನು ಎಂಥ ಪಾಪಿಯಾದರೂ ಪುಣ್ಯಾತ್ಮನಾಗುವನು. ಶಿವಾಲಯದಲ್ಲಿ ಪುರಾಣ, ಪಾಠ, ಹರಿಕಥೆ, ಸಂಗೀತ ಮುಂತಾದ ಕಾರ್ಯಕ್ರಮಗಳ ವ್ಯವಸ್ಥೆ ಮಾಡುವವನಿಗೆ ಶಿವಲೋಕ ಖಂಡಿತ . ಗುರು ಮುಖದಿಂದ ಶಿವದೀಕ್ಷೆ ಪಡೆದು ಸದಾಚಾರಿಯಾಗಿ ಶಿವಪೂಜೆಯಲ್ಲಿ ಆಸಕ್ತನಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಯಾವನೇ ಆದರೂ ಶಿವನಿಗೆ ಅತ್ಯಂತ ಪ್ರೀತ್ಯಾಸ್ಪದನಾಗುತ್ತಾನೆ. ಹೊಲೆಯನಾದರೂ ಭಕ್ತಿಯಿಂದ ಹರನ ಪೂಜೆ ಮಾಡಿದರೆ ಪೂತಾತ್ಮನಾಗಿ ಶಿವಪ್ರಿಯನಾಗುತ್ತಾನೆ. ಆದ್ದರಿಂದ ಎಲ್ಲರೂ ವೇದಶಾಸ್ತ್ರ ಪುರಾಣ ಪ್ರತಿಪಾದ್ಯನಾದ ಪರಶಿವನ ಆರಾಧನೆಯನ್ನು ತಪ್ಪದೇ ಮಾಡಬೇಕು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೊದಲನೇ ಅಧ್ಯಾಯ ಮುಗಿದುದು.**

# ಶಿವಲಿಂಗ ಪೂಜೆಯ ಮಹಾತ್ಮೆ ಮತ್ತು ರಾವಣನ ಅಭ್ಯುದಯ ಹಾಗೂ ಅಧಃಪಾತ

ಅಧ್ಯಾಯ - 2

**ಲೋಮಶ :** ವಿಷ್ಣು ಎಂದರೆ ಶಿವ. ಶಿವನೆಂದರೆ ವಿಷ್ಣು. ಶಿವ, ವಿಷ್ಣು ಬೇರೆಯಲ್ಲ. ಒಂದೇ ದೇವತೆ ಎಂದು ತಿಳಿಯಬೇಕು. ಶಿವಲಿಂಗದ ಪೀಠಿಕೆಯು ಭಗವಾನ್ ವಿಷ್ಣು ಸ್ವರೂಪವಾಗಿದೆ. ಅದರ ಮೇಲೆ ಸ್ಥಾಪಿತವಾದ ಲಿಂಗವು ಮಹೇಶ್ವರನ ಸ್ವರೂಪವಾಗಿದೆ. ಹೀಗೆ ಶಿವಲಿಂಗವು ಹರಿ ಹರಾತ್ಮಕ. ಅದರ ಪೂಜೆಯು ಎಲ್ಲಕ್ಕಿಂತ ಶ್ರೇಷ್ಠ. ಬ್ರಹ್ಮದೇವನು ನಿತ್ಯನಿರಂತರವೂ ಶಿವಕೇಶವ ಸ್ವರೂಪವಾದ ರತ್ನಖಚಿತ ಶಿವಲಿಂಗದ ಪೂಜೆಯನ್ನು ಮಾಡುತ್ತಾನೆ. ಇದರಂತೆ ಇಂದ್ರನು ಮಣಿಮಯ ಶಿವಲಿಂಗವನ್ನು ಪೂಜಿಸುತ್ತಾನೆ. ಚಂದ್ರನು ಪೂಜಿಸುವ ಶಿವಲಿಂಗ ಮುಕ್ತಾಮಯ. ಸೂರ್ಯನ ಉಪಾಸ್ಯ ಶಿವಲಿಂಗ ತಾಮ್ರಮಯ. ಕುಬೇರನದು ರಜತಮಯ, ವರುಣನ ಆರಾಧ್ಯ ಶಿವಲಿಂಗ ರಕ್ತವರ್ಣ. ಯಮ ಪೂಜಿಸುವ ಶಿವಲಿಂಗ ಕೃಷ್ಣ ವರ್ಣ, ವಾಯು ಪೂಜಿಸುವ ಶಿವಲಿಂಗ ಕೇಸರಿವರ್ಣದ್ದು ಇರುತ್ತದೆ. ಹೀಗೆ ಇಂದ್ರಾದಿ ಸರ್ವ ದೇವತೆಗಳು ಶಿವಲಿಂಗ ಪೂಜಕರೇ. ದೈತ್ಯರಲ್ಲಿ ಎಲ್ಲರೂ ಶಿವೋಪಾಸಕರು. ಆದರೆ ಹಿರಣ್ಯಕಶ್ಯಪನ ಮಗನಾದ ಪ್ರಲ್ಹಾದನು ಮಾತ್ರ ವಿಷ್ಣುವಿನ ಆರಾಧಕ. ವಿಭೀಷಣನು ವಿಷ್ಣುವಿನ ಭಕ್ತ. ಆದರೆ ಉಳಿದ ಬಲಿಚಕ್ರವರ್ತಿ, ನಮುಚಿ ಹಿರಣ್ಯಕಶ್ಯಪು, ವೃಷಪರ್ವ, ಬಲಿಷ್ಕ, ಮಹಾಬಲಿಷ್ಕನಾದ ರಾವಣ, ಕುಂಭಕರ್ಣ ಮೊದಲಾದ ರಾಕ್ಷಸಶ್ರೇಷ್ಠರೆಲ್ಲರೂ ಶಿವೋಪಾಸಕರಾಗಿದ್ದಾರೆ.

ಮಹಾದೇವರಿಗೆ ತಪಸ್ಸು ಅತ್ಯಂತ ಪ್ರಿಯ. ರಾವಣನು ಹಿಂದೆ ಶಿವನನ್ನು ಕುರಿತು ಉಗ್ರ ತಪಸ್ಸನ್ನು ಆಚರಿಸಿದ. ಶಿವ ಕೇಳಿದ - "ರಾವಣ, ನಿನಗೆ ಏನು ಬೇಕು?" ಪ್ರಸನ್ನನಾದ ಪರಮೇಶ್ವರನಿಂದ ಎರಡು ವರ ಕೇಳಿದ ರಾವಣ. "ಪ್ರಭೋ, ನಿನಗೆ ಐದು ಮುಖ. ಪಂಚಮುಖಿ ಪರಮೇಶ್ವರ ಎಂದು ನೀನು ಪ್ರಸಿದ್ಧ. ನಿನ್ನ ಎರಡು ಪಟ್ಟು ಮುಖ ನನಗೆ ಇರಬೇಕು. ಎಂದರೆ ನಾನು ದಶಮುಖನಾಗಬೇಕು. ಯುದ್ಧದಲ್ಲಿ ನನ್ನನ್ನು ಯಾರೂ ಸೋಲಿಸಬಾರದು." "ತಥಾಸ್ತು" ಎಂದು ಹೇಳಿದ ಭಗವಂತ. ಅವನಿಗಾಗಿ ತ್ರಿಕೂಟ ಪರ್ವತವನ್ನೂ ಕೊಡಮಾಡಿದ ಆ ಕೈಲಾಸಪತಿ. ಹೀಗೆ ಶಿವನಿಂದ ವರಪಡೆದ ರಾವಣನು ಮಹಾ ಬಲಿಷ್ಕನಾದ. ಮೂರು ಲೋಕಗಳೆಲ್ಲವೂ ಅವನಿಗೆ ಪಾದಾಕ್ರಾಂತ. ಸ್ವರ್ಗಲೋಕವೂ ರಾವಣನ ಅಧೀನ. ರಾವಣನ ಕೈಯಲ್ಲಿ ಸೋಲುಂಡ ಇಂದ್ರಾದಿ ದೇವತೆಗಳ ಪಲಾಯನ. ಭಯಭ್ರಾಂತರಾದ ಸುರಸಮೂಹವೆಲ್ಲವೂ ಶರಣಾರ್ಥಿಯಾಗಿ ಕೈಲಾಸ ಪರ್ವತಕ್ಕೆ ಬಂದಿತು. ಹರಮಂದಿರದ ಹೆಬ್ಬಾಗಿಲಲ್ಲಿ ನಂದೀಶ್ವರ ನಿಂತುಕೊಂಡಿದ್ದ. ಅವನು ಪರಮ ಶಿವಭಕ್ತ. ಆದರೆ ಮುಖ ಮಾತ್ರ ಕೋತಿಯ ಮುಖ. ನಂದೀಶ್ವರನ ಈ ಮರ್ಕಟ ಮುಖಕ್ಕೆ ಕಾರಣವೇನು? ಎಂದು ದೇವತೆಗಳ ಪ್ರಶ್ನೆ. ಅದಕ್ಕೆ ನಂದಿಯ ಉತ್ತರ-

**ನಂದೀಶ್ವರ :** ಹಿಂದೆ ನಾನು ಇಂದುಶೇಖರನನ್ನು ಕುರಿತು ಉಗ್ರತಪಸ್ಸನ್ನಾ ಚರಿಸಿದೆ. ಪ್ರಸನ್ನನಾದ ಪರಮೇಶ್ವರ. ತನ್ನ ಸಮಾನರೂಪವನ್ನೇ ನನಗೆ ಕೊಡಮಾಡಿದ ಆ ಕರುಣಾಶಾಲಿ ಪ್ರಭು. ರೂಪದಿಂದ ಶಿವನಿಗೆ ಸಮಾನ ಆಗುವುದು. ಈ ಮಂಗ ಬುದ್ಧಿಯ ಮಾನವನಿಗೇಕೆ? ಶಿವನ ಸಾರೂಪ್ಯವನ್ನು ನಾನು ಅಲ್ಲಗಳೆದೆ ನನಗೆ ಬೇಡವಾಗಿದ್ದಿತು. ''ನನಗೆ ಮರ್ಕಟ ಮುಖವೆ ಇರಲಿ ನನಗೆ ಯಾವುದರಲ್ಲಿಯೂ ನಿನ್ನ ಸಮಾನವಾಗುವುದು ಬೇಡ. ನಾನು ನಿನ್ನ ಅನುಚರ ಭಕ್ತ. ಈ ಮಂಗನ ಮುಖದಿಂದಲೇ ನಿನ್ನನ್ನು ಸ್ತೋತ್ರ ಮಾಡುವೆ. ನಿನ್ನನ್ನು ಆರಾಧಿಸುವೆ'' ಎಂದು ಬೇಡಿದೆ. ಅಂದಿನಿಂದ ನನಗೆ ಈ ವಾನರ ಮುಖವು ಪ್ರಾಪ್ತವಾಗಿದೆ. ಇದರಿಂದ ನನ್ನಲ್ಲಿ ಸೌಂದರ್ಯದ ಅಹಂಕಾರ ''ನಾನು, ಎಲ್ಲರಿಗಿಂತ ಶ್ರೇಷ್ಠ'' ಎಂಬ ದುರಭಿಮಾನ ಎಂದೂ ಹುಟ್ಟುವುದಿಲ್ಲ. 'ನಾನು ಶಿವಸೇವಕ' ಎಂಬ ಕೈಂಕರ್ಯಭಾವ ಯಾವಾಗಲೂ ಜಾಗರೂಕವಾಗಿ ಇರುತ್ತದೆ, ಇದರಿಂದ ನಾನು ನಿರಂತರವೂ ಹರಧ್ಯಾನ ಪರಾಯಣನಾಗಿರುತ್ತೇನೆ. ಹಿಂದೊಮ್ಮೆ ಇಲ್ಲಿಗೆ ರಾವಣನು ಬಂದಿದ್ದ. ನನ್ನ ಈ ಮರ್ಕಟ ಮುಖವನ್ನು ನೋಡಿ ಉಪಹಾಸ್ಯ ಮಾಡಿದ. ''ಶಿವನಿಗೆ ಐದು ಮುಖಗಳಾದರೆ ನಾನು ಆವನ ಎರಡು ಪಟ್ಟು ಮುಖಗಳನ್ನು ಪಡೆದು ದಶಕಂಠ ಎನಿಸಿಕೊಂಡಿದ್ದೇನೆ'' ಎಂದು ತನ್ನ ಬಡಾಯಿ ಕೊಚ್ಚಿಕೊಂಡ. ಅದರಿಂದ ನನಗೆ ಕೋಪ ಬಂತು. ಶಾಪ ಕೊಟ್ಟೆ ''ಓರ್ವ ಶ್ರೇಷ್ಠ ಮಾನವನು ನನ್ನಂತೆ ಇರುವ ವಾನರರನ್ನೇ ಮುಂದೆ ಮಾಡಿಕೊಂಡು ನಿನ್ನ ಮೇಲೆ ಆಕ್ರಮಣ ಮಾಡಿ ನಿನ್ನನ್ನು ಕೊಂದು ಹಾಕುವನು''. ಹೀಗೆ ಜಗತ್ತನ್ನು ತನ್ನ ದರ್ಪ ಹಾಗೂ ದೌಷ್ಟ್ಯಗಳಿಂದ ಗೋಳಿಗೆ ಈಡು ಮಾಡಿದ ಆ ರಾವಣನಿಗೆ ನಾನು ಶಾಪ ಕೊಟ್ಟಿದ್ದೇನೆ. ನೀವೇನೂ ಚಿಂತಿಸುವ ಕಾರಣವಿಲ್ಲ. ನೀವು ಒಳಗೆ ಹೋಗಿ ಪರಮೇಶ್ವರನನ್ನು ಕಾಣಿರಿ. ಈ ಶಂಕರನು ವಿಷ್ಣುರೂಪಿಯೇ, ಬೇರೆಯಲ್ಲ. ನೀವು ಹೋಗಿ ಅವನನ್ನು ಪ್ರಾರ್ಥಿಸಿರಿ. ಅನಂತರ ವೈಕುಂಠಕ್ಕೆ ಹೋಗಿ ಶಿವಸ್ವರೂಪಿಯಾದ ಶ್ರೀ ವಿಷ್ಣುವನ್ನು ಪ್ರಾರ್ಥಿಸಿರಿ, ಅವನು ನಿಮ್ಮ ಭಯಾತಂಕಗಳನ್ನು ಲೀಲಾಜಾಲವಾಗಿ ಪರಿಹರಿಸುವನು.''

ಪರಮ ಭಗವದ್ಭಕ್ತನಾದ ನಂದಿಯ ಸಲಹೆಯಂತೆ ದೇವತೆಗಳು ಶಿವನ ದರ್ಶನ ತೆಗೆದುಕೊಂಡು ಅವನ ಅನುಜ್ಞೆ ಪಡೆದು ನೇರವಾಗಿ ವೈಕುಂಠ ಲೋಕಕ್ಕೆ ಪ್ರಯಾಣಿಸಿದರು. ಅಲ್ಲಿ ಸಾಕ್ಷಾತ್ ಶ್ರೀಹರಿಯನ್ನು ಕಂಡು ಭಕ್ತಿಭಾವ ಭರಿತರಾಗಿ ಗದ್ಗದ ಕಂಠದಿಂದ ಆ ಪರಮಾತ್ಮನನ್ನು ಸ್ತೋತ್ರ ಮಾಡಿದರು.

**ನಮೋ ಭಗವತೇ ತುಭ್ಯಂ ದೇವದೇವ ಜಗತ್ಪತೇ ।**
**ತ್ವದಾಧಾರಮಿದಂ ಸರ್ವಂ ಜಗದೇತಚ್ಚರಾಚರಮ್ ॥**

**ಏತಲ್ಲಿಂಗಂ ತ್ವಯಾ ವಿಷ್ಣೋ ಧೃತಂ ವೈ ಪೀತರೂಪಿಣಾ ।**
**ಅವತಾರಾಃ ಕೃತಾಃ ಪೂರ್ವಮಸ್ಮದರ್ಥೆ ತ್ವಯಾ ಪ್ರಭೋ ॥**

**ಮತ್ಸ್ಯೋ ಭೂತ್ವಾ ತ್ವಯಾ ವೇದಾಃ ಸ್ಥಾಪಿತಾ ಬ್ರಹ್ಮಣೋ ಮುಖೇ ।**
**ಹಯಗ್ರೀವಸ್ವರೂಪೇಣ ಘಾತಿತೌ ಮಧುಕೈಟಭೌ ॥**

ತಥಾ ಕಮಠ ರೂಪೇಣ ಧೃತೋ ವೈ ಮಂದರಾಚಲಃ ।
ವರಾಹರೂಪಸ್ವರೂಪೇಣ ಹಿರಾಣ್ಯಾಕ್ಷೋ ಹತಸ್ತ್ವಯಾ ॥

ಹಿರಣ್ಯ ಕಶ್ಯಿಪುರ್ದೈತ್ಯೋ ನರಸಿಂಹರೂಪಿಣಾ ಹತಃ ।
ತಥಾ ಚೈವ ಬಲಿರ್ಬದ್ಧೋ ದೈತ್ಯೋ ವಾಮನರೂಪಿಣಾ ॥

ಭೃಗೂಣಾಮನ್ವಯೇ ಭೂತ್ವಾ ಕಾರ್ತವೀರ್ಯಾತ್ಮಜೋ ಹತಃ ।
ಹತಾ ದೈತ್ಯಾಸ್ತ್ವಯಾ ವಿಷ್ಣೋ ತ್ವಮೇವ ಪರಿಪಾಲಕಃ ॥

ರಾವಣಸ್ಯ ಭಯಾದಸ್ಮಾಂಸ್ತ್ರಾತುಮರ್ಹಸಿ ಚ ಧ್ರುವಮ್ ॥

ದೇವದೇವೋತ್ತಮನಾದ ಭಗವಾನ್ ಶ್ರೀಹರಿಗೆ ನಮಸ್ಕಾರ. ಜಗದೊಡೆಯನೇ ಈ ಚರಾಚರಾತ್ಮಕವಾದ ಪ್ರಪಂಚಕ್ಕೆಲ್ಲ ನೀನೇ ಮೂಲಾಧಾರ. ಈ ಜಗತ್ತೆಲ್ಲವೂ ಒಂದು ಲಿಂಗವಿದ್ದಂತೆ. ಪೀಠರೂಪದಿಂದ ಈ ವಿಶ್ವಲಿಂಗವನ್ನು ಮುಖ್ಯವಾಗಿ ಧರಿಸಿದವನು ನೀನೇ. ಹಿಂದೆ ನೀನು ನಮ್ಮೆಲ್ಲ ದೇವತೆಗಳ ಸಲುವಾಗಿ ಅನೇಕ ಅವತಾರಗಳನ್ನು ಧರಿಸಿರುವೆ. ಪೂರ್ವದಲ್ಲಿ ಮತ್ಸ್ಯರೂಪವನ್ನು ಧರಿಸಿ ವೇದಗಳನ್ನು ಉದ್ಧರಿಸಿ ಬ್ರಹ್ಮದೇವರ ಮುಖದಲ್ಲಿ ಸ್ಥಾಪನೆ ಮಾಡಿದೆ. ಹಯಗ್ರೀವಾವತಾರವನ್ನು ಮಾಡಿ ಮಧು ಮತ್ತು ಕೈಟಭ ಎಂಬ ದುಷ್ಟ ರಕ್ಕಸರನ್ನು ಸಂಹರಿಸಿದೆ. ಆಮೆಯ ರೂಪದಿಂದ ಇಳಿದು ಬಂದು ಸಾಗರದ ಆಳದಲ್ಲಿ ಹೋಗಿ ಮಂದರಬೆಟ್ಟವನ್ನು ಬೆನ್ನ ಮೇಲೆ ಹೊತ್ತೆ, ವರಾಹರೂಪದಿಂದ ಹಿರಣ್ಯಾಕ್ಷನನ್ನು ಸಂಹರಿಸಿದೆ. ಹಿರಣ್ಯಕಶ್ಯಪುವನ್ನು ನೀನು ಕೊಂದದ್ದು ವಿಚಿತ್ರವಾದ ನರಸಿಂಹರೂಪದಿಂದ. ವಾಮನ ರೂಪವನ್ನು ತಾಳಿ ಬಲಿಚಕ್ರವರ್ತಿಯನ್ನು ಬಂಧಿಸಿದೆ, ಭೃಗುವಂಶದಲ್ಲಿ ಪರಶುರಾಮನಾಗಿ ಅವತರಿಸಿ ಕಾರ್ತ್ಯವೀರ್ಯಾರ್ಜುನನ್ನು ಪುತ್ರಮಿತ್ರ ಪರಿವಾರ ಸಹಿತ ಕಡಿದುಹಾಕಿದೆ. ಹೀಗೆ ಸಾಧುಗಳ ರಕ್ಷಣೆಗಾಗಿ ನಾನಾ ಅವತಾರಗಳನ್ನು ತಾಳಿ ದುಷ್ಟ ರಾಕ್ಷಸರನ್ನು ಶಿಕ್ಷಿಸಿದೆ. ಈಗ ಮತ್ತೆ ದುರುಳ ದಾನವಾಧಮ ರಾವಣನಿಂದ ದೇವತೆಗಳಿಗೆ ಕುತ್ತು, ಸಜ್ಜನರಿಗೆಲ್ಲ ಆಪತ್ತು. ಈಗ ನೀನೇ ನಮಗೆ ಪಾಲಕ. ಪ್ರಪಂಚಕ್ಕೆಲ್ಲ ತಾರಕ, ಸರ್ವರಿಗೂ ಸಂಕಟ ಪರಿಹಾರಕ, ಜಗದೀಶ್ವರನೇ, ಎಂದೆಂದಿಗೂ ನೀನೇ ನಮಗೆ ಭಯತ್ರಾತಾ, ಅಭಯದಾತಾ, ಸುಖ ಶಾಂತಿ ಪ್ರದಾತಾ, ಸುಖಶಾಂತಿ ವಿಧಾತಾ.''

ದೇವತೆಗಳ ಈ ಒಮ್ಮುಖದ ಪ್ರಾರ್ಥನೆಯನ್ನು ಆಲಿಸಿದ ವೈಕುಂಠಪತಿ ಪ್ರೀತನಾದ. ಪ್ರಸನ್ನಮನದಿಂದ ನುಡಿದ ವಾಸುದೇವ, ''ದೇವತಾಧುರೀಣರೇ, ನೀವೆಲ್ಲರೂ ನಂದಿಯನ್ನು ಮುಂದೆ ಮಾಡಿಕೊಂಡು ಕೂಡಲೇ ವಾನರ ರೂಪದಿಂದ ಭೂಮಿಯಲ್ಲಿ ಅವತರಿಸಿರಿ. ನಾನು ಕೂಡ ಮಾಯಾ ಮಾನವನಾಗಿ ಅಯೋಧ್ಯೆಯ ಅರಸು ದಶರಥನ ಮಗನಾಗಿ ಪ್ರಕಟವಾಗುವೆನು. ಅತ್ತ ಜನಕರಾಜನ ಮನೆಯಲ್ಲಿ ಬ್ರಹ್ಮವಿದ್ಯಾ ಸ್ವರೂಪಿಣಿಯಾದ ಸೀತೆಯ ಅವತಾರವಾಗುವುದು. ರಾವಣನು ಶ್ರೇಷ್ಠ ಶಿವಭಕ್ತ, ಸರ್ವದಾ ಶಿವಧ್ಯಾನ ತತ್ಪರ, ಬ್ರಹ್ಮವಿದ್ಯೆಯ ಸ್ವರೂಪಿಣಿ ಆದ ಸೀತೆಯನ್ನು ಬಲಾತ್ಕಾರದಿಂದ ಅವನೇ ಪಡೆಯಲು ಪ್ರಯತ್ನಿಸುವನು. ಸೀತೆಗಾಗಿ ಹಗಲಿರುಳೂ

ಪರದಾಡುವ ರಾವಣನು ಶಿವಧ್ಯಾನದಿಂದ ವಿಮುಖನಾಗುವನು. ಅವನ ಶಿವೋಪಾಸನಾ ರೂಪವಾದ ತಪಸ್ಸು ಹಾಳಾಗಿ ಹೋಗುವದು. ಗುರುಮುಖದಿಂದ ಪ್ರೀತಿ ಪೂರ್ವಕವಾಗಿ ಪಡೆಯದಿರುವ ಬ್ರಹ್ಮವಿದ್ಯೆಯನ್ನು ತನ್ನ ಬಲಾತ್ಕಾರದಿಂದ ಅಪಹರಿಸಹೊರಟರೆ ಆ ಮಾನವನು ಧರ್ಮಭ್ರಷ್ಟನಾಗಿ ಸೋಲನ್ನು ನಂತರ ಸಾವನ್ನು ಹೊಂದಬೇಕಾಗುವದು. ಈ ವಿಷಯದಲ್ಲಿ ಇನ್ನು ನಿಮಗೆ ಚಿಂತೆ ಬೇಡ. ನೀವು ನಾನು ಹೇಳಿದಂತೆ ಮಾಡಿರಿ'' ಹೀಗೆ ಹೇಳಿ ಶ್ರೀಹರಿಯು ಅಂತರ್ಧಾನನಾದನು.

ವಿಷ್ಣುವಿನ ಆದೇಶದಂತೆ ದೇವತೆಗಳೆಲ್ಲರೂ ವಾನರ ರೂಪದಿಂದ ಧರಣೀ ಮಂಡಲದಲ್ಲಿ ಅವತರಿಸತೊಡಗಿದರು, ಇಂದ್ರನ ಅಂಶದಿಂದ ವಾಲಿಯು ವಾನರ ರಾಜನಾಗಿ ಹುಟ್ಟಿದ, ಸೂರ್ಯಪುತ್ರನಾಗಿ ಸುಗ್ರೀವ ಜನಿಸಿದ. ಬ್ರಹ್ಮದೇವರ ಅಂಶದಿಂದ ಜಾಂಬವಂತನು ಕರಡಿಯಾಗಿ ಅವತರಿಸಿದ, ಶಿಲಾದನ ಮಗನೂ ಹನ್ನೊಂದನೆಯ ರುದ್ರನೂ ಆದ ನಂದೀಶ್ವರನು ಕಪಿಶ್ರೇಷ್ಠನಾದ ಹನುಮಂತನ ರೂಪದಿಂದ ಅವತರಿಸಿದ, ಮಹಾತೇಜಸ್ವಿಯಾದ ಹನುಮಂತನು ಮುಖ್ಯವಾಗಿ ಅವತರಿಸಿದ್ದು ಭಗವಾನ್ ವಿಷ್ಣುವಿನ ಕಾರ್ಯಸಾಧನೆಗಾಗಿ, ಹೀಗೆ ಎಲ್ಲ ಸುರಸತ್ತಮರೂ ದ್ವಿವಿದ. ಮೈಂದ, ನಲ, ನೀಲ, ಸುಷೇಣ, ಅಂಗದ, ಮೊದಲಾದ ಕಪಿವೀರರಾಗಿ ವಸುಧಾತಳದಲ್ಲಿ ಅವತಾರ ತಾಳಿದರು. ಸಾಕ್ಷಾತ್ ಜಗದೀಶ್ವರನಾದ ವಿಷ್ಣು ಪರಮಾತ್ಮನು ಸತೀಶಿರೋಮಣಿ ಕೌಸಲ್ಯೆಯ ಉದರದಿಂದ ಶ್ರೀರಾಮ ಚಂದ್ರನಾಗಿ ಉದಯಿಸಿದನು. ಪ್ರಪಂಚಕ್ಕೆಲ್ಲ ಆನಂದವನ್ನು ಕೊಡುವವನಾದ್ದರಿಂದ ''ರಾಮ'' ಎಂದು ಕರೆದರು ವಿಪ್ರರು. ಪರಮ ಭಗವದ್ ಭಕ್ತನಾದ ಆದಿಶೇಷನು ಲಕ್ಷ್ಮಣ ರೂಪದಿಂದ ಅವತರಿಸಿ ರಾಮನ ಕೈಂಕರ್ಯಕ್ಕೆ ಸಿದ್ಧನಾದನು. ವಿಷ್ಣುವಿನ ಭುಜದಂಡದಿಂದ ಇಬ್ಬರು ವೀರರು ಉದ್ಭವಿಸಿ ಭರತ, ಶತ್ರುಘ್ನ ಎಂದು ಪ್ರಖ್ಯಾತರಾದರು.

ಮಿಥಿಲಾ ಪಟ್ಟಣದ ದೊರೆಯಾದ ಜನಕರಾಜನು ಯಜ್ಞ ಕಾರ್ಯಕ್ಕಾಗಿ ಭೂಮಿಯನ್ನು ಹರಗುವಾಗ ನೇಗಿಲಗೆ ಹತ್ತಿ ಸೀತಾಮಾತೆಯು ಪ್ರಕಟವಾದಳು. ನೇಗಿಲತುದಿಗೆ ತಗಲಿ ಬಂದದ್ದರಿಂದ 'ಸೀತೆ'ಯೆಂತಲೂ, ಮಿಥಿಲೆಯಲ್ಲಿ ಅವತರಿಸಿದ್ದರಿಂದ 'ಮೈಥಿಲಿ' ಎಂದೂ, ಜನಕರಾಜನ ಕುಮಾರಿಯಾಗಿ ವ್ಯಕ್ತಳಾದ್ದರಿಂದ 'ಜಾನಕೀ' ಎಂತಲೂ ಅವಳಿಗೆ ಹೆಸರಾಯಿತು. ಹಿಂದಿನ ಜನ್ಮದಲ್ಲಿ ಅವಳಿಗೆ 'ವೇದವತಿ' ಎಂದು ಹೆಸರು ಇತ್ತು. ಈ ಸೀತೆ ಎಂದರೆ ಸಾಕ್ಷಾತ್ ಬ್ರಹ್ಮವಿದ್ಯೆಯೇ. ರಾಮನೆಂದರೆ ಸಾಕ್ಷಾತ್ ಪರಬ್ರಹ್ಮನೇ. ಈ ಬ್ರಹ್ಮವಿದ್ಯೆಯನ್ನು ಬ್ರಹ್ಮರೂಪಿಯಾದ ಶ್ರೀರಾಮಚಂದ್ರನಿಗೆ ಸಮರ್ಪಿಸಿ ಜನಕ ಮಹಾರಾಜನು ಸೀತಾರಾಮರ ವಿವಾಹ ಮಹೋತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಿದ. ಶ್ರೀರಾಮನು ರಾವಣನನ್ನು ನಿಗ್ರಹಿಸಬೇಕೆಂದು ತಾಯಿ ಕೌಸಲ್ಯೆಯ ವಚನದ ನೆಪದಿಂದ ಕಾಡಿಗೆ ನಡೆದ. ಅಲ್ಲಿ ರಾವಣನು ಸೀತೆಯ ಸೌಂದರ್ಯಕ್ಕೆ ಮುಗ್ಧನಾಗಿ ಅವಳನ್ನು ಕಪಟದಿಂದ

ಅಪಹರಿಸಿದ. ಆಗ ಕಪಿರೂಪಧರಿಸಿದ ದೇವಗಣದೊಂದಿಗೆ ಶ್ರೀ ರಾಮನು ಲಂಕೆಗೆ ತೆರಳಿ ರಾವಣನೊಂದಿಗೆ ಆರು ತಿಂಗಳ ಹೋರಾಟ ನಡೆಸಿ ಕೊನೆಗೆ ರಾವಣನನ್ನು ಸಂಹರಿಸಿದ. ರಾವಣನು ಪರಮ ಶಿವಭಕ್ತನಾದುದರಿಂದ ಕೊನೆಗೆ ಶಿವಸಾರೂಪ್ಯ ಹೊಂದಿದ. ಈ ಭರತ ಖಂಡದಲ್ಲಿ ದ್ವಾದಶ ಜ್ಯೋತಿರ್ಲಿಂಗ ಎಂದು ಪ್ರಸಿದ್ಧವಾದ ಹನ್ನೆರಡು ಜ್ಯೋತಿರ್ಲಿಂಗಗಳು ಇರುತ್ತವೆ. ಇವುಗಳಲ್ಲಿ ಒಂದನ್ನಾದರೂ ಭಕ್ತಿಯಿಂದ ಪೂಜಿಸಿದ ಮಾನವನಿಗೆ ಶಿವಪದ ಪ್ರಾಪ್ತಿ ನಿಶ್ಚಿತ, ಶಿವಪೂಜೆ ಮಾಡಲು ಜಾತಿ, ಮತ ಲಿಂಗ, ವರ್ಗ, ವರ್ಣಗಳ ಭೇದವಿಲ್ಲ. ಹೆಂಗಸರಿರಲಿ, ಹೊಲೆಯನಿರಲಿ, ಹಾರುವನಿರಲಿ, ಹರಗುವ ರೈತನಿರಲಿ, ಶಿವಪೂಜೆ ಮಾಡಿದರೆ ಸಾಕು. ಕೈವಲ್ಯ ಸುಖ ಕಟ್ಟಿಟ್ಟದ್ದು. ಭಗವಾನ್ ಶಿವನು ಲಿಂಗರೂಪದಿಂದ ಸರ್ವಜಾತಿ ಜನಾಂಗದವರಿಗೂ ಸುಲಭಗಮ್ಯನೂ ಉದ್ಧಾರಕನೂ ಆಗಿದ್ದಾನೆ.

**ಲೋಮಶ** : ವಿಪ್ರೋತ್ತಮರೇ, ನೀವು ನನಗೆ ಶಿವಲಿಂಗದ ಮಹಿಮೆಯು ಏನು ಎಂದು ಮೊದಲನೇ ಪ್ರಶ್ನೆ ಮಾಡಿದ್ದೀರಿ. ಅದಕ್ಕೆ ಈವರೆಗೆ ನಾನು ಉತ್ತರ ಹೇಳಿದ್ದಾಯಿತು. ಶಿವನು ವಿಷಭಕ್ಷಣವನ್ನು ಹೇಗೆ ಮಾಡಿದ ಎಂಬುದು ನಿಮ್ಮ ಎರಡನೇ ಪ್ರಶ್ನೆ. ಅದಕ್ಕೀಗ ಉತ್ತರವೀಯುವೆ ಕೇಳಿರಿ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಎರಡನೇ ಅಧ್ಯಾಯ ಮುಗಿದುದು.**

ಅಧ್ಯಾಯ - 3

## ಗುರುದ್ರೋಹದಿಂದ ಇಂದ್ರನ ಸೋಲು, ಸಮುದ್ರ ಮಂಥನ; ಶಿವನಿಂದ ಕಾಲಕೂಟ ಭಕ್ಷಣ; ಸರ್ವರ ರಕ್ಷಣೆ, ಲಕ್ಷ್ಮೀ ಪ್ರಾದುರ್ಭಾವ

**ಲೋಮಶ** : ಸ್ವರ್ಗದಲ್ಲಿ ದೇವರಾಜ ಇಂದ್ರನ ಒಡ್ಡೋಲಗ. ಆ ಸುಧರ್ಮ ಸಭೆಯ ಸಿಂಹಾಸನದಲ್ಲಿ ಶಚೀ ಸುರೇಂದ್ರ ದಂಪತಿಗಳು ವಿರಾಜಮಾನರಾಗಿದ್ದಾರೆ. ಗಂಧರ್ವರ ಗಾನ, ಅಪ್ಸರೆಯರ ನರ್ತನ, ಮುನಿ ಮಹರ್ಷಿಗಳ ವೇದಘೋಷ, ನಡೆದಿದೆ. ಅದೇ ವೇಳೆಯಲ್ಲಿ ದೇವಗುರು ಬೃಹಸ್ಪತ್ಯಾಚಾರ್ಯರ ಆಗಮನ. ಅವರನ್ನು ಕಂಡಕೂಡಲೇ ಎಲ್ಲ ದೇವತೆಗಳ ಅಭ್ಯುತ್ಥಾನ. ಸಾಷ್ಟಾಂಗ ಪ್ರಣಾಮ. ದೇವರಾಜ ಮಹೇಂದ್ರನೂ ನೋಡಿದ ಸುರಗುರು ಬಂದುದನ್ನು. ಆದರೂ ಆ ಸುರಸಾರ್ವಭೌಮ ಏಳಲಿಲ್ಲ, ತಲೆಬಾಗಲಿಲ್ಲ. ಸ್ವಾಗತ ನೀಡಲಿಲ್ಲ. ಆದರ ಮಾಡಲಿಲ್ಲ. 'ನನ್ನಿಂದ ಉಪಜೀವನ ಮಾಡುವ ಬಡಬ್ರಾಹ್ಮಣನಲ್ಲವೇ ಈ ಬೃಹಸ್ಪತಿ ಎಂದು ಅಸಡ್ಡೆ ದೇವರಾಜನಿಗೆ. 'ನನ್ನನ್ನು ಆಶ್ರಯಿಸಿ ಬದುಕುವವರಿಗೆ ನಾನೇಕೆ

ಹೆಚ್ಚಿನ ಗೌರವ ಸಲ್ಲಿಸಬೇಕು?' ಎಂಬ ಗರ್ವದಿಂದ ಬೀಗಿ ಕುಳಿತ ಆ ಸ್ವರ್ಗಾಧಿಪತಿ. ಇಂದ್ರನ ದರ್ಪ ಅರ್ಥವಾಯಿತು ಆ ಸುರಾಚಾರ್ಯರಿಗೆ. ತಕ್ಷಣವೇ ಕ್ರುದ್ಧ ಮುಖಮುದ್ರೆಯಿಂದ ಆ ಸುರಗುರು ಅಲ್ಲಿಂದ ಹೊರಟುಹೋದ. ದೇವತೆಗಳಿಗೆಲ್ಲ ಅತ್ಯಂತ ವಿಷಾದ. ಋಷಿ ಮುನಿಗಳಿಗೆ ಆತಂಕ, ಭಯ, ಗಂಧರ್ವರ ಗಾನ ನಿಂತಿತು. ವೇದಘೋಷ ನಿಂತಿತು. ಎಲ್ಲ ಸಭಿಕರೂ ಉದ್ವಿಗ್ನರಾದರು. ಇಂದ್ರನಿಗೂ ಎಚ್ಚರ ಬಂದಿತು. ಭಯಭೀತನಾಗಿ ಕೇಳಿದ ''ಗುರುಗಳು ಎಲ್ಲಿ?'' ಆಗ ನಾರದರು ಗುಡುಗಿದರು ''ಸುರರಾಜ, ನೀನು ಗುರುಗಳನ್ನು ಅವಮಾನಿಸಿದೆ. ಸಭೆಗೆ ಬಂದವರನ್ನು ನೀನು ಕರೆಯಲಿಲ್ಲ. ಕೂಡಿಸಲಿಲ್ಲ, ಕೇಳಲಿಲ್ಲ, ಕೈಮುಗಿಯಲಿಲ್ಲ, ಸ್ವಾಭಿಮಾನಿಗಳಾದ ಆ ಸುರಾಚಾರ್ಯರು ಇಂಥ ಅನಾದರದ ಅವಮಾನವನ್ನು ಹೇಗೆ ಸಹಿಸುವರು ! ಇದೊಂದು ಗುರುದ್ರೋಹ. ಇದರಿಂದ ನೀನು ಕೂಡಲೇ ರಾಜ್ಯಭ್ರಷ್ಟ ಆಗುವೆ. ಈಗಲೇ ಹೋಗಿ ಆವರ ಪಾದಕ್ಕೆ ಬೀಳು. ನೀನು ಗೈದ ಅಪರಾಧಕ್ಕೆ ಕ್ಷಮೆ ಕೇಳು.''

ನಾರದರ ನಿಷ್ಠುರ ನುಡಿ ಕೇಳಿ ಅರಿವು ಬಂದಿತು ಆ ಅಮರ ಲೋಕದ ಅರಸನಿಗೆ. ಎಚ್ಚರ ಮೂಡುವುದರೊಳಗಾಗಿ ಕಾಲ ಮಿಂಚಿಹೋಗಿತ್ತು. ಗುರುಗಳು ಹೊರಟು ಹೋಗಿ ಆಗಿತ್ತು. ಗಾಬರಿಕೊಂಡ ಸುರನಾಥ ಇತರ ದೇವತೆಗಳೊಂದಿಗೆ ಕೂಡಿ ಗುರುಗೃಹಕ್ಕೆ ಧಾವಿಸಿದ. ಗುರುಪತ್ನಿ ತಾರೆಯ ಮುಂದೆ ಅಡ್ಡ ಬಿದ್ದು ಕೇಳಿದ ''ಅಮ್ಮಾ ಗುರು ಎಲ್ಲಿ?'' ''ನಾನು ಅರಿಯೆ'' ಎಂದು ಉತ್ತರಿಸಿದಳು ತಾರಾಮಣಿ. ಚಿಂತಾಗ್ರಸ್ತನಾಗಿ ಜೋಲುಮುಖ ಹಾಕಿಕೊಂಡು ಮನೆಗೆ ಮರಳಿದ ಮಹೇಂದ್ರ, ದೇವತಾಗಣವೆಲ್ಲವೂ ಖಿನ್ನ ವಿಷಣ್ಣ. ನಾಲ್ಕು ಲೋಕದ ತುಂಬ ಅಪಶಕುನಗಳು, ಸ್ವರ್ಗದ ಸೀಮೆಯಲ್ಲೆಲ್ಲ ದುಃಶಕುನಗಳ ದುರ್ಲಕ್ಷಣಗಳು.

ಈ ಸಮಾಚಾರ ಪಾತಾಳದಲ್ಲಿ ನೆಲೆನಿಂತ ಬಲಿಚಕ್ರವರ್ತಿಯ ಕಿವಿಗೆ ಬಿದ್ದಿತು. ''ದೇವೇಂದ್ರನಿಗೆ ಗುರುಬಲ ಇಲ್ಲವೇ? ಹಾಗಾದರೆ ನನಗೆ ಶುಕ್ರದೆಸೆ ತೆರೆಯಿತು.'' ಎಂದು ನಿಶ್ಚಯಿಸಿದ ದಾನವಧುರಂಧರ. ದೈತ್ಯ ಸೇನೆಗೆ ಯುದ್ಧಕ್ಕೆ ಸನ್ನದ್ಧವಾಗ ಬೇಕೆಂದು ಅಪ್ಪಣೆ ನೀಡಿದ, ಎಲ್ಲ ಸಿದ್ಧತೆ ಮಾಡಿದ. ಅಮರಾವತಿಯ ಕಡೆಗೆ ನಡೆದ. ಸ್ವರ್ಗದ ಮೇಲೆಯೆ ದಾಳಿ ಹೂಡಿದ. ದೈತ್ಯ ದಾನವರ ನಡುವೆ ಭೀಕರ ಯುದ್ಧ. ನೆತ್ತರಿನ ಹೊಳೆ ಹರಿದವು. ರುಂಡಗಳ ಚೆಂಡಾಟವೇ ನಡೆಯಿತು. ಗುರುಶುಕ್ರರ ಆಶೀರ್ವಾದದಿಂದ ದೈತ್ಯಬಲ ಶತಗುಣಿತ. ಗುರುದ್ರೋಹದಿಂದ ದೇವಬಲ ಕ್ಷೀಣ ಕ್ಷೀಣ, ಗತ ತ್ರಾಣ, ಅತ್ಯುತ್ಸಾಹದಿಂದ ನುಗ್ಗಿ ಬಂದ ದೈತ್ಯರು ಸುರಪುರದ ನಾಗರಿಕರನ್ನೆಲ್ಲಾ ಕೊಚ್ಚಿ ಹಾಕಿದರು. ದೇವತೆಗಳಿಗೆ ಸಂಪೂರ್ಣ ಸೋಲು, ಪ್ರಾಣಾಂತಕ ನೋವು. ಬಹುಜನರಿಗೆ ಸಾವು. ಚತುರಂಗ ಸಹಿತ ದೇವಸೇನೆ ಭೀಕರ ಯುದ್ಧದಲ್ಲಿ ಭಯಭಂಗವನ್ನು ಹೊಂದಿ 'ರಾಜಾ, ಮಂತ್ರಿ, ರಾಷ್ಟ್ರ, ದುರ್ಗ, ಭಾಂಡಾರ, ಸೈನ್ಯ ಹಾಗೂ ಮಿತ್ರವರ್ಗ,' ಎಂಬ ತನ್ನ ಏಳು ಅಂಗಗಳನ್ನು ಈ ಸಪ್ತಾಂಗ ಸಹಿತವಾದ ಪರಾಜಯವನ್ನು ಅನುಭವಿಸಿತು. ದೈತ್ಯರು ಈ ಸಪ್ತಾಂಗ ಸಹಿತವಾದ ಸುರಸಾಮ್ರಾಜ್ಯವನ್ನು ತಮ್ಮ ಸ್ವಾಧೀನ ಪಡಿಸಿಕೊಂಡರು. ರಾಜ್ಯಭ್ರಷ್ಟನಾದ

ದೇವೇಂದ್ರನನ್ನು ದೇವತೆಗಳು ಎಲ್ಲರೂ ಗುರುದ್ರೋಹಿಯೆಂದು ತೊರೆದು ಎಲ್ಲೆಲ್ಲಿಯೋ ತಲೆಮರೆಸಿಕೊಂಡರು. ರಾಜ್ಯಭ್ರಷ್ಟನಾದ ಶಚೀಪತಿಯು ದೇಶಭ್ರಷ್ಟನೂ ಆಗಿ ಎಲ್ಲಿಯೋ ಹೊರಟು ಹೋದ, ದೇವೇಂದ್ರನ ನೆಚ್ಚಿನ ರಾಣಿ ಶಚೀ ದೇವಿಯು ಜನರ ಕಣ್ಣಿಗೆ ಕಾಣದಂತೆ ಅಜ್ಞಾತವಾಸವನ್ನು ಕೈಗೊಂಡಳು.

ಇತ್ತ ವಿಜಯೋನ್ಮಾದದಲ್ಲಿದ್ದ ದೈತ್ಯರು ಸ್ವರ್ಗವನ್ನೆಲ್ಲ ಸುರಿದರು. ಅಮರಾವತಿಯ ಐಶ್ವರ್ಯವನ್ನೆಲ್ಲ ದೋಚಿಕೊಂಡು ತಮ್ಮ ಪಾತಾಳ ಲೋಕಕ್ಕೆ ಸಾಗಿಸಿದರು. ಸುರಸಾಮ್ರಾಜ್ಯದ ಹೆಮ್ಮೆಯ ರತ್ನಗಳಾದ ಐರಾವತ, ಉಚ್ಚೈಶ್ರವ, ಚಿಂತಾಮಣಿ, ಮುಂತಾದ ಅಪರೂಪದ ವಸ್ತುಗಳನ್ನೆಲ್ಲ ಪಾತಾಳಕ್ಕೆ ಸೆಳೆದೊಯ್ದರು. ಆದರೆ ಪುಣ್ಯ ಪುರಷರಿಂದ ಮಾತ್ರ ಭೋಗಿಸಲು ತಕ್ಕದಾದ ಆ ಸ್ವರ್ಗದ ರತ್ನಗಳು ದೈತ್ಯರ ಕೈಗೆ ಎಟುಕಲಿಲ್ಲ. ಅವೆಲ್ಲವೂ ಪಾತಾಳಕ್ಕೆ ಹೋಗುವ ದಾರಿಯಲ್ಲಿ ಸಮುದ್ರದಲ್ಲಿಯೇ ಅಡಗಿಬಿಟ್ಟವು. ಹುಡುಕಿದರೂ ಸಿಗಲಿಲ್ಲ. ಮಿಡುಕಿದರೂ ಬರಲಿಲ್ಲ. ಇದರಿಂದ ದೈತ್ಯರಿಗೆಲ್ಲ ನಿರಾಶೆ. ಪಾತಾಳದಲ್ಲಿಯೇ ಇದ್ದು ಸ್ವರ್ಗ ಸುಖವನ್ನೆಲ್ಲ ಸೂರೆಗೈಯಬೇಕೆಂಬ ಅವರ ಬಯಕೆ ಅತೃಪ್ತ. ಮನುಸ್ಸು ಉದ್ವಿಗ್ನ, ಬಲಿಚಕ್ರವರ್ತಿಗೆ ಇದರಿಂದ ಆಶ್ಚರ್ಯ. ಅವನ ಹೃದಯಕ್ಕೂ ಆಘಾತ. ಗುರು ಶುಕ್ರರ ಬಳಿ ಬಂದು ಅವನು ಬಿನ್ನವಿಸಿದ ''ಗುರುದೇವ, ನಾವೇನೋ ಮಹಾ ಪ್ರಯತ್ನ ಮಾಡಿ ಸ್ವರ್ಗಲೋಕದ ಸಿರಿಸೌಭಾಗ್ಯಗಳನ್ನೆಲ್ಲ ಕೊಳ್ಳೆಹೊಡೆದು ಇಲ್ಲಿಗೆ ತಂದದ್ದಾಯಿತು. ಆದರೆ ಆ ಸುರಲೋಕದ ಮಣಿಮುಕುಟಗಳಂತಿದ್ದ ಐರಾವತ, ಚಿಂತಾಮಣಿ, ಕಾಮಧೇನು, ಕಲ್ಪವೃಕ್ಷ ಒಂದೂ ನಮಗೆ ದಕ್ಕಲಿಲ್ಲ. ಅದರಿಂದ ನಮಗೆ ದೊರಕಬೇಕಾದ ಸುಖವು ಸಿಕ್ಕಲಿಲ್ಲ. ಅವೆಲ್ಲವೂ ಸಮುದ್ರದಲ್ಲಿ ಹಾರಿಕೊಂಡು ಬಿಟ್ಟವು. ತಾವು ಹುಟ್ಟಿದ ತಾಣದಲ್ಲಿಯೇ ಮತ್ತೆ ಗುಟ್ಟಾಗಿ ಅಡಗಿಕೊಂಡವು. ನಾವು ಮತ್ತೆ ಅವುಗಳನ್ನು ಪಡೆಯುವ ಬಗೆ ಏನು. ಎಂತು? ಹೇಗಾದರೂ ಮಾಡಿ ಸ್ವರ್ಗದ ಸಿರಿಸೌಭಾಗ್ಯಗಳು ನಮಗೆ ಸಿಗುವಂತೆ ಮಾಡಿರಿ''.

ದಾನವ ಧುರೀಣರ ಈ ಪ್ರಶ್ನೆ ಹಾಗೂ ಪ್ರಾರ್ಥನೆಗಳನ್ನು ಕೇಳಿ ನಸುನಕ್ಕರು ಆ ಅಸುರರ ಆಚಾರ್ಯರು. ಸಂತೈಸುವ ಸ್ವರದಲ್ಲಿ ತಿಳಿಹೇಳಿದರು - ''ದೈತ್ಯ ಧುರೀಣರೇ, ಸ್ವರ್ಗ ಲೋಕದ ಸಿರಿಸೌಭಾಗ್ಯಗಳೆಲ್ಲವೂ ಪ್ರಾಣಿಗಳ ಪುಣ್ಯಫಲಗಳಾಗಿವೆ. ಸುಕೃತ ಮಾಡಿದ ಧನ್ಯಪುರುಷರು ತಮ್ಮ ಪುಣ್ಯಫಲರೂಪವಾಗಿ ಆ ಸ್ವರ್ಗದ ಸೌಭಾಗ್ಯಗಳನ್ನು ಅನುಭವಿಸಲು ಅರ್ಹರಾಗುವರು. ನೀವು ಯಾವ ಪುಣ್ಯ ಕಾರ್ಯವನ್ನೂ ಮಾಡಲಿಲ್ಲ. ನನ್ನ ಆಶೀರ್ವಾದದ ಬಲದಿಂದ ಮಾತ್ರ ಸುರಲೋಕವನ್ನು ಗೆದ್ದಿರುವಿರಿ. ಆದ್ದರಿಂದ ಸ್ವರ್ಗದ ನೆಲ ಮಣ್ಣು ಮಾತ್ರ ನಿಮ್ಮ ವಶವಾಯಿತು. ಆದರೆ ಅಲ್ಲಿಯ ರತ್ನ ಹೊನ್ನು ನಿಮ್ಮ ಉಪಭೋಗಕ್ಕೆ ಒದಗಬೇಕಾದರೆ ನೀವು ಪುಣ್ಯ ಮಾಡಿ ಅರ್ಹತೆಯನ್ನು ಪಡೆಯಬೇಕಾಗುವುದು. ಸ್ವರ್ಗದ ಸುಖೋಪಭೋಗ ''ನಾಲ್ಪಸ್ಯ ತಪಸಃ ಫಲಮ್'' ಅಲ್ಪ ತಪಸ್ಸಿನಿಂದ ದೊರಕುವುದಲ್ಲ. ಅದರ ಫಲ ದೊರಕಬೇಕಾದರೆ ನೀವು ಅಮಿತ

ಪುಣ್ಯಕಾರ್ಯ ಮಾಡಬೇಕು. ನೂರು ಅಶ್ವಮೇಧಯಾಗ ಮಾಡಿದವರು ಮಾತ್ರ ಸ್ವರ್ಗಸಿರಿಯನ್ನು ಸೂರೆಗೊಳ್ಳಲು ಅರ್ಹರಾಗುವರು. ಅಶ್ವಮೇಧವಿಲ್ಲದೆ ನಿಮಗೆ ಸ್ವರ್ಗದ ಅಶ್ವ ಹೇಗೆ ದೊರಕೀತು? ಅದು ನಿಮಗೆ ಬೇಕಾಗಿದ್ದರೆ ಮೊದಲು ನಿಮ್ಮ ಇಂದ್ರಿಯ ರೂಪ ಅಶ್ವಗಳಿಗೆ ಕಡಿವಾಣ ಹಾಕಿರಿ. ಮನಸ್ಸಿನ ಮದ್ದಾನೆಯನ್ನು ನಿಯಂತ್ರಿಸಿರಿ. ಯಾಗ ಯೋಗಗಳನ್ನು ನಡೆಸಿರಿ. ಅಂದರೆ ಮಾತ್ರ ಅಮರಾವತಿಯ ಸುಖ ನಿಮಗೆ ದೊರಕುವದು.''

ದೇವಗುರುವಿನ ಆಶೀರ್ವಾದವನ್ನು ಚೆನ್ನಾಗಿ ಅರಿತುಕೊಂಡ ದೈತ್ಯೇಂದ್ರ ಬಲಿಚಕ್ರವರ್ತಿ ಎರಡನೆಯ ಮಾತನಾಡಲಿಲ್ಲ. ಗುರುವಿನ ಆಜ್ಞೆಯನ್ನು ಕೃತಿಯಲ್ಲಿ ಇಳಿಸಲು ಕಾರ್ಯೋನ್ಮುಖನಾದ. ಇತ್ತ ದೇವೇಂದ್ರನ ದುರ್ದೆಶೆ ದಯನೀಯವಾಗಿತ್ತು. ಹತಬಲನೂ, ಹತಾಶನೂ, ಆದ ಆ ಪುರುಹೂತನು ಪರಮೇಷ್ಠಿಯನ್ನು ಕಾಣಬೇಕೆಂದು ಸತ್ಯಲೋಕಕ್ಕೆ ನಡೆದ. ಅಲ್ಲಿ ಬ್ರಹ್ಮದೇವನಿಗೆ ವಂದಿಸಿ ತನ್ನ ದುರವಸ್ಥೆಯನ್ನೆಲ್ಲ ನಿವೇದಿಸಿದ. ಶಚೀಪತಿಯ ಈ ಶೋಚನೀಯ ಪರಿಸ್ಥಿತಿ ಕಂಡು ಆ ಪಿತಾಮಹನ ಹೃದಯ ತುಂಬಿ ಬಂದಿತು. ಅವರು ಹೇಳಿದರು: ''ಇಂದ್ರ, ಗುರುದ್ರೋಹವನ್ನು ಮಾಡಿದ ನಿನ್ನನ್ನು ಕಾಪಾಡುವದು ನನ್ನ ಕೈಮೀರಿದ ಮಾತು. ಇದಕ್ಕೆ ಪರಿಹಾರ ನೀಡಬಲ್ಲ, ನಿಮ್ಮನ್ನೆಲ್ಲ ಈ ಸಂಕಟ ಸಾಗರದಿಂದ ಪಾರುಮಾಡಬಲ್ಲ ಒಂದೇ ಒಂದು ವ್ಯಕ್ತಿ ವಿಷ್ಣು. ನೀವೆಲ್ಲರೂ ಬನ್ನಿ ನನ್ನೊಡನೆ. ವೈಕುಂಠ ಲೋಕಕ್ಕೆ ಹೋಗೋಣ. ಆ ಭಗವಂತನಲ್ಲಿಯೇ ಈ ಭವಣೆಯನ್ನು ಬಿತ್ತರಿಸಿ ಬಾಗಿ ಬೇಡಿಕೊಳ್ಳೋಣ. ಅವನ ಹೊರತು ನಮಗೆ ಬೇರಾರು ಗತಿ?'' ಬ್ರಹ್ಮದೇವರ ಸೂಚನೆ, ಯೋಚನೆ, ಎಲ್ಲ ಸುರಸಮಾಜಕ್ಕೂ ಸಮ್ಮತವಾಯಿತು. ಬ್ರಹ್ಮದೇವನನ್ನು ಮುಂದೆ ಮಾಡಿಕೊಂಡು ಸುರವೃಂದವೆಲ್ಲವೂ ಹಾಲುಗಡಲಿನ ದಂಡೆಯವರೆಗೆ ನಡೆದು ಬಂದಿತು. ಆ ಕ್ಷೀರಸಾಗರದ ತೀರದಲ್ಲಿ ನಿಂತು ಆ ವೃಂದಾರಕ ವೃಂದದವರೆಲ್ಲರೂ ಭಕ್ತಿಯಿಂದ ಭಗವಂತನನ್ನು ಬಣ್ಣಿಸಿ, ಸ್ತುತಿಸಿ ಬೇಡಿಕೊಳ್ಳತೊಡಗಿದರು.

**ದೇವ ದೇವ ಜಗನ್ನಾಥ ಸುರಾಸುರ ನಮಸ್ಕೃತ ॥**
**ಪುಣ್ಯ ಶ್ಲೋಕಾವ್ಯಯಾಂನಂತ ಪರಮಾತ್ಮನ್ನಮೋऽಸ್ತು ತೇ ॥**

**ಯಜ್ಞೋऽಸಿ ಯಜ್ಞ ರೂಪೋऽಸಿ ಯಜ್ಞಾಂಗೋऽಸಿ ರಮಾಪತೇ ।**
**ತತೋऽದ್ಯ ಕೃಪಯಾವಿಷ್ಣೋ ದೇವಾನಾಂ ವರದೋ ಭವ ॥**

**ಗುರೋರವಜ್ಞಯಾ ಚಾದ್ಯ ಭ್ರಷ್ಟರಾಜ್ಯಃ ಶತಕ್ರತುಃ**
**ಜಾತಃ ಸ ಋಷಿಭಿಃ ಸಾಕಂ ತಸ್ಮಾದೇನಂ ಸಮುದ್ಧರ ॥**

ಜಗದೊಡೆಯನಾದ ಶ್ರೀಹರಿಯೇ, ನಿನಗೆ ನಮ್ಮ ನಮಸ್ಕಾರ. ಸುರಾಸುರರೆಲ್ಲರಿಂದಲೂ ವಂದ್ಯ ವಿಭೂತಿಯಾದ ನೀನು ನಾಶರಹಿತನು. ನಿನ್ನ ಮಹಿಮೆಗಳಿಗೆ ಅಂತಪಾರವಿಲ್ಲ. ನಿನಗೆ ಪರಮಾತ್ಮ ಎಂದು ಹೆಸರು. ನೀನು ಯಜ್ಞಾಂಗನೂ, ಯಜ್ಞರೂಪನೂ, ಯಜ್ಞನಾಮಕನೂ ಆಗಿರುವೆ. ಜಗತ್‌ಪಾಲಕನು ನೀನೇ.

ಆದ್ದರಿಂದ ಈಗ ದಯವಿಟ್ಟು ನಮ್ಮೆಲ್ಲ ದೇವತೆಗಳನ್ನು ಕಾಪಾಡು. ಗುರುವಿಗೆ ಅಗೌರವ ತೋರಿದ್ದರಿಂದ ಸುರೇಂದ್ರನು ಸಾಮ್ರಾಜ್ಯಭ್ರಷ್ಟನಾಗಿದ್ದಾನೆ. ಐಶ್ವರ್ಯ ಹೀನನಾದ ಈ ದೀನದೂನ ದೇವೇಂದ್ರನನ್ನು ದೀನಬಂಧುವಾದ ನಿನ್ನ ಹೊರತು ಯಾರು ರಕ್ಷಿಸಬಲ್ಲರು?'' ಬ್ರಹ್ಮಾದಿ ದೇವತೆಗಳ ಬಿನ್ನಹವನ್ನು ಲಾಲಿಸಿ ಭಗವಂತನು ನುಡಿದ.

## ಭಗವಾನ್ ಉವಾಚ

**ಗುರೋರವಜ್ಞಯಾ ಸರ್ವಂ ನಶ್ಯತೇ ಚ ಸಮುದ್ಭವಂ**
**ಯೇ ಪಾಪಿನೋ ಹ್ಯಧರ್ಮಿಷ್ಠಾಃ ಕೇವಲಂ ವಿಷಯಾತ್ಮಕಾಃ**
**ಪಿತರೌ ನಿಂದಿತೌ ಯ್ಯೆಶ್ಚ ದುರ್ದಶೈವ ನ ಸಂಶಯಃ**

ಗುರುವಿನ ತಿರಸ್ಕಾರದಿಂದ ಜೀವಿಗಳ ಸರ್ವಸ್ವವೂ ನಷ್ಟವಾಗುತ್ತದೆ. ಗುರುದ್ರೋಹದಿಂದ ಇದ್ದದ್ದೆಲ್ಲವೂ ಹಾಳಾಗಿ ಹೋಗುವುದು. ಗುರುದ್ವೇಷಿಗಳು, ಧರ್ಮದ್ರೋಹಿಗಳು, ವಿಷಯಲಂಪಟರೂ ಮಹಾ ಪಾಪಿಷ್ಠರೇ ಸರಿ, ತಾಯಿ ತಂದೆಗಳನ್ನು ಗುರುಹಿರಿಯರನ್ನು ನಿಂದಿಸುವವರು ಮಹಾಪಾಪಿಗಳು. ಅವರಿಗೆ ಯಾವ ದೇವರೂ ಸಹಾಯಕ್ಕೆ ಬರಲಾರರು. ಯಾವ ದೈವವೂ ಅವರನ್ನು ಉದ್ಧರಿಸಲಾರದು. ಪಿತಾಮಹನೇ, ಈ ದೇವೇಂದ್ರನು ಇಂಥ ಘೋರವಾದ ಗುರುಗಳ ಧಿಕ್ಕಾರವನ್ನು ಗೈದಿದ್ದಾನೆ. ಈ ಗುರು ತಿರಸ್ಕಾರದ ಕಟುಫಲವನ್ನು ಸಮಸ್ತ ದೇವತೆಗಳೂ ಅನುಭವಿಸಬೇಕಾಯಿತು. ಯಾವ ಪುರುಷನಿಗೆ ಅನಿರೀಕ್ಷಿತವಾಗಿ ಮಹಾಸಂಕಟವು ಪ್ರಾಪ್ತವಾಗಿರುವುದೋ ಅವನು ಪರಕೀಯರ ಸಹಾಯವನ್ನು ಪಡೆಯಲೇಬೇಕು. ಬುದ್ಧಿವಂತ ಮಾನವನು ತನ್ನ ಕಾರ್ಯ ಸಾಧನೆಗಾಗಿ ತನ್ನ ವೈರಿಯ ಸಹಾಯ, ಸಹಕಾರಗಳನ್ನು ಪಡೆಯಲೂ ಕೂಡ ಹಿಂಜರಿಯಬಾರದು. ಆದ್ದರಿಂದ ದೇವೇಂದ್ರನೇ, ನೀನು ಈಗ ನನ್ನ ಮಾತನ್ನು ಕೇಳು. ಈಗ ನಿನ್ನ ಮನೋರಥವು ಕೈಗೂಡಬೇಕಾದರೆ ನಿಮ್ಮ ವೈರಿಗಳಾದ ದೈತ್ಯರ ಸಹಕಾರವನ್ನು ಪಡೆಯಲು ಪ್ರಯತ್ನಿಸು, ನೀವಿಬ್ಬರೂ ದೈತ್ಯದಾನವರು ಕೂಡಿ ಪ್ರಯತ್ನ ಮಾಡಿರಿ. ನೀವಿಬ್ಬರೂ ಕೂಡಿ ಹಾಲಿನ ಕಡಲನ್ನು ಹುಮ್ಮಸದಿಂದ ಕಡೆಯಿರಿ ನಿಮಗೆ ಅಭಿಲಷಿತವಾದ ಹಾಗೂ ನಿಮ್ಮನ್ನು ಅಜರಾಮರರನ್ನಾಗಿ ಮಾಡುವ ರತ್ನರಾಶಿಯನ್ನೇ ಪಡೆಯಿರಿ. ಈ ಮಹಾ ಫಲಪ್ರಾಪ್ತಿಗಾಗಿ ದೇವದಾನವರಿಬ್ಬರೂ ಒಗ್ಗಟ್ಟಾಗಿ ದುಡಿಯಿರಿ.''

ಮಹಾವಿಷ್ಣುವಿನ ಮಾತು ಸುರಸಮಾಜಕ್ಕೆಲ್ಲ ಹಿಡಿಸಿತು. ವೃಂದಾರಕರ ಮುಂದಾಳುವಾದ ದೇವೇಂದ್ರನು ಸುತಲ ಲೋಕಕ್ಕೆ ಧಾವಿಸಿದನು. ಅವನ ಪರಿವಾರವು ಆ ಸುರನಾಥನನ್ನು ಬೆಂಬಲಿಸಿತು. ಸುತಲ ಲೋಕದಲ್ಲಿ ಸುರರಾಜನು ಸ್ವಯಂ ಬಂದದ್ದನ್ನು ಕಂಡು ಬಲಿರಾಜನಿಗೆ ಕ್ರೋಧ ಉಕ್ಕೇರಿತು, ಕೈಯಲ್ಲಿ ಸಿಕ್ಕಾಗಲೇ ಆ ಶಚೀಪತಿಯನ್ನು ಕೊಲ್ಲಬೇಕೆಂಬ ವಿಚಾರ ಅವನ ತಲೆಯಲ್ಲಿ ಸುಳಿಯಿತು, ಆದರೆ ಅದೇ ಸಮಯದಲ್ಲಿ ದೇವರ್ಷಿ ನಾರದರು ಅಲ್ಲಿಗೆ ಬಂದರು, ಬಲಿರಾಜನಿಗೆ ತಿಳಿಹೇಳಿದರು.

**ನಾರದ :** ನಿಶ್ಶಸ್ತ್ರನಾಗಿ ಮನೆಗೆ ಬಂದ ಅತಿಥಿಯನ್ನು ಕೊಲ್ಲಲು ನೀನೇನು ಹೇಡಿಯೇ ? ನಿರ್ವೀರ್ಯನೇ? ಸಮರಾಂಗಣದಲ್ಲಿ ಸೋತುಹೋಗಿ ಮನೆಗೆ ಬಂದ ಅಭ್ಯಾಗತನನ್ನು ಕೊಲ್ಲುವಲ್ಲಿ ಏನು ಪೌರುಷ? ನಿನ್ನನ್ನು ನಂಬಿಬಂದ ಇಂದ್ರನನ್ನು ಅಷ್ಟೇ ವಿಶ್ವಾಸದಿಂದ ನೀನು ಕಂಡರೆ ನಿನ್ನ ಹಿರಿತನ ವ್ಯಕ್ತವಾಗುವದು.'' ನಾರದರ ಮಾತು ಸರಿ ಎನಿಸಿತು ಆ ಅಸುರ ಸಾಮ್ರಾಟನಿಗೆ. ಅವನು ರೋಷವನ್ನು ತೊರೆದ. ಸಂತೋಷವನ್ನು ಮುಖದ ಮೇಲೆ ತೋರಿದ, ಇಂದ್ರನ ಸ್ವಾಗತಕ್ಕಾಗಿ ತಾನೇ ಮುಂದೆ ಬಂದ. ತನ್ನ ದೇವತಾ ಪರಿವಾರದೊಂದಿಗೆ ಬಂದ ದೇವೇಂದ್ರನನ್ನು ಕಂಡು ಬಲಿರಾಜನಿಗೆ ಕೌತುಕವೆನಿಸಿತು. ಕಳೆಗೆಟ್ಟ ಮುಖ, ಕಾಂತಿಯನ್ನು ಕಳೆದುಕೊಂಡ ದೀನ ದೇಹ, ನಿಃಸತ್ವ ಭಾವ, ಮೊದಲಿನ ಮಹೇಂದ್ರನ ಮದ, ಅಹಂಮನ್ಯತೆ, ಗರ್ವೋದ್ರೇಕ ಯಾವುದೂ ಇರಲಿಲ್ಲ. ತೇಜೋಹೀನ, ಕಾಂತಿಕ್ಷೀಣ, ಅಹಂಕಾರರಹಿತ, ಅಲಂಕಾರಶೂನ್ಯ ದೇವೇಂದ್ರನನ್ನು ಕಂಡು ಬಲಿರಾಜನಿಗೆ ದಯೆ ಬಂದಿತು. ಅವನು ನಗುತ್ತ ನುಡಿದ ''ದೇವರಾಜ, ತಾವು ಈ ಸುತಲ ಲೋಕಕ್ಕೆ ಹೇಗೆ ಬಂದಿರಿ? ಇಲ್ಲಿಗೆ ತಮ್ಮ ಶುಭಾಗಮನದ ಕಾರಣವೇನು?

**ಇಂದ್ರ :** ''ಸಹೋದರ, ನಾವೆಲ್ಲ ದೇವತೆಗಳೂ ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟೆವು. ನಿಮ್ಮದೂ ಅದೇ ಹಾಡು, ನೀವೆಲ್ಲ ದೈತ್ಯರೂ ನಮ್ಮಂತೆಯೇ ಕಾಮ ಕ್ರೋಧದ ಕಿಂಕರರಾದಿರಿ. ವಾಸ್ತವ ವಿಚಾರಮಾಡಿದರೆ ನಾವಿಬ್ಬರೂ ದೇವದಾನವರು ದಾಯಾದಿಗಳೇ ಅಲ್ಲವೇ ! ನಾವು, ನೀವು ಇಬ್ಬರೂ ಕಶ್ಯಪರ ಮಕ್ಕಳು, ಒಂದೇ ಕಶ್ಯಪ ಕುಟುಂಬಕ್ಕೆ ಸೇರಿದವರು. ಆದರೆ ದುರ್ದೈವದಿಂದ ನಮ್ಮ ಜೀವನದ ಕಡಿವಾಣವೆಲ್ಲವೂ ಕ್ರೋಧದ ಕೈಯಲ್ಲಿ. ಹೀಗೆ ಕೋಪಾಟೋಪದ ಆವೇಶವಶರಾದ ನಾವು ನಿರರ್ಥಕವಾಗಿ ಕಲಹ ಮಾಡುವೆವು, ವ್ಯರ್ಥ ಬಡೆದಾಡುವೆವು, ನಿಮ್ಮ ಸುದೈವದಿಂದ, ನಮ್ಮ ದುರ್ದೈವದಿಂದ ನೀವು ಒಂದು ಕ್ಷಣದಲ್ಲಿ ನನ್ನ ಸ್ವರ್ಗ ಸಾಮ್ರಾಜ್ಯವನ್ನೆಲ್ಲ ಗೆದ್ದುಬಿಟ್ಟಿರಿ. ನನ್ನ ಸ್ವರ್ಗದ ಸಾರಸರ್ವಸ್ವವೆನಿಸಿದ ಆ ಐರಾವತ, ಉಚ್ಚೈಶ್ರವ, ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಪಾರಿಜಾತ ಎಲ್ಲವನ್ನೂ ಅಮರಾವತಿಯಿಂದ ಕಿತ್ತು ಎತ್ತಿ ನಿಮ್ಮ ಪಾತಾಳಕ್ಕೆ ಹೊತ್ತು ತಂದಿರಿ, ಅವು ಯಾವುವೂ ನಿಮಗೆ ದಕ್ಕಲಿಲ್ಲ. ಅವೆಲ್ಲವೂ ಕಡಲಿಗೆ ಹಾರಿ ತಮ್ಮ ತಾಯಿ ಒಡಲನ್ನು ಸೇರಿಬಿಟ್ಟವು. ಜೀವನದಲ್ಲಿ ಪರಮಪುರುಷಾರ್ಥವೆನಿಸಿದ ಆ ಮಣಿಮಂಡಲಗಳೆಲ್ಲವೂ ಸಮುದ್ರದ ಪಾಲಾದವು, ನಿಮಗೂ ಇಲ್ಲ, ನಮಗೂ ಇಲ್ಲ. ಆದ್ದರಿಂದ ಹೇಗಾದರೂ ಮಾಡಿ ಅನರ್ಘ್ಯ ರತ್ನಗಳನ್ನು ನಾವು ಮರಳಿ ಪಡೆಯಬೇಕು. ಇದಕ್ಕಾಗಿ ನಾವು ಒಗ್ಗೂಡಿ, ಒಮ್ಮತದಿಂದ, ಹುಮ್ಮಸ್ಸಿನಿಂದ ಪ್ರಯತ್ನ ಮಾಡೋಣ. ಈ ನೈರಾಶ್ಯ ಸಂಕಟದಿಂದ ಮುಕ್ತರಾಗೋಣ. ಈ ಖೇದ-ನಿರ್ವೇದಗಳಿಂದ ದೂರ ಹೋಗಿ ಸಾಮೂಹಿಕ ಪ್ರಯತ್ನದಿಂದ ಅಳಿದು ಹೋದ ಆ ನಿಸ್ತುಲ ವಸ್ತುಗಳನ್ನು ಮರಳಿ ಪಡೆಯೋಣ. ಅದಕ್ಕಾಗಿ ಈಗ ನಾವು ಒಮ್ಮನದಿಂದ ಕಾರ್ಯೋದ್ಯುಕ್ತ -ರಾಗೋಣ. ಈ ವಿಚಾರದಿಂದಲೇ ನಾನು ಈಗ ಇಲ್ಲಿಗೆ ಬಂದಿದ್ದೇನೆ.

ದೇವೇಂದ್ರನ ಮಾತುಗಳನ್ನು ಕೇಳಿ ಬಲಿಚಕ್ರವರ್ತಿಗೆ ಒಂದು ಕ್ಷಣ ಏನು ಮಾಡಬೇಕೆಂಬುದೇ ತಿಳಿಯದಂತಾಯಿತು. ಏನು ಮಾಡಲೂ ಅವನು ಹಿಂದೆ ಮುಂದೆ ನೋಡತೊಡಗಿದನು. ಆಗ ಪೂಜ್ಯರಾದ ನಾರದರು ಮುಂದೆ ಬಂದು ಅವನಿಗೆ ಬುದ್ಧಿವಾದ ಹೇಳಿದರು. ಮಾರ್ಗದರ್ಶನ ಮಾಡಿದರು.

## ನಾರದ ಉವಾಚ

**ಧರ್ಮೋ ಹಿ ಮಹತಾಮೇಷಃ ಶರಣಾಗತಪಾಲನಮ್ ॥**
**ಶರಣಾಗತಂ ಚ ವಿಪ್ರಂ ಚ ರೋಗಿಣಂ ವೃದ್ಧಮೇವ ಚ ।**
**ಯೇ ಏತಾನ್ನ ಚ ರಕ್ಷಂತಿ ತೇ ವೈ ಬ್ರಹ್ಮಹನೋ ನರಾಃ ।**
**ಶರಣಾಗತ ಶಬ್ದೇನ ಆಗತಃ ಸ್ವಸ್ಯ ಸನ್ನಿಧೌ ।**
**ಸಂರಕ್ಷಣೀಯಃ ಪೋಷ್ಯಶ್ಚ ತ್ವಯಾ ನಾಸ್ತ್ಯತ್ರ ಸಂಶಯಃ ॥**

ದೈತ್ಯೇಂದ್ರ, ಶರಣಾಗತರನ್ನು, ರಕ್ಷಿಸುವುದು, ದೊಡ್ಡ ಧರ್ಮ. ಅದು ದೊಡ್ಡವರ ಧರ್ಮವೂ ಹೌದು, ಶರಣಾಗತರನ್ನು, ಬ್ರಾಹ್ಮಣರನ್ನು, ರೋಗಿಗಳನ್ನು, ವೃದ್ಧರನ್ನು ಯಾವನು ರಕ್ಷಿಸುವದಿಲ್ಲವೋ ಅವನಿಗೆ ಬ್ರಹ್ಮಹತ್ಯಾ ಪಾಪ ಬರುತ್ತದೆ. 'ಶರಣು' ಎಂಬ ಹೆಸರನ್ನು ಹೇಳಿ ನಿನ್ನ ಬಳಿಗೆ ಬಂದವನು ಯಾವನೇ ಇರಲಿ, ಎಂತೇ ಇರಲಿ, ಅವನನ್ನು ನೀನು ಪೊರೆಯಬೇಕು. ಅವನ ಬಗ್ಗೆ ವೈರ ಭಾವನೆ ಇದ್ದರೂ ಅದನ್ನು ತೊರೆಯಬೇಕು. ಅವನನ್ನು ಪೋಷಿಸಬೇಕು. ಇದು ನಿನ್ನ ಕರ್ತವ್ಯ ಮತ್ತು ರಾಜರ ಧರ್ಮ, ಇದರಲ್ಲಿ ಸಂದೇಹವಿಲ್ಲ. ಸೋತು ಹೋದ ದೇವೇಂದ್ರ ಈಗ ನಿನ್ನ ಮನೆಗೆ ಬಂದದ್ದೆಂದರೆ ಶರಣು ಬಂದಂತೆಯೇ ಸರಿ. ಮತ್ತು ಅವನು ನಿಮ್ಮೆಲ್ಲ ದೈತ್ಯರೊಂದಿಗೆ ಕೈಕೊಳ್ಳಬೇಕೆಂದಿರುವ ಸಂಯುಕ್ತ ಪ್ರಯತ್ನದಲ್ಲಿ ನಿಮ್ಮ ಹಿತವೂ ಅಡಗಿದೆ. ನಿಮಗೆ ದಕ್ಕದ ಅನರ್ಘ್ಯ ರತ್ನಗಳೆಲ್ಲ ಮತ್ತೆ ಸಿಕ್ಕುವ ಭರವಸೆ ಅವನ ಮಾತಿನಲ್ಲಿದೆ, ಹೀಗೆ ಸ್ವಾರ್ಥ, ಪರಾರ್ಥ ಎರಡೂ ಸಾಧಿಸುವಂತಿದ್ದರೆ ನೀವೇಕೆ ಸೋದರನಾದ ದೇವೇಂದ್ರನ ಸೂಚನೆಗೆ ಆದರದಿಂದ ಸಮ್ಮತಿ ನೀಡಬಾರದು?''

ದೈತ್ಯರಾಜ ಬಲಿಚಕ್ರವರ್ತಿಗೆ ತಂಬೂರಿ ಮಿಟುವ ಆ ಮುನಿಯ ಮಾತು ಮಿದುಳಿನ ತಂತಿಗಳನ್ನೆಲ್ಲಾ ಮಿಡಿದಂತಾಯಿತು. ಅವರ ಸೂಕ್ತಸಲಹೆಗಳು ಅವನಿಗೆ ಯುಕ್ತವೆನಿಸಿದವು. ಕೂಡಲೇ ಬುದ್ಧಿವಂತನಾದ ಆ ಬಲಿರಾಜನು ನಾರದರ ಹಿತ ನುಡಿಗಳನ್ನು ತೂಗಿನೋಡಿ ಒಪ್ಪಿಗೆಯ ತಲೆ ಅಲ್ಲಾಡಿಸಿದ. ಕೂಡಲೇ ಸುರಸಮೂಹ ಸಹಿತನಾದ ಮಹೇಂದ್ರನಿಗೆ ತೆರೆದ ಹೃದಯದಿಂದ ಸ್ವಾಗತ ನೀಡಿದ, ಸತ್ಕಾರ ಮಾಡಿದ. ಇಂದ್ರನ ಮನಸ್ಸಿನಲ್ಲಿ ವಿಶ್ವಾಸ ಮೂಡಿಸಲಿಕ್ಕಾಗಿ ಅನೇಕ ಆಣೆಯಿಟ್ಟು ಸರ್ವ ರೀತಿಯಿಂದಲೂ ಸಹಕರಿಸುವದಾಗಿ ಶಪಥಗೈದ. ದೇವೇಂದ್ರನೂ ಅಸುರ ರಾಜನ ಎದುರು ಅನೇಕ ಶಪಥಗಳನ್ನು ಮಾಡಿ ಸಂಯುಕ್ತ ಪ್ರಯತ್ನ ಮಾಡಲು ಪ್ರತಿಜ್ಞೆಗೈದ. ಪರಸ್ಪರ ಪ್ರೀತಿ ಬೆಳೆಯಿತು. ವಿಶ್ವಾಸ ಕುದುರಿತು. ಅವರಿಬ್ಬರಲ್ಲಿಯ ಸ್ನೇಹ ಸೌಹಾರ್ದಕ್ಕೆ ತಿರುಗಿತು. ಸೌಹಾರ್ದ ಸಹಕಾರಕ್ಕೆ ಹಾದಿಮಾಡಿತು. ಸಹಕಾರ

ಸಹಜೀವನಕ್ಕೆ ನಾಂದಿಹಾಡಿತು. ಇಂದ್ರ ಬಲಿಯ ಮಂದಿರದಲ್ಲಿಯೇ ಇದ್ದುಬಿಟ್ಟ. ಎಷ್ಟೋ ವರ್ಷಗಳವರೆಗೆ ದೇವರಾಜನಿಗೆ ಆ ದೈತ್ಯಧಾಮದಲ್ಲಿ ನಿತ್ಯವೂ ಆದರದ ಉಪಚಾರ, ಪ್ರೀತಿಯ ಆತಿಥ್ಯ. ಹನ್ನೆರಡು ತಿಂಗಳೂ ಅಳಿಯತನ, ಅಳಿಯಲಾರದ ಗೆಳೆತನ. ಒಂದು ದಿನ ಬಲಿರಾಜನ ಆಸ್ಥಾನದಲ್ಲಿ ದೇವೇಂದ್ರನು ಉಚ್ಚಾಸನದ ಮೇಲೆ ಮಂಡಿಸಿದ್ದಾನೆ, ಲೋಕಾಭಿರಾಮವಾಗಿ ವಾರ್ತಾಲಾಪನೆ ನಡೆದಿದೆ. ಆಗ ನಸು ನಗುತ್ತ ಆ ನಾಕನಾಥ ನುಡಿದ.

**ಇಂದ್ರ :** ಬಲಿಷ್ಠನಾದ ಬಲಿರಾಜ, ಅಮರಾವತಿಯ ಆನೆ, ಅಶ್ವಗಳನ್ನೂ ಆ ನಂದನದ ಮಂದಾರವನ್ನೂ ಸ್ವರ್ಗಲೋಕದ ಸುರಭಿಯನ್ನೂ ನೀವೇನೋ ಸೆಳೆದು ತಂದಿರಿ. ಆದರೆ ಅವೆಲ್ಲವೂ ಮತ್ತೆ ಸಮುದ್ರದಲ್ಲಿ ಮುಳುಗಿ ತಮ್ಮ ಮೂಲಸ್ಥಾನವನ್ನು ಸೇರಿದವು. ಈಗ ಅವು ನಮಗೂ ಇಲ್ಲ, ನಿಮಗೂ ಇಲ್ಲ. ಆದ್ದರಿಂದ ಅವುಗಳನ್ನು ಮರಳಿ ಪಡೆಯಬೇಕು. ನಾವು ನೀವು ಸೇರಿ ಆ ಹಾಲಿನ ಹೆಗ್ಗಡಲನ್ನೇ ಕಡೆದು ಬಿಡುವಾ. ಆ ರತ್ನಗಳನ್ನು ಪಡೆಯುವಾ.

**ಬಲಿರಾಜ :** ''ದೇವರಾಜ, ನೀನು ಹೇಳುವದೇನೋ ನಿಜ. ಸಮುದ್ರ ಮಂಥನವನ್ನು ಮಾಡಬೇಕಾದದ್ದೇನೋ ಅತ್ಯಾವಶ್ಯಕ. ಆದರೆ ಅಪರಂಪಾರವಾಗಿ ವಿಸ್ತಾರದಿಂದ ಘೂರ್ಮಿಸುವ ಆ ಹೆಗ್ಗಡಲನ್ನು ಕಡೆಯುವ ಬಗೆ ಹೇಗೆ?

ಈ ಮಾತಿಗೆ ದೇವರಾಜನಲ್ಲಿಯೂ ಉತ್ತರವಿರಲಿಲ್ಲ, ಅಪಾರ ಸಾಗರವನ್ನು ಕಡೆಯುವುದು ಹೇಗೆ? ಅದಕ್ಕೆ ಹಗ್ಗ ಎಲ್ಲಿಂದ ತರುವುದು? ಎಂಥ ಕಡಗೋಲನ್ನು ಇಡುವುದು? ಹೇಗೆ ಕಡೆಯುವುದು? ಇವೆಲ್ಲ ಪ್ರಶ್ನೆಗಳು ಅವನ ಮಿದುಳನ್ನೇ ಕಡೆಯತೊಡಗಿದವು . ಇದನ್ನೆಲ್ಲ ವಿಚಾರಿಸಿ ಆ ದೈತ್ಯದಾನವರೆಲ್ಲರ ಹೃದಯಗಳೆಲ್ಲವೂ ಪ್ರಕ್ಷುಬ್ಧ ಸಾಗರಗಳಾದವು. ಎಷ್ಟೆಷ್ಟು ಮಾತುಕತೆ ವಿಚಾರಗಳ ಮಂಥನ, ಚಿಂತನವಾದರೂ ಯಾವುದೇ ಯಥಾರ್ಥ ಮಥಿತಾರ್ಥ ಹೊರಡಲಿಲ್ಲ. ಹೀಗೆ ದೇವ ದಾನವರಲ್ಲಿ ವೈಚಾರಿಕ ಮಂಥನ ನಡೆದಾಗಲೇ ಆಕಾಶವಾಣಿಯಾಯಿತು.

## ಆಕಾಶವಾಣಿ ಉವಾಚ

''ದೇವತೆಗಳೇ, ದೈತ್ಯರೇ, ನೀವಿಬ್ಬರೂ ಸೇರಿ ಹಾಲಿನ ಕಡಲನ್ನು ಕಡೆಯಿರಿ. ಇದಕ್ಕಾಗಿ ಮಂದರ ಬೆಟ್ಟವನ್ನೇ ಕಡಗೋಲವನ್ನಾಗಿ ಮಾಡಿರಿ. ವಾಸುಕಿ ಸರ್ಪವನ್ನು ಕಡೆಯುವ ಹಗ್ಗವನ್ನಾಗಿ ಮಾಡಿ ಆ ಬೆಟ್ಟಕ್ಕೆ ಬಿಗಿಯಿರಿ, ಎಲ್ಲ ದೇವತೆಗಳೂ ದೈತ್ಯರೂ ಕೂಡಿ ಮಂಥನ ಕಾರ್ಯವನ್ನು ಕೈಕೊಳ್ಳಿರಿ.'' ಈ ಆಕಾಶವಾಣಿಯ ಸಂದೇಶವನ್ನು ಕೇಳಿ ದೇವ ದಾನವರ ಸಂದೇಹಗಳೆಲ್ಲವೂ ದೂರವಾದವು. ಎಲ್ಲರ ಹೃದಯದಲ್ಲಿಯೂ ಹೊಸ ಆಶೆಯ ಕಿರಣ ಮೂಡಿತು. ಉತ್ಸಾಹ ಹೃದಯ ತುಂಬಿತು. ಎಲ್ಲರ ಮೈಯಲ್ಲಿಯೂ ಬಲ ಬಂದಂತೆ ಎನಿಸಿತು. ಕೈಗಳಲ್ಲಿ ಶಕ್ತಿ ತುಂಬಿದಂತಾಯಿತು. ದೇವತೆಗಳೂ, ದಾನವರೂ, ತಮ್ಮ ತಮ್ಮ ಅರಸರ

ಅಪ್ಪಣೆಯಂತೆ ಒಟ್ಟುಗೂಡಿದರು. ಮಂದರ ಬೆಟ್ಟದ ಬಳಿಗೆ ಬಂದರು, ಮುಗಿಲಿಗೆ ಮುತ್ತಿಡುತ್ತಿತ್ತು ಆ ಎತ್ತರದ ಮಂದರ ಪರ್ವತ. ಬಗೆ ಬಗೆಯ ರತ್ನ ರಾಶಿಗಳನ್ನೆಲ್ಲ ಒಟ್ಟಿದಂತಾಗಿತ್ತು ಆ ಬೆಟ್ಟದ ತುಂಬ, ಶ್ರೀಚಂದನ ಹರಿಚಂದನ, ಮಂದಾರ, ಮಾಕಂದ, ಮುಂತಾದ ಹೆಮ್ಮರಗಳ ಹೂಗಳ ಸುಗಂಧ ದಿಗಂತರಾಳವನ್ನೆಲ್ಲ ಪರಿಮಳಭರಿತವಾಗಿ ಮಾಡಿದ್ದಿತು. ಎಲ್ಲಿ ನೋಡಿದಲ್ಲೆಲ್ಲ ಬೃಹದಾಕಾರದ ಆ ಬೆಟ್ಟದ ಬೆನ್ನ ಮೇಲೆ ಹಸಿರು ಕುಸಿರೊಡೆದು ಮರಕತ ಮಣಿಯ ಇಂದ್ರಚಾಪಗಳನ್ನೇ ಹರಿದು ಹಂಚಿದಂತಾಗಿತ್ತು. ಆ ಶೈಲೇಂದ್ರದ ಬಳಿ ಎಲ್ಲ ದೇವತೆಗಳು ಕೈ ಜೋಡಿಸಿ ಬೇಡಿಕೊಂಡರು. ''ಗಿರಿರಾಜ, ಸಮುದ್ರಮಂಥನವನ್ನು ಮಾಡಿ ನಾವು ಅಮೃತವನ್ನು ಪಡೆಯಬೇಕೆಂದಿದ್ದೇವೆ. ನಮ್ಮ ಈ ಕಾರ್ಯದಲ್ಲಿ ನೀನು ಕಡಗೋಲಾಗು. ಮೊದಲು ನೀನು ಈ ದಿವ್ಯ ಕಾರ್ಯದಲ್ಲಿ ನಮ್ಮ ಕಡೆಗಾಗು. ಸಹಕಾರ ನೀಡು.'' ದೇವತೆಗಳ ಹಾಗೂ ದೈತ್ಯರ ಈ ಸಾಮೂಹಿಕ ಬಿನ್ನಹವನ್ನು ಮನ್ನಿಸಿ ಆ ಮಂದರ ಪರ್ವತವು ಪುರುಷ ರೂಪದಿಂದಲೇ ಎದ್ದು ಬಂದು ಹೇಳಿತು.

**ಮಂದರ :** ''ದೇವರಾಜ, ನೀನು ಹಿಂದೆ ನಿನ್ನ ವಜ್ರಾಯುಧದಿಂದ ನಮ್ಮೆಲ್ಲ ಪರ್ವತಗಳ ರೆಕ್ಕೆಗಳನ್ನೇ ಕಡಿದು ಹಾಕಿರುವೆ. ಆದ್ದರಿಂದ ನಾನು ಆ ಹಾಲಿನ ಸಮುದ್ರದ ವರೆಗೆ ನಡೆದು ಬರುವದೆಂತು ! ನನಗೇನೋ ಈ ದೇವತಾ ಕಾರ್ಯದಲ್ಲಿ ಸಹಾಯ ಸಲ್ಲಿಸಬೇಕೆಂಬ ಆಪೇಕ್ಷೆ ಇದೆ. ಆದರೆ ಬರುವ ಬಗೆ ಎಂತು? ಬೇಕಾದರೆ ನೀವೇ ನನ್ನನ್ನು ಆ ಹಾಲ್ಗಡಲಿನವರೆಗೆ ಎತ್ತಿಕೊಂಡಾಗಲೀ ಹೊತ್ತುಕೊಂಡಾಗಲೀ ಒಯ್ಯಿರಿ. ನನ್ನದೇನೂ ಅಭ್ಯಂತರವಿಲ್ಲ''

ಹೀಗೆ ಆ ಮಂದರ ಶೈಲೇಂದ್ರದ ಸಮ್ಮತಿ ಪಡೆದ ಸುರಾರರೆಲ್ಲರೂ ಉತ್ಸಾಹದಿಂದ ಆ ಬೆಟ್ಟವನ್ನು ಎತ್ತಿಕೊಂಡು ಒಯ್ಯುವ ವಿಚಾರ ಮಾಡಿದರು. ಕೋಟಿ ಕೋಟಿ ದೇವ ದಾನವರು ಕೂಡಿ ಆ ಬೆಟ್ಟದ ಸುತ್ತು ಮುತ್ತು ಹಾರಿ, ಗುದ್ದಲಿ, ಮುಂತಾದವುಗಳನ್ನು ಹಾಕಿ ಆ ಇಡೀ ಬೆಟ್ಟವನ್ನೇ ಕಷ್ಟದಿಂದ ಕಿತ್ತುತೆಗೆದರು. ಸಾಮೂಹಿಕವಾಗಿ ಅದನ್ನು ಎತ್ತಿಯೂ ಹಿಡಿದರು. ಎಲ್ಲರೂ ತಲೆಯ ಮೇಲೆ ಹೊತ್ತುಕೊಂಡು ಹೋಗಬೇಕೆಂದು ಕೆಲವು ಹೆಜ್ಜೆಗಳನ್ನು ಹಾಕಿದರು. ಆದರೆ ಮಹತೋಮಹೀಯವಾದ ಆ ಬೃಹತ್ ಬೆಟ್ಟದ ಭೂರಿ ಭಾರವನ್ನು ಹೊರಲಾಗದೇ ಎಲ್ಲರೂ ತತ್ತರಿಸಿದರು. ನಿಂತಲ್ಲಿಯೇ ಮುಗ್ಗರಿಸಿದರು. ಇದ್ದಲ್ಲಿಯೇ ಕುಸಿದು ಕುಳಿತರು. ಕೆಲವರ ಕಾಲು ಹೋದವು. ಕೆಲವರ ಕೈ ಮುರಿದವು. ಎಷ್ಟೋ ಜನ ಅರೆಜೀವವಾದರು. ಬಹಳ ಜನ ಸತ್ತೇ ಹೋದರು. ಇದ್ದು ಬಿದ್ದವರೆಲ್ಲರೂ ಚೀರ ತೊಡಗಿದರು. ಪರಸ್ಪರ ಒಬ್ಬರನ್ನೊಬ್ಬರು ದೂರತೊಡಗಿದರು. ಅಳಿದುಳಿದವರೆಲ್ಲರೂ ಭಗವಂತನಲ್ಲಿ ಮೊರೆಇಟ್ಟರು. ''ಶರಣಾಗತರನ್ನು ರಕ್ಷಿಸುವ ಶ್ರೀಹರಿಯೇ ನಮ್ಮನ್ನು ರಕ್ಷಿಸು. ನಿನ್ನ ಅಪ್ಪಣೆಯಂತೆ ನಾವು ಈ ಪರ್ವತವನ್ನು ಎತ್ತಿದ್ದು ಮೃತ್ಯುವನ್ನು ಎತ್ತಿಕೊಂಡಂತಾಗಿದೆ. ನಾವೆಲ್ಲರೂ ಸಾವಿನ ದವಡೆಯಲ್ಲಿದ್ದೇವೆ. ರಕ್ಷಿಸು ರಕ್ಷಿಸು.''

ದೇವತೆಗಳ ಈ ಆರ್ತ ಪ್ರಾರ್ಥನೆಯನ್ನು ಕೇಳಿ ಗರುಡಾರೂಢನಾಗಿ ಸ್ವಾಮಿ ಶ್ರೀಹರಿಯು ಅಲ್ಲಿ ಪ್ರಕಟನಾದನು. ಅಮೃತವನ್ನು ಸುರಿಸುವ ತನ್ನ ಕಟಾಕ್ಷದಿಂದ ಆ ಬೆಟ್ಟದ ಬುಡದಲ್ಲಿ, ಹೆಬ್ಬಂಡೆಗಳ ಅಡಿಯಲ್ಲಿ ಬಿದ್ದು, ಜಜ್ಜಿ ನುಜ್ಜು ಗುಜ್ಜಾದ ದೇವದಾನವರನ್ನೆಲ್ಲ ಒಮ್ಮೆ ನೋಡಿದನು. ಆ ಮಹಾಮಹತ್ತರವಾದ ಮಂದರ ಮಹೀಂಧ್ರವನ್ನು ಲೀಲಾಜಾಲವಾಗಿ ಒಂದೇ ಕೈಯಿಂದ ಎತ್ತಿ ಗರುಡನ ಬೆನ್ನ ಮೇಲೆ ಇಟ್ಟುಕೊಂಡನು. ಅವನ ದಯಾಮೃತ ಪೂರ್ಣವಾದ ದೃಷ್ಟಿಪಾತದಿಂದ ಸತ್ತವರು, ಇದ್ದವರು, ಬಿದ್ದವರು, ಎಲ್ಲರೂ ಎದ್ದು ಕುಳಿತರು ಆ ದೇವ ದಾನವರ ಬಳಗದವರು. ಆ ದೇವದಾನವರನ್ನೆಲ್ಲ ಅದೇ ಶೈಲ ಶಿಲಾಫಲಕಗಳ ಮೇಲೆ, ಶಿಖರ ಶ್ರೇಣಿಗಳ ಮೇಲಿನ ಬೆಟ್ಟದ ಬೆನ್ನಿನ ಮೇಲೆ ಕೂಡಿಸಿಗೊಂಡು, ಆ ದೇವದಾನವ ಸಹಿತವಾದ ಮಹಾಪರ್ವತವನ್ನು ತನ್ನ ವಾಹನವಾದ ಗರುಡ ಹಕ್ಕಿಯ ಮೇಲೆ ಇರಿಸಿಕೊಂಡು ಕ್ಷೀರಸಮುದ್ರದ ಮೆಲೆ ಹರಿ ಹಾರಿ ಬಂದನು, ಅವನೊಡನೆಯೇ ಎಲ್ಲ ದೇವತೆಗಳೂ ಕ್ಷೀರವಾರಿಧಿಯ ತೀರಕ್ಕೆ ಸಾರಿ ಬಂದರು. ಭಗವಂತನು ಆ ಹಾಲ್ಗಡಲಿನ ನಡುವೆ ಆ ದೊಡ್ಡ ಬೆಟ್ಟವನ್ನು ಕಡೆಯಲು ಅನುಕೂಲವಾಗುವಂತೆ ಇಟ್ಟು ಅಲ್ಲಿಂದ ಹೊರಟು ಹೋದನು. ಅನಂತರ ದೇವ ದೈತ್ಯರೆಲ್ಲರೂ ಕೂಡಿ ವಾಸುಕಿಯ ಬಳಿಗೆ ಹೋಗಿ ಹಗ್ಗವಾಗಲು ಪ್ರಾರ್ಥಿಸಿ ಅವನನ್ನು ಕರೆದುಕೊಂಡು ಬಂದರು. ಆ ಹೆಬ್ಬಾವನ್ನು ಹಗ್ಗವಮಾಡಿ, ಆ ಪರ್ವತದ ಮೈಗೆಲ್ಲ ಸುತ್ತಿ ಬಿಗಿದು ಆ ಹೆಗ್ಗಡಲನ್ನು ಕಡೆಯಲಾರಂಭಿಸಿದರು ದೇವ ದಾನವರು. ಆಗಣಿತರಾದ ಸುರಾಸುರರೆಲ್ಲರೂ ಕೂಡಿ ವೀರಾವೇಶದಿಂದ ಸಾಗರದ ಮಂಥನವನ್ನು ಮಾಡತೊಡಗಲು ಅತ್ಯಂತ ಭಾರ ಭೂತವಾದ ಆ ಮಹಾ ಗಿರಿಯು ಸಮುದ್ರದಲ್ಲಿ ಮುಳುಗಿಬಿಟ್ಟಿತು. ನೀರಿನ ಆಳಕ್ಕೆ ಇಳಿಯುತ್ತ ರಸಾತಳಕ್ಕೆ ಹೋಗಿ ಮುಟ್ಟಿತು, ಆಗ ದೇವತೆಗಳು ಮತ್ತೆ ಭಗವಂತನಲ್ಲಿ ಮೊರೆಯಿಟ್ಟರು. ವಿಶ್ವರಕ್ಷಕನಾದ ಶ್ರೀ ವಿಷ್ಣು ಕೂಡಲೇ ಒಂದು ಬೃಹದಾಕಾರದ ಆಮೆಯ ರೂಪವನ್ನು ಧರಿಸಿ ಬೆನ್ನಿನ ಮೇಲೆ ಆ ಬೃಹತ್ತಾದ ಬೆಟ್ಟವನ್ನು ಹೊತ್ತು ಮೇಲ್ಮಟ್ಟಕ್ಕೆ ಎತ್ತಿ ಹಿಡಿದನು. ಈ ಮಹಾಕಾರ್ಯವನ್ನು ಕಂಡು ದೇವದಾನವರೆಲ್ಲರೂ ಆ ಇಂದಿರಾಪತಿಯನ್ನು ವಂದಿಸಿದರು, ಅಭಿನಂದಿಸಿದರು. ಮತ್ತೆ ಆರಂಭವಾಯಿತು ಮಹಾ ಸಮುದ್ರದಲ್ಲಿ ಹಾಲಿನ ನಿಧಿಯಲ್ಲಿ ಮಂದರಾಚಲದ ಮುಖಾಂತರ ಮಂಥನದ ಕಾರ್ಯ. ಆದರೆ ಮತ್ತೊಂದು ಗಂಡಾಂತರ ಪ್ರಾಪ್ತವಾಯಿತು. ಕಡೆಯುವ ರಭಸಕ್ಕೆ ಆ ದೊಡ್ಡ ಗುಡ್ಡವು ಆಚೀಚೆ ಹೊಯ್ದಾಡ ತೊಡಗಿತು. ಒಂದೆಡೆಗೆ ನಿಲ್ಲದೆ ಆಚೀಚೆ ವಾಲುವ ಶೈಲದಿಂದ ಮಂಥನ ಕಾರ್ಯವು ಮಂದ ಮಂಥರವಾಗುತ್ತ ಕೊನೆಗೆ ನಿಂತೇ ಹೋಯಿತು. ಆಗ ದೇವತೆಗಳಿಂದ ಪುನಃ ಪರಮಾತ್ಮನ ಪ್ರಾರ್ಥನೆ. ಆ ಕ್ಷಣದಲ್ಲಿ ಪುಂಡರೀಕಾಕ್ಷನು ಆ ಮಂದರ ಗಿರಿಗೆ ಕೆಳಗೆ ಆಧಾರಭೂತನಾಗಿ, ಮೇಲಿನಿಂದ ಅಲುಗದಂತೆ ಆ ಮಹಾಶೈಲವನ್ನು ಗಟ್ಟಿಯಾಗಿ ಹಿಡಿದನು. ಅದರಿಂದ ಹಾಲಿನ ಕಡಲನ್ನು ಕಡೆಯುವ ಕಾರ್ಯವು ಸುಲಭವಾಗಿ ಸಾಗುವಂತಾಯ್ತು. ಅಸುರರೂ ಅಮರರೂ ಒಮ್ಮನದ ಹುಮ್ಮಸ್ಸಿನಿಂದ ಕೂಡಿ ಉತ್ಸಾಹಗೊಂಡು ವೇಗದಿಂದ ಸಾಗರದ ಮಂಥನದ ಕಾರ್ಯವನ್ನು ಮುಂದುವರಿಸಿದರು. ಕೆಳಗೆ ವಜ್ರನಿಷ್ಠುರವಾದ

ಕೂರ್ಮಪೃಷ್ಠದ ಮೇಲೆ ಪ್ರತಿಷ್ಠಿತವಾದ ಆ ದೊಡ್ಡ ಗುಡ್ಡದ ಸಮ್ಮಂಥನದ ರಭಸದಿಂದ ಹಾಲಿನ ಸಮುದ್ರವೆಲ್ಲವೂ ಅಲ್ಲೋಲ ಕಲ್ಲೋಲವಾಯಿತು. ಮಂಥನದ ವೇಗದಿಂದ ಸಮುದ್ರದ ನೀರು ಕಡೆಕಡೆದಂತೆ ಮಂಥನದ ಕಾವಿನಿಂದ ವಡವಾನಲವು ಪ್ರಕಟವಾಯಿತು. ಅದರ ಜೊತೆಗೆ ಭಯಂಕರವಾದ ಹಾಲಾಹಲದ ವಿಷದ ಉತ್ಪತ್ತಿಯಾಯಿತು, ಅದನ್ನು ಮೊದಲು ಕಂಡವನು ದೇವರ್ಷಿ ನಾರದ. ಕೂಡಲೇ ಕೂಗಿಕೊಂಡ ಆ ದೇವಮುನಿ.

**ನಾರದ** : ''ಅದಿತಿ ಕುಮಾರರೇ, ನೀವು ಇನ್ನು ಮೇಲೆ ಈ ಸಮುದ್ರ ಮಂಥನವನ್ನು ಮಾಡಬೇಡಿ. ಇದರಿಂದ ಈಗ ವಿಶ್ವಕ್ಷಯಕಾರಿಯಾದ ಉಲ್ಬಣವಾದ ವಿಷವು ಹುಟ್ಟಿಕೊಂಡಿದೆ. ಈಗ ಉತ್ಪನ್ನವಾದ ಈ ಉಲ್ಬಣ ವಿಷಾಗ್ನಿಯಿಂದ ಪ್ರಪಂಚವನ್ನು ರಕ್ಷಿಸಲು ಪರಮೇಶ್ವರನೇ ಸಮರ್ಥನು. ಆದುದರಿಂದ ನೀವೆಲ್ಲರೂ ಈ ಸಾಗರ ಮಂಥನವನ್ನು ನಿಲ್ಲಿಸಿ ಶಿವನನ್ನು ಪ್ರಾರ್ಥಿಸಿರಿ'' ಈ ದೇವರ್ಷಿಯ ಮಾತನ್ನು ಯಾರೂ ಕೇಳುವ ಅವಸ್ಥೆಯಲ್ಲಿರಲಿಲ್ಲ. ದೇವತೆಗಳೆಲ್ಲರೂ ಅಮೃತವನ್ನು ಪಡೆಯುವ ಉದ್ದೇಶದಿಂದ ಪ್ರೇರಿತರಾಗಿ ನಾರದರ ಮಾತನ್ನು ಕೇಳದೆ ಕಡಲನ್ನು ಕಡೆಯುವ ತಮ್ಮ ಕಾರ್ಯವನ್ನು ಭರದಿಂದ ಮುಂದುವರಿಸಿದರು. ಕಡೆಕಡೆದಂತೆ ಹಾಲಾಹಲವು ಸಂಪೂರ್ಣವಾಗಿ ಹಾಲ್ಗಡಲಿಂದ ಹೊರಬಿದ್ದು ಬಂತು. ಅದರಿಂದ ಉಲ್ಬಣವಾದ ವಿಷಜ್ವಾಲೆಯಿಂದ ಮೂರು ಲೋಕಗಳು ಸುಟ್ಟು ಬೆಂದು ಬೂದಿಯಾಗತೊಡಗಿದವು. ಪ್ರಪಂಚವನ್ನೇ ಕಬಳಿಸಹೊರಟ ಈ ಉಗ್ರ ಉಲ್ಬಣ ವಿಷವು ದೇವದಾನವರೆಲ್ಲರ ಪ್ರಾಣಾಪಹರಣಕ್ಕಾಗಿ ಎಲ್ಲ ದಿಕ್ಕುಗಳಲ್ಲಿಯೂ ಪಸರಿಸತೊಡಗಿತು. ಸುರಾಸುರರೆಲ್ಲರೂ ಪ್ರಾಣಾಂತಿಕವಾದ ಆ ಭಯಂಕರ ವಿಷವನ್ನು ಕಂಡು ಕೈಯಲ್ಲಿ ಹಿಡಿದ ಹಾವಿನ ಹಗ್ಗವನ್ನು ಅಲ್ಲಿಯೇ ಒಗೆದು ಓಡತೊಡಗಿದರು. ಸುರಶ್ರೇಷ್ಠರೆಲ್ಲರೂ ಹೆದರಿ ಹೌಹಾರಿ ನಿಂತರು. ಜಗತ್ತಿಗೆಲ್ಲ ಈ ಕಾಲಕೂಟ ವಿಷರೂಪದಿಂದ ಬಂದ ಈ ಕುತ್ತನ್ನು ಕಂಡು, ಕರುಣೆದುಂಬಿದ ಕೈಲಾಸಪತಿಯು ಆ ವಿಷವನ್ನೆಲ್ಲ ಧೈರ್ಯದಿಂದ ತಾನೇ ಪಾನ ಮಾಡಿದನು. ಮಹಾತೇಜಸ್ವಿಯಾದ ಆ ಶಿವನಿಗೆ ಆ ವಿಷವು ಯಾವುದೇ ದುಷ್ಪರಿಣಾಮವನ್ನು ಬೀರಲಿಲ್ಲ. ಹೀಗೆ ಪರಮೇಶ್ವರನು ದೊಡ್ಡ ಮನಸ್ಸು ಮಾಡಿ ವಿಷದ ಗಡ್ಡೆಯನ್ನೆಲ್ಲ ನುಂಗಿ ನಿರ್ಭಯ ನಿರಾತಂಕನಾಗಿ ನಿಂತುಕೊಂಡದ್ದರಿಂದ ಮೂರು ಲೋಕಗಳೂ ಮೃತ್ಯುವಿನ ಹಸ್ತದಿಂದ ಮುಕ್ತವಾಗಿ ಸುಖರೂಪದಿಂದ ಸುರಕ್ಷಿತವಾಗಿ ಉಳಿದವು. ಅನಂತರ ದೇವತೆಗಳು ಭಗವಾನ್ ಶ್ರೀ ವಿಷ್ಣುವಿನ ನೇತೃತ್ವದಲ್ಲಿ ಮತ್ತೆ ಸಾಗರ ಮಂಥನ ಕಾರ್ಯವನ್ನು ಪ್ರಾರಂಭಿಸಿದರು. ಮಂಥನದ ಆವೇಗಕ್ಕೆ ಸಿಲುಕಿದ ಸಮುದ್ರದ ಹೊಟ್ಟೆಯಿಂದ ಮೊಟ್ಟಮೊದಲು ಹುಟ್ಟಿಬಂದ ರತ್ನವೆಂದರೆ ಕಲಾನಿಧಿಯಾದ ಪೂರ್ಣಚಂದ್ರ, ಅಲ್ಲಿ ನಿಂತ ದೇವದಾನವರೆಲ್ಲರೂ ಪ್ರಶಾಂತ ಹಾಗೂ ನಿತಾಂತ, ಕಾಂತವಾದ ಕಾಂತಿಪುಂಜದಂತಿರುವ ಆ ಚಂದ್ರನಿಗೆ ಪ್ರಣಾಮಗೈದರು. ಮತ್ತು ದೇವತೆಗಳು ಗರ್ಗಾಚಾರ್ಯರ ಹತ್ತಿರ ಬಂದು ತಮಗಿರುವ ಚಂದ್ರಬಲವನ್ನು ವಿಚಾರಿಸಿದರು. ಆಗ ಗರ್ಗಾಚಾರ್ಯರು ಜ್ಯೋತಿರ್ಗಣಿತದಿಂದ ಹೇಳಿದರು.

**ಗರ್ಗಾಚಾರ್ಯ ಉವಾಚ :** ಸುರಸತ್ತಮರೇ, ನಿಮ್ಮ ದೆಶೆ ಈಗ ಅತ್ಯುತ್ತಮವಿದೆ. ನಿಮ್ಮ ಎಲ್ಲ ಉಚ್ಚ ಗ್ರಹಗಳು ಈಗ ಕೇಂದ್ರ ಸ್ಥಾನದಲ್ಲಿವೆ. ಚಂದ್ರನಿಗೆ ಗುರುಗ್ರಹದ ಯೋಗವಿದೆ. ಬುಧ, ಸೂರ್ಯ, ಶುಕ್ರ, ಶನಿ, ಮಂಗಳ ಮೊದಲಾದವರೆಲ್ಲರೂ ಈಗ ಚಂದ್ರನೊಡನೆ ಸಂಯುಕ್ತರಾಗಿದ್ದಾರೆ, ಈ ದೃಷ್ಟಿಯಿಂದ ಈಗ ಚಂದ್ರಬಲ ಚೆನ್ನಾಗಿದೆ. ಇದಕ್ಕೆ ಗೋಮಂತ ಮುಹೂರ್ತ ಎಂದು ಕರೆಯುತ್ತಾರೆ. ಇದು ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಗೆಲುವು ಮತ್ತು ಗೌರವ ತಂದುಕೊಡುವ ಮುಹೂರ್ತ.'' ಗರ್ಗ ಮಹಾಮುನಿಯ ಈ ಆಶ್ವಾಸನೆಯನ್ನು ಕೇಳಿ ಉತ್ಸಾಹಗೊಂಡ ದೇವತೆಗಳು ಜಯಘೋಷ ಗರ್ಜನೆಯನ್ನು ಮಾಡುತ್ತ ಕಡಲನ್ನು ಕಡೆಯತೊಡಗಿದರು. ಆಗ ದೇವಕಾರ್ಯ ಸಿದ್ಧಿಗೋಸ್ಕರ ಕಾಮಧೇನು ಎಂಬ ಹಸು ಪ್ರಕಟವಾಯಿತು. ಅದನ್ನು ಸುತ್ತುವರೆದು ಅನೇಕ ಕಪಿಲ ಗೋವುಗಳು ಬಿಳಿ ಹಸುಗಳು ಕೆಂಪು ಆಕಳಗಳು ಸಾವಿರಾರು ಹಂಡಬಂಡ ಹಸುಗಳು ಹೊರಬಂದವು. ಋಷಿಗಳು ಅವುಗಳನ್ನೆಲ್ಲ ತಮ್ಮ ಯಜ್ಞಕಾರ್ಯಕ್ಕಾಗಿ ಕೊಡಬೇಕೆಂದು ಕೇಳಿಕೊಂಡರು. ದೇವ ದೈತ್ಯರೆಲ್ಲರೂ ಭಗವಾನ್ ಶಂಕರನನ್ನು ಪ್ರಸನ್ನಗೊಳಿಸಲು ಬೇರೆ ಬೇರೆ ಗೋತ್ರಪ್ರವರದ ಋಷಿಪ್ರವರರಿಗೆ ಗೋದಾನವಿತ್ತರು. ಮುಂದೆ ಮತ್ತೆ ಆ ಮಂಥನದ ಕಾರ್ಯ ಮುಂದುವರೆಯಿತು. ಅನಂತರ ಆ ಕ್ಷೀರಸಾಗರದಿಂದ ಕಲ್ಪವೃಕ್ಷ, ಪಾರಿಜಾತ, ಚೂತ, ಸಂತಾನ ಎಂಬ ನಾಕು ಬಗೆಯ ದಿವ್ಯ ವೃಕ್ಷಗಳು ಪ್ರಾದುರ್ಭೂತವಾದವು. ಅನಂತರ ಸಂಕ್ಷಿಪ್ತ ಸೂರ್ಯ ಮಂಡಲದಂತಿರುವ ಕೌಸ್ತುಭ ರತ್ನವು ಜಗದಂಡ ಮಂಡಲವನ್ನೆಲ್ಲ ತನ್ನ ಕಿರಣ ಕಾಂತಿ ಪುಂಜದಿಂದ ಬೆಳಗುತ್ತ ಹುಟ್ಟಿಬಂದಿತು. ಅದರ ಜೊತೆಗೆ ಚಿಂತಾಮಣಿ ಎಂಬ ರತ್ನವು ಪ್ರಾದುರ್ಭೂತವಾಯಿತು. ಆಗ ಎಲ್ಲರೂ ಕೂಡಿ ಆ ಕೌಸ್ತಭರತ್ನವನ್ನು ಶ್ರೀಹರಿ ಮಾಡಿದ ಉಪಕಾರಕ್ಕಾಗಿ ಕೃತಜ್ಞತೆಯ ಕಾಣಿಕೆಯೆಂದು ಅರ್ಪಿಸಿದರು ಆ ಬಳಿಕ ಚಿಂತಾಮಣಿಯನ್ನು ಒಂದು ಬದಿಯಲ್ಲಿಟ್ಟು ಸಮುದ್ರ ಮಂಥನ ಕಾರ್ಯವನ್ನು ಮುಂದುವರಿಸಿದಾಗ ಉಚ್ಚೈಶ್ರವ ಎಂಬ ಕುದುರೆ ಉತ್ಪನ್ನವಾಯಿತು. ಅಶ್ವ ಜಾತಿಯಲ್ಲಿಯೇ ಅದೊಂದು ಅದ್ಭುತ ರತ್ನ. ಅದರ ನಂತರ ಆನೆಗಳ ಜಾತಿಯಲ್ಲಿಯೇ ಶ್ರೇಷ್ಠ ರತ್ನ ಎನಿಸಿದ ಐರಾವತವು ಹೊರಬಂದಿತು. ಅದರ ಜೊತೆಗೆ ಅಚ್ಚ ಬಿಳಿ ಬಣ್ಣದ ಪ್ರತಿ ಐರಾವತದಂತಿರುವ ಉಚ್ಚಜಾತಿಯ ಅರವತ್ತುನಾಲ್ಕು ಆನೆಗಳು ಹೊರಬಿದ್ದು ಬಂದವು. ಐರಾವತದ ಗಂಡಸ್ಥಲದಿಂದ ಮದೋದಕವು ಸುರಿಯುತ್ತಿತ್ತು. ನಾಲ್ಕು ಕೋರೆ ದಾಡೆಗಳು ಅದಕ್ಕೆ. ಅನಂತರ ಮಥ್ಯಮಾನವಾದ ಮಹೋದಧಿಯ ಗರ್ಭದಿಂದ ಆವಿರ್ಭೂತವಾದ ವಸ್ತುಗಳೆಂದರೆ, ಉನ್ಮಾದಕಾರಿಯಾದ ಮದ್ಯ, ಹುಚ್ಚು ಹಿಡಿಸುವ ಧತ್ತೂರ, ಕೆಟ್ಟ ವಾಸನೆಯಿದ್ದ ಔಷಧಿ ಗುಣವುಳ್ಳ ಬೆಳ್ಳೊಳ್ಳಿ, ಗಜ್ಜರಿ, ಕಮಲ, ಭಾಂಗ ಮೊದಲಾದವುಗಳು. ಇವೆಲ್ಲವುಗಳನ್ನೂ ಸುರಾಸುರರು ಸಮುದ್ರ ದಂಡೆಗೆ ಒಟ್ಟಿ ಮತ್ತೆ ಆ ಹೆಗ್ಗಡಲಿನ ಒಡಲನ್ನು ಕಡು ಹುಮ್ಮಸ್ಸಿನಿಂದ ಕಡೆಯತೊಡಗಿದರು. ಈ ಸಲ ಮಾತ್ರ ಸರ್ವ ಪ್ರಪಂಚದ ಅಧೀಶ್ವರಿಯಾದ ಮಹಾಲಕ್ಷ್ಮಿಯು ಪ್ರಕಟವಾದಳು. ವೇದಾಂತಿಗಳು ಅವಳನ್ನೇ ಬ್ರಹ್ಮವಿದ್ಯೆ, ಆನ್ವಿಕ್ಷಕೀ, ಪರವಿದ್ಯೆ, ಮೂಲವಿದ್ಯೆ, ವಾಣಿ, ವೇದಾಂತವಿದ್ಯೆ,

ಎಂದು ಮುಂತಾಗಿ ಕರೆಯುತ್ತಾರೆ. ಇನ್ನೂ ಹಲವಾರು ಭಕ್ತರು ಇದೇ ಸಮುದ್ರ ಕುಮಾರಿಯನ್ನು ವೃದ್ಧಿ, ಸಿದ್ಧಿ, ಆಶಾ, ಆಜ್ಞಾ, ವೈಷ್ಣವಿ, ಮಾಯಾ, ಯೋಗಮಾಯಾ ಮುಂತಾಗಿ ನಾನಾ ನಾಮದಿಂದ ಪೂಜಿಸುತ್ತಾರೆ. ಈ ಮಹಾಲಕ್ಷ್ಮಿಯೆಂದರೆ, ಸೌಂದರ್ಯದ ಅಧಿದೇವಿ. ಸೌಭಾಗ್ಯದ ಒಡತಿ. ಸಂಪತ್ತಿನ ಯಜಮಾನಿ. ಕಾಂತಿಯ ಖಣಿ. ಸುದ್ಗಣಗಳ ಮಣಿ. ಅವಳ ಅಂಗಾಂಗಗಳಲ್ಲಿ ಆಭರಣ. ಕೈಯಲ್ಲಿ ಕಂಕಣ. ಕೊರಳಲ್ಲಿ ರತ್ನಹಾರ. ಪಾದಗಳಲ್ಲಿ ಪೈಜಣ. ತಲೆಯ ಮೇಲೆ ಶ್ವೇತಛತ್ರ. ಅಕ್ಕಪಕ್ಕದಲ್ಲಿ ಬೀಸುವ ಚಾಮರ, ಮುಖದಲ್ಲಿ ಶಾಂತಿ, ಕಂಗಳಲ್ಲಿ ಕಾಂತಿ, ದೇಹದಲ್ಲಿ ದೇದೀಪ್ಯಮಾನವಾದ ದಿವ್ಯ ದೀಪ್ತಿ, ಉಕ್ಕುವ ತಾರುಣ್ಯ, ಸೂಸುವ ಲಾವಣ್ಯ, ಕಂಡವರಿಗೆಲ್ಲ ಕೈಮುಗಿಯಬೇಕೆನ್ನಿಸುವ ಸಾತ್ವಿಕ ಕಳೆ, ಆ ಜಗನ್ಮಾತೆಯು ವಾತ್ಸಲ್ಯಪೂರ್ಣವಾದ ತನ್ನ ಅಮೃತ ದೃಷ್ಟಿಯಿಂದ ಅಲ್ಲಿ ನೆರೆದ ಸುರಾಸುರ ಯಕ್ಷ ರಕ್ಷ ವಿದ್ಯಾಧರ ಕಿನ್ನರ ನರರೇ ಮೊದಲಾಗಿ ಸಮಸ್ತ ಪ್ರಾಣಿಗಳನ್ನೆಲ್ಲ ದೃಷ್ಟಿ ಕ್ಷೇಪದಿಂದ ಒಮ್ಮೆ ನೋಡಿದಳು. ತಮ್ಮ ಜನ್ಮವೇ ಧನ್ಯ ಎಂದುಕೊಂಡರು ದೇವತೆಗಳು : ನಾವೆಲ್ಲರೂ ಭಾಗ್ಯವಂತರು ಎಂದುಕೊಂಡರು ಆ ತಾಯಿಯ ಕೃಪಾಕಟಾಕ್ಷಕ್ಕೆ ಪಾತ್ರರಾದ ಮುನಿಮನುಜ ಮಾನಿನಿಯರೆಲ್ಲರೂ. ಅನಂತರ ಆ ಶ್ರೀದೇವಿಯು ಆಚೀಚೆ ನೋಡಿ ಅಲ್ಲಿಯೇ ನಿಂತುಕೊಂಡ ಭಗವಾನ್ ಮುಕುಂದನ ಕಡೆಗೆ ತನ್ನ ಕುಡಿನೋಟವನ್ನು ಬೀರಿದಳು. ಶ್ಯಾಮಸುಂದರ ಶರೀರ, ಹೊಳೆಯುವ ಕಪೋಲ, ನೀಟಾದ ಮೂಗು, ತೇಜಃಪುಂಜ ಮುಖ. ದಿವ್ಯ ಕಾಂತಿಯನ್ನು ಚಿಮ್ಮುವ ಅಂಗಾಂಗಗಳು, ವಿಶಾಲವಾದ ವಕ್ಷಸ್ಥಲ, ಅದರ ಮಧ್ಯದಲ್ಲಿ ಶ್ರೀ ವತ್ಸ ಚಿನ್ಹ, ನಾಕು ಕೈಗಳಲ್ಲಿ ಶಂಖ, ಚಕ್ರ, ಗದಾ ಪದ್ಮಗಳು. ಅನುಪಮ ಕಾಂತಿ, ಅಮಾನುಷ ಸೌಂದರ್ಯ. ಅಲೌಕಿಕ ತೇಜಸ್ಸು. ಅನನ್ಯ ಸಾಮಾನ್ಯ ವ್ಯಕ್ತಿತ್ವ, ಕ್ಷೀರ ಸಾಗರವನ್ನೇ ನಾಚಿಸುವ ಗಾಂಭೀರ್ಯ. ಅವನ ಈ ನಿಲುವು, ಚೆಲುವು, ಧೀಮಂತ ಶ್ರೀಮಂತ ವ್ಯಕ್ತಿತ್ವವನ್ನು ಕಂಡ ಮಹಾಲಕ್ಷ್ಮಿಯು ಕೌತುಕ ಪಡೆದು ಅವಾಕ್ ಆಗಿ ನಿಂತುಕೊಂಡಳು. ತಾನು ಏರಿದ ಆನೆಯನ್ನು ಮುನ್ನೂಕಿ ಕೈಯಲ್ಲಿ ವನಮಾಲೆಯನ್ನು ಹಿಡಿದು ಭಗವಂತನ ಬಳಿ ಸಾರಿದಳು. ತಂಗಾಳಿಗೆ ತೊನೆಯುವ ಬಳ್ಳಿಯಂತೆ ಬಳಕಾಡುತ್ತ ಆ ಸಿರಿದೇವಿಯು ಪರಮಪುರುಷನಾದ ಶ್ರೀ ಹರಿಯ ಕೊರಳಲ್ಲಿ ತನ್ನ ಕೈಯಲ್ಲಿದ್ದ ಆ ಅರಳು ಮಾಲೆಯನ್ನು ಹಾಕಿ ನಸುನಾಚುತ್ತ ಆ ನಾರಾಯಣನ ಎಡ ಭಾಗದಲ್ಲಿ ನಿಂತುಕೊಂಡಳು. ಆ ದಿವ್ಯ ದಂಪತಿಗಳ ದರ್ಶನದಿಂದ ಹರ್ಷಗೊಂಡ ದೇವ, ದೈತ್ಯ, ಸಿದ್ಧ, ಮುನಿ, ಮನುಜ, ವೃಂದ ವೃಂದಾರಕರೆಲ್ಲರೂ ಜಯಘೋಷ ಮಾಡಿದರು. ಗಂಧರ್ವರು ಹಾಡಿದರು ಅಪ್ಸರೆಯರು ಕುಣಿದರು. ಚಾರಣರು ಪ್ರಶಂಸಿದರು. ಕಿಂಬಹುನಾ ಅಲ್ಲಿ ನೆರೆದ ಸಮಸ್ತ ಜನರೂ ಹರ್ಷ ಪ್ರಕರ್ಷದಿಂದ ಪುಲಕಿತಗೊಂಡು ಆ ದೇವ ದೇವೋತ್ತಮನನ್ನು ಹಾಡಿ ಪಾಡಿ ಕೊಂಡಾಡಿದರು.



ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೂರನೇ ಅಧ್ಯಾಯ ಮುಗಿದುದು.

# ಅಮೃತದ ಉತ್ಪತ್ತಿ, ಮೋಹಿನಿಯ ರೂಪದಿಂದ ದೇವತೆಗಳಿಗೆ ಅಮೃತ ಪ್ರಾಶನ, ಶಿವನಿಂದ ರಾಹು ಮುಖದಿಂದ ಚಂದ್ರ ರಕ್ಷಣೆ, ರುದ್ರಾಕ್ಷಿ ಹಾಗೂ ವಿಭೂತಿಧಾರಣೆಯ ಮಹಿಮೆ

ಅಧ್ಯಾಯ - 4

**ಲೋಮಶ :** ''ಅನಂತರ, ಅದೇ ತಾನೇ ದಂಪತಿಗಳಾದ ಹರಿ ಹಾಗೂ ಶ್ರೀದೇವಿಯರನ್ನು ಆನಂದದಿಂದ ಅಭಿನಂದಿಸಿ ಹಾಗೂ ಭಕ್ತಿಯಿಂದ ಅಭಿವಂದಿಸಿ ದೇವದಾನವರು ತಮ್ಮ ಕ್ಷೀರವಾರಧಿಯ ಮಂಥನ ಕಾರ್ಯದಲ್ಲಿ ಮಗ್ನರಾದರು. ಆಗ ಆದದ್ದು ಭಗವಾನ್ ಧನ್ವಂತರಿಯ ಅವತಾರ. ಚಿರಯೌವ್ವನ, ಸ್ಥಿರ ಆರೋಗ್ಯಗಳನ್ನು ಪ್ರಪಂಚಕ್ಕೆ ಪ್ರದಾನ ಮಾಡಲು ಪ್ರಕಟನಾದ ಆ ಧನ್ವಂತರಿಯು ಧೂರ್ಜಟಿಯಂತೆ ಮೃತ್ಯುವಿನ ಮೇಲೆ ವಿಜಯವನ್ನು ಪಡೆದ ಮಹಾಪುರುಷ. ಅವನ ಎರಡೂ ಕೈಗಳಲ್ಲಿ ಅಮೃತ ತುಂಬಿದ ಎರಡು ಪೂರ್ಣ ಕಲಶಗಳಿದ್ದವು. ಅದನ್ನು ಕಂಡು ದೈತ್ಯ ಸಾರ್ವಭೌಮನಾದ ವೃಷಪರ್ವನು ಮುಂದೆ ಬಿದ್ದು ಹಾರಿಬಂದು ಧನ್ವಂತರಿಯ ಕೈಯಲ್ಲಿಯ ಎರಡೂ ಕಲಶಗಳನ್ನು ಕಸಿದುಕೊಂಡುಬಿಟ್ಟ. ದೇವತೆಗಳು ಆ ದಿವ್ಯ ಪುರುಷನ ದೇಹಕಾಂತಿಯೆಡೆಗೆ ಅಪಲಕ ನೇತ್ರಗಳಿಂದ ನೋಡುತ್ತ ಭಯಭಕ್ತಿಯಿಂದ ಕೈ ಮುಗಿಯುವಷ್ಟರಲ್ಲಿಯೇ ದೈತ್ಯವೀರರು ಎರಡೂ ಅಮೃತಕಲಶಗಳನ್ನು ಹಾರಿಸಿಕೊಂಡು ಪಾತಾಳದ ಕಡೆಗೆ ಓಟ ಕಿತ್ತರು. ಅವರ ಬೆನ್ನ ಹಿಂದೆಯೇ ದೇವತೆಗಳು ಓಡಿಬಂದರು. ದೈತ್ಯರನ್ನು ತಡೆದು ಅಡ್ಡ ನಿಂತರು. ಆಗ ಬಲಿಚಕ್ರವರ್ತಿಯು ಗಂಭೀರನಾಗಿ ನುಡಿದ. ''ಸುರ ಸಹೋದರರೇ ! ನೀವೆಲ್ಲರೂ ಸಾಗರದಿಂದ ಉದ್ಭವಿಸಿದ ಅನೇಕ ರತ್ನಗಳನ್ನು ಪಡೆದು ಕೃತಾರ್ಥರಾಗಿದ್ದೀರಿ. ನಾವು ಈಗ ಈ ಅಮೃತ ಒಂದನ್ನು ಮಾತ್ರ ತೆಗೆದುಕೊಂಡು ಹೊರಟಿದ್ದೇವೆ. ನಮಗಿಂತ ನೀವು ತೆಗೆದುಕೊಂಡ ಪದಾರ್ಥಗಳೇ ಹೆಚ್ಚು. ಆದ್ದರಿಂದ ನೀವು ಕೂಡ ಸಂತುಷ್ಟರಾಗಿ ಇಲ್ಲಿಂದ ಹೊರಟು ಹೋಗಿರಿ. ಸಮುದ್ರದಿಂದ ಉದಿಸಿದ ಉಳಿದಾವ ವಸ್ತುಗಳನ್ನೂ ನಾವು ಕೇಳುವುದಿಲ್ಲ. ಅಮೃತವನ್ನು ನೀವು ಕೇಳಬೇಡಿರಿ. ನೀವೆಲ್ಲರೂ ಈಗ ಸುಖರೂಪವಾಗಿ ಸ್ವರ್ಗಕ್ಕೆ ತೆರಳಿರಿ. ನಾವು ನೀವು ಸೋದರರು. ನಮ್ಮಲ್ಲಿ ಕಲಹ ಬೇಡ.'' ಬಲಿಚಕ್ರವರ್ತಿಯ ಈ ಬಿರುನುಡಿಯನ್ನು ಕೇಳಿ ನಿರಾಶೆಯಾಯಿತು ಆ ನಿರ್ಜರರಿಗೆಲ್ಲ. ಅಮೃತವು ದೊರಕದ್ದರಿಂದ ದುಃಖವೂ ಆಯಿತು ಅವರಿಗೆಲ್ಲ. ನಿರುಪಾಯರಾಗಿ ಅವರು ಶ್ರೀ ಹರಿಗೆ ಶರಣು ಹೋದರು. ನಡೆದ ಸಂಗತಿಯನ್ನೆಲ್ಲ ಅರುಹಿದರು. ದೇವತೆಗಳ ದೈನ್ಯ ದುರ್ದಶೆಗಳನ್ನು ಕಂಡು ಆ ದೇವದೇವೋತ್ತಮನಿಗೆ ಕರುಣೆ ಬಂದಿತು. ಅವರನ್ನೆಲ್ಲ ಸಂತೈಸುತ್ತ ಶ್ರೀಹರಿ ನುಡಿದನು.

**ಶ್ರೀಹರಿ :** 'ದೇವತೆಗಳೇ ! ಹೆದರಬೇಡಿರಿ. ನಿಮಗೆ ಅಮೃತವನ್ನು ಕುಡಿಸುವ ಭಾರ ನನ್ನದು. ನಿಮ್ಮನ್ನು ವಂಚಿಸಿ ಆ ಸುಧಾ ಕಲಶವನ್ನು ಕದ್ದೊಯ್ದ ದೈತ್ಯಾಧಮರನ್ನು ನಾನು ವಂಚಿಸಿ ಆ ಅಮೃತವನ್ನು ತರುತ್ತೇನೆ. ನಿಮ್ಮೆಲ್ಲರಿಗೂ ಉಣಿಸುತ್ತೇನೆ. ನಿಮ್ಮ

ಹೃದಯಗಳನ್ನು ತಣಿಸುತ್ತೇನೆ.'' ಶರಣು ಬಂದವರನ್ನು ಪೊರೆಯುವ ಕರುಣೆಯ ಕೈವಾರಿಯಲ್ಲವೇ ಆ ಸಿರಿಯ ದೊರೆಯಾದ ಶ್ರೀ ಹರಿ ! ಸರ್ವಸಮರ್ಥನಾದ ಆ ಭಗವಂತನು ಕೂಡಲೇ ಮೋಹಿನೀ ರೂಪವನ್ನು ತಾಳಿದನು. ಜಗನ್ಮೋಹಕವಾಗಿತ್ತು ವಿಷ್ಣುವಿನ ಆ ಹೆಣ್ಣು ರೂಪ. ಇತ್ತ ಅಮೃತವನ್ನು ತೆಗೆದುಕೊಂಡು ಹೋದ ದೈತ್ಯರಲ್ಲಿ ನಾ ಮೊದಲು ತಾ ಮೊದಲು ಎಂದು ಹೊಡೆದಾಟ ಪ್ರಾರಂಭವಾಗಿತ್ತು. ಆ ಅಮೃತ ಕಲಶಕ್ಕೆ ತಾವು ಒಬ್ಬರೇ ಸ್ವಾಮಿಯಾಗಬೇಕೆಂದೂ ಅದು ತನ್ನೊಬ್ಬನದೇ ಸ್ವತ್ತಾಗ ಬೇಕೆಂದೂ ಅವರು ತಮ್ಮ ತಮ್ಮಲ್ಲಿ ಬಡಿದಾಡತೊಡಗಿದರು. ಅವರಲ್ಲಿಯೇ ಬಲಿಷ್ಠರಾದವರು ಕನಿಷ್ಠರಾದವರನ್ನು ಹಳಿದು, ತುಳಿದು ಕಲಶವನ್ನು ಎತ್ತಿಕೊಂಡು ಓಡುತ್ತಿದ್ದರು. ಅವನಿಗಿಂತಲೂ ಬಲಿಷ್ಠನಾದವನು ಅವನನ್ನು ಹೊಡೆದು ಬಡೆದು ಆ ಅಮೃತ ಕುಂಭದ ಮಾಲೀಕನಾಗುತ್ತಿದ್ದ. ಹೀಗೆ ಆ ದೈತ್ಯ ದಳದಲ್ಲಿ ಆ ಅಮೃತ ಕಲಶದಿಂದಾಗಿ ಬಲಾಬಲ ಪರೀಕ್ಷೆಯೇ ನಡೆದಿತ್ತು. ಹೀಗೆ ಅಸುರ ಸೇನೆಯಲ್ಲಿ ಶಕ್ತಿ ಪ್ರದರ್ಶನದ ಏರಾಟ, ಅಮೃತ ಕಲಶದ ಸಲುವಾಗಿ ಪರಸ್ಪರ ಹೋರಾಟಗಳು ನಡೆದಾಗ ಜಗನ್ಮೋಹಿನಿಯಾದ ಆ ಮೋಹಿನೀದೇವಿಯು ಕಾಂತಿ ಕಿರಣಗಳ ಸರಮಾಲೆಯನ್ನೇ ಚಿಮ್ಮುತ್ತ ಅಲ್ಲಿಗೆ ಆಗಮಿಸಿದಳು. ವಿಶ್ವಮೋಹನಕಾರಿಯಾದ ಆ ಸೌಂದರ್ಯ ರಾಣಿಯನ್ನು ಕಂಡಕೂಡಲೇ ಆ ದೈತ್ಯ ದಾನವ ಧುರೀಣರೆಲ್ಲರೂ ಆಶ್ಚರ್ಯಪಟ್ಟು ನಿರ್ನಿಮೇಷ ನಯನಗಳಿಂದ ಅವಳನ್ನೇ ನೋಡುತ್ತ ನಿಂತುಕೊಂಡರು. ಅವರಾರೂ ತಮ್ಮ ಆಯುಷ್ಯದಲ್ಲಿಯೇ ಇಂತಹ ಸೌಂದರ್ಯದ ಪುತ್ಥಳಿಯನ್ನು ಕಂಡಿರಲಿಲ್ಲ. ಲಾವಣ್ಯ ಮಹಾಪೂರವೇ ಅವಳ ಅಂಗಾಂಗಗಳಲ್ಲಿ ತುಳುಕಿ ತೇರೈಸುತ್ತಿತ್ತು. ಆ ಮಾಯಾವಿನಿಯ ಮಧುರ ಮೋಹಕವಾದ ಸೌಂದರ್ಯದಿಂದ ಆಕರ್ಷಿತನಾದ ದಾನವರ ದೊರೆ ಬಲಿರಾಜನು ಬಿನ್ನಹ ಮಾಡಿಕೊಂಡನು.

**ಬಲಿಚಕ್ರವರ್ತಿ** : ''ಸುಂದರಿಯೇ ! ನೀನು ನನ್ನ ಒಂದು ಮಾತನ್ನು ನಡೆಸಿಕೊಡು. ಇದೀಗ ಈ ಉದಧಿಯಿಂದಲೇ ಉದಿಸಿ ಬಂದ ಈ ಸೊದೆ(ಅಮೃತ) ಗಾಗಿ ನಮ್ಮ ನಮ್ಮಲ್ಲಿ ವಾದ ವಿವಾದ ಹೋರಾಟ ನಡೆದಿದೆ. ಆದುದರಿಂದ ಈಗ ಇದನ್ನು ನಿನ್ನ ಕೈಯಲ್ಲಿ ಕೊಡುತ್ತೇವೆ. ನೀನು ಈಗ ಇದೆಲ್ಲವನ್ನೂ ನಮ್ಮೆಲ್ಲರಿಗೆ ಹಂಚಿಕೊಡು.

**ಮೋಹಿನಿ** : ''ತಲೆ ಇದ್ದವರು ತರುಣಿಯನ್ನು ನಂಬಬಾರದು. ಬುದ್ಧಿ ಯಿದ್ದವರು ಭಾಮಿನಿಯರ ಮೇಲೆ ವಿಶ್ವಾಸವಿರಿಸಬಾರದು. ಹೆಣ್ಣು ಎಂದರೆ ನೀವು ಏನೆಂದು ತಿಳಿದಿರುವಿರಿ ? ಸುಳ್ಳು, ಸಾಹಸ, ಸ್ವಾರ್ಥ, ಕ್ರೌರ್ಯ, ಲೋಭ, ಮಾಯೆ, ಮಾಲಿನ್ಯ ಇವುಗಳ ಮೂರ್ತಿಯೇ ಸ್ತ್ರೀ. ಅವರ ಪ್ರೇಮವೆಲ್ಲವೂ ಪ್ರದರ್ಶನ. ಅವರ ಪ್ರೀತಿ, ಅಂತಃಕರಣ, ಕರುಣೆ ಎಲ್ಲವೂ ತೋರಿಕೆಗೆ ಮಾತ್ರ. ಪಕ್ಷಿಗಳಲ್ಲಿ ಕಾಗೆ, ಪಶುಗಳಲ್ಲಿ ನರಿ ಹೇಗೆ ಧೂರ್ತವಾಗಿದೆಯೋ ಹಾಗೆ ಮಾನವರಲ್ಲಿ ಸ್ತ್ರೀಯರು ಧೂರ್ತರು, ಸ್ವಾರ್ಥಪರರು, ಆಗಿರುತ್ತಾರೆ. ಪುರುಷರಲ್ಲಿ ಇದನ್ನು ಅರಿತವರೇ

ಬುದ್ಧಿವಂತರು. ಅಂದಬಳಿಕ ನೀವು ನನ್ನ ಮೇಲೆ ಮೈತ್ರೀಭಾವದಿಂದ ವಿಶ್ವಾಸವನ್ನು ಹೇಗೆ ಇಡುವಿರಿ? ನೀವು ಯಾರು ಎಂದು ನಾನು ಅರಿಯೆ; ನಾನು ಯಾರು ಎಂದು ನೀವು ತಿಳಿದಿಲ್ಲ. ಆದ್ದರಿಂದ ನೀವು ಇನ್ನೊಮ್ಮೆ ವಿಚಾರ ಮಾಡಿ ಯೋಚಿಸಿ ನೋಡಿರಿ. ಕರ್ತವ್ಯ ಅಕರ್ತವ್ಯಗಳನ್ನು ತಿಳಿದು ನೋಡುವಲ್ಲಿ ನೀವು ನಿಪುಣರೇ ಇರುವಿರಿ. ಆದುದರಿಂದ ನೀವೆಲ್ಲರೂ ಕೂಡಿ ನನಗೆ ಈ ನಿಮ್ಮ ಅಮೃತ ಕಲಶವನ್ನು ಒಪ್ಪಿಸುವದಕ್ಕಿಂತಲೂ ಮೊದಲು ಚೆನ್ನಾಗಿ ಮತ್ತೊಮ್ಮೆ ವಿಚಾರ ಮಾಡಿರಿ. ಅನಂತರ ನನಗೆ ಒಪ್ಪಿಸಿರಿ.

**ಬಲಿರಾಜ :** ''ದೇವಿ ! ನಿನ್ನಂಥ ಸುಂದರ ಯುವತಿಯರು ಎಂದೂ ವಿಶ್ವಾಸಘಾತ ಮಾಡಲಾರರು ಎಂಬ ಭರವಸೆ ನಮಗೆ ಇದೆ. ಆದುದರಿಂದ ಈ ಅಮೃತ ಕಲಶವನ್ನು ನೀನು ತೆಗೆದುಕೋ. ನಮ್ಮೆಲ್ಲ ಈ ದೈತ್ಯ ದಾನವರಿಗೆ ಸರಿಯಾಗಿ ಹಂಚು. ನೀನು ಯಾರಿಗೆ ಎಷ್ಟು ಅಮೃತವನ್ನು ನೀಡುವೆಯೋ ಅಷ್ಟನ್ನೇ ನಾವು ಸಂತೋಷದಿಂದ ಸ್ವೀಕರಿಸಲು ಸಿದ್ಧರಿದ್ದೇವೆ. ನಿನ್ನ ಅಮೃತಹಸ್ತದಿಂದಲೇ ಅಮೃತ ಪ್ರಾಶನ ಮಾಡಬೇಕೆಂದು ನಾವು ಉತ್ಸುಕರಾಗಿದ್ದೇವೆ. ಈ ಮಾತನ್ನು ನಾವು ನಿನಗೆ ಪ್ರಾಮಾಣಿಕವಾಗಿ ಹೇಳುತ್ತಿದ್ದೇವೆ. ಈಗ ನಾನು ಹೇಳಿದ್ದೆಲ್ಲವೂ ಸತ್ಯ. ಸತ್ಯ''.... ಬಲಿಚಕ್ರವರ್ತಿಯ ಈ ಮಾತನ್ನು ಕೇಳಿ ಮೋಹಿನಿಯು ಪ್ರಸನ್ನಳಾದಳು. ಅವಳಿಗೆ ತನ್ನ ಲೌಕಿಕಜ್ಞಾನವನ್ನು ತೋರ್ಪಡಿಸಬೇಕಾಗಿತ್ತು ಆ ದೈತ್ಯರ ಎದುರು. ಅವಳು ಮುಗ್ಧ ಮಧುರವಾದ ಒಂದು ಮಂದಹಾಸವನ್ನು ತನ್ನ ತುಟಿ ತಟದಲ್ಲಿ ತೇಲಿಸಿ ಹೇಳಿದಳು.

**ಮೋಹಿನಿ :** ''ಅಸುರ ಶ್ರೇಷ್ಠರೇ, ಯಾವುದೊ ಒಂದು ಕಣ್ಣಿಗೆ ಕಾಣದ ದೈವೀ ಶಕ್ತಿಯು ನಿಮ್ಮ ಬೆನ್ನ ಹಿಂದೆ ನಿಂತಿದೆ. ಆದುದರಿಂದಲೇ ನೀವೀಗ ಕೈ ಹಾಕಿದ ಮಹಾಕಾರ್ಯದಲ್ಲಿ ಸಾಫಲ್ಯದ ಶಿಖರವನ್ನು ಕಂಡಿರುವಿರಿ. ನಿಮ್ಮ ಸುದೀರ್ಘ ಪ್ರಯಾಸದ ಫಲವನ್ನು ಬೇಗನೇ ಕಾಣಲಿರುವಿರಿ. ಈಗ ನಿಮ್ಮ ಮಹಾ ಪ್ರಯತ್ನದ ಫಲವಾಗಿ ಈ ಅಮೃತವನ್ನು ಅಧಿವಾಸ ಮಾಡಿರಿ. ಎಂದರೆ ನಿಮ್ಮ ಮನೆಯ ಕೋಣೆಯೊಳಗೆ ಸುರಕ್ಷಿತವಾಗಿ ಇಡಿರಿ, ಇಂದು ಒಂದು ದಿನ ನೀವೆಲ್ಲರೂ ವ್ರತ ನಿಷ್ಠರಾಗಿ ಉಳಿಯಿರಿ, ನಾಳೆ ಪ್ರಾತಃಕಾಲದಲ್ಲಿ ಎಲ್ಲರೂ ಅಮೃತ ಪಾರಣೆಯನ್ನು ಮಾಡಿರಿ. ಇಂದು ನೀವೆಲ್ಲರೂ ಉಪವಾಸ ವ್ರತವನ್ನು ಆಚರಿಸಿದರೆ, ನಾಳೆ ನಿಮಗೆ ಅಮೃತ ಪ್ರಾಶನದ ಅರ್ಹತೆ ಬರುವುದು. ಬುದ್ಧಿವಂತರು ತಾವು ನ್ಯಾಯದಿಂದ ಗಳಿಸಿದ ಹಣದ ಹತ್ತನೇ ಭಾಗವನ್ನು ಭಗವಂತನ ಪ್ರಸಾದವನ್ನು ಪಡೆಯುವುದಕ್ಕಾಗಿ ಯಾವುದಾದರೂ ಸತ್ಕಾರ್ಯಕ್ಕಾಗಿ ವಿನಿಯೋಗಿಸಬೇಕು.

**ನ್ಯಾಯೋಪಾರ್ಜಿತವಿತ್ತಸ್ಯ ದಶಮಾಂಶೇನ ಧೀಮತಾ ।**
**ಕರ್ತವ್ಯೋ ವಿನಿಯೋಗಶ್ಚ ಈಶ ಪ್ರೀತ್ಯರ್ಥಮೇವ ಹಿ ॥**

ದೈತ್ಯರೆಲ್ಲರೂ ಮೋಹಿನಿಯ ಹಾವಭಾವ ಬಿಂಕ ಬಿನ್ನಾಣ ಮಂದಹಾಸಗಳಿಂದ ಮರುಳಾಗಿ ಬಿಟ್ಟಿದ್ದರು. ಅವಳು ಹೇಳಿದ್ದಕ್ಕೆಲ್ಲ 'ಹೂಂ' ಎಂದರು. ಅಂದು ಎಲ್ಲರೂ

ಉಪವಾಸಗೈದರು. ರಾತ್ರಿಯೆಲ್ಲ ಜಾಗರಣ. ಉಷಃಕಾಲದಲ್ಲಿ ಎದ್ದು ಸರ್ವ ಅಸುರರು ಪ್ರಾತಃಸ್ನಾನ ದೇವಪೂಜೆ, ಆಹ್ನಿಕ ಎಲ್ಲ ಮುಗಿಸಿ ಬಲಿರಾಜನೇ ಮೊದಲಾದವರೆಲ್ಲರೂ ಕೂಡಿ ಅಮೃತ ಪಾನಕ್ಕಾಗಿ ಉತ್ಸುಕರಾಗಿ ಬಂದರು. ಬೇರೆ ಬೇರೆ ಪಂಕ್ತಿ ಮಾಡಿ ಸಾಲು ಸಾಲಾಗಿ ಕುಳಿತುಕೊಂಡರು. ಬಲಿ, ವೃಷಪರ್ವ, ನಮುಚಿ, ಶಂಖ, ದುರ್ಮುಖ ಸುದಂಷ್ಟ್ರ, ಸಲ್ಹಾದ, ಕಾಲನೇಮಿ, ವಿಭೀಷಣ, ಇಲ್ವಲ, ಕುಂಭ ನಿಕುಂಭ, ಪ್ರಘಸ, ಸುಂದ, ಉಪಸುಂದ, ನಿಶುಂಭ, ಶುಂಭ ಮುಂತಾದ ದೈತ್ಯ ಧುರಂಧರರೆಲ್ಲರೂ ಪಂಕ್ತಿಬದ್ಧರಾಗಿ, ಅಮೃತಪಾನ ಸಿದ್ಧರಾಗಿ ಉತ್ಸುಕತೆಯಿಂದ ಮೋಹಿನಿಯ ಮುಖದ ಕಡೆ ನೋಡುತ್ತ ಕುಳಿತುಕೊಂಡರು. ಕೈಯಲ್ಲಿ ಅಮೃತ ಕಲಶವನ್ನು ಹಿಡಿದುಕೊಂಡು ಶ್ರೇಣಿಬದ್ಧರಾಗಿ ಕುಳಿತ ದೈತ್ಯ ಪಂಕ್ತಿಗಳಲ್ಲಿ ಮಿಂಚಿನಂತೆ ಸುಳಿದಾಡುವ ಆ ಮೋಹಿನಿಯು ತನ್ನ ಸೌಂದರ್ಯದ ಅತಿಶಯದಿಂದ ಇನ್ನೂ ಮೋಹಕವಾಗಿ ಕಾಣುತ್ತಿದ್ದಳು. ಇದೇ ಸಮಯದಲ್ಲಿ ಎಲ್ಲ ದೇವತೆಗಳೂ ಕೈಯಲ್ಲಿ ಪಾನ ಪಾತ್ರೆಗಳನ್ನು ಹಿಡಿದು ಅಲ್ಲಿ ನುಗ್ಗಿದರು. ಅವರನ್ನು ಕಂಡು ಮೋಹಿನಿಯು ಅಸುರರಿಗೆ ಹೇಳಿದಳು.

**ಮೋಹಿನಿ :** ಈ ದೇವತೆಗಳು ನಿಮ್ಮ ಅತಿಥಿಗಳೆಂದು ಭಾವಿಸಿರಿ. ಇವರು ಧರ್ಮಾತ್ಮರು, ಯಥಾಶಕ್ತಿ ಇವರಿಗೆ ದಾನ ನೀಡುವುದು ನಿಮ್ಮ ಕರ್ತವ್ಯ.

**ಪರೇಷಾಮುಪಕಾರಂ ಚ ಯೇ ಕುರ್ವಂತಿ ಸ್ವಶಕ್ತಿತಃ ।**
**ಧನ್ಯಾಸ್ತ ಏವ ವಿಜ್ಞೇಯಾಃ ಪವಿತ್ರಾ ಲೋಕ ಪಾಲಕಾಃ ॥**

"ತಮ್ಮ ಶಕ್ತ್ಯಾನುಸಾರ ಯಾರು ಹೆರವರಿಗೆ ಉಪಕಾರಗೈಯುವರೋ ಅವರೇ ಧನ್ಯರು. ನಿಜವಾದ ಲೋಕ ಪಾಲಕರೆಂದರೆ ಅವರೇ. ಅವರನ್ನು ಪವಿತ್ರಾತ್ಮರೆಂದೇ ತಿಳಿಯಬೇಕು." ಮೋಹಿನಿಯ ಈ ಮಾತಿಗೆ ಅಸುರರೆಲ್ಲರೂ ಸಮ್ಮತಿ ನೀಡಿದರು. ಇಂದ್ರಾದಿ ದೇವತೆಗಳನ್ನು ಅಮೃತಪಾನಕ್ಕಾಗಿ ಆಹ್ವಾನಿಸಿದರು. ಎಲ್ಲ ದೇವತೆಗಳೂ ಸುಧಾಪಾನಕ್ಕಾಗಿ ಅಲ್ಲಿ ಬಂದು ಕುಳಿತರು. ಆಗ ಮೋಹಿನಿಗೆ ದೇವತೆಗಳ ಹಿತವನ್ನು ಸಾಧಿಸಬೇಕು ಎಂಬ ವಿಚಾರ ಹೊಳೆಯಿತು. ಅವಳು ಮೋಹಕವಾಗಿ ನಗೆ ಬೀರಿ ದೈತ್ಯರಿಗೆ ಹೇಳಿದಳು.

**"ಆದಾವಭ್ಯಾಗತಾಃ ಪೂಜ್ಯಾ ಇತಿ ವೈ ವೈದಿಕೀ ಶ್ರುತಿಃ ।"**

ಮೊದಲು ಆಗಮಿಸಿದ ಅತಿಥಿಗಳನ್ನು ಪ್ರಥಮತಃ ಪೂಜಿಸಬೇಕು. ಎಂದು ವೇದಗಳು ಹೇಳುತ್ತವೆ. ಆದ್ದರಿಂದ ನೀವೇ ಹೇಳಿರಿ. ನಾನು ಅಮೃತವನ್ನು ಯಾರಿಗೆ ಮೊದಲು ಬಡಿಸಬೇಕು. ಅವರಿಗೋ? ನಿಮಗೋ? ನೀವು ಹೇಳಿದಂತೆ ಮಾಡುವೆ.

**ಬಲಿ :** "ದೇವಿ, ನಿನಗೆ ಹೇಗೆ ಯೋಗ್ಯವೆನಿಸುವದೋ ಹಾಗೆ ಮಾಡು. ನೀನು ಮಾಡಿದ್ದೇ ಮಾನ್ಯ. ನೀಡಿದ್ದೇ ಅಮೃತ." ಪುಣ್ಯಾತ್ಮನಾದ ಬಲಿ ರಾಜನು ಇಂತು ಸಮ್ಮತಿ ಇತ್ತ ಬಳಿಕ ಮೋಹಿನೀ ದೇವಿಯು ಬಡಿಸಲಿಕ್ಕಾಗಿ ತನ್ನ ಕೈಯಿಂದ ಅಮೃತ ಕಲಶವನ್ನು ಎತ್ತಿಕೊಂಡಳು. ಲಗುಬಗೆಯಿಂದ ದೇವತೆಗಳಿಗೆ ಅಮೃತವನ್ನು ನೀಡಲು

ಪ್ರಾರಂಭಿಸಿದಳು. ತನ್ನ ಮಂದಹಾಸ ಸುಂದರವಾದ ದಯಾಮೃತ ರಸವನ್ನು ದೇವತೆಗಳ ಕಡೆ ಹರಿಸುತ್ತ ಅಮೃತವನ್ನು ಸುರರ ಪಾನ ಪಾತ್ರೆಯಲ್ಲಿ ತುಂಬತೊಡಗಿದಳು. ಅವಳು ಹನಿಸಿದ ಸುಧಾಮೃತವನ್ನು ದೇವತೆಗಳು, ಲೋಕ ಪಾಲಕರು, ಗಂಧರ್ವರು, ಯಕ್ಷರು, ಅಪ್ಸರೆಯರು ಯಥೇಷ್ಟವಾಗಿ ಕುಡಿದರು. ರಾಹು ಎಂಬ ದೈತ್ಯ ದೂರದಿಂದಲೇ ಸುರಸಮಾಜದ ಸುಧಾಪಾನ ಸಮಾರಂಭವನ್ನು ನೋಡಿದ. ಯಾರಿಗೂ ಗೊತ್ತಾಗದಂತೆ ಮೆಲ್ಲನೆ ತೆವಳುತ್ತ ದೇವತೆಗಳ ಪಂಕ್ತಿಯಲ್ಲಿ ಹೋಗಿ ಕುಳಿತ, ಅವನು ಅಮೃತವನ್ನು ಗುಟ್ಕಾಗಿ ಕುಡಿಯುವಷ್ಟರಲ್ಲಿ ಸೂರ್ಯಚಂದ್ರರು ವಿಷ್ಣುವಿಗೆ ಇದರ ಸೂಚನೆ ಕೊಟ್ಟರು. ಕೂಡಲೇ ಭಗವಂತನು ರಾಹುವಿನ ತಲೆಯನ್ನು ಕತ್ತರಿಸಿದನು. ಕಡಿದ ತಲೆ ಮುಗಿಲಿಗೆ ಸಿಡಿಯಿತು. ನೆಲದಲ್ಲಿದ್ದ ದಡ ಕೆಳಗೆ ಉಳಿಯಿತು.

ಕೂಡಲೇ ಕೋಟಿ ಕೋಟಿ ದೈತ್ಯರು ಗರ್ಜಿಸುತ್ತ ದೇವತೆಗಳ ಮೇಲೆ ಏರಿ ಹೋದರು. ಮಹಾಕಾಯನಾದ ರಾಹು ಇಂದ್ರನನ್ನು ನುಂಗಬೇಕೆಂದು ಬಂದನು. ಕೈಯಲ್ಲಿ ಸಿಕ್ಕ ದೇವತೆಗಳನ್ನೆಲ್ಲ ಕೊಂದು ತಿಂದು ಹಾಕಬೇಕೆಂದು ಅಸುರರು ಆ ದೇವತೆಗಳ ಗುಂಪಿನಲ್ಲಿಯೇ ಹೊಕ್ಕು ಹಿಂಸೆಯನ್ನು ಮಾಡತೊಡಗಿದರು. ಇದನ್ನು ಕಂಡು ಭಯಭ್ರಾಂತರಾದ ದೇವತೆಗಳು ಚಂದ್ರನನ್ನು ಮುಂದೆ ಹಾಕಿಕೊಂಡು ನೆಲ ಬಿಟ್ಟು ಓಡಿದರು ನಾಕ ಲೋಕದೆಡೆಗೆ. ಅವರು ಸ್ವರ್ಗ ಸೇರುವಷ್ಟರಲ್ಲಿ ರಾಹುವೂ ಅಲ್ಲಿಗೆ ಹಾರಿ ಬಂದ. ಎದುರು ನಿಂತ ಚಂದ್ರನನ್ನು ನುಂಗಿ ನೀರು ಕುಡಿಯಬೇಕೆಂದು ಆ ವಂಚಕ ಹೊಂಚು ಹಾಕಿದ್ದ. ಭೀತಿಯಿಂದ ವ್ಯಾಕುಲಗೊಂಡ ಚಂದ್ರನು ಶೂಲಧಾರಿ ಶಿವನಿಗೆ ಶರಣುಹೋದ. ''ಪಾರ್ವತೀಪತಿಯೇ, ಪಾರುಮಾಡು. ನನ್ನನ್ನು ಈ ಸಂಕಟದಿಂದ ಮುಕ್ತಿಗೊಳಿಸು, ನಾನು ನಿನ್ನಲ್ಲಿ ಶರಣು ಬಂದಿದ್ದೇನೆ. ನನ್ನನ್ನು ರಕ್ಷಿಸು ರಕ್ಷಿಸು.'' ಎಂದು ಮಹೇಶನಲ್ಲಿ ಮೊರೆಯಿಟ್ಟ. ಚಂದ್ರನ ಈ ಪ್ರಾರ್ಥನೆಗೆ ಪ್ರಸನ್ನವಾಗಿ ತಕ್ಷಣವೇ ಪ್ರತ್ಯಕ್ಷನಾದ ಸದಾಶಿವ. 'ಹೆದರಬೇಡ' ಎಂದು ಚಂದ್ರನಿಗೆ ಅಭಯದಾನ ಮಾಡಿ ಸಂಭ್ರಾಂತನಾದ ಆ ನಿಶಾಕರನನ್ನು ತನ್ನ ಜಟಾ ಜೂಟದಲ್ಲಿ ಇಟ್ಟುಕೊಂಡ. ಅಂದಿನಿಂದ ಚಂದ್ರನು ಶಿವನ ಮಸ್ತಕದಲ್ಲಿ ಕಮಲಹೂವಿನಂತೆ ಹೊಳೆಯುತ್ತಿದ್ದಾನೆ. ಅಷ್ಟರಲ್ಲಿ ರಾಹುವೂ ಅಲ್ಲಿಗೆ ಧಾವಿಸಿ ಬಂದ. ಶಿವನಿಗೆ ನಮಸ್ಕರಿಸಿ ಸ್ತೋತ್ರ ಮಾಡಿದ ''ಸ್ವಾಮಿ, ನಿಮಗೆ ! ನನ್ನ ಅನಂತ ವಂದನೆ. ಈ ಚಂದ್ರ ಈಗ ನನ್ನ ಲಕ್ಷ್ಯ. ಅನಂತರ ಭಕ್ಷ್ಯ. ಅವನು ಈಗ ನಿಮ್ಮ ಬೆನ್ನು ಬಿದ್ದಿದ್ದಾನೆ. ತಲೆ ಏರಿದ್ದಾನೆ. ಅವನನ್ನು ನನಗೆ ಕೊಟ್ಟುಬಿಡಿರಿ.''

**ಶಂಕರ :** ''ನಾನು ನಿಷ್ಪಕ್ಷಪಾತಿ, ಸರ್ವರಿಗೂ ಆಶ್ರಯ. ನನಗೆ ದೇವತೆಗಳೂ ಅಷ್ಟೆ, ದೈತ್ಯರೂ ಅಷ್ಟೆ, ನಾನು ಯಾರನ್ನೂ ಬೇಡುವುದೂ ಇಲ್ಲ; ಕೊಡುವುದೂ ಇಲ್ಲ.'' ಇದನ್ನು ಕೇಳಿ ''ಹಾಗಾದರೆ ನಾನು ನಿನ್ನನ್ನು ಆಶ್ರಯಿಸುತ್ತೇನೆ'' ಎಂದು ಹೇಳಿ ಶಿವನ ಜಟಾಮಂಡಲದಲ್ಲಿ ಏರಿ ಕುಳಿತ ಚಂದ್ರನಿಗೆ ಗಾಬರಿ. 'ಈ ಪೀಡೆ, ಧೂರ್ಜಟಿಯ ಜಟಾಜೂಟದವರೆಗೂ ಬಂದಿತಲ್ಲ ! ಇನ್ನು ನನ್ನ ಗತಿ ಏನು?' ಎಂಬ ಚಿಂತೆಯಿಂದ ಭಯಭ್ರಾಂತನಾಗಿ ಚಂದ್ರನು ಕರಗಿ ಹೋದ, ಮೈ ಬೆವರಿತು. ಸುಧಾ

ಶರೀರಿಯಾದ ಅವನ ಮೈಯಿಂದ ಅಮೃತವೇ ಬೆವರಿನ ರೂಪದಿಂದ ಸುರಿಯತೊಡಗಿತು. ಆ ಅಮೃತದ ಸಂಪರ್ಕದಿಂದ ರಾಹುವಿಗೆ ಅನೇಕ ತಲೆಗಳು ಚಿಗುರಿನಿಂತವು. ಅದನ್ನು ನೋಡಿದ ಪಾರ್ವತೀಪತಿ. ದೇವ ಕಾರ್ಯ ಸಿದ್ಧಿಗಾಗಿ ಆ ರಾಹು ರೂಪವಾದ ರುಂಡಗಳನ್ನೆಲ್ಲ ಪೋಣಿಸಿ ಮುಂಡಮಾಲೆ ಮಾಡಿಕೊಂಡು ಮಂಡನ ರೂಪವಾಗಿ ತನ್ನ ಕೊರಳಲ್ಲಿ ಧರಿಸಿಬಿಟ್ಟ ಆ ಶ್ರೀಕಂಠ. ಶಿವನ ಶಿರಸ್ಸಿನ ಮೇಲೆ ಸ್ವಯಂ ಹೂಗಳನ್ನೂ ಏರಿಸಿದರೂ ಮತ್ತೊಬ್ಬರು ಮಾಡಿದ ಪುಷ್ಪಾರ್ಚನೆಯನ್ನು ನೋಡಿದರೂ ಅವನಿಗೆ ಸದ್ಗತಿ ಕಟ್ಟಿಟ್ಟದ್ದು. ಕಾರ್ತೀಕ ಮಾಸದಲ್ಲಿ ರಾತ್ರಿ ಸಮಯದಲ್ಲಿ ಶಿವನ ಸನ್ನಿಧಿಯಲ್ಲಿ ದೀಪಮಾಲೆಯನ್ನು ಹಚ್ಚುವವರು ಯುಗ ಯುಗಗಳ ವರೆಗೆ ದೇದೀಪ್ಯಮಾನರಾಗಿ ಬಾಳುವರು. ತೀರ್ಥಗಳಲ್ಲಿ ಪರ್ವಕಾಲದಲ್ಲಿ ರುದ್ರಾಕ್ಷಿ ಧಾರಣೆ ಮಾಡಿ ಶಿವ ಪೂಜೆ ಮಾಡಿದವರಿಗೆ ಅಕ್ಷಯ ಪುಣ್ಯ. ಅನಂತ ಫಲ. ಬ್ರಾಹ್ಮಣರೇ ! ಸ್ವಯಂ ಶಿವನೇ ರುದ್ರಾಕ್ಷಿಯ ವರ್ಣನೆ ಮಾಡಿದ್ದಾನೆ. ಅಂದ ಬಳಿಕ ಅದರ ಮಹಿಮೆ ಎಷ್ಟಿರಬೇಡ ? ಈ ರುದ್ರಾಕ್ಷಿಗಳು ಏಕ ಮುಖದಿಂದ ಹದಿನಾಲ್ಕು ಮುಖದವರೆಗೆ ಇರುವವು. ಅವುಗಳಲ್ಲಿ ಏಕ ಮುಖ ರುದ್ರಾಕ್ಷಿಯು ಮನುಷ್ಯರು ಧರಿಸಲು ಯೋಗ್ಯವಾಗಿದೆ. ಏಕಮುಖ ರುದ್ರಾಕ್ಷಿ ಧಾರಣೆ ಮಾಡಿದವನು ಜೀವನ್ಮುಕ್ತನೆಂದೇ ತಿಳಿಯಬೇಕು. ಪಂಚಮುಖಿ ರುದ್ರಾಕ್ಷಿ ಧಾರಣೆಯಿಂದ ರುದ್ರಲೋಕ, ರುದ್ರಾಕ್ಷಿಧಾರಣೆ ಮಾಡಿ ಆಚರಿಸಿದ ಸ್ನಾನ ಜಪ ತಪ ದೇವ ಪೂಜೆ ಮುಂತಾದ ಶುಭ ಕಾರ್ಯಗಳೆಲ್ಲವೂ ಅನಂತ ಫಲಪ್ರದ.

ಮಂತ್ರಪೂತವಾದ ವಿಭೂತಿಯಿಂದ ಲಲಾಟದಲ್ಲಿ ತ್ರಿಪುಂಡ್ರ ಧಾರಣ ಮಾಡಿದರೆ, ರುದ್ರಲೋಕ ಪ್ರಾಪ್ತಿ. ರುದ್ರಸ್ವರೂಪ ಲಾಭ. ವಿಭೂತಿ ಮಾಡುವ ಬಗೆಯನ್ನು ಕೇಳಿರಿ. ಕಪಿಲಾ ಗೋವಿನ ಗೊಬ್ಬರವನ್ನು ನೆಲದ ಮೇಲೆ ಬೀಳುವುದಕ್ಕಿಂತ ಮೊದಲೇ ಕೈಯಲ್ಲಿ ಹಿಡಿದು ಅದನ್ನು ಒಣಗಿಸಿ ಸುಟ್ಟು, ಆ ಬೂದಿಯಿಂದಲೇ ವಿಭೂತಿಯನ್ನು ತಯಾರಿಸಬೇಕು. ಇಂಥ ಭಸ್ಮವು ಸರ್ವಪಾಪ ಪರಿಹಾರಕ. ಮೊದಲು ಹಣೆಯ ಮೇಲೆ ಅಂಗುಷ್ಠದಿಂದ ಒಂದು ಅಡ್ಡ ಗೆರೆಯನ್ನು ಎಳೆಯಬೇಕು. ಅನಂತರ ಅನಾಮಿಕಾ ಹಾಗೂ ಕಿರುಬೆರಳಿನಿಂದ ಮತ್ತೆ ಎರಡು ರೇಖೆಗಳನ್ನು ಎಳೆಯಬೇಕು. ಹೀಗೆ ಲಲಾಟದಲ್ಲಿ ಮೂರು ಸಮಾನ ಅಡ್ಡ ರೇಖೆಗಳನ್ನು ಎಲ್ಲರಿಗೂ ಕಾಣುವಂತೆ ಲೇಪಿಸಬೇಕು. ಭಸ್ಮ ರೇಖಾ ವಿಭೂಷಿತ ಶಿವಭಕ್ತನನ್ನು ಶಿವನ ಸಮಾನನೆಂದೇ ತಿಳಿಯಬೇಕು. ಅವನ ದರ್ಶನ ಮಾತ್ರದಿಂದಲೇ ಸರ್ವಪಾಪಗಳ ಪರಿಹಾರವಾಗುವುದು.



**ಶ್ರೀ ಸ್ಕಂದ ಮಹಾ ಪುರಾಣದಲ್ಲಿ ನಾಲ್ಕನೇ ಅಧ್ಯಾಯ ಮುಗಿದುದು**

# ಇಂದ್ರನ ಗೆಲುವು, ವಿಶ್ವರೂಪನ ಸಂಹಾರ, ಸ್ವರ್ಗದಿಂದ ನಹುಷರಾಜನ ಅಧಃಪಾತ, ಬ್ರಹ್ಮಹತ್ಯೆಯಿಂದ ಮುಕ್ತಿ ಮತ್ತು ಪುನಃ ರಾಜ್ಯ ಪ್ರಾಪ್ತಿ

ಅಧ್ಯಾಯ - 5

**ಲೋಮಶ :** ''ದೇವಾಸುರರಲ್ಲಿ ನಡೆದ ಆ ಘನಘೋರ ಸಂಗ್ರಾಮದಲ್ಲಿ ಇಂದ್ರ ಕೊಂದ ದೈತ್ಯರಿಗೆ ಲೆಕ್ಕವಿಲ್ಲ. ವಜ್ರಿಯ ಪರಾಕ್ರಮ ಅತ್ಯದ್ಭುತ. ಅವಿಚ್ಛಿನ್ನವಾಗಿ ನಡೆಯಿತು ಸುರಪತಿಯ ಈ ಅಸುರ ಸಂಹಾರ ಕಾರ್ಯ. ಅವನ ಈ ದೈತ್ಯ ಹತ್ಯಾ ಕೃತ್ಯವನ್ನು ತಡೆಯಲಿಕ್ಕಾಗಿ ನಾರದರು ಅಲ್ಲಿಗೆ ಬಂದರು ಮತ್ತು ಹೇಳಿದರು.

**ನಾರದ :** ''ದೇವರಾಜ ! ದಾನವ ಸೇನೆಯಲ್ಲಿ ವೀರರನ್ನೆಲ್ಲ ನೀನು ವಧೆ ಮಾಡಿದ್ದಾಗಿದೆ. ಈಗ ಉಳಿದವರೆಲ್ಲರೂ ಸಾಮಾನ್ಯರು. ಮೇಲೆ ಭಯ ಭ್ರಾಂತರು. ಈ ದುರ್ಬಲ ದಾನವರ ಹತ್ಯಾಕಾಂಡದಿಂದ ನಿನಗೆ ಏನು ಲಾಭ? ಇವರೆಲ್ಲರೂ ನಿನಗೆ ಭಯಭೀತರಾಗಿ ಶರಣು ಬಂದಿದ್ದಾರೆ, ಶರಣಾಗತರನ್ನು ಕೊಲ್ಲುವುದು ಮಹಾ ಪಾಪವಲ್ಲವೆ ?''

**''ಯೇ ಭೀತಾಶ್ಚ ಪ್ರಪನ್ನಾಶ್ಚ ಘ್ನಂತಿ ತಾನ್ ಯೇ ಮದೋದ್ಧತಾಃ ।**
**ಬ್ರಹ್ಮಘ್ನಾಸ್ತೇಽಚ ವಿಜ್ಞೇಯಾ ಮಹಾಪಾತಕಸಂಯುತಾಃ ॥**

ಯಾರು ಹೆದರಿ ಶರಣು ಬಂದವರನ್ನು ಮದೋನ್ಮತ್ತರಾಗಿ ಹೊಡೆದು ಹಿಂಸಿಸುತ್ತಾರೋ ಅವರು ಮಹಾಪಾತಕಿಗಳು. ಅವರನ್ನು ಬ್ರಹ್ಮಹತ್ಯಾಪಾತಕಿಗಳೆಂದೇ ತಿಳಿಯಬೇಕು. ಎಂದು ಶಾಸ್ತ್ರದಲ್ಲಿ ಹೇಳಿದ್ದಾರೆ.'' ನಾರದರ ಈ ನುಡಿಯನ್ನು ಕೇಳಿ ಪುರಂದರನು ದೈತ್ಯ ಸಂಹಾರ ಕಾರ್ಯದಿಂದ ಪರಾವೃತ್ತನಾದ. ಸ್ವರ್ಗಕ್ಕೆ ಹೊರಟು ಹೋದ. ದೇವತೆಗಳೆಲ್ಲ ಈ ದೈತ್ಯವಿಜಯದಿಂದ ಆನಂದತುಂದಿಲರಾಗಿದ್ದರು. ಎಲ್ಲ ದೇವರ್ಷಿಗಳೂ ಬ್ರಹ್ಮರ್ಷಿಗಳೂ ಕೂಡಿ ಸುರಸಾಮ್ರಾಜ್ಯ ಸಿಂಹಾಸನದ ಮೇಲೆ ಶಚೀದೇವಿಯೊಂದಿಗೆ ಇಂದ್ರನನ್ನು ಕೂಡಿಸಿ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದರು. ಭಾರೀ ಸಂಭ್ರಮ ಸಮಾರಂಭದಿಂದ ನೆರವೇರಿತು ದೇವಲೋಕದಲ್ಲಿ ಆ ವಿಜಯೋತ್ಸವ.

ಭಯಂಕರವಾದ ಆ ಸುರಾಸುರ ಸಂಗ್ರಾಮದಲ್ಲಿ ದೇವತೆಗಳಿಂದ ಕೊಲ್ಲಲ್ಪಟ್ಟ ದೈತ್ಯರೆಲ್ಲರೂ ಉರುಳಿ ಭೂತಲದ ನೆಲದ ಮೇಲೆ ಬಿದ್ದರು. ಮಹಾತ್ಮನಾದ ಬಲಿರಾಜನು ಗತತ್ರಾಣನಾಗಿ ಬಿದ್ದುಬಿಟ್ಟ. ಆ ಸಮಯದಲ್ಲಿ ದೈತ್ಯರ ಕುಲಾಚಾರ್ಯರಾದ ಶುಕ್ರಾಚಾರ್ಯರು ತಪೋನುಷ್ಠಾನಕ್ಕಾಗಿ ತಮ್ಮ ಶಿಷ್ಯರೊಂದಿಗೆ ಮಾನಸೋತ್ತರ ಪರ್ವತಕ್ಕೆ ಹೋಗಿದ್ದರು. ಈ ಯುದ್ಧದಲ್ಲಿ ಅಳಿದುಳಿದ ದೈತ್ಯರು ಗುರು ಶುಕ್ರರ ಬಳಿಗೆ ಓಡಿ ಹೋದರು. ಅವರ ಮುಂದೆ ಈ ದೈತ್ಯ ವಧದ ವೃತ್ತಾಂತವನ್ನು ಹೇಳಿದರು. ಶಿಷ್ಯಕುಲದ ಈ ದುರವಸ್ಥೆಯನ್ನು ಕೇಳಿ ಆಚಾರ್ಯ

ಶುಕ್ರಾಚಾರ್ಯರಿಗೆ ಬಹಳ ಖೇದವು ಆಯಿತು. ಕ್ರೋಧವೂ ಬಂದಿತು. ಅವರು ಮರಳಿ ಭೂತಲಕ್ಕೆ ಬಂದರು. ನೆಲದ ಮೇಲೆ ಅವರ ಶಿಷ್ಯರ ಹೆಣಗಳ ಹಡದಿ ಹಾಸಿತ್ತು. ಶಿಷ್ಯರ ಶವಗಳ ರಾಶಿಯನ್ನು ಕಂಡು ಅವರ ಕರುಳು ಕಿವುಚಿತು. ಕಣ್ಣು ಹನಿಯಿತು. ಹೃದಯ ಕುದಿಯಿತು. ಕೂಡಲೇ ಅವರು ತಮ್ಮ ಸಂಜೀವಿನಿ ವಿದ್ಯೆಯ ಪ್ರಭಾವದಿಂದ ಸತ್ತುಬಿದ್ದ ಎಲ್ಲ ದೈತ್ಯರಿಗೂ ಪ್ರಾಣದಾನ ಮಾಡಿ ಎತ್ತಿ ಕೂಡಿಸಿದರು. ಪುನರುಜ್ಜೀವಿತರಾದ ಬಲಿರಾಜ ಮುಂತಾದ ದೈತ್ಯರು ಗುರುವಿನ ಪಾದಕ್ಕೆ ಪೊರಮಟ್ಟು ಕೃತಜ್ಞತೆಯಿಂದ ಕೈಜೋಡಿಸಿಕೊಂಡು ನಿಂತುಕೊಂಡರು. ಅವರೆಲ್ಲರಿಗೂ ಸ್ವಸ್ಥಾನಕ್ಕೆ ತಿರುಗಲು ಆದೇಶ ನೀಡಿದರು ಆ ದೈತ್ಯ ಗುರುಗಳು. ಆ ಗುರುವಿನ ಆದೇಶದಂತೆ ಎಲ್ಲ ದಾನವರೂ ದಿತಿಸುತರೂ ತಮ್ಮ ಪಾತಾಳ ಲೋಕಕ್ಕೆ ವಲಸೆ ಬಂದರು. ಸುಖದಿಂದ ಅಲ್ಲಿ ನೆಲೆಸಿದರು.

**ಶೌನಕರು** : ದೇವರಾಜ ಇಂದ್ರನು ಗುರು ಇಲ್ಲದೆ ಹೇಗೆ ರಾಜ್ಯವನ್ನು ಸಂಪಾದಿಸಿದನು? ಬೃಹಸ್ಪತ್ಯಾಚಾರ್ಯರಿಗೆ ಅವಮಾನ ಮಾಡಿದ್ದರಿಂದ ಅವನು ರಾಜ್ಯಭ್ರಷ್ಟನಾಗಿ ತಲೆಮರೆಸಿಕೊಂಡು ಹೋಗಿದ್ದನು. ಅನಂತರ ಯಾರ ಪ್ರೇರಣೆಯಿಂದ ದೇವ ಸಿಂಹಾಸನಲ್ಲಿ ಮರಳಿ ಕುಳಿತುಕೊಂಡನು? ಇದೆಲ್ಲವನ್ನು ಕೇಳಲು ನಮಗೆ ಕುತೂಹಲವಿದೆ. ದಯಮಾಡಿ ಬಿತ್ತರಿಸಿರಿ.

**ಲೋಮಶ** : ಬೃಹಸ್ಪತ್ಯಾಚಾರ್ಯರಿಲ್ಲದೆ ಕೆಲ ಸಮಯ ಆ ಶಚೀಪತಿಯು ಸ್ವರ್ಗದಲ್ಲಿ ಶಾಸನ ನಡೆಸಿದ. ದೇವೇಂದ್ರನು ಆ ಸಮಯದಲ್ಲಿ ವಿಶ್ವರೂಪಾಚಾರ್ಯರನ್ನು ತನ್ನ ಪುರೋಹಿತರನ್ನಾಗಿ ಮಾಡಿಕೊಂಡ. ಅವರಿಗೆ ಮೂರು ಮಸ್ತಕಗಳು. ವಿಶ್ವರೂಪಾಚಾರ್ಯರು ದೇವತೆಗಳ ಪುರೋಹಿತರಾಗಿದ್ದರೂ ದೈತ್ಯ ಪಕ್ಷಪಾತಿಗಳು. ಅವರು ಗುಟ್ಟಾಗಿ ದೇವತೆಗಳೊಡನೆ ದೈತ್ಯರಿಗೂ ಮನುಷ್ಯರಿಗೂ ಯಜ್ಞಾಂಶಗಳನ್ನು ನೀಡಿ ತೃಪ್ತಿಪಡಿಸುತ್ತಿದ್ದರು. ಸ್ವರ್ಗದ ಈ ಹೊಸ ಆಚಾರ್ಯರು ದೇವತೆಗಳಿಗೆ ಆಹುತಿಯನ್ನು ನೀಡುವಾಗ ಉಚ್ಚಸ್ವರದಲ್ಲಿ ಮಂತ್ರಗಳನ್ನು ಹೇಳಿ ಆಹುತಿಯನ್ನು ನೀಡುತ್ತಿದ್ದರು. ಸಣ್ಣ ಸ್ವರದಲ್ಲಿ ಮಂತ್ರ ಪಠಿಸಿ ಮಾನವರಿಗೆ ಹವಿಸ್ಸುಗಳನ್ನು ಸಲ್ಲಿಸುತ್ತಿದ್ದರು. ದೈತ್ಯರಿಗೆ ಮಾತ್ರ ಬಾಯಿ ತೆರೆಯದೇ ಮೌನವಾಗಿಯೇ ಆಹುತಿಯನ್ನು ನೀಡುತ್ತಿದ್ದರು. ಈ ರಹಸ್ಯವನ್ನು ಅವರಿಗೆ ಬಹುಕಾಲ ಗುಟ್ಟಾಗಿ ಇಡಲು ಆಗಲಿಲ್ಲ. ಕೊನೆಗೂ ದೇವೇಂದ್ರನಿಗೆ ಹೊಸ ಗುರುವಿನ ಗತ್ತುಗಾರಿಕೆ ಗೊತ್ತಾಗಿ ಹೋಯಿತು. ಕೆರಳಿ ನಿಂತ ಆ ನಾಕಲೋಕಾಧಿಪತಿ. ತಕ್ಷಣದಲ್ಲಿಯೇ ವಜ್ರಾಯುಧದಿಂದ ವಿಶ್ವರೂಪಾಚಾರ್ಯರ ತಲೆಯನ್ನು ಕತ್ತರಿಸಿ ಹಾಕಿದ. ದೇವೇಂದ್ರನ ವಜ್ರಾಯುಧದ ಭೀಕರ ಪ್ರಹಾರದಿಂದ ತಕ್ಷಣವೇ ಮೃತ್ಯುವನ್ನಪ್ಪಿದರು ಆ ಆಚಾರ್ಯರು. ಬ್ರಹ್ಮಹತ್ಯಾ ಪಾಪ ಆ ದೇವೇಂದ್ರನಿಗೆ ತಗಲಿತು.

**ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ**
**ಇತ್ಯೇಷಾಮತ್ಯಘವತಾಮಿಯಮೇವ ಚ ನಿಷ್ಕೃತಿಃ ॥**

**ನಾಮವ್ಯಾಹರಣಂ ವಿಷ್ಣೋರ್ಯಾ ಚ ತದ್ವಿಷಯಾ ಮತಿಃ ॥**

ಬ್ರಹ್ಮಹತ್ಯೆ, ಮದ್ಯಪಾನ, ಬಂಗಾರವನ್ನು ಕದಿಯುವುದು, ಗುರುಪತ್ನೀ ಗಮನ. ಮುಂತಾದವುಗಳು ಮಹಾಪಾತಕ ಎನಿಸುತ್ತವೆ. ಈ ಘೋರ ಪಾಪಗಳ ಪರಿಹಾರಕ್ಕೆ ಇರುವ ಒಂದೇ ಒಂದು ಉಪಾಯವೆಂದರೆ ಶ್ರೀಹರಿಯ ನಾಮ ಸಂಕೀರ್ತನೆ. ಅವನಲ್ಲೇ ಚಿತ್ತವನ್ನಿಟ್ಟು ಭಗವಂತನ ನಾಮ ಧ್ಯಾನಗೈದರೆ ಮಹಾ ಪಾಪಗಳು ನಾಶವಾಗುವುವು. ಇಂಥ ಸುಲಭೋಪಾಯವನ್ನು ಕೂಡ ಆಗ ದೇವೇಂದ್ರನಿಂದ ಮಾಡಲಿಕ್ಕಾಗಲಿಲ್ಲ. ಇದರಿಂದ ಆ ಬ್ರಹ್ಮಹತ್ಯಾ ಪಾಪವು ಇಂದ್ರನನ್ನು ನುಂಗಲಿಕ್ಕಾಗಿ ಅವನ ಹತ್ತಿರ ಬರತೊಡಗಿತು. ಹೆದರಿದ ದೇವೇಂದ್ರ ಗಾಬರಿಯಿಂದ ಓಡತೊಡಗಿದ. ಬ್ರಹ್ಮಹತ್ಯೆಯೂ ಬೆನ್ನಟ್ಟಿ ಓಡತೊಡಗಿತು. ನೆರಳಿನಂತೆ ತನ್ನನ್ನು ಅಟ್ಟಿಸಿಕೊಂಡು ಬರುವ ಆ ಬ್ರಹ್ಮಹತ್ಯಾ ಪಾಪವನ್ನು ಕಂಡು ಹೆದರಿ ಹೌಹಾರಿದ ಸುರರಾಜನು ಭಯಭ್ರಾಂತನಾಗಿ ನೀರಿಗೆ ಹಾರಿಕೊಂಡನು. ಮೀನು ಮೊಸಳೆಗಳಂತೆ ಮುಳುಗು ಹಾಕುತ್ತ ಬಹುಕಾಲ ಜಲಾಧಿವಾಸಗೈದ, ಮುನ್ನೂರು ವರ್ಷ ಮುಳುಗಿಯೇ ಇರಬೇಕಾಯಿತು ಆ ಮಹೇಂದ್ರ ಸಲಿಲ ಗರ್ಭದಲ್ಲಿ. ಈ ಸಮಯದಲ್ಲಿ ಸ್ವರ್ಗಲೋಕದಲ್ಲಿ ಅರಾಜಕತೆ, ಅಮರಾವತಿಯಲ್ಲಿ ಹಾಹಾಕಾರ. ದೇವತೆಗಳಿಗೆ ಚಿಂತೆ. ಋಷಿಮುನಿಗಳಿಗೆ ಉದ್ವೇಗ. ಮೂರು ಲೋಕಕ್ಕೆಲ್ಲ ಕುತ್ತು. ಸಜ್ಜನರಿಗೆಲ್ಲ ಆಪತ್ತು. ರಾಜನು ಪಾಪಿಷ್ಠನಾದರೆ ಪ್ರಜೆಗಳೆಲ್ಲರಿಗೂ ದುಃಷ್ಪರಿಣಾಮ, ಅದರ ದುಃಖವನ್ನು ಅನುಭವಿಸಬೇಕಾಗುವುದು.

ಏಕೋಽಪಿ ಬ್ರಹ್ಮಹಾ ಯತ್ರ ರಾಷ್ಟ್ರೇ ವಸತಿ ನಿರ್ಭಯಃ ।
ಅಕಾಲಮರಣಂ ತತ್ರ ಸಾಧೂನಾಮುಪಜಾಯತೇ ॥

ರಾಜಾ ಪಾಪಯುತೋ ಯಸ್ಮಿನ್ ರಾಷ್ಟ್ರೇ ವಸತಿ ತತ್ರ ವೈ ।
ದುರ್ಭಿಕ್ಷಂ ಚೈವ ಮರಣಂ ತಥೈವೋಪದ್ರವಾ ದ್ವಿಜಾಃ ॥

ಭವಂತಿ ಬಹವೋಽನರ್ಥಾಃ ಪ್ರಜಾನಾಂ ನಾಶಹೇತವೇ ।
ತಸ್ಮಾತ್ ರಾಜ್ಞಾ ಪ್ರಕರ್ತವ್ಯೋ ಧರ್ಮಃ ಶ್ರದ್ಧಾಪರೇಣ ಹಿ ।
ತಥಾ ಪ್ರಕೃತಯೋ ರಾಜ್ಞಾ ಶುಚಿತ್ವೇನ ಪ್ರತಿಷ್ಠಿತಾಃ ॥

ಯಾವ ರಾಷ್ಟ್ರದಲ್ಲಿ ಬ್ರಹ್ಮಹತ್ಯಾಪಾಪ ಮಾಡಿದ ಪಾತಕಿಯು ಇರುತ್ತಾನೋ ಆ ರಾಷ್ಟ್ರದಲ್ಲಿ ಸಾಧುಸಜ್ಜನರ ಅಕಾಲ ಮರಣಗಳು ಸಂಭವಿಸುತ್ತವೆ. ಯಾವ ರಾಜ್ಯದಲ್ಲಿ ಸ್ವಯಂ ರಾಜನೇ ಬ್ರಹ್ಮಹತ್ಯಾ ಪಾಪವನ್ನು ಮಾಡಿರುವನೋ ಆ ರಾಜ್ಯದಲ್ಲಿ ಮೇಲಿಂದ ಮೇಲೆ ಕ್ಷಾಮ ಡಾಮರಗಳು, ರಾಷ್ಟ್ರದ ತುಂಬ ಪ್ರಕ್ಷೋಭ ಸಂಕಟದ ವಾತಾವರಣ ಉಂಟಾಗುವವು. ಪ್ರಜೆಗಳ ನಾಶಕ್ಕಾಗಿ ಅನೇಕ ಅನರ್ಥ ಅನಾಹುತಗಳು ಸಂಭವಿಸುವವು. ಆದುದರಿಂದ ರಾಜರಾದವರು ಶ್ರದ್ಧೆಯಿಂದ ಧರ್ಮಾಚರಣೆಯನ್ನು ಮಾಡಬೇಕು. ರಾಜರು ಧರ್ಮನಿಷ್ಠರಾದರೆ ಮಂತ್ರಿಗಳು ಧರ್ಮಾತ್ಮರಾಗುತ್ತಾರೆ. ಪ್ರಜೆಗಳೂ ಕೂಡ ಒಳ್ಳೆ ಧಾರ್ಮಿಕರಾಗುತ್ತಾರೆ. ಮೂರು ಲೋಕಕ್ಕೂ ಒಡೆಯನಾದ ದೇವೇಂದ್ರನೇ ಮಹಾಪಾಪ ಗೈದುದರಿಂದ ಸರ್ವ ಪ್ರಪಂಚವೇ ಅದರ ದಾರುಣತೆಯನ್ನು ದುರಂತವನ್ನು ಅನುಭವಿಸಬೇಕಾಯಿತು.

ಇದನ್ನೆಲ್ಲ ಅರಿತು ದೇವಗಣ ಧುರೀಣರೂ ಲೋಕಪಾಲಕರೂ ವಿಚಾರ ವಿನಿಯಮ ಮಾಡಿದರು, ಇದಕ್ಕೆ ಏನಾದರೂ ಪರಿಹಾರ ಕಂಡು ಹಿಡಿಯಬೇಕೆಂದು ಆಚಾರ್ಯ ಬೃಹಸ್ಪತಿಗಳ ಕಡೆಗೆ ಹೋದರು. ಇದನ್ನೆಲ್ಲ ಕೇಳಿ ಆ ಸುರಾಚಾರ್ಯರು ಶಚೀಪತಿಯನ್ನು ಹುಡುಕಿಕೊಂಡು ಹೊರಟರು. ಅಗಾಧ ಜಲಗರ್ಭದಲ್ಲಿ ಅಡಗಿ ಕುಳಿತಿದ್ದ ಆ ಅಮರಾವತಿಯ ಅರಸ. ಬಹುಪ್ರಯಾಸದಿಂದ ಆ ಅಮರರ ಅರಸನನ್ನು ಅರಸುತ್ತ ಬಂದ ಆಚಾರ್ಯರು ಆ ಜಲಾಶಯಕ್ಕೆ ಬಂದು ಪುರಂದರನನ್ನು ಹೆಸರು ಹಿಡಿದು ಕೂಗಿದರು. ದೇವೇಂದ್ರನು ನೀರಿನ ನಡುವೆ ಎದ್ದು ನಿಂತ. ಅವನ ಕಣ್ಣುಗಳಿಂದ ಧಾರಾಕಾರವಾಗಿ ಕಣ್ಣೀರು. ನಿಂತಲ್ಲಿಂದಲೇ ನಮಸ್ಕರಿಸಿದ. ತಲೆಬಾಗಿ ಗುರುವಂದನೆ ಗೈದು ಭಕ್ತಿಯಿಂದ ಕೈಮುಗಿದು ಆಚಾರ್ಯರನ್ನು ಕೇಳಿದ.

**ಇಂದ್ರ** : ಗುರುಗಳೇ, ಈ ಬ್ರಹ್ಮಹತ್ಯಾ ಪಾಪಕ್ಕೆ ಏನಾದರೂ ಪ್ರಾಯಶ್ಚಿತ್ತವಿದೆಯೇ?

**ಬೃಹಸ್ಪತಿ** : ಅಜ್ಞಾನದಿಂದ ತಿಳಿಯದೇ ಮಾಡಿದ ಪಾಪಗಳಿಗೆಲ್ಲ ಪರಿಹಾರ ಉಂಟು, ಆದರೆ ನಿನ್ನ ಪಾಪ ತಿಳಿಯದೇ ಮಾಡಿದ್ದಲ್ಲ. ವಿಶ್ವರೂಪಚಾರ್ಯರನ್ನು ನೀನು ಗುರುವೆಂದು ಮನ್ನಿಸಿದ್ದಿ. ಅವರು ಬ್ರಾಹ್ಮಣ ಹಾಗೂ ಗುರು ಎಂದು ತಿಳಿದುಕೊಂಡೂ ಅವರ ತಲೆಯನ್ನು ಕಡಿದುಹಾಕಿದೆ. ಇದು ಜ್ಞಾನಪೂರ್ವಕವಾದ ಪಾಪಕರ್ಮದ ಅನುಷ್ಠಾನ. ಇದಕ್ಕೆ ಯಾವ ಶಾಸ್ತ್ರಕಾರರೂ ಪರಿಹಾರವನ್ನು ಹೇಳಲಿಲ್ಲ. ಇದನ್ನು ನೀನು ಅನುಭವಿಸಿಯೇ ತೀರಬೇಕು. ಈ ಮಹಾಪಾತಕದಿಂದ ನೀನು ಹಿಂದೆ ಮಾಡಿದ ನೂರು ಅಶ್ವಮೇಧ ಯಾಗದ ಪುಣ್ಯವು ಕೂಡ ನಶಿಸಿ ಹೋಗಿದೆ, ಒಡೆದ ಗಡಿಗೆಯಿಂದ ನೀರು ಸೋರಿ ಹೋಗುವಂತೆ ಮಹಾಪಾಪ ಮಾಡಿದ ಪಾಪಿಷ್ಠನ ಪುಣ್ಯವೆಲ್ಲವೂ ಸ್ರವಿಸಿ ಹೋಗುವದು.

**ಇಂದ್ರ** : ''ಗುರುಗಳೇ, ನನ್ನ ದುರ್ದೈವದಿಂದ ನನಗೆ ಈ ದುರ್ದಶೆ ಬಂದಿತು. ಈ ಪಾಪದ ಪರಿಹಾರಕ್ಕೆ ಒಂದೇ ಒಂದು ಉಪಾಯವೆಂದರೆ ಹರಿನಾಮಸ್ಮರಣ. ಅದನ್ನು ನಾನು ಇಲ್ಲಿ ಸಲಿಲಾಂತರ್ಗತನಾಗಿಯೇ ನಡೆಸುತ್ತಿದ್ದೇನೆ. ನನ್ನ ಭಕ್ತಿ ಯುಕ್ತವಾದ ನಿತ್ಯನಾಮಸ್ಮರಣದಿಂದ ಆ ನಾರಾಯಣನು ಎಂದು ಸುಪ್ರೀತನಾಗುವನೊ ಅಂದು ನನ್ನ ಉದ್ಧಾರ, ಅದು ಅಷ್ಟು ಬೇಗ ಆಗುವ ಕಾರ್ಯವಲ್ಲ. ಅಲ್ಲಿಯವರೆಗೆ ಸ್ವರ್ಗದಲ್ಲಿ ಅರಾಜಕತೆ ಉಂಟಾಗುವದು ಬೇಡ, ನೀವು ಬೇರೆ ಒಬ್ಬ ಪುಣ್ಯ ಪುರುಷನನ್ನು ಹುಡುಕಿರಿ, ಅವನನ್ನೇ ಇಂದ್ರಪದವಿಯಲ್ಲಿ ಪಟ್ಟಾಭಿಷೇಕ ಮಾಡಿರಿ. ನಾನು ಇದ್ದರೂ ಮರಣಹೊಂದಿದಂತೆಯೇ.'' ಇಂದ್ರನ ಈ ಸೂಚನೆ ವೃಂದಾಕರಿಗೆಲ್ಲರಿಗೂ ಮಾನ್ಯವಾಯಿತು. ಸುರಗುರುವಿನೊಂದಿಗೆ ಅವರು ಅಮರಾವತಿಗೆ ಮರಳಿದರು. ಶಚೀ ದೇವಿಯ ಜೊತೆಗೆ ವಿಚಾರ ವಿನಿಮಯ ಮಾಡಿದರು. ತಮ್ಮ ತಮ್ಮಲ್ಲಿಯೇ ಮಂತ್ರಾಲೋಚನೆಗೈದರು. ಆದರೆ ಇಂದ್ರಪದವಿಗೆ ಯೋಗ್ಯ ವ್ಯಕ್ತಿ ಯಾರೂ ಅವರ ಕಣ್ಣಿಗೆ ಕಾಣಲಿಲ್ಲ. ಅಷ್ಟರಲ್ಲಿ ನಾರದರ ಸವಾರಿ ಅತ್ತ ಚಿತ್ತೈಸಿತು. ದೇವಲೋಕದ ಗಂಭೀರಸಮಸ್ಯೆ ಅವರಿಗೆ ಅರ್ಥವಾಯಿತು. ತಕ್ಷಣವೇ ಸುರಸಭೆಯೆದುರು ಅವರೊಂದು ಸೂಚನೆಯನ್ನು ಮಂಡಿಸಿದರು.

**ನಾರದ :** "ಭೂಲೋಕದಲ್ಲಿ ಒಬ್ಬ ಮಾತ್ರ ಇಂದ್ರಪದವಿಗೆ ಯೋಗ್ಯ ವ್ಯಕ್ತಿ ಇರುತ್ತಾನೆ. ಚಂದ್ರ ವಂಶದ ನಹುಷ. ಅವನು ಮಹಾತ್ಮ, ಧರ್ಮಾತ್ಮ. ಈಗಾಗಲೇ ಅವನು ತೊಂಬೊತ್ತೊಂಭತ್ತು ಅಶ್ವಮೇಧ ಯಾಗಗಳನ್ನು ಮಾಡಿ ಮುಗಿಸಿದ್ದಾನೆ. ಆದರಿಂದ ಅವನಿಗೆ ಇಂದ್ರಪದವಿಯ ಅಧಿಕಾರ ತಾನಾಗಿಯೆ ಪ್ರಾಪ್ತವಾಗಿದೆ." ದೇವತಾಗಣದ ಸಮಸ್ಯೆಗೆ ಈ ನಾರದರ ಸೂಚನೆಯಿಂದ ಯೋಗ್ಯ ಪರಿಹಾರ ದೊರೆತಂತಾಯಿತು. ಕೂಡಲೇ ವೃಂದಾರಕರ ಮುಂದಾಳುಗಳು ಮಹೀತಳಕ್ಕೆ ಬಂದರು. ನಹುಷರಾಜನನ್ನು ಸ್ವರ್ಗ ಸಿಂಹಾಸನವನ್ನು ಆರೋಹಣ ಮಾಡಲು ಆಮಂತ್ರಿಸಿದರು. ಆ ಚಂದ್ರವಂಶದ ರಾಜನು ಇಂದ್ರ ಪೀಠವನ್ನು ಏರಲು ಉತ್ಸಾಹದಿಂದ ಸಮ್ಮತಿಸಿದನು. ಅಮರಾವತಿಯಲ್ಲಿ ಅದ್ಧೂರಿಯಿಂದ ನಡೆಯಿತು ನಹುಷನ ಸುರ ಲೋಕದ ಸಿಂಹಾಸನಾರೋಹಣ ಸಮಾರಂಭ. ಮನುಷ್ಯ ಲೋಕದ ಒಬ್ಬ ಮಾನವನು ಮಹೇಂದ್ರ ಸಿಂಹಾಸನವನ್ನು ಮೊಟ್ಟ ಮೊದಲು ಅಂದೇ ಏರಿದ್ದು. ನಹುಷ ಒಬ್ಬ ನರ ಮನುಷ್ಯನಾದರೂ ಸ್ವರ್ಗ ಸಿಂಹಾಸನದಲ್ಲಿ ಮಂಡಿಸಿದ ಕೂಡಲೇ ದೇವತೆಗಳು, ಗಂಧರ್ವರು, ಅಪ್ಸರೆಯರು, ಕೈ ಕಟ್ಟಿ ನಿಂತುಕೊಂಡರು. ಸುರಶ್ರೇಷ್ಠರು ಚಾಮರ ಹಿಡಿದರು. ನಾರದರು ಗುಣಗಾನ ಮಾಡಿದರು. ಮಹಾ ಮಹರ್ಷಿಗಳು ಹೊಗಳಿದರು. ಗಂಧರ್ವರ ಗಾನ, ಅಪ್ಸರೆಯರ ನೃತ್ಯ, ದೇವಾಧಿದೇವತೆಗಳ ಕೈಂಕರ್ಯ, ಈ ಹೊಸ ವಾಸವನಿಗೆ ಕ್ರಮಪ್ರಕಾರ ನಡೆದವು. ಒಂದೇ ಕೊರತೆ ಎಂದರೆ ಈ ನೂತನ ಪುರಂದರನ ಬಳಿಗೆ ಹಿಂದಿನ ಇಂದ್ರಾಣಿ ಬರಲಿಲ್ಲ. ಮೊದ ಮೊದಲು ಒಳ್ಳೆ ವಿನಯ ವಿವೇಕಗಳಿಂದಲೇ ವರ್ತಿಸುತ್ತಿದ್ದ ನರಲೋಕದ ಆ ನಹುಷರಾಜ. ಆದರೆ ದಿನದಿನವೂ ದೇವ ಮುನಿ ಮಹರ್ಷಿಗಳು ಪರಾಕು ಹೇಳಿ, ಒಡ್ಡೋಲಗದಲ್ಲಿ ಓಲೈಸಿ, ಸೇವೆ ಸಲ್ಲಿಸುತ್ತಿರುವುದನ್ನು ಕಂಡು, ಅವನ ಚಿತ್ತದಲ್ಲಿ ಅಹಂಕಾರ ಅಂಕುರಿಸತೊಡಗಿತು. ಮದ ಮೋಹಗಳು ಮಸ್ತಕಕ್ಕೆ ಏರಿದವು. ಈ ಮಣ್ಣಿನ ಮಾನವ ಸ್ವರ್ಗದ ಹೆಣ್ಣುಗಳನ್ನು ಕಂಡಾಗ, ಅವನ ಮನುಸ್ಸು ಕಾಮ ಕೇಳೀ ವಿಲಾಸಕ್ಕೆ ಎಳಿಸಿತು. ಹಿಂದಿನ ಇಂದ್ರನ ಸತಿಯಾದ ಶಚೀದೇವಿಯು ಇಂದಿನ ಇಂದ್ರನಾದ ತನ್ನ ಬಳಿಗೆ ಬರಬೇಕೆಂದು ಹೇಳಿ ಕಳಿಸುವ ಧಾರ್ಷ್ಟ್ಯವನ್ನು ತೋರಿಬಿಟ್ಟ. ನಹುಷನ ಈ ಸಂದೇಶವನ್ನು ಮೊದಲು ಆ ಇಂದ್ರಾಣಿಗೆ ತಿಳಿಸಿದರು ಅಮರಾವತಿಯ ಆಚಾರ್ಯರು. ಇಂದ್ರನ ರಾಣಿ ಅಷ್ಟೇ ಜಾಣೆ. ಅವಳು ಯುಕ್ತಿಯಿಂದ ಒಂದು ಉಪಾಯ ಹೂಡಿದಳು. "ಗುರುಗಳೇ, ಈ ನಹುಷ ಒಂದು ನರಲೋಕದ ಹುಳ. ಇವನನ್ನು ನಾನು ಕಣ್ಣೆತ್ತಿಯೂ ನೋಡಲಾರೆ. ನಾನು ನನ್ನ ಪತಿ ಪುರಂದರನನ್ನು ಬಿಟ್ಟು ಅನ್ಯರನ್ನು ಮನಸಾಪಿ ಚಿಂತಿಸಲಾರೆ. ಇಂದ್ರನ ಗದ್ದುಗೆಯಲ್ಲಿ ಕುಳಿತವರಿಗೆಲ್ಲರಿಗೂ ಅವನ ಹೆಂಡತಿಯ ಮೇಲೆ ಅಧಿಕಾರ ಬರುವುದೇ? ತಾವೇ ವಿಚಾರಿಸಿರಿ. ಆದುದರಿಂದ ಪರಸ್ತ್ರೀಯರನ್ನು ಬಯಸುವ ಈ ನರಪ್ರಾಣಿಗೆ ಬುದ್ಧಿ ಕಲಿಸಬೇಕು. ಆದುದರಿಂದ ತಾವು ಆ ಅಜ್ಞನಿಗೆ ತಿಳಿಸಿರಿ. "ವಾಹನವಾಗಲು ಯೋಗ್ಯ ಅಲ್ಲದವರನ್ನು ವಾಹನ ಮಾಡಿಕೊಂಡು ಇಲ್ಲಿ ಬಂದರೆ ನಹುಷ ಮಹಾರಾಜರು ನನ್ನನ್ನು ಪಡೆಯಬಹುದು" ಎಂದು. ತಥಾಸ್ತು ಎಂದರು ಬೃಹಸ್ಪತ್ಯಾಚಾರ್ಯರು.

ನಹುಷನಿಗೆ ಸಂದೇಶ ತಿಳಿಸಿದರು. ಕಾಮಾಂಧ ನಹುಷ ವಿಚಾರವಂತನೂ ಆಗಿದ್ದ. ಅವಳ ಅಪೇಕ್ಷೆಯಂತೆಯೇ ಶಚೀ ಸದನಕ್ಕೆ ಹೋಗುವುದಾಗಿ ನಿರ್ಧರಿಸಿದ. ತನ್ನಷ್ಟಕ್ಕೆ ತಾನೇ ವಿಚಾರಿಸಿದ ''ವಾಹನವಾಗಲಾರದ ಯಾವ ವಸ್ತುವನ್ನು ನಾನು ವಾಹನವಾಗಿ ಮಾಡಿಕೊಂಡು ಹೋಗಬೇಕು''? ಈ ವಿಚಾರದ ಚಕ್ರಾರೂಢನಾಗಿ ಬಹಳ ಹೊತ್ತು ಆಲೋಚನೆಗೈದ. ಅವನಿಗೆ ಒಂದು ಉಪಾಯ ಹೊಳೆಯಿತು. ''ಮಹಾ ತಪಸ್ವಿಗಳಾದ ಮಹರ್ಷಿಗಳು ವಾಹನರಾಗಲು ಯೋಗ್ಯರಲ್ಲ. ನಾನು ಹೇಗೂ ಈಗ ಇಂದ್ರಪದವಿಯಲ್ಲಿದ್ದೇನೆ. ನನ್ನ ಮಾತನ್ನು ಅವರು ಎಂದೂ ಅಲ್ಲಗಳೆಯಲಾರರು. ಆದುದರಿಂದ ಅವರನ್ನೇ ವಾಹನಮಾಡಿಕೊಂಡು ಆವರ ಹೆಗಲಮೇಲೆಯೇ ನನ್ನ ಅಂದಣವನ್ನು ಹೊರಿಸಿ ಅದರಲ್ಲಿ ಕುಳಿತು ಇಂದ್ರಾಣಿಯ ಸುಂದರ ಮಂದಿರಕ್ಕೆ ನನ್ನ ನಿಬ್ಬಣ ಹೊರಡಿಸುವೆ. ಅಂದರೆ, ಆ ಪುರಂದರನ ಸುಂದರಿಯು ನನ್ನ ವಶವಾಗುವಳು. ನಾನು ಇಂದ್ರಪದವಿಯಲ್ಲಿ ಕುಳಿತದ್ದು ಸಾರ್ಥಕವಾಗುವದು.'' ಹೀಗೆ ವಿಚಾರಿಸಿ ಆ ನಹುಷರಾಜನು ಮಹಾ ತಪಸ್ವಿಗಳಾದ ಇಬ್ಬರು ಮಹರ್ಷಿಗಳಿಗೆ ಹೇಳಿಕಳಿಸಿದನು. ಅವರ ಹೆಗಲ ಮೇಲೆ ಸವಾರಿಯಾಗಿ ಕಾಮಾತುರನಾಗಿ ಬೇಗ ಬೇಗ ನಡೆಯಲು ಅವರಿಗೆ ಸರ್ಪ ! ಸರ್ಪ ! ಎಂದು ಆಜ್ಞೆ ಮಾಡಿದನು. ಅವನ ಅಹಂಕಾರಯುಕ್ತವಾದ ಈ ಅಧಿಕಾರ ಚಲಾವಣೆಯಿಂದ ಸ್ವಾಭಿಮಾನಿಗಳಾದ ಆ ತಪಸ್ವಿಗಳಿಗಿಬ್ಬರಿಗೂ ಕೋಪ ಬಂದಿತು. ಅವರಲ್ಲಿಯೇ ಒಬ್ಬ ತಪಸ್ವಿಯು ಅಹಂಕಾರದಿಂದ ಸರ್ಪ ಸರ್ಪ ಎಂದು ಹೂಂಕರಿಸುವ ಆ ನಹುಷನಿಗೆ ನೀನೇ ಸರ್ಪವಾಗಿ ನೆಲದ ಮೆಲೆ ಬೀಳು' ಎಂದು ಶಾಪವಿತ್ತರು. ತಕ್ಷಣವೇ ತಾತ್ಕೂರ್ತಿಕ ದೇವೇಂದ್ರನಾದ ನಹುಷನು ಉರುಳಿಯೇ ಬಿಟ್ಟ ಸ್ವರ್ಗದಿಂದ. ಬ್ರಾಹ್ಮಣ ಶಾಪದಿಂದ ಬಹುಕಾಲ ಸರ್ಪವಾಗಿ ಭೂಮಂಡಲದಲ್ಲಿ ಬೀಳಬೇಕಾಯಿತು. ಎಲ್ಲ ರಾಜರೂ ಇದರಿಂದ ಪಾಠ ಕಲಿಯುವಂತಾಯಿತು. ರಾಜ್ಯ, ಅಧಿಕಾರ, ಐಶ್ವರ್ಯಗಳಿಂದ ಉನ್ಮತ್ತರಾಗಿ ದೇವ ಬ್ರಾಹ್ಮಣ ಧರ್ಮ ದ್ವೇಷವನ್ನು ಮಾಡಿದರೆ ಅವರಿಗೆ ಕೂಡಲೇ ಅದಃ ಪಾತವಾಗುತ್ತದೆ ಎನ್ನುವುದಕ್ಕೆ ನಾಕಾಧೀಶನಾದ ನಹುಷನೇ ಸಾಕ್ಷಿ.

ಯೇ ಮದಾಂಧಾ ದುರಾಚಾರಾಃ ಕಾಮುಕಾ ವಿಷಯಾತ್ಮಕಾಃ ।
ವಿಪ್ರಾಣಾಮವಮಾನೇನ ಪತಂತಿ ನರಕೇಽ ಶುಚೌ ॥

ತಸ್ಮಾತ್ ಸರ್ವ ಪ್ರಯತ್ನೇನ ಪದಂ ಪ್ರಾಪ್ಯ ವಿಚಕ್ಷಣೈಃ ।
ಅಪ್ರಮತ್ತೈರ್ನರೈ ರ್ಭಾವ್ಯಮಿಹಾಮುತ್ರ ಚ ಲಬ್ಧಯೇ ॥

ಕಾಮುಕರಾದ ಮಾನವರು ವಿಷಯಲಂಪಟರಾಗಿ ಮದಾಂಧತನದಿಂದ ದುರಾಚಾರಕ್ಕೆ ಇಳಿದು ಬ್ರಹ್ಮಜ್ಞಾನಿಗಳಿಗೆ ಅವಮಾನ ಮಾಡಿದರೆ ನರಕದಲ್ಲಿ ಬೀಳುತ್ತಾರೆ. ಆದುದರಿಂದ ಉಚ್ಚ ಸ್ಥಾನವನ್ನು ಹೊಂದಿದ ಮಾನವನು ಬಹಳ ವಿವೇಕದಿಂದ ವರ್ತಿಸಬೇಕು. ಎಲ್ಲಿಯೂ ಹೆಜ್ಜೆ ತಪ್ಪದಂತೆ ಎಚ್ಚರಿಕೆಯಿಂದ

ನಡೆಯಬೇಕು. ಇಲ್ಲದಿದ್ದರೆ ಇಲ್ಲಿ ಉತ್ಪಾತ. ಅಲ್ಲಿ ಅಧಃಪಾತ. ಉಚ್ಚ ಸ್ಥಾನವನ್ನು ಹೊಂದಿ ಅಧಿಕಾರದ ಮದದಿಂದ ಕಾಮಾಂಧನಾಗಿ ವಿವೇಕವಿಲ್ಲದೇ ವರ್ತಿಸಿದ್ದರಿಂದ ನಹುಷರಾಜನು ಕಾಡು ಬೀಡಿನಲ್ಲಿ ಹಾವಾಗಿ ಹರಿದಾಡಬೇಕಾಯಿತು.

ಹೀಗೆ ಹೊಸ ಇಂದ್ರನು ತನ್ನ ಕಾಮವಾಸನೆಗೆ ಗುರಿಯಾಗಿ ಸ್ವರ್ಗದಿಂದ ಕೆಳಗೆ ಉರುಳಿದ ಬಳಿಕ ಆ ಸುರರಾಜ್ಯದಲ್ಲಿ ಮತ್ತೆ ಅರಾಜಕತೆ ಉಂಟಾಯಿತು. ದೇವತೆಗಳೆಲ್ಲರಿಗೂ ಮತ್ತೆ ಚಿಂತೆ. ಮತ್ತೆ ಇನ್ನು ಯಾವ ಹೊಸ ಇಂದ್ರನನ್ನು ಹುಡುಕಬೇಕು? ಈಗ ಪೃಥ್ವೀ ಮಂಡಲದಲ್ಲಿ ನಹುಷನಂತೆ ನೂರಾರು ಯಜ್ಞ ಮಾಡಿದ ರಾಜರು ಯಾರೂ ಇಲ್ಲ. ಅಂದ ಬಳಿಕ ಈ ಪುರಂದರ ಸ್ಥಾನವನ್ನು ತುಂಬುವವರು ಯಾರು? ಸುರಸಮೂಹದ ಈ ಸಮಸ್ಯೆಯನ್ನು ಅರಿತ ಇಂದ್ರಾಣಿಯು ಅವರನ್ನೆಲ್ಲ ಕರೆದು ಹೇಳಿದಳು. ''ಗುರುಗಳೇ ಮತ್ತು ಸುರಸತ್ತಮರೇ! ನೀವು ಯಾರೂ ಚಿಂತೆ ಮಾಡಬೇಡಿರಿ. ನೀವೆಲ್ಲರೂ ಈಗ ನನ್ನ ಪತಿಯಾದ ಪುರಂದರರು ಇದ್ದಲ್ಲಿ ನಡೆಯಿರಿ'' ಈ ಮಹೇಂದ್ರ ಮಹಿಷಿಯ ಮಾತನ್ನು ಮನ್ನಿಸಿ ಸುರರೆಲ್ಲರೂ ಇಂದ್ರನು ಅಡಗಿ ಕುಳಿತ ಜಲಾಶಯದ ಬಳಿಗೆ ಬಂದರು. ಅವರನ್ನು ಕಂಡಕೂಡಲೇ ಶಚೀಪತಿಯು ಚೀರಿಕೊಂಡು ''ದೇವತೆಗಳೇ ! ನೀವು ಇಲ್ಲಿಗೆ ಏಕೆ ಬಂದಿರಿ? ನಾನು ಈಗ ಈ ಬ್ರಹ್ಮಹತ್ಯೆಯ ಪಾಪದಿಂದ ತಾಡಿತ. ಅದರ ತಾಪದಿಂದ ಪೀಡಿತ. ಅದರ ಪರಿಹಾರಕ್ಕಾಗಿ ನಾನೀಗ ತಪಂಗೈಯುತ್ತಿದ್ದೇನೆ. ದಯಮಾಡಿ ಬಿಟ್ಟು ಬಿಡಿರಿ ನನ್ನನ್ನು. ನೀವೆಲ್ಲರೂ ನಿಮ್ಮ ಸ್ಥಾನಗಳಿಗೆ ಹೋಗಿರಿ'' ಅದನ್ನು ಕೇಳಿ ವಿಷಾದ ವಿಹ್ವಲರಾದ ವಿಬುಧೋತ್ತಮರು ದೈನ್ಯದಿಂದ ಆ ದೇವರಾಜನನ್ನು ಕೇಳಿಕೊಂಡರು. ''ದೇವೇಂದ್ರ ! ವಿಶ್ವಕರ್ಮನ ಮಗನಾದ ಆ ವಿಶ್ವರೂಪಾಚಾರ್ಯನು ದೇವತೆಗಳನ್ನು ಋಷಿಗಳನ್ನು ವಂಚಿಸಿ ಅನರ್ಹರಿಗೆ ಯಜ್ಞಾನ್ನವನ್ನು ನೀಡುತ್ತಿದ್ದ. ಆದ್ದರಿಂದ ಪರೋಪಕಾರದ ದೃಷ್ಟಿಯಿಂದ ನೀನು ಅವನನ್ನು ವಧೆ ಮಾಡಿದೆ. ಇದರಲ್ಲಿ ನಿನ್ನದೇನು ತಪ್ಪಿದೆ? ನೀನು ನಿಷ್ಪಾಪಿ. ನಿನ್ನನ್ನು ಕರೆದುಕೊಂಡು ಹೋಗಲಿಕ್ಕೆಂದೇ ನಾವು ಬಂದಿದ್ದೇವೆ.'' ಆಗ ಅಲ್ಲಿಯೇ ನೀರಿನ ದಂಡೆಯ ಮೇಲೆ ಚಂಡಾಲಿಯ ರೂಪದಿಂದ ನಿಂತುಕೊಂಡ ಬ್ರಹ್ಮಹತ್ಯೆ ಬಾಯಿ ಬಿಟ್ಟಿತು. ''ಪಾಪಿಯಾದ ಇಂದ್ರನನ್ನು ನಾನು ಬಿಡುವುದಿಲ್ಲ. ಅಮರಾವತಿಗೆ ಹೋಗಗೊಡುವುದಿಲ್ಲ''. ಸುರಗುರು ಉತ್ತರಿಸಿದ.

**ಬೃಹಸ್ಪತಿ** : ಬ್ರಹ್ಮಹತ್ಯಾ ಪಾತಕವೇ ! ನಿನಗೆ ಇರಲು ಬೇರೆ ಸ್ಥಾನವನ್ನು ಕಲ್ಪಿಸುತ್ತೇವೆ. ನೀನು ಅಲ್ಲಿ ನೆಲಿಸು.'' ಆ ಬ್ರಹ್ಮಹತ್ಯೆಯನ್ನು ಹೀಗೆ ಶಾಂತಗೊಳಿಸಿ ಎಲ್ಲರೂ ಕೂಡಿ ವಿಚಾರಿಸಿ ಅದನ್ನು ನಾಲ್ಕು ಭಾಗಗಳಲ್ಲಿ ಹಂಚಿದರು. ದೇವತೆಗಳೆಲ್ಲರೂ ಕೈಜೋಡಿಸಿ ಪೃಥ್ವಿಯನ್ನು ಮೊದಲು ಕೇಳಿಕೊಂಡರು. ''ಭೂಮಾತೆ! ದೇವತಾಕಾರ್ಯ ಸಿದ್ಧಿಗಾಗಿ ಇಂದ್ರನ ಬ್ರಹ್ಮಹತ್ಯೆಯ ಒಂದಂಶವನ್ನು ನೀನು ಸ್ವೀಕರಿಸು'' ದೇವತೆಗಳ ಈ ಬಿನ್ನಹವನ್ನು ಕೇಳಿ ನೆಲವೆಲ್ಲವೂ ನಡುಗಿ ಹೋಯಿತು. ಈ ಪಾಪ ಲೇಪನದಿಂದ ನಾನು ಅಪವಿತ್ರಳಾಗಿ ಹೋಗುವೆ ಎಂಬ ಭಯಾತಂಕ ಅವಳನ್ನು ಕಂಗೆಡಿಸಿತ್ತು. ಆಗ ಬ್ರಹ್ಮಹತ್ಯಾಚಾರ್ಯರು ಅವಳನ್ನು ಸಂತೈಸಿದರು.

**ಬೃಹಸ್ಪತ್ಯಾಚಾರ್ಯರು :** ತಾಯಿ ! ''ನೀನು ಹೆದರಬೇಡ, ನೀನು ಎಂದೂ ಪಾಪ ರಹಿತಳು. ಮುಂದೆ ಯದುಕುಲದಲ್ಲಿ ಆ ಮಧುಸೂದನನು ಜನಿಸಲಿರುವನು, ಆ ಶ್ರೀ ಕೃಷ್ಣನ ಪಾದ ಸ್ಪರ್ಶದಿಂದ ನಿನ್ನಲ್ಲಿ ಉಳಿದ ಬ್ರಹ್ಮಹತ್ಯೆಯ ಅಂಶಿಕ ಪಾಪವು ಕಳೆದು ಹೋಗುವುದು. ನೀನು ಆಗ ಸಂಪೂರ್ಣ ನಿಷ್ಕಲ್ಮಷಳು ನಿಷ್ಪಾಪಳು ಆಗುವೆ.'' ಭೂದೇವಿಯು ದೇವತೆಗಳ ಮಾತಿಗೆ ಸಮ್ಮತಿಸಿ ಬ್ರಹ್ಮಹತ್ಯೆಯ ಒಂದಂಶವನ್ನು ಸ್ವೀಕರಿಸಿದಳು. ಅನಂತರ ದೇವಗುರುಗಳೇ ವೃಕ್ಷಗಳನ್ನು ಕರೆದು ಹೇಳಿದರು.

**ಬೃಹಸ್ಪತಿ** : ದೇವೇಂದ್ರನ ಬ್ರಹ್ಮಹತ್ಯಾ ಪಾಪದ ಒಂದಂಶವನ್ನು ನೀವೂ ತೆಗೆದುಕೊಳ್ಳಿರಿ. ಇದರಿಂದ ನಿಮಗೆ ದೇವತೆಗಳ ಅನುಗ್ರಹವಾಗುವುದು. ನಿಮ್ಮ ಶರೀರವನ್ನು ಯಾರಾದರೂ ಕಡಿದುಕತ್ತರಿಸಿ ಹಾಕಿದರೂ ಅವು ಮತ್ತೆ ಅಂಕುರಿಸಿ ಪಲ್ಲವಿಸಿ ಚಿಗುರಿ ಶಾಖೋಪ ಶಾಖೆಯಾಗಿ ಫಲಪುಷ್ಪಗಳಿಂದ ಹೂತುಕಾತು ಹೊಗರೇರಿ ನಿಲ್ಲುವವು. ಮತ್ತು ನೀವು ಯಾವಾಗಲೂ ಶುದ್ದಾತ್ಮರಾಗಿ ಉಳಿಯುವಿರಿ.'' ಸುರಗುರುವಿನ ಈ ಆಶ್ವಾಸನೆಯನ್ನು ನಂಬಿ ಮರಗಳೆಲ್ಲವೂ ಸುರಾಧಿಪನ ಪಾಪದಲ್ಲಿಯ ಒಂದು ಅಂಶವನ್ನು ತೆಗೆದುಕೊಂಡವು. ಇದರಂತೆ ದೇವತೆಗಳು ಜಲಾಭಿಮಾನಿ ದೇವತೆಗಳನ್ನು ಕರೆದು ''ಎಲ್ಲರನ್ನೂ ಪವಿತ್ರಗೊಳಿಸುವ ಪಾವಕ ಶಕ್ತಿಯು ನಿಮಗಾಗಲಿ'' ಎಂದು ವರವಿತ್ತು ಒಪ್ಪಿಸಿ, ಬ್ರಹ್ಮಹತ್ಯೆಯ ಒಂದಂಶವನ್ನು ಕೊಟ್ಟರು. ಅನಂತರ ಸುರಲೋಕ ಪ್ರಮುಖರು ಸ್ತ್ರೀಯರನ್ನು ಬರಮಾಡಿಕೊಂಡು ಅವರಿಗೆ ಇಚ್ಛಾನುಸಾರ ಕಾಮಸುಖಪ್ರಾಪ್ತಿಯ ವರವನ್ನು ಇತ್ತು ಅವರಿಗೂ ಬ್ರಹ್ಮಹತ್ಯೆಯ ಒಂದು ಭಾಗವನ್ನು ಕೊಟ್ಟು ''ಇದರಿಂದ ನಿಮ್ಮ ಮುಂದಿನ ಪೀಳಿಗೆಯವರಿಗೆ ಶುಭೋದಯವಾಗುವುದು'' ಎಂದು ಹರಿಸಿದರು.

ಹೀಗೆ ದೇವತೆಗಳು ಬ್ರಹ್ಮಹತ್ಯೆಯನ್ನು ನಾಕು ಬಗೆಯಲ್ಲಿ ವಿಂಗಡಿಸಿ ಬೇರೆ ಬೇರೆ ಭಾಗಗಳಲ್ಲಿ ಕೊಟ್ಟು ಇಂದ್ರನನ್ನು ಪಾಪ ಮುಕ್ತನನ್ನಾಗಿ ಮಾಡಿದರು. ಶಚೀದೇವಿಯೊಡಗೂಡಿಕೊಂಡು ಋಷಿಮುನಿಗಳನ್ನು ಮುಂದೆ ಮಾಡಿಕೊಂಡು ಆ ಪುರಂದರನು ಅಮರಾವತಿ ಪಟ್ಟಣದಲ್ಲಿ ಪುನಃ ಪ್ರವೇಶ ಮಾಡಿದನು. ಎಲ್ಲ ದೇವತೆಗಳೂ ತಾಪಸ ಋಷಿ ಮುನಿಗಳೂ ಕೂಡಿಕೊಂಡು ಅತ್ಯಂತ ವೈಭವ ವಿಜೃಂಭಣೆಗಳಿಂದ ಶಚೀ ಸಹಿತನಾದ ದೇವೇಂದ್ರನ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದರು. ಬಹುಕಾಲದಿಂದ ಸುರ ಸಾಮ್ರಾಜ್ಯ ಭ್ರಷ್ಟನಾದ ಆ ಶಚೀ ಪತಿಯು ಮತ್ತೆ ಎಲ್ಲ ಮಹಾತ್ಮರ ಹರಕೆ ಹಾಗೂ ಪುಣ್ಯಾತ್ಮರ ಹಾರೈಕೆಯಿಂದ ಲೋಕ ಪಾಲ ಪದದಲ್ಲಿ ಪ್ರತಿಷ್ಠಿತನಾದ. ಸ್ವರ್ಗಕ್ಕೆ ಕಳೆ ಬಂತು. ದೇವತೆಗಳ ಹೃದಯ ತುಂಬಿಬಂತು. ಸಜ್ಜನರೆಲ್ಲರ ಹೃದಯಗಳು ಸಂತಸದಿಂದ ನಲಿದಾಡಿದವು.



ಶ್ರೀ ಸ್ಕಂದ ಮಹಾಪುರಾಣದಲ್ಲಿ ಐದನೇ ಅಧ್ಯಾಯ ಮುಗಿದುದು

# ವಿಶ್ವಕರ್ಮನ ತಪಸ್ಸು, ವೃತ್ರಾಸುರನ ಉತ್ಪತ್ತಿ, ದಧೀಚಿಯಿಂದ ದೇವತೆಗಳಿಗೆ ಅಸ್ಥಿದಾನ

ಅಧ್ಯಾಯ - 6

**ಲೋಮಶ :** ''ದೇವೇಂದ್ರನ ಸುಧರ್ಮ ಸಿಂಹಾಸನಾರೋಹಣದ ಸಮಾರಂಭದ ವಿಜೃಂಭಣೆಯನ್ನು ಕಂಡು ವಿಶ್ವಕರ್ಮನ ಮನದಲ್ಲಿ ಹೊಗೆಯಾಡಿತು. ಮನದಲ್ಲಿ ಕ್ರೋಧ ಮೂಡಿತು.'' ತನ್ನ ಮಗನಾದ ವಿಶ್ವರೂಪಾಚಾರ್ಯನ ತಲೆ ಕಡಿದು ಹಂತಕನಾದ ಆ ಪುರಂದರನೇ ಮತ್ತೆ ದೇವರಾಜ ಪಟ್ಟಣದಲ್ಲಿ ಗಟ್ಟಿಯಾಗಿ ಕುಳಿತುಕೊಂಡು ಬಿಟ್ಟ. ಬ್ರಹ್ಮಹತ್ಯೆ ಮಾಡಿದ ಪಾಪಿಯೇ ಈ ಪುಣ್ಯ ಲೋಕದ ಪವಿತ್ರ ಸಿಂಹಾಸನದ ಮೇಲೆ ಮತ್ತೆ ಮೆರೆಯಬೇಕೆ? ಹೇಗಾದರೂ ಮಾಡಿ ನನ್ನ ಮಗನ ಶಿರಚ್ಛೇದ ಮಾಡಿದ ಈ ದುರುಳ ದೇವೇಂದ್ರನಿಗೆ ಮರಳಿ ಈ ಸಾಮ್ರಾಜ್ಯ ದಕ್ಕದಂತೆ ಮಾಡಬೇಕು. ಇವನನ್ನು ಮತ್ತೆ ಮಣ್ಣುಗೂಡಿಸಬೇಕು. ಇದಕ್ಕೆ ಏನು ಉಪಾಯ?'' ಎಂದು ವಿಚಾರಿಸಿ. ವಿಶ್ವಕರ್ಮನು ತಪಸ್ಸಿಗೆ ನಡೆದನು. ಅತ್ಯುಗ್ರವಾದ ತಪಸ್ಸು. ಕಲ್ಲು ಮನಸ್ಸು. ಘೋರ ತಪೋನುಷ್ಠಾನಕ್ಕೆ ಪಿತಾಮಹ ಪ್ರಸನ್ನ. ಬೇಕಾದ ವರಬೇಡು, ಎಂದು ಬ್ರಹ್ಮನಿಂದ ಆಶ್ವಾಸನೆ. ಪರಮಾನಂದ ಆ ಬಡಿಗನಿಗೆ. ಕೈ ಜೋಡಿಸಿ ಬೇಡಿಕೊಂಡ ಆ ಬ್ರಹ್ಮನಿಗೆ.

**ವಿಶ್ವಕರ್ಮ :** "ಭಗವನ್ ! ನನಗೆ ಒಬ್ಬ ಮಗ ಬೇಕು. ಸಾಮಾನ್ಯ ಮಗನಲ್ಲ. ಇಂದ್ರನನ್ನು ಕೊಲ್ಲುವ ಮಗ. ದೇವತೆಗಳನ್ನು ಗೆಲ್ಲುವ ಮಗ. ಸುರಸಾಮ್ರಾಜ್ಯವನ್ನು ಗೆಲ್ಲುವ ವೀರಪುತ್ರ. ಇಂಥ ಪರಾಕ್ರಮಿ ಪುತ್ರನನ್ನು ನನಗೆ ದಯಪಾಲಿಸು,'' 'ಹಾಗೆಯೇ ಆಗಲಿ' ಎಂದ ಆ ಚತುರ್ಮುಖ. ಬ್ರಹ್ಮನ ವರದಾನ ವ್ಯರ್ಥವಾದೀತೇ! ದೊಡ್ಡವರ ಮಾತಿಗೆ ತತ್ಕಾಲದಲ್ಲಿಯೇ ಫಲ. ಕೆಲ ಕಾಲದಲ್ಲಿಯೇ ಓರ್ವ ದಾರುಣ ದೈತ್ಯನ ಪ್ರಾದುರ್ಭಾವ. ವೃತ್ರ ಎಂದು ಅವನ ಹೆಸರು. ದಿನವೊಂದಕ್ಕೆ ನೂರು ಬಾಣಗಳ ಅಳತೆಯಲ್ಲಿಯೇ ಬೆಳೆಯುತ್ತಿದ್ದ ಆ ಭೂಪ. ಭೀಕರ ಆಕಾರ, ಭಯಂಕರ ಪ್ರತಾಪ, ಘೋರ ರೂಪ. ಭೀಷಣ ವ್ಯಕ್ತಿತ್ವ ಆ ವೃತ್ರನದು. ಹಿಂದೆ ಅಮೃತ ಮಂಥನದ ಕಾಲದಲ್ಲಿ ದೇವತೆಗಳು ಕೊಂದು ಹಾಕಿದ ದೈತ್ಯರನ್ನೆಲ್ಲ ಆ ಶುಕ್ರಾಚಾರ್ಯರು ತಮ್ಮ ಸಂಜೀವಿನಿ ವಿದ್ಯೆಯ ಪ್ರಭಾವದಿಂದ ಬದುಕಿಸಿದ್ದರಷ್ಟೇ ! ಆಗ ಸಂಜೀವಿನಿಯಿಂದ ಪುನರುಜ್ಜೀವನ ಪಡೆದ ಹೊಸ ಹುಮ್ಮಸ್ಸಿನ ವೀರ ದೈತ್ಯರೆಲ್ಲರೂ ವೃತ್ರನ ಬಳಿ ಸಾರಿ ಬಂದರು. ದೇವತೆಗಳ ಮೇಲೆ ಸೇಡು ತೀರಿಸಿಕೊಳ್ಳಲು ಹೊಂಚು ಹೂಟ ಅವರದು. ಕಾಡು ಕಿಚ್ಚಿಗೆ ಬಿರುಗಾಳಿ ಬೀಸಿದಂತಾಯಿತು ಆ ದೈತ್ಯದ್ವಯರ ಸೇನಾಸಮಾವೇಶ, ಪಾತಾಳದಿಂದ ಬಂದ ಆ ರಾಕ್ಷಸರ ಜೊತೆಗೆ ಭೂಮಿಯ ಬೇತಾಳದಂತಿರುವ ಆ ವೃತ್ರಾಸುರನೂ ಕೂಡಿಕೊಂಡು ಆಕ್ರಮಿಸಿಬಿಟ್ಟ ಈ ಭೂಮಂಡಲವನ್ನು. ಆ ಭೂಮಂಡಲದ ತಪಸ್ವಿಗಳಾದ ಋಷಿ ಮುನಿಗಳೆಲ್ಲರೂ ಭಯಾಕ್ರಾಂತ. ಸುರಪುರದ ನಾಗರಿಕರೆಲ್ಲರೂ ಚಿಂತೋದ್ಭ್ರಾಂತ. ಎಲ್ಲರೂ ಸತ್ಯಲೋಕಕ್ಕೆ ಓಡಿದರು. ಬ್ರಹ್ಮ ದೇವರ ಎದುರು ಕಷ್ಟನಷ್ಟದ ತಮ್ಮ ವ್ಯಥೆಯ

ಕಥೆಯನ್ನು ತೋಡಿಕೊಂಡರು. ಹಾಗೂ ಆ ತಮ್ಮ ಗುಂಪಿನಲ್ಲಿ ತೋರಿದ ಹೊಸ ಸಮಸ್ಯೆಯನ್ನು ಬ್ರಹ್ಮದೇವರಿಗೆ ತಿಳಿಸಿ ಅದಕ್ಕೇನು ಪರಿಹಾರ ಎಂದು ವಿಚಾರಿಸುತ್ತ ಹೇಳಿದರು.

''ಭಗವನ್ ! ನಾವು ಇನ್ನೂ ಒಂದು ತಪ್ಪು ಮಾಡಿದ್ದೇವೆ. ದಾನವರೊಂದಿಗೆ ನಡೆದ ಯುದ್ಧದಲ್ಲಿ ನಾವು ಗೆದ್ದು ವಿಜಯಶಾಲಿಯಾದೆವು. ಅಮೃತಪಾನ ಮಾಡಿ ಅಮರರಾಗಿದ್ದೆವು. ಇನ್ನು ಮೇಲೆ ನಮ್ಮ ಮೇಲೆ ಶಸ್ತ್ರವನ್ನು ಎತ್ತುವ ಎದೆಗಾರಿಕೆ ಯಾರಿಗಿದೆ? ಅಮೃತಪಾನ ಮಾಡಿ ವಜ್ರದೇಹಿಗಳಾದ ನಮ್ಮನ್ನು ದಿಟ್ಟಿಸಿ ನೋಡಲು ಕೂಡ ಈ ದೈತ್ಯರಿಗೆ ಶಕ್ತಿಯಿಲ್ಲ. ಅಂದ ಬಳಿಕ ನಮ್ಮಲ್ಲಿರುವ ಈ ಭಾರೀ ಘೋರಾಸ್ತ್ರಗಳಿಂದ ಏನು ಪ್ರಯೋಜನ? ಸ್ವರ್ಗದಲ್ಲಿ ಇದ್ದರೆ ಇವೆಲ್ಲವು ಜಂಗು ಹತ್ತಿ ಹೋಗುವವು. ಮೇಲಾಗಿ ಭಾರೀ ಭಾರ ಭೂತವಾದ ಈ ಘೋರ ಆಯುಧಗಳ ಹೊರಲಾರದ ಹೊರೆಯನ್ನು ನಾವೇಕೆ ಹೊರಬೇಕು? ಭೂಲೋಕದಲ್ಲಿಯೇ ಇಟ್ಟರಾಯಿತು.'' ಎಂದು ಅವುಗಳನ್ನೆಲ್ಲ ದಧೀಚಿ ಮುನಿಗಳ ಆಶ್ರಮದಲ್ಲಿ ಇಟ್ಟು ಬಂದುಬಿಟ್ಟೆವು. ಮುಂದೆ ಎಷ್ಟೋ ವರ್ಷಗಳ ಕಾಲ ಅವರು ನಮ್ಮ ದಾರಿ ಕಾಯ್ದರು. ನಾವು ಯಾರೂ ಹಣಿಕಿ ಹಾಕಲಿಲ್ಲ. ಅವುಗಳನ್ನು ಕಾಯುತ್ತ ಕೂಡುವುದು ಅವರಿಗೆ ಕಷ್ಟವಾಯಿತು. ದಧೀಚಿ ಮಹಾಮುನಿಗಳು, ನಮ್ಮ ದಾರಿ ನೋಡಿ ನೋಡಿ ಬೇಸತ್ತರು. ಕೊನೆಗೆ ಶಸ್ತ್ರಾಸ್ತ್ರಗಳನ್ನು ಕರಗಿಸಿ ನೀರು ಮಾಡಿ ಕುಡಿದು ಬಿಟ್ಟರು. ಈಗ ಆ ಪಾತಾಳದ ವೇತಾಳಗಳೂ ಭೂಲೋಕದ ನಮ್ಮ ಶತ್ರು ವೃತ್ರಾಸುರನೂ ಕೂಡಿ ಧರಣೀ ಮಂಡಲವನ್ನೆಲ್ಲ ಆಕ್ರಮಿಸಿಬಿಟ್ಟಿದ್ದಾರೆ. ಸ್ವರ್ಗದ ಮೇಲೆ ದಾಳಿ ಮಾಡುವ ಸನ್ನಾಹದಲ್ಲಿ ಇರುವರು. ಅವರು ನಮ್ಮ ಮೇಲೆ ಏರಿ ಬಂದರೆ, ನಮ್ಮ ಬಳಿ ಒಂದು ಅಸ್ತ್ರವೂ ಇಲ್ಲ. ಒಂಟಿ ಶಸ್ತ್ರವೂ ಇಲ್ಲ. ನಾವು ಪಾತಾಳದ ಪಾಪಾತ್ಮರನ್ನೂ ಈ ಭೂಲೋಕದ ದುರಾತ್ಮರನ್ನೂ ಎದುರಿಸುವುದು ಹೇಗೆ? ನಮಗೆ ಈ ವಿಷಯದಲ್ಲಿ ಮಾರ್ಗ ತಿಳಿಯದಂತಾಯಿತು.'' ದೇವತೆಗಳ ಈ ಶಂಕಾತಂಕಗಳನ್ನು ಕೇಳಿ ಹಂಸ ವಾಹನನು ಮಂದಹಾಸ ಬೀರಿ ನುಡಿದ.

**ಬ್ರಹ್ಮ** : ''ಸ್ವರ್ಗವಾಸಿಗಳೇ ! ಈ ಬಗೆಗೆ ನಾನೊಂದು ಹಂಚಿಕೆ ಹೇಳುತ್ತೇನೆ. ಕೇಳಿರಿ. ನೀವೆಲ್ಲರೂ ಈಗ ನೇರವಾಗಿ ದಧೀಚಿ ಮುನಿಗಳ ಆಶ್ರಮಕ್ಕೆ ಹೋಗಿರಿ. ''ನಿಮ್ಮ ಮೂಳೆಗಳನ್ನು ದಯಮಾಡಿ ನಮಗೆ ನೀಡಿರಿ'' ಎಂದು ಕೈ ಜೋಡಿಸಿ ಬೇಡಿಕೊಳ್ಳಿರಿ. ದಧೀಚಿ ಮುನಿಯು ಬ್ರಾಹ್ಮಣ ಕುಲದ ಮಹಾತ್ಮನಲ್ಲವೆ ! ಪರೋಪಕಾರಕ್ಕಾಗಿ ಅವರು ತಮ್ಮ ಪಂಚ ಪ್ರಾಣಗಳನ್ನೂ ಆನಂದದಿಂದ ಕೊಡುವರು. ಇದಕ್ಕೆ ಸಂದೇಹವೇ ಇಲ್ಲ. ನಿಮ್ಮ ಶಸ್ತ್ರಾಸ್ತ್ರಗಳ ಪಾನ ಮಾಡಿದ ಆ ಮುನಿ ಪುಂಗವರ ಒಂದೊಂದು ಮೂಳೆಯೂ ನಿಮಗೆ ಒಂದೊಂದು ಅಮೋಘ ಅಸ್ತ್ರವಾಗುವುದು, ಅದರಿಂದ ನಿಮಗೆ ಜಯ ನಿಶ್ಚಿತ. ಯಶಸ್ಸು ಖಂಡಿತ. ಆ ಮಹಾಮುನಿ ಬ್ರಹ್ಮತೇಜೋಯುಕ್ತವಾದ ಮೂಳೆಗಳನ್ನು ಬ್ರಹ್ಮಾಸ್ತ್ರವನ್ನು ಮಾಡಿಕೊಂಡು ನೀವು ದೈತ್ಯರೊಡನೆ ಹೋರಾಡಿರಿ. ವಿಜಯಶಾಲಿಗಳಾಗಿರಿ.'' ಬ್ರಹ್ಮದೇವರ ಆದೇಶದಂತೆ

ದೇವತೆಗಳೆಲ್ಲರೂ ಭೂಲೋಕದಲ್ಲಿ ಇರುವ ದಧೀಚಿ ಮುನಿಯ ಮಂಗಳಮಯ ಆಶ್ರಮಕ್ಕೆ ಬಂದರು. ಆ ಆಶ್ರಮದ ಪುಣ್ಯ ಪರಿಸರವನ್ನು ಕಂಡೇ ಆಶ್ಚರ್ಯ ದೇವತಾಗಣಕ್ಕೆ. ಅಲ್ಲಿಯ ಮರಗಳು ಕೂಡ ವಲ್ಕಲವುಟ್ಟು, ಜಡೆ ಬಿಟ್ಟು, ಬಿಸಿಲು ಮಳೆಗಾಳಿಗಳಲ್ಲಿ ನಿಂತು ಮುನಿಗಳಂತೆ ತಪಂಗೈಯುತ್ತಿದ್ದವು. ಆನೆ ಸಿಂಹಗಳು ಹಾವು ಮುಂಗಲಿಗಳು, ಹಸು ಹುಲಿಗಳು ಒಂದೆಡೆಗೆ ಪ್ರೀತಿಯಿಂದ ಕೂಡಿ ಆಡುತ್ತಿದ್ದವು. ಆಶ್ರಮದಲ್ಲಿ ಮತ್ತೊಬ್ಬ ಸೂರ್ಯನಂತೆ ದೇದೀಪ್ಯಮಾನವಾದ ದೇಹ ಕಾಂತಿಯಿಂದ ಯಜ್ಞಾಗ್ನಿಯಂತೆ ಕಂಗೊಳಿಸುತ್ತಿದ್ದರು ದಧೀಚಿ ಮುನಿಗಳು, ಅವರ ಪಕ್ಕದಲ್ಲಿಯೇ ಅವರ ಧರ್ಮಪತ್ನಿ ಸುವರ್ಚಾದೇವಿಯು ಮಂಡಿಸಿದ್ದಳು. ಸಾವಿತ್ರಿಯೊಂದಿಗೆ ಸಾಕ್ಷಾತ್ ಬ್ರಹ್ಮದೇವರೇ ಬಂದು ಕುಳಿತಂತೆ ತೋರಿತು ಆ ದೇವ ಸಮೂಹಕ್ಕೆ. ದೇವತೆಗಳೆಲ್ಲರೂ ಸಾಷ್ಟಾಂಗ ಪ್ರಣಾಮಗೈದರು ಆ ಮುನಿ ದಂಪತಿಗಳಿಗೆ. 'ನಿಮ್ಮಂಥ ಮಹಾ ದಾನಿಗಳು ಭೂಮಂಡಲದಲ್ಲಿಯೇ ಇಲ್ಲ' ಎಂದು ಸ್ತುತಿಸಿದರು. ಆಗ ಮುನಿಗಳು ಅವರಿಗೆ ಆದರೋಪಚಾರ ಮಾಡಿ ಕೇಳಿದರು.

**ದಧೀಚಿ :** ''ದೇವತೆಗಳೇ, ನೀವು ಇಲ್ಲಿಯವರೆಗೆ ಬಂದದ್ದೇಕೆ? ನಿಮಗೆ ಏನು ಬೇಕು? ನೀವು ಏನನ್ನಾದರೂ ಕೇಳಿ. ನಿಮಗೆ ಬೇಕಾದುದೆಲ್ಲವನ್ನೂ ನಾನು ಕೊಡಲು ಸಿದ್ಧ.'' ದೇವತೆಗಳು, ''ಪೂಜ್ಯರೇ ನಾವು ಭಯಭ್ರಾಂತರಾಗಿ ಬಂದಿದ್ದೇವೆ. ತಮ್ಮನೇ ಮೊರೆಹೊಕ್ಕಿದ್ದೇವೆ. ತಮ್ಮ ದರ್ಶನದಿಂದಲೇ ನಮ್ಮ ಭಯವೆಲ್ಲವೂ ಪರಿಹಾರವಾಗುವುದು ಎಂಬ ಭರವಸೆಯ ಮೇಲೆ ಬಂದಿದ್ದೇವೆ.'' ಋಷಿಗಳಿಗೆ ಅರ್ಥವಾಯಿತು. ದೇವತೆಗಳು ತಮ್ಮಿಂದ ಏನನ್ನೋ ಕೇಳಲು ಬಂದಿದ್ದಾರೆ ಎಂದು. ಆದರೆ ಅವರಿಗೆ ಕೇಳಲು ಸಂಕೋಚವಾಗುತ್ತಿದೆ. ನನ್ನ ಪಕ್ಕದಲ್ಲಿ ಈ ನನ್ನ ಧರ್ಮಪತ್ನಿ ಇದ್ದುದರಿಂದ ಅವರಿಗೆ ಕೇಳಲು ಸಂಕೋಚ ಎನಿಸಿರಬಹುದು.'' ಹೀಗೆ ವಿಚಾರಿಸಿ ಅವರು ಸುವರ್ಚಾದೇವಿಗೆ ಆಶ್ರಮದ ಒಳಗೆ ಹೋಗಲು ಹೇಳಿದರು. ಆ ಸತೀಮಣಿಯು ಪತಿಯ ಆಜ್ಞೆಯನ್ನು ತಲೆ ಮೇಲೆ ಹೊತ್ತು ಆಶ್ರಮದ ಒಳಗೆ ಹೋದಳು. ಅನಂತರ ಮುನಿಗಳು ''ನಿಮಗೆ ನನ್ನಿಂದ ಏನು ಆಗಬೇಕು ಮತ್ತು ನಿಮಗೆ ಏನು ಬೇಕು? ನಿಸ್ಸಂಕೋಚವಾಗಿ ಕೇಳಿರಿ.'' ನಿಸ್ಸಂದೇಹವಾಗಿ ನೀವು ಕೇಳಿದ್ದನ್ನು ಕೊಡುತ್ತೇವೆ ಎಂದು ಹೇಳಿದರು.

**ದೇವತೆಗಳು :** ''ಮಹಾನುಭಾವರೇ, ತಾವು ನಮಗೆ ತಮ್ಮ ಶರೀರದ ಎಲ್ಲ ಮೂಳೆಗಳನ್ನೇ ಕೊಡಬೇಕು. ತಮ್ಮ ಅಸ್ಥಿಯಿಲ್ಲದೇ ದೈತ್ಯರು ಸಾಯಲಾರರು. ನಾವು ಬದುಕಲಾರೆವು. ತಮ್ಮ ಅಸ್ಥಿ ನಮಗೆ ಒಂದು ಅಮೂಲ್ಯ ಆಸ್ತಿ. ಈ ತಮ್ಮ ಅಸ್ಥಿ ದಾನದಿಂದ ಈ ಎಲ್ಲ ಮೂವತ್ತಮೂರು ಕೋಟಿ ದೇವತೆಗಳು ಬದುಕಿ ಬಾಳಲು ಅವಕಾಶ ಮಾಡಿ ಕೊಡಬೇಕು. ತಮ್ಮ ಮೂಳೆಗಳನ್ನು ನೀಡಬೇಕು.''

**ದಧೀಚಿ :** ''ನಾನು ನನ್ನ ಎಲ್ಲ ಮೂಳೆಗಳನ್ನು ದೇವತೆಗಳಿಗೆ ಈಗಲೇ ಕೊಟ್ಟು ಬಿಟ್ಟೆ ಎಂದು ತಿಳಿಯಿರಿ.''

**ದೇವತೆಗಳು :** ''ಪೂಜ್ಯರೇ, ತಾವು ಬದುಕಿ ಇದ್ದಾಗ ತಮ್ಮ ಎಲವುಗಳನ್ನು ನಾವು ಹೇಗೆ ತೆಗೆದುಕೊಳ್ಳುವುದು?''

**ದಧೀಚಿ :** ''ನಿಮಗೆ ಚಿಂತೆ ಬೇಡ. ನಿಮಗಾಗಿ ನಾನು ಈ ದೇಹವನ್ನು ಪರಿತ್ಯಾಗ ಮಾಡುತ್ತೇನೆ.'' ಹೀಗೆ ಹೇಳಿ ಆ ಮಹಾಮುನಿಗಳು ಕೂಡಲೇ ಭಗವಂತನ ಧ್ಯಾನ ಮಾಡುತ್ತಾ ಸಮಾಧಿಯೋಗವನ್ನು ಕೈಕೊಂಡರು. ಶಾಸ್ತ್ರೋಕ್ತ ಪ್ರಕಾರದಿಂದ ಶ್ವಾಸವನ್ನು ನಿರೋಧ ಮಾಡಿ, ನಾಭಿ ಚಕ್ರದಿಂದ ಪ್ರಾಣವಾಯುವನ್ನು ಬ್ರಹ್ಮರಂಧ್ರದವರೆಗೆ ಒಯ್ದು ಭಗವದ್‌ಧ್ಯಾನೈಕತಾಲೀನ ಮಾನಸರಾಗಿ ಸಜ್ಜನರ ಕಲ್ಯಾಣಕ್ಕಾಗಿ ಪ್ರಾಣಾರ್ಪಣೆ ಮಾಡಿದರು. ಈ ಪರೋಪಕಾರದ ಪುಣ್ಯ ಪ್ರಭಾವದಿಂದ ಅವರು ಕೂಡಲೇ ಸತ್ಯಲೋಕಕ್ಕೆ ತೆರಳಿದರು.



**ಶ್ರೀ ಸ್ಕಂದ ಮಹಾಪುರಾಣದ ಆರನೇ ಅಧ್ಯಾಯ ಮುಗಿದುದು.**

ಅಧ್ಯಾಯ - 7

## ಪಿಪ್ಪಲಾದನ ಜನನ, ಸುವರ್ಚೆಯ ಪತಿಲೋಕ ಗಮನ, ನಮುಚಿ ವಧ, ವೃತ್ರ ವಾಸವ ಯುದ್ಧ : ಇಂದ್ರ ವಿಜಯ

**ಲೋಮಶ :** ಮಹಾಮಹಿಮ ದಧೀಚಿ ಮಹರ್ಷಿಯು ಸುರಕಾರ್ಯಕ್ಕಾಗಿ ಆತ್ಮಾರ್ಪಣೆಗೈದ ಬಳಿಕ ದೇವೇಂದ್ರನು ಕಾಮಧೇನುವನ್ನು ಕರೆದನು. 'ಈ ದಧೀಚಿಯ ದೇಹವನ್ನು ನೀನು ನೆಕ್ಕು' ಎಂದು ಹೇಳಿದನು. ಅದಕ್ಕೆ ಆ ಸುರಲೋಕದ ಸುರಭಿಯು 'ಒಳ್ಳೆಯದು, ಹಾಗೆ ಮಾಡುವೆ' ಎಂದು ಹೇಳಿ ದಧೀಚಿ ಮುನಿಯ ದಿವ್ಯ ದೇಹವನ್ನು ತನ್ನ ನಾಲಿಗೆಯಿಂದ ನೆಕ್ಕತೊಡಗಿತು. ಆ ಮಹಾತ್ಮರ ಮೈಯೊಳಗಿನ ಮಾಂಸವನ್ನೆಲ್ಲ ತಿಂದು ದೇಹವನ್ನು ಸ್ವಚ್ಛವಾಗಿ ಮಾಡಿತು. ಅನಂತರ ಗೀರ್ವಾಣ ಗಣದವರೆಲ್ಲರೂ ಬಂದು ಆ ಮಹಾಮುನಿಯ ಮೈಯಲ್ಲಿಯ ಮೂಳೆಗಳನ್ನು ತೆಗೆದುಕೊಂಡು ಶಸ್ತ್ರಗಳನ್ನಾಗಿ ಮಾಡಿದರು. ದಧೀಚಿ ದೇಹದ ಬೆನ್ನೆಲುಬಿನಿಂದ ವಜ್ರಾಯುಧವನ್ನು, ಅವರ ಶಿರಃಕಪಾಲದಿಂದ ಬ್ರಹ್ಮಶಿರ ಎಂಬ ಅಸ್ತ್ರವನ್ನು ಸಿದ್ಧಗೊಳಿಸಲಾಯಿತು. ಹೀಗೆ ಆ ಬಡ ಬ್ರಾಹ್ಮಣನ ಬಡಕಲು ದೇಹದ ಉಳಿದ ಅಸ್ಥಿಗಳಿಂದ ಅನೇಕ ಶಸ್ತ್ರಾಸ್ತ್ರಗಳನ್ನು ದೇವತೆಗಳು ನಿರ್ಮಿಸಿದರು. ಬ್ರಹ್ಮಜ್ಞಾನಿಯಾದ ಆ ತಪಸ್ವಿ ಬ್ರಾಹ್ಮಣನ ಮೂಳೆಗಳಿಂದ ಮಾಡಿದ ಅಸ್ತ್ರಗಳು ಅಮೋಘವೂ ಅತಿಭಯಂಕರವೂ ಆಗಿದ್ದವು. ಅವುಗಳನ್ನು ತೆಗೆದುಕೊಂಡು ಆ ದೇವತೆಗಳೆಲ್ಲರೂ ಆನಂದದಿಂದ ವಿಜಯದ ಕನಸನ್ನು ಕಾಣುತ್ತ ಅಮರಾವತಿಗೆ ನಡೆದರು, ಇತ್ತ

ಮುನಿಗಳ ಪರ್ಣ ಕುಟೀರದಲ್ಲಿ ಪತಿಯ ಆಜ್ಞೆಯಂತೆ ಒಳಗೆ ಹೋದ ಸುವರ್ಚೆಯು ಕೆಲಕಾಲದ ನಂತರ ಪತಿಯಿದ್ದಲ್ಲಿಗೆ ಮರಳಿದಳು. ಅವಳು ಬರುವುದರೊಳಗಾಗಿ ದೇವತೆಗಳು ಮುನಿಯ ದೇಹದ ಮೂಳೆಗಳನ್ನು ಕೂಡ ಒಂದೂ ಬಿಡದೆ ತೆಗೆದುಕೊಂಡು ಹೋಗಿ ಬಿಟ್ಟಿದ್ದರು. ಅವಳ ಜೀವನದ ಸರ್ವಸ್ವ ನಾಶವೇ ಆಗಿ ಹೋಗಿತ್ತು. ದೇವಗಣದ ಈ ಭೀಕರ ವಂಚನೆಯ ಪ್ರಕರಣ ಕಂಡು ಅವಳ ಹೃದಯ ಸಾವಿರ ಹೋಳಾಗಿತ್ತು. ಅವಳ ಆಯುಷ್ಯದ ಸತ್ಯಾನಾಶವಾಗಿ ಹೋಗಿದ್ದಿತು. ಆ ದುಃಖದ ದಳ್ಳುರಿಗೆ ಅವಳ ಕಣ್ಣೀರು ಕೂಡ ಬತ್ತಿ ಹೋಗಿದ್ದವು. ದುಃಖದ ಉದ್ವೇಗದಿಂದ ಥರಗುಟ್ಟಿ ನಡುಗುತ್ತಿರುವ ಆ ಸಾಧ್ವೀಮಣಿಯು ಆ ಮುಗಿಲು ಮಾನವರಿಗೆಲ್ಲ 'ದೇವತೆಗಳೆಲ್ಲರೂ ಇಂದಿನಿಂದ ಸಂತಾನಹೀನರಾಗಲಿ. ಅವರಿಗೆ ಮಕ್ಕಳಾಗುವುದೇ ಬೇಡ' ಎಂದು ಹಿಡಿ ಶಾಪ ಹಾಕಿದಳು. ಆದರೂ ಅವಳಿಗೆ ಮನಸ್ಸಿನಲ್ಲಿ ಸಮಾಧಾನವಿಲ್ಲ. ಜೀವನದಲ್ಲಿ ಆಶೆ ಇಲ್ಲ. ಜಗತ್ತೇ ಜೀರ್ಣಾರಣ್ಯ ವೆನಿಸಿತು ಅವಳ ಪಾಲಿಗೆ. ಒಂದು ಪಿಪ್ಪಲ ವೃಕ್ಷದ ಕೆಳಗೆ ಹೋಗಿ ಕುಳಿತಳು. ಕಣ್ಣೀರಿನ ಕೋಡಿ ಹರಿಯಿತು. ಕಣ್ಣೀರಿನ ಕಾದಂಬಿನಿಯಾಗಿ ಅವಳು ಅತ್ತದ್ದೇ ಅತ್ತದ್ದು, ಈ ವೇಳೆಯಲ್ಲಿ ಅವಳು ತುಂಬು ಗರ್ಭಿಣಿ. ದುಃಖೋದ್ವೇಗದಲ್ಲಿ ಎದೆ ಎದೆ ಬಡೆದುಕೊಂಡು ಅಳುವಾಗ ಅವಳ ಗರ್ಭದಿಂದ ಆ ಮಗುವು ಪಿಪ್ಪಲ ವೃಕ್ಷದಡಿಯಲ್ಲಿಯೇ ಬಿದ್ದಿತು. ಆದ್ದರಿಂದ ಅವನಿಗೆ 'ಪಿಪ್ಪಲಾದ' ಎಂಬ ಹೆಸರು ಬಂದಿತು. ತನ್ನ ಪ್ರಾಣಸರ್ವಸ್ವವಾದ ಪತಿದೇವನ ಅಕಾಲ ಮರಣದಿಂದ ದುಃಖಾಗ್ನಿಯಲ್ಲಿ ದಗ್ಧಳಾದ ಆ ಮಾತೆಗೆ ತನ್ನ ಕರುಳಿನ ಕುಡಿಯಾದ ಆ ಮಗುವಿನ ಮೇಲೆಯೂ ಮಮತೆ ಮೂಡಲಿಲ್ಲ. ಆ ದುರ್ದೈವೀ ಕಂದನ ಕಡೆಗೆ ಕರುಣಾ ಭರಿತವಾದ ದೃಷ್ಟಿಯನ್ನು ಒಮ್ಮೆ ಎತ್ತಿ ನೋಡಿ, ಅವಳು ನುಡಿದಳು.

**ಸುವರ್ಚಾ** : ''ಈ ಅಭಾಗಿನಿಯ ಹೊಟ್ಟೆಯಿಂದ ಹುಟ್ಟಿದ ದುರದೃಷ್ಟದ ಮಗುವೇ, ನೀನು ಈ ಗಿಡದಡಿಯಲ್ಲಿಯೇ ಬೆಳೆದು ದೊಡ್ಡವನಾಗು. ಈ ಗಿಡದ ಹಣ್ಣುಗಳನ್ನೇ ತಿಂದು ಬದುಕು. ಮುಂದೆ ನೀನು ಒಬ್ಬ ದೊಡ್ಡ ಮುನಿ ಮಹಾತ್ಮನಾಗಿ ಕೀರ್ತಿವಂತನಾಗು. ಇದಿಷ್ಟೇ ನಿನಗೆ ಈ ದೌರ್ಭಾಗ್ಯದ ತಾಯಿ ನೀಡುವ ಆಶೀರ್ವಾದ. ಮಗು ! ಚಿರಂಜೀವಿಯಾಗು. ಜ್ಞಾನಿಯಾಗು, ತ್ಯಾಗಿಯಾಗು, ವಿರಾಗಿಯಾಗು ಯೋಗಿಯಾಗು. ಭಗವನ್ನಿಷ್ಠನಾಗು, ಭಗವದ್ಭಕ್ತನಾಗು,'' ಹೀಗೆ ಮಗನನ್ನು ಆಶೀರ್ವದಿಸಿದಳು. ಮತ್ತೊಮ್ಮೆ ಆ ಮಗನನ್ನು ಕಣ್ತುಂಬ ನೋಡಿ, ಹೃದಯ ತುಂಬಿಹರಿಸಿ ಆ ತಾಯಿಯು ಪತಿಯನ್ನು ಕುರಿತು ತಪಸ್ಸಮಾಧಿಯನ್ನು ಕೈಕೊಂಡಳು. ಸಮಾಧಿ ಯೋಗದಿಂದ ಈ ದೇಹವನ್ನು ತ್ಯಾಗಮಾಡಿ ಪರಲೋಕವನ್ನು ಹೊಂದಿದಳು. ಹೀಗೆ ಸುವರ್ಚೆಯು ತನ್ನ ಯೋಗ ಸಮಾಧಿಯಿಂದ ಪ್ರಾಣ ಪರಿತ್ಯಾಗ ಮಾಡಿ ಪುನಃ ತನ್ನ ಪತಿಯೊಂದಿಗೆ ಮಧುರ ಮಿಲನ ಹೊಂದಿ ಅಜರಾಮರಳಾದಳು.

ಇತ್ತ ಸುರವೀರರೆಲ್ಲ ದಧೀಚಿಯ ಎಲವುಗಳಿಂದ ಭೀಕರವಾದ ಶಸ್ತ್ರಾಸ್ತ್ರಗಳನ್ನು ಮಾಡಿಕೊಂಡು ಅತ್ಯುತ್ಸಾಹದಿಂದ ದೈತ್ಯರ ಮೇಲೆ ಯುದ್ಧ ಸಾರಿದರು.

ಬೃಹಸ್ಪತ್ಯಾಚಾರ್ಯರನ್ನು ಮುಂದೆ ಮಾಡಿಕೊಂಡು ಮಹೀತಲದ ಮಧ್ಯಪ್ರದೇಶದಲ್ಲಿ ಬಂದು ವೈರಿಗಳನ್ನು ಆಹ್ವಾನಿಸಿದರು. ವೃತ್ರಾಸುರನು ಕೂಡ ದೈತ್ಯದಾನವರ ಪ್ರಚಂಡ ಸೈನ್ಯದೊಂದಿಗೆ ಸಂಗ್ರಾಮಾಂಗಣಕ್ಕೆ ಬಂದು ದೇವಸೇನೆಯನ್ನು ಎದುರಿಸಿದನು. ಆಗ ದೇವದಾನವರಲ್ಲಿ ಅತ್ಯಂತ ಭೀಕರ ತರವಾದ ಸಂಗ್ರಾಮವು ಮಸಗಿತು. ಮೊದಲು ಇಂದ್ರ ಮತ್ತು ನಮುಚಿ ದೈತ್ಯರ ಘೋರ ಯುದ್ಧವು ಪ್ರಾರಂಭವಾಯಿತು. ದೇವೇಂದ್ರನು ಕ್ರೋಧಾವೇಶದಿಂದ ನಮುಚಿಯ ದೇಹದ ಮೆಲೆ ವಜ್ರಾಯುಧದಿಂದ ಹೊಡೆತ ಹಾಕಿದನು, ಆದರಿಂದ ನಮುಚಿಯ ಒಂದು ಕೂದಲವೂ ಕೊಂಕಲಿಲ್ಲ. ಆಗ ಇಂದ್ರನಿಂದ ಭೀಷಣ ಗದಾ ಪ್ರಹಾರ, ಆ ಗದೆಯೂ ಚೂರು ಚೂರು. ನುಚ್ಚ ನೂರು. ಕೂಡಲೇ ದೇವೇಂದ್ರನು ಶೂಲಾಯುಧವನ್ನು ಎತ್ತಿದ. ನಮುಚಿಯ ಮೈಮೇಲೆ ಬಿದ್ದ ಆ ಶೂಲವೂ ಸಾವಿರ ತುಂಡು. ಆಗ ನಮುಚಿಯ ಅಟ್ಟಹಾಸ. ಇಂದ್ರನ ಉಪಹಾಸ. ಇಷ್ಟಾದರೂ ನಮುಚಿಯಿಂದ ದೇವೇಂದ್ರನ ಮೇಲೆ ಒಂದೂ ಪ್ರಹಾರವಿಲ್ಲ. ಒಮ್ಮೆಯೂ ನಮುಚಿ ಅಸ್ತ್ರ ಎತ್ತಲಿಲ್ಲ. ಶಸ್ತ್ರ ಹಿಡಿಯಲಿಲ್ಲ, ಇದರಿಂದ ಇಂದ್ರನಿಗೆ ಭಯ, ಭ್ರಾಂತಿ, ಉದ್ವೇಗ, ದುಃಖ, ನಿರಾಶೆ, ಮೇಲೆ ಕಿಂಕರ್ತವ್ಯತಾ ಮೌಢ್ಯ. ಭಯಂಕರ ಜಾಡ್ಯ. ಈ ಸಂದರ್ಭದಲ್ಲಿಯೇ ಆಕಾಶವಾಣಿ ''ದೇವೇಂದ್ರ! ಈ ನಮುಚಿ ಸಾಮಾನ್ಯ ದೈತ್ಯನಲ್ಲ. ಮಹಾವೀರ, ಅಷ್ಟೇ ಘೋರ. ಇವನನ್ನು ವಧಿಸಲು ಒಂದೇ ಒಂದು ಅಸ್ತ್ರವೆಂದರೆ ನೀರಿನ ಮೇಲಿನ ಬುರುಗು. ಬೇರಾವ ಅಸ್ತ್ರಕ್ಕೂ ಇವನು ಅವಧ್ಯ. ಆದ್ದರಿಂದಲೇ ಅಜಿಂಕ್ಯ.'' ಆಕಾಶವಾಣಿಯ ಈ ಮಂಗಳ ವಚನವನ್ನು ಕೇಳಿ ಇಂದ್ರನಿಗೆ ಪರಮಾನಂದ. ಕೂಡಲೇ ಸಾಗರದ ತೀರಕ್ಕೆ ಧಾವಿಸಿದ. ಅವನನ್ನು ಬೆನ್ನಟ್ಟಿ ನಮುಚಿಯೂ ಓಡಿದ. ಈಗ ಮಾತ್ರ ಸುಮ್ಮನಿರಲ್ಲಿಲ್ಲ ನಮುಚಿ. ತ್ರಿಶೂಲದಿಂದ ಪ್ರಹರಿಸಿದ. ಇಂದ್ರನು ಕೂಡ ಸಮುದ್ರದ ಬುರುಗನ್ನು ತೆಗೆದುಕೊಂಡು ನಮುಚಿ ದೈತ್ಯನನ್ನು ಪ್ರಹರಿಸಿದ. ಆದರಿಂದ ನಮುಚಿಯು ಆ ಪುರಹೂತನ ಫೇನ ಪ್ರಹಾರವನ್ನು ತಾಳಲಾರದೆ ನೆಲಕ್ಕುರುಳಿದ. ಹೀಗೆ ನಮುಚಿ ಸಂಹಾರದಿಂದ ತುಷ್ಟರಾದ ದೇವತೆಗಳು ಇಂದ್ರನ ಮೇಲೆ ಪುಷ್ಪವೃಷ್ಟಿಗರೆದರು. ಅದರ ಹಿಂದೆಯೇ ಬಂದು ಪ್ರಶಂಸಾ ವೃಷ್ಟಿ.

ತನ್ನ ಬಲಗೈಯಂತಿದ್ದ ನಮುಚಿಯು ಬರೀ ನೀರ ಮೇಲಿನ ಬುರುಗಿನಿಂದಲೇ ಹತನಾದದ್ದನ್ನು ಕಂಡು ಕ್ಷುದ್ಧ ವೃತ್ರಾಸುರನ ಭೀಕರವಾದ ಆಕಾರವನ್ನು ಕಂಡೇ ಅನೇಕ ದೇವತೆಗಳು ನೆಲಕ್ಕೆ ಕುಸಿದರು. ಮಾನವರು ಮೂರ್ಛೆ ಹೋದರು. ಇಂದ್ರನು ತನ್ನ ಗಜರಾಜ ಐರಾವತವನ್ನು ಏರಿದ, ಕೈಯಲ್ಲಿ ವಜ್ರ ಹಿಡಿದ. ಅಷ್ಟದಿಕ್ಪಾಲಕರೂ ಅಷ್ಟವಸುಗಳೂ ಏಕಾದಶರುದ್ರರೂ, ದ್ವಾದಶ ಆದಿತ್ಯರೂ ನಲವತ್ತೊಂಬತ್ತು ಮರುತಾಂ ಗಣಗಳೂ ಉಳಿದೆಲ್ಲ ಗೀರ್ವಾಣರ ಗಣ ಗುಂಪುಗಳೂ ಆ ಸುರೇಂದ್ರನನ್ನು ಬೆಂಬಲಿಸಿ ರಣರಂಗದಲ್ಲಿ ಮುನ್ನುಗ್ಗಿದರು. ಆದರೆ ಅವರೆಲ್ಲರೂ ದೈತ್ಯಾಕಾರದ ವೃತ್ರ ಶತ್ರುವನ್ನು ಕಂಡಕೂಡಲೇ ಗರ್ಭಗಲಿತರಾಗಿ ಹೋದರು. ಇಂದ್ರನಿಗೂ ಕೂಡ ಹೆದರಿಕೆ ಭಯಭ್ರಾಂತಿ. ಏನೂ ಮಾಡಲು ತೋಚದೆ, ಕೂಡಲೇ

ಶಿವನಿಗೆ ಶರಣು ಹೋದ. ಆನೆಯಿಂದ ಕೆಳಗಿಳಿದು ಅಲ್ಲಿಯೇ ಶಿವಲಿಂಗದ ಪೂಜೆಯನ್ನು ಪ್ರಾರಂಭಿಸಿದ. ಅವರ ಕುಲಪುರೋಹಿತರಾದ ಬೃಹಸ್ಪತ್ಯಾಚಾರ್ಯರು ಅಲ್ಲಿಯೇ ಇಂದ್ರನಿಗೆ ಶಿವಪೂಜೆಯ ವಿಧಿವಿಧಾನಗಳನ್ನು ಹೇಳತೊಡಗಿದರು.

**ಬೃಹಸ್ಪತಿ :** "ದೇವರಾಜನೆ, ಕಾರ್ತೀಕ ಶುಕ್ಲ, ತ್ರಯೋದಶಿಯಂದು ಶನಿವಾರ ಬಂದರೆ, ನಮ್ಮೆಲ್ಲ ಭಕ್ತರ ಮನೋರಥ ಸಿದ್ಧವಾದಂತೆಯೇ, ಅಂದು ಪ್ರದೋಷ ಕಾಲದಲ್ಲಿ ಇಷ್ಟಕಾಮ ಸಿದ್ಧಿಗಾಗಿ ಶಿವಲಿಂಗವನ್ನು ಪೂಜಿಸಬೇಕು, ಮಧ್ಯಾನ್ಹವೇ ಸ್ನಾನ ಮಾಡಿ ಎಳ್ಳು ಗಂಧ ಪುಷ್ಪ ಫಲ ಮುಂತಾದವುಗಳಿಂದ ಶಿವಪೂಜೆ ಗೈಯಬೇಕು. ಮತ್ತೆ ಪ್ರದೋಷ ಕಾಲದಲ್ಲಿ ಸ್ಥಾವರ ಲಿಂಗವನ್ನು ಪೂಜಿಸಬೇಕು. ಊರೊಳಗಿನ ಲಿಂಗಕ್ಕಿಂತ ಊರ ಹೊರಗಿನ ಲಿಂಗ ಪೂಜೆಯಿಂದ ನೂರು ಪಟ್ಟು ಪುಣ್ಯ ಹೆಚ್ಚು. ಗುಡ್ಡದಲ್ಲಿರುವ ಶಿವಲಿಂಗಕ್ಕಿಂತ ತಪೋವನದಲ್ಲಿರುವ ಶಿವಲಿಂಗದಿಂದ ಸಾವಿರಪಟ್ಟು ಅಧಿಕ ಪುಣ್ಯ. ತೀರ್ಥ ಕ್ಷೇತ್ರಕ್ಕೆ ಹೋದವರು ಪುಣ್ಯಜಲದಲ್ಲಿ ಸ್ನಾನ ಮಾಡಬೇಕು. ಬಾವಿಗಳಲ್ಲಿ ಸ್ನಾನ ಮಾಡುವವರು ಕೈಯಿಂದ ನೀರನ್ನೆತ್ತಿ ಸ್ನಾನಮಾಡಬಾರದು. ಹಗ್ಗದಿಂದ ನೀರನ್ನು ಜಗ್ಗಿ ಯಾವುದಾದರೂ ಪಾತ್ರೆಯಲ್ಲಿ ಹಾಕಿಕೊಂಡು ಸ್ನಾನ ಮಾಡಬೇಕು. ಬಾವಿಗಿಂತ ಕುಂಟಿ, ಕುಂಟಿಗಿಂತ ಕೆರೆ, ಕೆರೆಗಿಂತ ಸರೋವರ, ಸರೋವರಕ್ಕಿಂತ ಝುರಣಿ, ಝುರಣಿಗಿಂತ ಉಪನದಿ, ಉಪನದಿಗಿಂತ ಮಹಾನದಿ, ಮಹಾನದಿಗಿಂತಲೂ ವಿಶಿಷ್ಟ ತೀರ್ಥ, ಅವುಗಳಲ್ಲಿಯೂ ಗಂಗೆ, ಅದಕ್ಕಿಂತ ಗಂಗಾ ಯಮುನಾ ಸಂಗಮ ಮುಂತಾದ ಮಹಾತೀರ್ಥಗಳು ಒಂದಕ್ಕಿಂತ ಒಂದು ಉತ್ತರೋತ್ತರ ಫಲಪ್ರದವು ಆಗಿವೆ.

ಪ್ರದೋಷಕಾಲದಲ್ಲಿ ಅರ್ಥಾತ್ ಸಂಧ್ಯಾಕಾಲದಲ್ಲಿ ಸ್ನಾನಮಾಡಿದ ಬಳಿಕ ಮೌನದಿಂದ ಇರಬೇಕು. ಶಕ್ತಿ ಇದ್ದವರು ಶಿವಲಿಂಗದ ಎದುರು ಸಾವಿರ ದೀಪ ಬೆಳಗಿಸಬೇಕು. ಅಷ್ಟೂ ಸಾಧ್ಯವಿಲ್ಲದವರು ಮೂವತ್ತೆರಡು ದೀಪಗಳನ್ನಾದರೂ ಹಚ್ಚಬೇಕು. ತುಪ್ಪದ ದೀಪ ವಿಶೇಷ ಫಲದಾಯಕ. ಇದರಂತೆ ಫಲ, ಧೂಪ, ನೈವೇದ್ಯ, ಗಂಧ, ಪುಷ್ಪಾದಿಗಳನ್ನು ಅರ್ಪಿಸಿ ಶಿವನ ಷೋಡಶೋಪಚಾರ ಪೂಜೆ ಮಾಡಬೇಕು. ಭಕ್ತರ ಮನೋರಥಗಳೆಲ್ಲವೂ ಪೂರ್ಣವಾಗುತ್ತವೆ. ಪೂಜೆಯ ಅನಂತರ ಮಹಾದೇವರಿಗೆ ನೂರೆಂಟು ಪ್ರದಕ್ಷಣೆ ನಮಸ್ಕಾರಗಳನ್ನು ಹಾಕಬೇಕು. ಅನಂತರ ಮಹಾರುದ್ರದೇವರ ನೂರು ನಾಮಾವಳಿಗಳನ್ನು ಭಕ್ತಿಪೂರ್ವಕವಾಗಿ ಹೇಳಬೇಕು.

## ಪರಮೇಶ್ವರನ ಶತನಾಮಾವಳಿ

ನಮೋ ರುದ್ರಾಯ ನೀಲಾಯ ಭೀಮಾಯ ಪರಮಾತ್ಮನೇ ।
ಕಪರ್ದಿನೇ ಸುರೇಶಾಯ ವ್ಯೋಮಕೇಶಾಯ ವೈ ನಮಃ ॥

ವೃಷಭಧ್ವಜಾಯ ಸೋಮಾಯ ಸೋಮನಾಥಾಯ ಶಂಭವೇ ।
ದಿಗಂಬರಾಯ ಭರ್ಗಾಯ ಉಮಾಕಾಂತಾಯ ವೈ ನಮಃ ॥

ತಪೋಮಯಾಯ ಭವ್ಯಾಯ ಶಿವಶ್ರೇಷ್ಠಾಯ ವಿಷ್ಣವೇ ।
ವ್ಯಾಲಪ್ರಿಯಾಯ ವ್ಯಾಲಾಯ ವ್ಯಾಲಾನಾಂ ಪತಯೇ ನಮಃ ॥
ಮಹೀಧರಾಯ ವ್ಯಾಘ್ರಾಯ ಪಶೂನಾಂ ಪತಯೇ ನಮಃ ।
ಮುರಾಂತಕಾಯ ಸಿಂಹಾಯ ಶಾರ್ದೂಲಾಯ ಮುಖಾಯ ಚ ॥

ಮೀನಾಯ ಮೀನನಾಥಾಯ ಸಿದ್ಧಾಯ ಪರಮೇಷ್ಠಿನೇ ।
ಕಾಮಾಂತಕಾಯ ಬುದ್ಧಾಯ ಬುದ್ಧೀನಾಂ ಪತಯೇ ನಮಃ ॥

ಕಪೋತಾಯ ವಿಶಿಷ್ಟಾಯ ಶಿಷ್ಟಾಯ ಸಕಲಾತ್ಮನೇ ।
ವೇದಾಯ ವೇದಜೀವಾಯ ವೇದಗುಹ್ಯಾಯ ವೈ ನಮಃ ॥

ದೀರ್ಘಾಯು ದೀರ್ಘರೂಪಾಯ ದೀರ್ಘಾರ್ಥಾಯ ಪಿನಾಕಿನೇ ।
ನಮೋ ಜಗತ್ಪ್ರತಿಷ್ಠಾಯ ವ್ಯೋಮರೂಪಾಯ ವೈ ನಮಃ ॥

ಗಜಾಸುರ ಮಹಾಕಾಲಾಯಾಂಧಕಾಸುರ ಭೇದಿನೇ ।
ನೀಲ ಲೋಹಿತ ಶುಕ್ಲಾಯ ಚಂಡಮುಂಡಪ್ರಿಯಾಯ ಚ ॥

ಭಕ್ತಿಪ್ರಿಯಾಯ ದೇವಾಯ ಜ್ಞಾತ್ರೇ ಜ್ಞಾನಾವ್ಯಯಾಯ ಚ ।
ಮಹೇಶಾಯ ನಮಸ್ತುಭ್ಯಂ ಮಹಾದೇವ ಹರಾಯ ಚ ॥

ತ್ರಿಣೇತ್ರಾಯ ತ್ರಿವೇದಾಯ ವೇದಾಂಗಾಯ ಹರಾಯ ಚ ।
ಅರ್ಥಾಯ ಚಾರ್ಥರೂಪಾಯ ಪರಮಾರ್ಥಾಯ ವೈ ನಮಃ ॥

ವಿಶ್ವರೂಪಾಯ ವಿಶ್ವಾಯ ವಿಶ್ವನಾಥಾಯ ವೈ ನಮಃ ।
ಶಂಕರಾಯ ಚ ಕಾಲಾಯ ಕಾಲವಯವರೂಪಿಣೇ ॥

ಅರೂಪಾಯ ವಿರೂಪಾಯ ಸೂಕ್ಷ್ಮಸೂಕ್ಷ್ಮಾಯ ವೈ ನಮಃ ।
ಸ್ಮಶಾನ ವಾಸಿನೇ ಭೂಯೋ ನಮಸ್ತೇ ಕೃತ್ತಿವಾಸಸೇ ॥

ಶಶಾಂಕ ಶೇಖರಾಯೇಶಾಯೋಗ್ರಭೂಮಿಶಯಾಯ ಚ ।
ದುರ್ಗಾಯ ದುರ್ಗಪಾರಾಯ ದುರ್ಗಾವಯವಸಾಕ್ಷಿಣೆ ॥

ಲಿಂಗರೂಪಾಯ ಲಿಂಗಾಯ ಲಿಂಗಾನಾಂ ಪತಯೇ ನಮಃ ।
ನಮಃ ಪ್ರಲಯರೂಪಾಯ ಪ್ರಣವಾರ್ಥಾಯ ವೈ ನಮಃ
ನಮೋ ನಮಃ ಕಾರಣ ಕಾರಣಾಯ ಮೃತ್ಯುಂಜಯಾಯಾತ್ಮಭವ ಸ್ವರೂಪಿಣೆ॥
ಶ್ರೀ ತ್ರ್ಯಂಬಕಾಯಾಸಿತಕಂಠ ಶರ್ವ ಗೌರೀಪತೇ ಸಕಲಮಂಗಲ ಹೇತವೇ ನಮಃ॥

ಈ ಪದ್ಯದಲ್ಲಿಯ ಮಹೇಶ್ವರನ ನೂರೂ ನಾಮಗಳ ಮುಂದೆ ನಮಃ ಎಂಬ ಶಬ್ದವನ್ನು ಸೇರಿಸಿ ರುದ್ರಾಯ ನಮಃ, ನೀಲಾಯ ನಮಃ, ಭೀಮಾಯ ನಮಃ, ಪರಮಾತ್ಮನೇ ನಮಃ, ಕಪರ್ದಿನೇ ನಮಃ, ಸುರೇಶಾಯ ನಮಃ, ವ್ಯೋಮಕೇಶಾಯ ನಮಃ, ಎಂದು ಮುಂತಾಗಿ ನಮಃ ಶಬ್ದ ಪೂರ್ವಕವಾಗಿ ನಾಮೋಚ್ಚಾರಣೆ ಮಾಡಿ

ನಮಸ್ಕಾರವನ್ನು ಸಲ್ಲಿಸಬೇಕು. ಮತ್ತು ಈ ಶತನಾಮಾವಳಿಯಿಂದ ಸ್ತುತಿಯನ್ನು ಪಠಿಸಿ ಭಕ್ತಿಯಿಂದ ಪಾರಾಯಣ ಮಾಡಿ ಶಂಕರನ ಪ್ರದೋಷ ಪೂಜೆಯನ್ನು ಮಾಡಬೇಕು. ದೇವೇಂದ್ರನೇ, ನೀನಾದರೂ ಈಗ ಶಿವಶತ ನಾಮಾವಳಿ ಸ್ತೋತ್ರವನ್ನು ಪಠಿಸಿ ಶಿವನನ್ನು ಮೊದಲು ಪೂಜಿಸು. ನಂತರ ಯುದ್ಧಮಾಡು. ಇದರಿಂದ ನಿನಗೆ ವಿಜಯವು ಪ್ರಾಪ್ತವಾಗುವುದು, ಈ ವಿಷಯದಲ್ಲಿ ನಿನಗೆ ಹಿಂದಿನ ಒಂದು ಉದ್ಬೋಧಕ ಘಟನೆಯನ್ನು ಹೇಳುತ್ತೇನೆ ಕೇಳು.

ಹಿಂದೊಮ್ಮೆ ಒಂದಾನೊಂದು ಕಾಲದಲ್ಲಿ ಚಿತ್ರರಥ ಎಂಬ ರಾಜನು ವಿಮಾನಾರೂಢನಾಗಿ ನಾನಾ ವಿಧ ದ್ವೀಪಗಳನ್ನು ನೋಡುತ್ತಾ ಕೈಲಾಸ ಪರ್ವತಕ್ಕೆ ತೆರಳಿದನು. ಅಲ್ಲಿ ಮಹಾದೇವರು ತನ್ನ ಅರ್ಧಾಂಗಿಯಾದ ಪಾರ್ವತೀದೇವಿಯನ್ನು ತನ್ನ ಅರ್ಧ ಶರೀರದಲ್ಲಿ ಸೇರಿಸಿಕೊಂಡು ಉಚ್ಚ ಸಿಂಹಾಸನದಲ್ಲಿ ಆಸೀನನಾಗಿದ್ದನು. ಅದನ್ನು ಕಂಡು ಚಿತ್ರರಥನು ಉಪಹಾಸ ಗೈದು ಹೇಳಿದನು. ''ಮಹಾದೇವ, ಸಂಸಾರದಲ್ಲಿ ಲಂಪಟರಾದ ನಮ್ಮಂಥವರು ಕೂಡ ಸಭಾ ಸಮ್ಮೇಳನಗಳಲ್ಲಿ ಮಡದಿಯರನ್ನು ಹತ್ತಿರ ಕೂಡಿಸಿಕೊಳ್ಳುವುದಿಲ್ಲ. ಅಂದ ಬಳಿಕ ತಮ್ಮಂಥ ದೊಡ್ಡ ಮನುಷ್ಯರು ತುಂಬಿದ ಸಭೆಯಲ್ಲಿ ಪ್ರೇಯಸಿಯನ್ನು ಪಕ್ಕದಲ್ಲಿ ಕೂಡಿಸಿಕೊಂಡು ಹೇಗೆ ಕುಳಿತುಕೊಂಡಿರುವಿರಿ?'' ಚಿತ್ರರಾಜನ ಈ ಮಾತನ್ನು ಕೇಳಿ ಗಿರಿರಾಜ ನಂದಿನಿಯಾದ ಪಾರ್ವತಿಗೆ ಕೋಪ ಬಂದಿತು. ಅವಳು ಚಿತ್ರರಾಜನನ್ನು ಕುರಿತು.

**ಉಮಾ :** ''ಮೂರ್ಖನೇ ! ಪತಿಯೊಡನೆ ಕುಳಿತ ಸತಿಯನ್ನು ಉಪಹಾಸ ಗೈಯುವೆಯಾ ! ಸಾಧು ಸಜ್ಜನರನ್ನು ಉಪಹಾಸ ಗೈಯ್ಯುವವ ಅಧಮಾಧಮ ''

**ಸಾಧೂನಾಂ ಸಮಚಿತ್ತಾನಾಮುಪಹಾಸಂ ಕರೋತಿ ಯಃ ।**
**ದೇವೋ ವಾಪ್ಯಥವಾ ಮರ್ತ್ಯಃಸ ವಿಜ್ಞೇಯೋಽಧಮಾಧಮಃ ॥**

ನೀನು ದೇವತಾ ಹಾಗೂ ದ್ವಿಜ ಎರಡೂ ಶ್ರೇಣಿಯಿಂದ ಬಹಿರ್ಭೂತನಾಗು. ನಿನಗೆ ಮಹಾಜ್ಞಾನಿಯೆಂದು ಅಹಂಕಾರವಿದೆ. ನೀನು ದೈತ್ಯನಾಗು ಹೋಗು.'' ಪಾರ್ವತೀದೇವಿಯ ಈ ಶಾಪದಿಂದ ಆ ರಾಜಶ್ರೇಷ್ಠನು ಒಮ್ಮೆಲೇ ಕೈಲಾಸದಿಂದ ಕೆಳಗುರುಳಿದನು. ಅದೇ ಚಿತ್ರರಥ ರಾಜನೇ ಈಗ ವೃತ್ರಾಸುರನಾಗಿ ಹುಟ್ಟಿದ್ದಾನೆ. ಅವನ ತಂದೆ ವಿಶ್ವಕರ್ಮನು ಅವ್ಯಗ್ರ ಮನದಿಂದ ಅತ್ಯುಗ್ರ ತಪಸ್ಸನ್ನು ಮಾಡಿ ಈ ತನ್ನ ಮಗ ಅವಧ್ಯನಾಗಬೇಕು. ಅಜಿಂಕ್ಯನಾಗಬೇಕು ಎಂದು ವರ ಪಡೆದಿದ್ದಾನೆ. ಆದ್ದರಿಂದ ಸಹಜ ರೀತಿಯಲ್ಲಿ ನೀನು ಇವನನ್ನು ಗೆಲ್ಲಲಾರೆ. ಅದಕ್ಕಾಗಿ ಮೊದಲು ನೀನು ಪ್ರದೋಷ ಕಾಲದಲ್ಲಿ ಶಂಕರನ ಅರ್ಚನೆಯನ್ನು ಮಾಡು- ಅನಂತರ ವೃತ್ರಾಸುರನ ವಧೋದ್ಯೋಗವನ್ನು ಕೈಕೊಳ್ಳು.

**ಇಂದ್ರ :** ಗುರುಗಳೇ ! ಈ ಪ್ರದೋಷಪೂಜಾ ವಿಧಿಯನ್ನೂ ಉದ್ಯಾಪನ ವಿಧಿಯನ್ನೂ ನನಗೆ ತಿಳಿಸಿರಿ.

**ಬೃಹಸ್ಪತಿ :** ಕಾರ್ತೀಕ ಶುದ್ಧ ತ್ರಯೋದಶಿ ಶನಿವಾರ ಈ ವ್ರತಸಿದ್ಧಿಗಾಗಿ ಅತ್ಯಂತ ಗ್ರಾಹ್ಯವಾಗಿದೆ. ಇಂದು ಶನಿವಾರ ಪೂರ್ಣ ತ್ರಯೋದಶಿ ತಿಥಿ ಇದೆ. ಆದ್ದರಿಂದ ನಿನಗೆ ಈ ಸಮಯವು ಶಂಕರನ ಅಭ್ಯರ್ಚನಕ್ಕೆ ಅತ್ಯಂತ ಯೋಗ್ಯತಮವಾಗಿದೆ. ಬೆಳ್ಳಿಯ ಎತ್ತನ್ನು ಮಾಡಿಸಿ ಅದರ ಬೆನ್ನಿನ ಮೇಲೆ ಒಂದು ಸುಂದರ ಸಿಂಹಾಸನವನ್ನು ಇರಿಸಬೇಕು. ಅದರ ಮೇಲೆ ಪಾರ್ವತಿಯ ಅರ್ಧ ದೇಹದಿಂದ ಹೊಂದಿಕೊಂಡ ಅರ್ಧನಾರೀನರೇಶ್ವರನಾದ ಶಂಕರನ ಮೂರ್ತಿಯನ್ನು ಸ್ಥಾಪಿಸಬೇಕು. ಆ ಭಗವನ್ ಮೂರ್ತಿಗೆ ಮೂರು ಕಣ್ಣು, ಐದು ಮುಖ, ಹತ್ತು ಬಾಹು ಇರಬೇಕು. ಮತ್ತು ಈ ರೀತಿ ಪಾರ್ವತೀ ಪರಮೇಶ್ವರರ ಬಂಗಾರ ಪ್ರತಿಮೆಯನ್ನು ಮಾಡಿಸಿ, ಎತ್ತಿನ ಹೆಗಲ ಮೇಲೆ ಕೂಡಿಸಿ, ವಸ್ತ್ರದಿಂದ ಹೊದಿಸಿ, ಆ ವೃಷಾಭಾರೂಢ ಉಮಾಮಹೇಶ್ವರರನ್ನು ಒಂದು ತಾಮ್ರದ ಪಾತ್ರೆಯಲ್ಲಿ ಸ್ಥಾಪಿಸಿ ಶ್ರದ್ಧೆಯಿಂದ ರಾತ್ರಿ ಕಾಲದಲ್ಲಿ ಪೂಜೆ ಮಾಡಬೇಕು. ಅಂದು ಮಲಗಬಾರದು. ಶಿವಧ್ಯಾನ ಮಾಡುತ್ತ ಜಾಗರಣೆ ಮಾಡಬೇಕು. ಪೂಜೆಯ ಪ್ರಾರಂಭದಲ್ಲಿ ಆ ಉಮಾಮಹೇಶ್ವರ ಪ್ರತಿಮೆಗೆ ಪಂಚಾಮೃತ ಸ್ನಾನ ಮಾಡಿಸಬೇಕು. ಮೊದಲು ಹಾಲಿನಿಂದ ಅಭಿಷೇಕ ಮಾಡುವಾಗ ಪಯಃಸ್ನಾನ ಮಂತ್ರ.

**"ಗೋಕ್ಷೀರಸ್ನಾನಂ ದೇವೇಶ ಗೋಕ್ಷೀರೇಣ ಮಯಾ ಕೃತಮ್ ।**
**ಸ್ನಪನಂ ದೇವ ದೇವೇಶ ಗೃಹಾಣ ಪರಮೇಶ್ವರ " ॥**

*"ಉಮಾಮಹೇಶ್ವರಾಭ್ಯಾಂ ನಮಃ, ಕ್ಷೀರಸ್ನಾನಂ ಸಮರ್ಪಯಾಮಿ"* ಎಂದು ಹೇಳಿ ಆ ಪ್ರತಿಮೆಯ ಮೇಲೆ ಹಾಲು ಎರೆದು ಅಭಿಷೇಕ ಮಾಡಬೇಕು.

ಅನಂತರ *"ದಧಿಸ್ನಾನಂ ಸಮರ್ಪಯಾಮಿ"* ಎಂದು ಹೇಳಿ.

ದಧಿ ಸ್ನಾನ ಮಂತ್ರ

**ದಧ್ನಾ ಚೈವ ಮಹಾದೇವ ಸ್ನಪನಂ ಕಾರ್ಯತೇ ಮಯಾ**
**ಗೃಹಾಣ ಚ ಮಯಾ ದತ್ತಂ ಸುಪ್ರಸನ್ನೋ ಭವಾದ್ಯ ಮೇ ॥**

ಎಂಬ ಮಂತ್ರ ಹೇಳಿ ಮೊಸರಿನಿಂದ ಅಭಿಷೇಕ ಮಾಡಬೇಕು.

ಘೃತ ಸ್ನಾನ

**ಸರ್ಪಿಷಾ ಚ ಮಯಾ ದೇವ ಸ್ನಪನಂ ಕ್ರಿಯತೇಽಧುನಾ ।**
**ಗೃಹಾಣ ಶ್ರದ್ಧಯಾ ದತ್ತಂ ತವ ಪ್ರೀತ್ಯರ್ಥ ಮೇವ ಚ ॥**

ಈ ಮಂತ್ರ ಹೇಳಿ ತುಪ್ಪದಿಂದ ಅಭಿಷೇಕ ಮಾಡಬೇಕು.

ಮಧುಸ್ನಾನ ಮಂತ್ರ

**ಇದಂ ಮಧುಮಯಂ ದತ್ತಂ ತವ ತುಷ್ಟ್ಯರ್ಥಮೇವ ಚ**
**ಗೃಹಾಣ ತ್ವಂ ಹಿ ದೇವೇಶ ಮಮ ಶಾಂತಿಪ್ರದೋ ಭವ ॥**

ಈ ಮಂತ್ರದಿಂದ ಪಾರ್ವತೀ ಪರಮೇಶ್ವರರಿಗೆ ಜೇನುತುಪ್ಪದಿಂದ ಸ್ನಾನ ಮಾಡಿಸಬೇಕು.

ಶರ್ಕರಾಸ್ನಾನ ಮಂತ್ರ

ಸಿತಯಾ ದೇವದೇವೇಶ ಸ್ನಪನಂ ಕ್ರಿಯತೇ ಮಯಾ ।
ಗೃಹಾಣ ಶ್ರದ್ಧಯಾ ದತ್ತಂ ಸುಪ್ರಸನ್ನೋ ಭವ ಪ್ರಭೋ ॥

ಈ ಮಂತ್ರದಿಂದ ಉಮಾಮಹೇಶ್ವರ ಪ್ರತಿಮೆಯ ಮೇಲೆ ಸಕ್ಕರೆಯನ್ನು ಸುರಿದು ಶರ್ಕರಾ ಸ್ನಾನವನ್ನು ಮಾಡಿಸಬೇಕು. ಹೀಗೆ ಪರಶಿವ ದಂಪತಿಗಳಿಗೆ ಪಂಚಾಮೃತ ಸ್ನಾನ ಮಾಡಿಸಿ ಬಳಿಕ ಶುದ್ದೋದಕ ಸ್ನಾನ ಮಾಡಿಸಿ, ವಸ್ತ್ರದಿಂದ ಒರಿಸಿ, ಪೀಠದಲ್ಲಿ ಕುಳ್ಳರಿಸಿದ ಬಳಿಕ ಅರ್ಘ್ಯಪಾದ್ಯಾದಿಗಳಿಂದ ಪೂಜೆ ಮಾಡಬೇಕು. ಈ ಸಮಯದಲ್ಲಿ ಕೆಳಗಿನ ಮಂತ್ರ ಹೇಳಬೇಕು.

ಅರ್ಘ್ಯ ಮಂತ್ರ

ಅರ್ಘ್ಯೋ‌ಽಸಿ ತ್ವಮುಮಾಕಾಂತ ತ್ವರ್ಘ್ಯೇಣಾಸೀನ ವೈ ಪ್ರಭೋ ।
ಗೃಹಾಣ ತ್ವಂ ಮಯಾ ದತ್ತಂ ಪ್ರಸನ್ನೋ ಭವ ಶಂಕರ ॥

ಈ ಮಂತ್ರದಿಂದ ಅರ್ಘ್ಯವನ್ನು

ಪಾದ್ಯ ಮಂತ್ರ

ಮಯಾ ದತ್ತಂ ತು ತೇ ಪಾದ್ಯಂ ಪುಷ್ಪಗಂಧಸಮನ್ವಿತಂ ।
ಗೃಹಾಣ ದೇವದೇವೇಶ ಪ್ರಸನ್ನೋ ವರದೋ ಭವ ॥

ಈ ಮಂತ್ರದಿಂದ ಪಾದ್ಯವನ್ನೂ,

ಆಸನಸಮರ್ಪಣ ಮಂತ್ರ

ವಿಷ್ಟರಂ ವಿಷ್ಟರೇಣೈವ ಮಯಾ ದತ್ತಂ ಚ ವೈ ಪ್ರಭೋ ।
ಶಾಂತ್ಯರ್ಥಂ ತವ ದೇವೇಶ ವರದೋ ಭವ ಮೇ ಸದಾ ॥

ಈ ಮಂತ್ರದಿಂದ ಆಸನವನ್ನು

ಅಚಮನ ಮಂತ್ರ

ಆಚಮನಂ ಚ ಮಯಾ ದತ್ತಂ ತವ ವಿಶ್ವೇಶ್ವರ ಪ್ರಭೋ ।
ಗೃಹಾಣ ಪರಮೇಶಾನ ತುಷ್ಟೋ ಭವ ಮಮಾದ್ಯ ವೈ ॥

ಈ ಮಂತ್ರದಿಂದ ಆಚಮನವನ್ನೂ,

ಯಜ್ಞೋಪವೀತ ಮಂತ್ರ

ಬ್ರಹ್ಮಗ್ರಂಥಿ ಸಮಾಯುಕ್ತಂ ಬ್ರಹ್ಮಕರ್ಮ ಪ್ರವರ್ತಕಂ ।
ಯಜ್ಞೋಪವೀತಂ ಸೌವರ್ಣಂ ಮಯಾ ದತ್ತಂ ಗೃಹಾಣ ಭೋ ॥

ಈ ಮಂತ್ರದಿಂದ ಯಜ್ಞೋಪವೀತವನ್ನೂ,

ವಸ್ತ್ರ ಮಂತ್ರ

ಏತದ್ ವಾಸೋ ಮಯಾ ದತ್ತಂ ಸೋತ್ತರೀಯಂ ಸುಶೋಭನಂ
ಗೃಹಾಣ ತ್ವಂ ಮಹಾದೇವ ಮಮಾಯುಷ್ಯಪ್ರದೋ ಭವ ॥

ಈ ಮಂತ್ರದಿಂದ ವಸ್ತ್ರವನ್ನೂ,

ಚಂದನ ಮಂತ್ರ

ಸುಗಂಧಂ ಚಂದನಂ ದೇವ ಮಯಾ ದತ್ತಂ ತು ತೇ ಪ್ರಭೋ ।
ಚಂದನಾಲೇಪಿತಃ ಶಂಭೋ ಸುಗಂಧಂ ಕುರು ಮಾಂ ಭವ ॥

ಈ ಮಂತ್ರದಿಂದ ಗಂಧವನ್ನೂ ಅರ್ಪಿಸಬೇಕು.

ಧೂಪ ಮಂತ್ರ

ಧೂಪಂ ವಿಶಿಷ್ಟಂ ಪರಮಂ ಸರ್ವೌಷಧಿ ವಿಜೃಂಭಿತಂ ।
ಗೃಹಾಣ ಪರಮೇಶಾನ ಮಮ ಶಾಂತ್ಯರ್ಥಮೇವ ಚ ॥

ಈ ಮಂತ್ರದಿಂದ ಧೂಪವನ್ನು ಬೆಳಗಬೇಕು.

ದೀಪ ಮಂತ್ರ

ದೀಪಂ ಹಿ ಪರಮಂ ಶಂಭೋ ಘೃತಪ್ರಜ್ವಲಿತಂ ಮಯಾ ।
ದತ್ತಂ ಗೃಹಾಣ ದೇವೇಶ ಮಮ ಜ್ಞಾನಪ್ರದೋ ಭವ ॥

ಈ ಮಂತ್ರದಿಂದ ದೇವರ ಎದುರು ದೀಪ ಹಚ್ಚಬೇಕು.

*ಕೊನೆಗೆ*

ಆರತಿ ಮಂತ್ರ

ದೀಪಾವಲಿಂ ಮಯಾ ದತ್ತಾಂ ಗೃಹಾಣ ಪರಮೇಶ್ವರ ।
ಆರಾರ್ತಿಕ ಪ್ರದಾನೇನ ಮಮ ತೇಜಃಪ್ರದೋ ಭವ ॥

ಈ ಮಂತ್ರದಿಂದ ಆ ಧೂರ್ಜಟಿ ದಂಪತಿಗಳಿಗೆ ಆರತಿಯನ್ನು ಮಾಡಬೇಕು. ಇದೇ ರೀತಿಯಾಗಿ ಫಲ, ನೈವೇದ್ಯ, ತಾಂಬೂಲ ಮೊದಲಾದವುಗಳನ್ನು ಸಮರ್ಪಿಸಿ ವಿಧಿಪೂರ್ವಕವಾಗಿ ಶಿವಾರ್ಚನೆಯನ್ನು ಮಾಡಬೇಕು.

ರಾತ್ರಿ ಜಾಗರ ಅವಶ್ಯ ಕರ್ತವ್ಯ. ತನ್ನ ಮನೆಯಲ್ಲೇ ಆಗಲೀ ದೇವಾಲಯದಲ್ಲಾಗಲೀ ಒಂದು ಸುಂದರವಾದ ಮಂಟಪವನ್ನು ರಚಿಸಿ ಪಂಚೋಪಚಾರ, ಷೋಡಶೋಪಚಾರ ಪೂಜೆಯನ್ನು ಮಾಡಿ ಮಹಾದೇವರ ಸ್ತೋತ್ರಗಳನ್ನು ಹಾಡಬೇಕು, ಬಗೆ ಬಗೆಯ ವಾದ್ಯಗಳನ್ನು ಬಾರಿಸಬೇಕು. ನೃತ್ಯ ಸೇವೆಯನ್ನು ಸಲ್ಲಿಸಿ ಆ ನಟರಾಜನನ್ನು ಸಂತೋಷಪಡಿಸಬೇಕು. ಇದೇ ಪ್ರದೋಷ ಪೂಜಾವ್ರತ ವಿಧಾನದ ವಿಧಿ. ಇದರಿಂದ ಪೂಜಕನಿಗೆ ಇಷ್ಟಸಿದ್ಧಿ. ಸರ್ವ ಸಮೃದ್ಧಿ.''

ದೇವ ಗುರುವಿನ ಹೇಳಿಕೆಯಂತೆ ಆ ಸುರಪತಿಯು ಪ್ರದೋಷ ವ್ರತವನ್ನು ಕೈಕೊಂಡು ಭಕ್ತಿಯಿಂದ ಶಿವಾರ್ಚನೆಯನ್ನು ಮಾಡಿದನು. ಇಂದ್ರನು ಶಿವಪೂಜೆ ಮುಗಿದ ಬಳಿಕ ದೈತ್ಯರೊಡನೆ ಯುದ್ಧಕ್ಕೆ ಸಿದ್ಧನಾಗಿ ವೃತ್ರಾಸುರರನ್ನು ಎದುರಿಸಿದನು. ಆ ರಣರಂಗದಲ್ಲಿ ಬೇರೆ ಬೇರೆ ದೇವತೆಗಳು ದೈತ್ಯ ವೀರರೊಡನೆ ಭಿನ್ನ ಭಿನ್ನ ರಂಗಗಳಲ್ಲಿ ಕಲಿತನದಿಂದ ಕಾದಿದರು. ವ್ಯೋಮಾಸುರನೊಂದಿಗೆ ಯಮಧರ್ಮನು, ತೀಕ್ಷ್ಣ ಕೋಪನೊಡನೆ ಅಗ್ನಿದೇವನು, ಧೂಮ್ರಾಕ್ಷ ಹಾಗೂ ನೈರುತರೊಡನೆ ವಾಯುದೇವನು, ಕೂಷ್ಮಾಂಡನೊಡನೆ ಕುಬೇರನು ಹಣಾಹಣಿಯಾಗಿ ಹೋರಾಡಿದರು. ಎಷ್ಟೋ ದೇವ ದಾನವರಿಗೆ ದ್ವಂದ್ವ ಯುದ್ಧ ನಡೆಯಿತು. ಅಸುರರು ಗದೆ, ಪಟ್ಟಿಶ, ಖಡ್ಗ, ಶಕ್ತಿ, ತೋಮರ, ಮುದ್ಗರ, ಭಿರಷ್ಟಿ, ಭಿಂದಿಪಾಲ, ಕುಂತ, ಪ್ರಾಸ ಮತ್ತು ಮುಷ್ಟಿಕ ಮೊದಲಾದ ಭಯಂಕರ ಶಸ್ತ್ರಾಸ್ತ್ರಗಳನ್ನು ಹಿಡಿದು ಹಿರಿದು ಹೋರಾಡಿದರು. ದೇವತಾ ಸೈನಿಕರು ಕೂಡ ದಧೀಚಿ ಮುನಿಯ ಮೂಳೆಗಳಿಂದ ಮಾಡಿದ ನಾನಾ ಆಯುಧಗಳಿಂದ ಕಾದಿದರು. ಬ್ರಹ್ಮಜ್ಞಾನಿಯ ಅಸ್ಥಿಗಳೇ ಅಸ್ತ್ರವಾಗಿ ದೊರೆತದ್ದರಿಂದ ಆ ಅಸ್ತ್ರಗಳ ಮುಂದೆ ದೈತ್ಯರ ಆಟ ನಡೆಯಲಿಲ್ಲ. ಅವರೆಲ್ಲರೂ ಸೋತು ಓಡತೊಡಗಿದರು. ಆಗ ವೃತ್ರಾಸುರನು ಪಲಾಯನ ಗೈಯುವ ತನ್ನ ಸೈನಿಕರನ್ನೆಲ್ಲ ವೀರೋಕ್ತಿಗಳಿಂದ ಪ್ರೋತ್ಸಾಹಿಸಿ ಹುಮ್ಮಸ್ಸಿನಿಂದ ಕಾದಲು ಹುರಿದುಂಬಿಸಿ ದೇವಸೇನೆಯ ಮೇಲೆ ಸಿಂಹದಂತೆ ಎರಗಿದನು. ಆಗ ಅವನ ಎದುರು ಐರಾವತಾರೂಢನಾದ ದೇವೇಂದ್ರನು ಬಂದು ನಿಂತ.

ಇಬ್ಬರಲ್ಲಿಯೂ ತುರುಸಿನ ಹೋರಾಟ ನಡೆಯಿತು. ಒಮ್ಮೆ ವೃತ್ರಾಸುರನ ಪ್ರಬಲ ಪ್ರಹಾರದಿಂದ ಐರಾವತವು ಕುಸಿಯಿತು. ಕಣ್ಣು ಪಿಳಿಕಿಸುವಷ್ಟರಲ್ಲಿ ವೃತ್ರಾಸುರನು ಹಾರಿ ಬಂದು ದೇವೇಂದ್ರನನ್ನು ನುಂಗಿಬಿಟ್ಟನು. ಆಗ ಭೂಮಿ ನಡುಗಿತು. ದೇವಸೇನೆಯ ತುಂಬ ಹಾಹಾಕಾರ. ಸಾವಿರಾರು ಉಲ್ಕಾಪಾತಗಳು. ಜಗದಂಡಮಂಡಲದ ತುಂಬ ಅಂಧಕಾರ. ದೇವತೆಗಳೆಲ್ಲ ಚಿಂತಾಮಗ್ನ. ಋಷಿ ವೃಂದವೆಲ್ಲವೂ ಉದ್ವಿಗ್ನ. ಸುರೋತ್ತಮರೆಲ್ಲರೂ ಬ್ರಹ್ಮದೇವರ ಬಳಿಗೆ ಓಡಿದರು. ಬ್ರಹ್ಮದೇವರು ಆಲೋಚಿಸಿದರು. ಏಕಾಗ್ರಚಿತ್ತದಿಂದ ಶಂಕರನನ್ನು ಸ್ತುತಿಸಿದರು. ಅದೇ ವೇಳೆಯಲ್ಲಿ ಆಕಾಶವಾಣಿ ''ಇಂದ್ರನು ಪ್ರದೋಷವ್ರತ ಮಾಡುವಾಗ ತಪ್ಪಿದ್ದಾನೆ. ಶಿವ ನಿರ್ಮಾಲ್ಯ, ಶಿವಲಿಂಗದ ನೆರಳು, ಹಾಗೂ ಶಿವಾಲಯದ ಉಲ್ಲಂಘನಗಳನ್ನು, ಮಾಡಿದವ ಶಿವಗಣಾಧೀಶನಾದ ಚಂಡೇಶನಿಂದ ದಂಡಿಸಲ್ಪಡುತ್ತಾನೆ. ಇದರಲ್ಲಿ ಸಂದೇಹವಿಲ್ಲ. ಭಕ್ತಿಯಿಂದ ಲಿಂಗ ಪೂಜೆಗೈದು ಪ್ರದಕ್ಷಿಣೆ ನಮಸ್ಕಾರ ಮಾಡುವುದರಿಂದ ಕಲ್ಯಾಣ ಉಂಟಾಗುತ್ತದೆ, ಪ್ರದೋಷ ಕಾಲದಲ್ಲಿ ಮಂದಾರ, ಧತ್ತೂರ, ಪುನ್ನಾಗ, ನಾಗಕೇಸರ, ನೀಲಕಮಲ, ಕದಂಬ, ಶೇವಂತಿಕೆ, ಕುಟಜ, ರಕ್ತಕಮಲ, ಕರ್ಣಿಕಾರ, ಮುಂತಾದ ಹೂಗಳಿಂದ ಶಿವಾರ್ಚನೆಯನ್ನು ಮಾಡಬೇಕು. ರಾತ್ರಿ ಕಾಲದಲ್ಲಿ ಕೇವಲ ಕನ್ನೈದಿಲೆ ಪುಷ್ಪದಿಂದಲೇ ಮಹೇಶ್ವರನ ಪೂಜೆಯನ್ನು ಮಾಡತಕ್ಕದ್ದು. ಶಿವಲಿಂಗ ಹಾಗೂ ನಂದಿ ಇವರ ನಡುವೆ ಹಾಯ್ದು ಆರ್ಘಾಂತರದಲ್ಲಿ ಪ್ರದಕ್ಷಿಣೆ ಮಾಡಬಾರದು, ಇಂದ್ರನು ತನ್ನ ರಾಜಸ ಸ್ವಭಾವದಿಂದ ಶಿವಲಿಂಗದ

ಝಲಾರಿಯನ್ನು ಉಲ್ಲಂಘಿಸಿ ಪರಿಕ್ರಮಣ ಮಾಡಿದ್ದಾನೆ. ಆದ್ದರಿಂದ ಅವನು ಮಾಡಿದ ಶಿವಪೂಜೆಯೆಲ್ಲವೂ ವ್ಯರ್ಥವಾಗಿದೆ. ಆದುದರಿಂದಲೇ ವೃತ್ರಾಸುರನು ದೇವೇಂದ್ರನನ್ನು ನುಂಗಿ ಹಾಕಿದ್ದಾನೆ, ಅದಕ್ಕಾಗಿ ದೇವತೆಗಳೇ ! ನೀವೆಲ್ಲರೂ ಕೂಡಿ ಮಹಾರುದ್ರದ ವಿಧಾನದಿಂದ ಶಿವಲಿಂಗವನ್ನು ಪೂಜಿಸಿರಿ. ಇದರಿಂದ ಇಂದ್ರನು ಮರಳಿ ಬದುಕಿ ಬರುವನು''.

ಆಕಾಶವಾಣಿಯ ಆದೇಶದಂತೆ ದೇವತೆಗಳು ಶಂಕರನ ಪೂಜೆಯನ್ನೂ ದಶಾಂಶ ಹೋಮವನ್ನೂ ಮಾಡಿದರು. ಅದರ ಪುಣ್ಯ ಪ್ರಭಾವದಿಂದ ಈಶ್ವರನು ಪ್ರಸನ್ನನಾದ. ಇಂದ್ರನನ್ನು ಅನುಗ್ರಹಿಸಿದ. ಸುರರಾಜನು ಸುರಕ್ಷಿತವಾಗಿ ಹೊರಬರಲಿ ಎಂದು ಹರಿಸಿ ಹಾರೈಸಿದ. ಕೂಡಲೇ ದೇವೇಂದ್ರನು ಪರಮೇಶ್ವರನ ಪ್ರಸಾದದ ಬಲದಿಂದ ವೃತ್ರನ ಹೊಟ್ಟೆಯನ್ನು ಹರಿದು ಹೊರಬಂದ. ವಜ್ರಾಯುಧ, ಕಿರೀಟ ಕುಂಡಲ ಸಹಿತವಾಗಿ ಬಹಳ ತೇಜಸ್ವಿಯಾದ ಇಂದ್ರನು ದೈತ್ಯನ ಉದರದಿಂದ ಹೊರ ಬಂದುದನ್ನು ನೋಡಿಯೇ ದೇವ, ಗಂಧರ್ವ, ಯಕ್ಷ, ಕಿನ್ನರ, ಋಷಿಮುನಿ, ಮನುಜ ಮೊದಲಾದವರೆಲ್ಲರೂ ಆನಂದೋದ್ರೇಕದಿಂದ ಕುಣಿದಾಡಿದರು. ದೇವ ದುಂದುಭಿಗಳು ಮೊಳಗಿದವು. ಮಂಗಳವಾದ್ಯಗಳು ದುಂದುಮಿಸಿದವು. ಶಚೀದೇವಿಯು ಧಾವಿಸಿ ಬಂದಳು. ತನ್ನ ಸೌಭಾಗ್ಯದ ದೇವತೆ ಶಿವಕೃಪೆಯಿಂದ ಸುರಕ್ಷಿತವಾಗಿ ಬಂದದ್ದನ್ನು ನೋಡಿ ಅವಳಿಗೆ ಕಳೆದ ಜೀವ ಮರಳಿ ಬಂದಂತಾಯಿತು. ಮಹರ್ಷಿಗಳು ಇಂದ್ರ ಇಂದ್ರಾಣಿಯರನ್ನು ಸ್ವರ್ಗ ಸಾಮ್ರಾಜ್ಯದ ಮೇಲೆ ಮತ್ತೊಮ್ಮೆ ಕೂಡಿಸಿ ಪಟ್ಟಾಭಿಷೇಕ ಮಹೋತ್ಸವವನ್ನು ಉತ್ಸಾಹ ಉದ್ರೇಕದಿಂದ ಆಚರಿಸಿದರು. ಬ್ರಹ್ಮಜ್ಞಾನಿಗಳು ಸ್ವಸ್ತಿವಾಚನ ಹೇಳಿದರು. ಭೂಲೋಕದಲ್ಲಿಯೂ ಎಲ್ಲ ಕಡೆ ಉತ್ಸವ. ಸರ್ವತ್ರ ಉತ್ಸಾಹ, ಸಜ್ಜನರಿಗೆಲ್ಲ ಸಂತಸ, ಮೂರು ಲೋಕಗಳೆಲ್ಲವೂ ಸಂತೃಪ್ತ. ಇಂದ್ರನು ಹೊರಬರುವಾಗ ಅವನ ಕೈಯಲ್ಲಿಯ ವಜ್ರಾಯುಧದಿಂದ ವೃತ್ರನ ಹೊಟ್ಟೆ ಸೀಳಿ ದೇಹವು ಹೋಳಾಗಿ ಉರುಳಿ ನೆಲದ ಮೇಲೆ ಬಿದ್ದಿತು. ಭೂಮಿಯಲ್ಲಿ ಹಿಂದೆ ದೇವತೆಗಳು ಇಂದ್ರನ ಬ್ರಹ್ಮಹತ್ಯೆಯ ಕಾಲುಭಾಗವನ್ನು ಇಟ್ಟ ಸ್ಥಳದಲ್ಲಿಯೇ ವೃತ್ರಾಸುರನ ಆ ದೇಹವು ಉರುಳಿ ಬಿದ್ದಿತು. ಗಂಗಾ ಯಮುನಾ ನದಿಗಳ ಸಂಗಮದ ಭೂಮಿಗೆ ಅಂತರ್ವೇದಿ ಎಂದು ಕರೆಯುತ್ತಾರೆ. ಇದು ಅತ್ಯಂತ ಪವಿತ್ರ. ನಿಜವಾಗಿಯೂ ಪುಣ್ಯಭೂಮಿ. ಈ ಪ್ರದೇಶವನ್ನು ಬಿಟ್ಟು ದೂರ ಪ್ರದೇಶದಲ್ಲಿಯೇ ವೃತ್ರನ ದೇಹವು ಬಿದ್ದಿತ್ತು. ಅದಕ್ಕೆ ಮಲಭೂಮಿ ಎನ್ನುವರು, ವೃತ್ರಾಸುರನ ತಲೆ ಬಿದ್ದಭಾಗವು ಮಲಭೂಮಿ, ದೇವತೆಗಳು ಆರು ತಿಂಗಳವರೆಗೆ ಆ ವೃತ್ರನ ತಲೆಯನ್ನು ಕಡಿದು ಹಾಕಬೇಕಾಯಿತು, ಹೀಗೆ ವೃತ್ರ ಶತ್ರುವನ್ನು ಸಂಹರಿಸಿ ದೇವೇಂದ್ರನು ವಿಜಯವನ್ನು ಸಂಪಾದಿಸಿದನು, ಶಚೀದೇವಿಯೊಂದಿಗೆ ಸುಪರ್ವ ಸಿಂಹಾಸನದಲ್ಲಿ ಚಿಂತಾಲೇಶ ರಹಿತನಾಗಿ ಪ್ರತಿಷ್ಠಿತನಾಗಿ ಧರ್ಮಚಕ್ರವನ್ನು ಚೆನ್ನಾಗಿ ಪ್ರವರ್ತಿತವಾಗುವಂತೆ ಮಾಡಿದನು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಏಳನೇ ಅಧ್ಯಾಯ ಮುಗಿದುದು.**

# ಬಲಿರಾಜನಿಂದ ದೇವತೆಗಳ ಸೋಲು; ವಾಮನಾವತಾರ; ಬಲಿರಾಜನ ಮೇಲೆ ವಾಮನನ ಕೃಪೆ:

ಅಧ್ಯಾಯ - 8

**ಲೋಮಶ** : ಬಲಿಚಕ್ರವರ್ತಿಯವಾಸ ಪಾತಾಳದಲ್ಲಿ. ಅಲ್ಲಿಯೇ ಅವನಿಗೆ ಸ್ವರ್ಗವೈಭವ. ಅಲ್ಲಿಯೇ ಅವನ ಕಿವಿಗೆ ಬಿದ್ದಿತು ಇಂದ್ರನಿಂದ ವೃತ್ರಹತ್ಯೆಯ ಸಮಾಚಾರ. ಬಲಿ ಗುರುಶುಕ್ರರನ್ನು ಕೇಳಿದ ''ಪೂಜ್ಯರೇ ! ಇಂದ್ರನು ನಮ್ಮ ಅಧೀನನಾಗುವ ಬಗೆ ಹೇಗೆ?'' ಶುಕ್ರರ ಉತ್ತರ ''ದೈತ್ಯೇಂದ್ರ, ವಿಶ್ವಜಿತ್ ಯಾಗವೇ ಇದಕ್ಕೆ ಉಪಾಯ, ಯಜ್ಞವಿಲ್ಲದೇ ಕಾರ್ಯ ಹೇಗೆ ಸಿದ್ಧಿಸೀತು !'' ''ಹಾಗಾದರೆ ನಾನು ಅದನ್ನೇ ಮಾಡುವೆ''. ಬಲಿರಾಜನ ನಿಶ್ಚಯದ ಉದ್ಗಾರ. ನಂತರ ಯಜ್ಞದ ಸಿದ್ಧತೆ. ಬಲಿರಾಜ ಎಂದಿನಿಂದಲೂ ಉದಾರ. ಕಾರ್ಪಣ್ಯ ಅವನಿಂದ ಬಲುದೂರ. ಯಜ್ಞದ ಸಂಭಾರ ಸಿದ್ಧತೆ ಎಲ್ಲವೂ ಅವಿಕಲವಾಗಿ ನಡೆಯಿತು. ಮನಸ್ವಿ ಶುಕ್ರರಿಂದ ಒಂದು ಸುಮೂಹೂರ್ತದಲ್ಲಿ ಮಹಾಯಜ್ಞ ಪ್ರಾರಂಭ. ಬಲಿರಾಜನಿಂದ ಯಜ್ಞದೀಕ್ಷಾ ಸ್ವೀಕಾರ. ಹವಿಸ್ಸಿನ ಆಜ್ಯಧಾರೆಯಿಂದ ಅಗ್ನಿದೇವನಿಗೆ ಸಂತೃಪ್ತಿ. ವಿಧಿವಿಧಾನಗಳಲ್ಲಿ ಚ್ಯುತಿಯಿಲ್ಲ. ಮಂತ್ರ ತಂತ್ರಗಳಲ್ಲಿ ಲೋಪವಿಲ್ಲ. ಯಜಮಾನನ ಮುಷ್ಟಿ ಸಂಕುಚಿತವಲ್ಲ. ಅಂದಬಳಿಕ ಕೇಳುವದೇನು? ಯಜ್ಞವು ವೈಭವೋದ್ದೀಪಿತವಾಗಿ ನಡೆಯಿತು. ಯಜ್ಞಪುರುಷನು ಸಂತೃಪ್ತ, ಸಂತುಷ್ಟ. ಕೂಡಲೇ ಅಗ್ನಿಕುಂಡದಿಂದ ಒಂದು ಅದ್ಭುತ ರಥ ಪ್ರಕಟ. ಅದಕ್ಕೆ ಹೂಡಿದ ನಾಲ್ಕು ಕುದುರೆಗಳು. ಮೇಲೆ ಮುಗಿಲಲ್ಲಿ ಹಾರಾಡುವ ಧ್ವಜ. ಆ ಕಾಂತೀಕಮನೀಯವಾದ ತೇರಿನಲ್ಲಿ ಅನೇಕ ಶಸ್ತ್ರಗಳು. ಅಮೋಘ ಅಸ್ತ್ರಗಳು. ರಥ ಪ್ರಕಟವಾದ ಬಳಿಕ ಶುಕ್ರಾಚಾರ್ಯರ ಆಜ್ಞೆಯಂತೆ ಬಲಿರಾಜ ಅವಭೃತ ಸ್ನಾನಗೈದ. ಮತ್ತೊಮ್ಮೆ ಆ ರಥವನ್ನು ಪೂಜಿಸಿ ಬಲಿ ರಥಾರೂಢನಾದ. ಪ್ರಚಂಡ ದೈತ್ಯಸೇನೆ ಅವನ ಹಿಂದೆ. ಪಾತಾಳದ ಚತುರಂಗಸೇನೆ ಕೆಲವೇ ಸಮಯದಲ್ಲಿ ಮುಟ್ಟಿಬಿಟ್ಟಿತು ಸ್ವರ್ಗಲೋಕವನ್ನು. ಈ ಸ್ವರ್ಗದ ಲಗ್ಗೆಯನ್ನು ಮುಂಗಂಡು ಮೊದಲೇ ದೇವತೆಗಳ ಗುಪ್ತಸಭೆ ಕೂಡಿತ್ತು. ''ಈಗ ನಾವು ಏನು ಮಾಡಬೇಕು? ಇದರಲ್ಲಿ ನಮಗೆ ದೊರೆತೀತೇ ಗೆಲುವು?'' ದೇವಗುರು ಗಂಭೀರವಾಗಿ ವಿಚಾರಿಸಿದರು. ಅರಸಪ್ಪೆಯಾಗಿತ್ತು ಅವರ ಉತ್ತರ. ''ಸುರಶಿಷ್ಯರೇ, ಈ ದೈತ್ಯರು ಇದೀಗ ಯಜ್ಞ ಮಾಡಿ ಮುಗಿಸಿದ್ದಾರೆ. ಅವರಿಗೆ ಈಗ ಗುರುಬಲ. ಶುಕ್ರದೆಸೆ. ಸುರಾಚಾರ್ಯರು ತಮ್ಮ ತಪದ ಪುಣ್ಯಧಾರೆಯನ್ನು ಎರೆದಿದ್ದಾರೆ ಈ ಶಿಷ್ಯರ ಮೆಲೆ. ಅವರ ಪುಣ್ಯದಿಂದ ದೈತ್ಯರೆಲ್ಲರೂ ಈಗ ಅಜಿಂಕ್ಯರು.''

ಗುರುವಿನ ಈ ಗಂಭೀರ ವಚನದಿಂದ ದೇವತೆಗಳೆಲ್ಲರೂ ದುಃಖಿತರಾದರು. ಮಹೇಂದ್ರನ ಮಸ್ತಕದ ಮಿದುಳುಗಳಂತೂ ಮಂದವಾಗಿ ಹೋಗಿದ್ದವು. ಅವರ ಪಾಲಿಗೆ ಈಗ ಉಳಿದಿದ್ದು ಲಜ್ಜೆ ಮನಸ್ಸಿನಲ್ಲಿ. ಚಿಂತಾಚಕ್ರ ತಲೆಯ ಮೆಲೆ. ತಾವು ನಂಬಿದ ಗುರು ನಿರಾಶೆಯ ನಿಟ್ಟುಸಿರು ಬಿಟ್ಟಾಗ ದಾರಿಯೇ ತೋರದಂತಾಯಿತು

ಆ ದೇವತಾಗಣಕ್ಕೆ. ಅವರೆಲ್ಲರೂ ಕಂಗೆಟ್ಟು ತಂದೆ ಕಶ್ಯಪರ ಕುಟೀರಕ್ಕೆ ಬಂದರು. ಆಶ್ರಮದಲ್ಲಿ ಅವರೆಲ್ಲರ ಅಮ್ಮ ಅದಿತಿದೇವಿ ಮಕ್ಕಳ ಬಗ್ಗೆ ಚಿಂತಿಸುತ್ತ ಕುಳಿತಿದ್ದಳು. ಅವಳ ಎದುರು ತಮ್ಮ ಮನದ ಅಳಲನ್ನೆಲ್ಲ ಬಿಚ್ಚಿ ಹೇಳಿದರು. ಕೂಡಲೇ ಕರಗಿತು ಆ ತಾಯಿಯ ಕರುಳು. ಕಣ್ಣು ಹನಿಗೂಡಿತು. ಕಂಠ ಗದ್ಗದಿತವಾಯಿತು. ಪತಿಯ ಪಾದಸನ್ನಿಧಿಗೆ ಸಾರಿದಳು ಆ ಮಕ್ಕಳ ಮಾತೆ. ಕೈ ಜೋಡಿಸಿ ಹೇಳಿದಳು.

**ಅದಿತಿ :** ಋಷಿ ಪುಂಗವರೇ, ನನ್ನ ಕಂದಮ್ಮಗಳ ಮೇಲೆ ದೊಡ್ಡ ವಿಪತ್ತು ಬಂದಿದೆ. ದಯವಿಟ್ಟು ಇದಕ್ಕೇನಾದರೂ ಉಪಾಯ ಮಾಡಿರಿ. ಇವರು ಮನೆ ಮಾರು ಬಿಟ್ಟು ಆಶ್ರಮಕ್ಕೆ ಬಂದಿದ್ದಾರೆ. ಹೇಗಾದರೂ ಮಾಡಿ ಅವರನ್ನು ರಕ್ಷಿಸಿರಿ.

**ಕಶ್ಯಪ :** ದೇವಿ ! ಗುರುಶುಕ್ರರ ತಪೋಬಲ ಇಂದು ದೈತ್ಯರ ಬೆಂಬಲಕ್ಕೆ ಇದೆ. ಆದ್ದರಿಂದ ದೇವತೆಗಳಿಗೂ ಅಂಥ ಮಹತ್ತರ ತಪೋಬಲ ರಕ್ಷಣೆಗೆ ಒದಗಬೇಕು. ನೀನೇ ಅಂಥ ತಪವನ್ನು ಮಾಡಿ, ಮಕ್ಕಳ ಮೇಲೆ ಪುಣ್ಯಪ್ರವಾಹವನ್ನು ಹರಿಸು. ನಿನಗೆ ಒಂದು ವ್ರತವನ್ನು ಹೇಳುತ್ತೇನೆ.

ಭಾದ್ರಪದ ಶುಕ್ಲದಶಮಿ ದಿನ ಮಾನವನು ನಿಯಮಬದ್ಧವಾಗಿ ಒಪ್ಪತ್ತು ಊಟ ಮಾಡಬೇಕು. ಭಗವಂತನಾದ ಶ್ರೀವಿಷ್ಣುವನ್ನು ಈ ಮಂತ್ರದಿಂದ ಪ್ರಾರ್ಥಿಸಬೇಕು.

**ತವ ಭಕ್ತೋಽಸ್ಮ್ಯಹಂ ನಾಥ ದಶಮ್ಯಾದಿ ದಿನತ್ರಯಮ್**
**ವ್ರತಂ ಚರಾಮ್ಯಹಂ ವಿಷ್ಣೋ ಅನುಜ್ಞಾಂ ದಾತುಮರ್ಹಸಿ**

ಎಂಬ ಈ ಮಂತ್ರವನ್ನು ಹೇಳಿ ''ಭಗವನ್, ನಾನು ನಿನ್ನ ಭಕ್ತ. ದಶಮಿಯಿಂದ ಮೂರು ದಿನ ಹರಿವ್ರತವನ್ನು ಮಾಡುತ್ತೇನೆ. 'ನನಗೆ ಅಪ್ಪಣೆ ನೀಡು' ಎಂದು ಭಗವತ್ ಪ್ರಾರ್ಥನೆ ಮಾಡಬೇಕು. ದಶಮಿಯ ದಿನ ಉಪ್ಪನ್ನು ವರ್ಜಿಸಿ ಬಾಳೆಯ ಎಲೆಯ ಮೇಲೆ ಒಂದೇ ಹೊತ್ತು ಊಟ. ಮರುದಿನ ಏಕಾದಶಿಯಂದು ಪೂರ್ಣ ಉಪೋಷಣ. ಭಕ್ತಿಯಿಂದ ಭಗವತ್ ಪೂಜನ. ನಿರಂತರ ಧ್ಯಾನ, ರಾತ್ರಿಯಲ್ಲಿ ಜಾಗರಣ. ಪುನಃ ದ್ವಾದಶಿ ದಿನದಂದು ಭಗವತ್ ಪೂಜೆ ಪ್ರಾತಃಕಾಲದಲ್ಲಿ, ಅನಂತರ ಶಿಷ್ಟ ಸದಾಚಾರಿ ಜ್ಞಾನಿ ಬ್ರಾಹ್ಮಣರ ಭೋಜನ. ಅನಂತರ ಕುಟುಂಬದ ಜನರೊಂದಿಗೆ ಪಾರಣ. ಹೀಗೆ ಪ್ರತಿ ಹದಿನೈದು ದಿನಕ್ಕೊಮ್ಮೆ ದಿನತ್ರಯ ವ್ರತವನ್ನು ಅನುಷ್ಠಾನ ಮಾಡಬೇಕು. ವರ್ಷದ ಕೊನೆಯಲ್ಲಿ ಭಾದ್ರಪದ ಶುದ್ಧ ಏಕಾದಶಿಯಂದು ಬಂಗಾರ ಅಥವಾ ಬೆಳ್ಳಿಯ ಪ್ರತಿಮೆಯನ್ನು ಯಥಾಶಕ್ತಿ ಮಾಡಿಸಿ ಕಲಶದ ಮೇಲೆ ಇಟ್ಟು ಶ್ರೀಹರಿಯ ಪೂಜೆಯನ್ನು ಮಾಡಬೇಕು. ಇದರಿಂದ ಭಕ್ತರ ಮನೋರಥಗಳು ಸಿದ್ಧಿಸುತ್ತವೆ. ದೇವಮಾತೆ ! ನೀನು ಈ ವ್ರತವನ್ನು ಅನುಷ್ಠಾನ ಮಾಡಿದರೆ ನಿನ್ನ ಮಕ್ಕಳ ಭಾಗ್ಯೋದಯ ಆಗುವದರಲ್ಲಿ ಸಂದೇಹವಿಲ್ಲ.'' ಮಹರ್ಷಿಗಳ ಆದೇಶದಂತೆ ಆ ಕಶ್ಯಪ ಕುಟುಂಬಿನಿಯು ದೇವತಾಕಾರ್ಯ ಸಿದ್ಧಿಗಾಗಿ ಈ ದಿನತ್ರಯದ ವ್ರತವನ್ನು ಒಂದು ವರ್ಷದವರೆಗೆ ತಪ್ಪದೇ ಪಾಲಿಸಿದಳು.

ಈ ಸತೀಶಿರೋಮಣಿಯ ಅನೂಚಾನವಾದ ಈ ವ್ರತಾನುಷ್ಠಾನದಿಂದ ಪ್ರಸನ್ನನಾದ ಪರಮಾತ್ಮ. ಶ್ರವಣಾ ನಕ್ಷತ್ರದಿಂದೊಡಗೂಡಿದ ದ್ವಾದಶಿ ದಿನದಂದು ಸಾಕ್ಷಾತ್ ಜಗದೀಶ್ವರನಾದ ವಿಷ್ಣುವು ವಾಮನ ರೂಪದಿಂದ ಅಲ್ಲಿ ಪ್ರಾದುರ್ಭೂತನಾದ. ಹುಟ್ಟಿದ ಕೂಡಲೇ ವಟುವಿನ ವೇಷಧರಿಸಿ ಆ ವಿಷ್ಣು ಅಲ್ಲಿ ಶೋಭಿಸತೊಡಗಿದ. ತಾವರೆಗಣ್ಣು, ಸುಂದರದೇಹ, ಎತ್ತರವಲ್ಲದ ನಿಲುವು, ಕಾಂತಿ ಚಿಮ್ಮುವ ಅಂಗಾಂಗಗಳು, ಶ್ಯಾಮವರ್ಣ, ಕೊರಳಲ್ಲಿ ವನಮಾಲೆ, ಮುಗ್ಧ ಮೋಹನ ರೂಪ. ಅದಿತಿಗೆ ಪೂಜೆಯ ಮಧ್ಯದಲ್ಲಿ ಇಂಥ ದಿವ್ಯ ಸುಂದರವಾದ ಭಗವನ್ ಮೂರ್ತಿಯನ್ನು ಕಂಡು ಆಶ್ಚರ್ಯವೇ ಆಶ್ಚರ್ಯ. ಕಶ್ಯಪರು ಕೂಡ ಕಣ್ಣಿನ ಎವೆ ಮಿಳುಕಿಸದೇ ಸ್ನಿಗ್ಧ ದೃಷ್ಟಿಯಿಂದ ಆ ಮುದ್ದು ಮಗುವನ್ನು ನೋಡತೊಡಗಿದರು. ಕೆಲ ನಿಮಿಷಗಳ ಅನಿಮಿಷ ನಿರೀಕ್ಷಣೆಯ ನಂತರ ದಂಪತಿಗಳಿಬ್ಬರೂ ಕೈ ಜೋಡಿಸಿ ದನಿಗೂಡಿಸಿ ಆ ಭಗವಂತನನ್ನು ಸ್ತೋತ್ರಗೈದರು.

## ಕಶ್ಯಪಾದಿತೀ ಊಚತುಃ

**ನಮೋ ನಮಃ ಕಾರಣಕಾರಣಾಯ ವಿಶ್ವಾತ್ಮನೇ ವಿಶ್ವಸೃಜೇಽ ಭವಾಯ**
**ಅನಂತರೂಪಾಯ ನಮೋ ನಮಸ್ತೇ ತ್ವನಂತಧಾಮ್ನೇ ಪರಮಾತ್ಮ ರೂಪಿಣೇ**

**ಪರಾಪರಾಣಾಂ ಪರಮಾತ್ಮದೇವತೆ ಚಿನ್ಮಾತ್ರಕ ಜ್ಞಾನವತಾಂ ಸ್ವರೂಪಿಣೇ**
**ವರೇಣ್ಯರೂಪಾಯ ಪರಾಪರಾತ್ಮನ್ನಕುಂಠಬೋಧಾಯ ನಮೋ ನಮಸ್ತೇ ॥**

ವಿಶ್ವವ್ಯಾಪಿಯಾದ ಪರಮಾತ್ಮನಿಗೆ ನಮಸ್ಕಾರ. ಪ್ರಪಂಚಕ್ಕೆ ಕಾರಣೀಭೂತ ಪ್ರಕೃತಿಗೆ ನೀನೇ ಮೂಲಕಾರಣ. ಜಗತ್ತನ್ನು ಸೃಷ್ಟಿ ಮಾಡಿ ರಕ್ಷಿಸುವವನೂ ಸಂಹರಿಸುವವನೂ ನೀನೇ ಆಗಿರುತ್ತಿ. ಮಾನವರನ್ನು ಸಂಸಾರದಿಂದ ಪಾರುಮಾಡಿ ಮೋಕ್ಷಕ್ಕೆ ಕರೆದು ಒಯ್ಯುವವ ನೀನೇ. ಅನಂತಾಸನದಲ್ಲಿ ವಾಸಿಸುವ ಅನಂತ ರೂಪಗಳುಳ್ಳ ನಿಮಗೆ ನಮ್ಮ ನಮಸ್ಕಾರ. ಪರಾಪರ ವಸ್ತುಗಳಿಗೆಲ್ಲ ನೀನೇ ಪ್ರೇರಕ ಮತ್ತು ಕಾರಕ ಹಾಗೂ ನಿಯಾಮಕ. ಜ್ಞಾನಾನಂದ ಸ್ವರೂಪಿಯಾದ ನೀನು ಜ್ಞಾನಿಗಳಿಗೆ ಮಾತ್ರ ನಿನ್ನ ಸಚ್ಚಿದಾನಂದ ರೂಪದಿಂದ ದರ್ಶನ ಕೊಡುವೆ. ಚರಾಚರಾತ್ಮಕವಾದ ಈ ಪ್ರಪಂಚವನ್ನೆಲ್ಲ ವ್ಯಾಪಿಸಿ ನಿಂತ, ವರಣೀಯವಾದ ರೂಪವುಳ್ಳ, ಅಕುಂಠಿತವಾದ ದಿವ್ಯಜ್ಞಾನವುಳ್ಳ ಭಗವಂತನೇ ! ನಿನಗೆ ನಮೋ ನಮಃ'' ಹೀಗೆ ಅದಿತಿಯು ಪತಿ ಕಶ್ಯಪರೊಂದಿಗೆ ಒಡಗೂಡಿ ಪ್ರಾರ್ಥನೆ ಮಾಡಿದ್ದನ್ನು ನೋಡಿ ಪ್ರೀತಪ್ರಸನ್ನನಾದ ಆ ವಾಮನರೂಪಿ ಪರಮಾತ್ಮ. ನಸುನಗುತ್ತ ದೇವಮಾತೆಯನ್ನು ಉದ್ದೇಶಿಸಿ ನುಡಿದ.

**ವಾಮನ** : ದೇವಿ, ನೀನು ಗೈದ ತಪೋನುಷ್ಠಾನ ಅತ್ಯಂತ ಸಮೀಚೀನ. ಆ ಅವಿಕಲ ವ್ರತಾಚರಣೆಯಿಂದ ನನಗೆ ನಿನ್ನ ಮೇಲೆ ಪ್ರೀತಿ ಉಂಟಾಗಿದೆ. ನಿನ್ನ ತಪಸ್ಸಿಗೆ ಪರಿತುಷ್ಟನಾದ ನಾನು ದೇವಕಾರ್ಯ ಸಿದ್ಧಿಗೆ ಅವತರಿಸಿ ಬಂದಿದ್ದೇನೆ.

**ಅದಿತಿ** : ಭಗವಂತ ! ಬಲಿಷ್ಠನಾದ ಬಲಿಚಕ್ರವರ್ತಿಯು ನನ್ನ ಮಕ್ಕಳಾದ ದೇವತೆಗಳನ್ನೆಲ್ಲ ಗೆದ್ದು ಹೆದರಿಸಿ ಓಡಿಸಿದ್ದಾನೆ. ಈ ನನ್ನ ಮಕ್ಕಳೆಲ್ಲ ನಿನ್ನ ಚರಣಗಳಿಗೆ

ಶರಣು ಬಂದಿದ್ದಾರೆ. ಇವರನ್ನು ರಕ್ಷಿಸುವ ಭಾರ ನಿನ್ನದು. ಇವರ ವೈರಿಗಳನ್ನು ಶಿಕ್ಷಿಸುವದೂ ನಿನ್ನ ಹೊಣೆಯೇ''.

ಇತ್ತ ಸ್ವರ್ಗಕ್ಕೆ ಲಗ್ಗೆ ಇಟ್ಟ ದೈತ್ಯರು ವೀರಾವೇಶದಿಂದ ಅಮರಾವತಿಯಲ್ಲಿ ನುಗ್ಗಿದರು. ದೇವರಾಜ ಇಂದ್ರನನ್ನೇ ಮೊದಲು ಕೊಂದುಹಾಕಬೇಕೆಂದು ಅವರ ದುರಾಲೋಚನೆ. ಆದರೆ ಈ ದುರಾಲೋಚನೆ ದುರುದ್ದೇಶದಿಂದಲೇ ಆ ನಿಲಿಂಪಪುರಿಯನ್ನು ಹೊಕ್ಕ ದೈತ್ಯರಿಗೆಲ್ಲ ನಿರಾಶೆ. ಒಳಗೆ ಒಬ್ಬ ದೇವತೆಯೂ ಇಲ್ಲ. ಆ ಸುರಪುರಿಯೆಲ್ಲವೂ ಬರಿದೋ ಬರಿದು. ಆ ರಿಕ್ತ ರಾಜಧಾನಿಯಲ್ಲಿ ಅಸುರರ ಅಕ್ರಮ ಪ್ರವೇಶ. ಯಾವ ಪ್ರತಿರೋಧವಿಲ್ಲದೆಯೇ ಸಮಗ್ರ ಅಮರಾವತಿಯ ಆಕ್ರಮಣ. ಸುರ ಸಾಮ್ರಾಜ್ಯದ ಸರ್ವವೈಭವದ ಲೂಟಿ. ಅಸುರರಿಗೆಲ್ಲ ಉಲ್ಲಾಸ. ಎಲ್ಲರ ಮುಖದ ಮೇಲೂ ಆನಂದದ ಮಂದಹಾಸ. ಸಂತೋಷೋದ್ರೇಕದಿಂದ ಬಲಿರಾಜನ ಸುತ್ತು ಮುತ್ತು ದೈತ್ಯರ ಸಾನಂದ ನೃತ್ಯ. ಅದೇ ವೇಳೆಯಲ್ಲಿ ಶುಕ್ರರ ಆಗಮನ. ಸ್ವರ್ಗ ಸಾಮ್ರಾಜ್ಯದ ಸಿಂಹಾಸನಾರೋಹಣಕ್ಕಾಗಿ ಬಲಿರಾಜನಿಗೆ ಆದೇಶ. ಅದಕ್ಕೆ ಅವನ ಸಾನಂದ ಸಮ್ಮತಿ. ಅದೇ ಕ್ಷಣದಲ್ಲಿ ಬಲಿಚಕ್ರವರ್ತಿಯಿಂದ ಇಂದ್ರಪದಾರೋಹಣ. ಶುಕ್ರರಿಂದ ಪಟ್ಟಾಭಿಷೇಕ. ದೈತ್ಯರಿಂದ ಜಯಘೋಷ. ದಾನವರಿಂದ ವಿಜಯೋತ್ಸವ ಆಚರಣೆ. ವಿರೋಚನ ಕುಮಾರ ಬಲಿರಾಜನು ಈಗ ಸ್ವರ್ಗಲೋಕದ ಹೊಸ ಸುರೇಂದ್ರ. ಅವನೆದುರು ಋಷಿಗಳೆಲ್ಲ ಮಣಿದರು. ಅಪ್ಸರೆಯರು ಕುಣಿದರು. ಗಂಧರ್ವರು ಸಂಗೀತ ಸೇವೆಗೈದರು, ಕಿನ್ನರರು ಹಾಡಿದರು. ತುಂಬುರರು ಪಾಡಿದರು. ಅಸುರರು ಕೈಂಕರ್ಯಗೈದರು. ಬಲಿರಾಜನು ಮೊದಲೇ ಕೊಡುಗೈ ದೊರೆ. ದಾನಶೂರ. ಈಗಂತು ಸ್ವರ್ಗದ ಐಶ್ವರ್ಯವೆಲ್ಲ ಅವನ ಕೈಯಲ್ಲಿ ಅಧೀನ. ಕೇಳಬೇಕೆ? ಅವನು ನೀಡಿದ ದಾನಕ್ಕೆ ಲೆಕ್ಕವಿಲ್ಲ. ಮಾಡಿದ ಧರ್ಮಕಾರ್ಯಗಳಿಗೆ ಗಣನೆಯಿಲ್ಲ. ಯಾಚಕರೆಲ್ಲರೂ ಅಂದು ಸಂತೃಪ್ತ. ಭಿಕ್ಷುಕರಾಗಿ ಯಾರೂ ಉಳಿಯಲೇ ಇಲ್ಲ. ಬಲಿಯಿಂದ ದಾನ ಕೊಂಡವರೆಲ್ಲರೂ ಕುಬೇರ ಕುಮಾರರು. ಅವನ ಕಟಾಕ್ಷಕ್ಕೆ ಪಾತ್ರರಾದವರೆಲ್ಲರೂ ಲಕ್ಷಾಧೀಶರು. ಲಕ್ಷ್ಮೀಯ ಪುತ್ರರು. ಈ ನಡುವೆ ಶೌನಕರಿಗೆ ಒಂದು ಸಂದೇಹ. ಲೋಮಶನನ್ನು ತಡೆದು ಕೇಳಿಯೇ ಬಿಟ್ಟರು.

**ಶೌನಕ** : ಸೂತರೇ, ದೇವಾಧೀಶನಾದ ಇಂದ್ರನು ಸ್ವರ್ಗಾಧಿಪತಿಯಾಗಿದ್ದಾಗ ಎಂದೂ ದಾನವನ್ನು ಕೊಡಲಿಲ್ಲ. ಆದರೆ ಬಲಿರಾಜನು ಮಾತ್ರ ಇಂದ್ರಪದವಿಯಲ್ಲಿದ್ದಾಗ ಇಷ್ಟು ಉದಾರನು ಹೇಗೆ ಆದ ?

**ಲೋಮಶ** : ಮುನಿವರ್ಯರೆ, ಇಂದ್ರನು ತನ್ನ ಹಿಂದಿನ ಜನ್ಮದಲ್ಲಿ ಯಾಜ್ಞಿಕನಾಗಿದ್ದ, ನೂರು ಅಶ್ವಮೇಧ ಯಜ್ಞಗಳನ್ನು ಮಾಡಿದ. ಆ ಪುಣ್ಯದಿಂದ ಅಮರಾವತಿಯ ಆಧಿಪತ್ಯವನ್ನು ಪಡೆದ. ಸ್ವರ್ಗಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾದ. ಅವನು ಈಗ ಕೃತಕೃತ್ಯ. ಅವನಿಗೆ ಈಗ ಯಾವುದನ್ನೂ ಗಳಿಸಬೇಕಾದುದಿಲ್ಲ. ಅವನು

ಕೇವಲ ಭೋಗ ಲೋಲುಪ. ತನ್ನ ಇಷ್ಟ ಪದವಿ ದೊರೆತ ಬಳಿಕ ಅವನಲ್ಲಿ ಈಗ ಕೃಪಣತೆ ಸೇರಿಕೊಂಡಿದೆ. ಇಂದಿನ ಇಂದ್ರ ಈ ಲೋಭದಿಂದ ಯಾರಿಗೂ ದಾನ ಕೊಡದೆ ಜಿಪುಣನಾಗಿ ಮುಂದೆ ಕೀಟನಾಗುವನು, ಮೊದಲಿನ ಕೀಟ ಈಗ ಇಂದ್ರಕಿರೀಟವನ್ನು ಇಟ್ಟುಕೊಳ್ಳುವದು. ಎಲ್ಲವೂ ದಾನಾದಾನದ ಫಲ. ದಾನದಿಂದ ಜ್ಞಾನ, ಜ್ಞಾನದಿಂದ ಮೋಕ್ಷ. ಇದರ ಬಗ್ಗೆ ಸಂದೇಹವಿಲ್ಲ. ವಿರೋಚನನ ಮಗ ಬಲಿರಾಜನು ಹಿಂದಿನ ಜನ್ಮದಲ್ಲಿ ಮಾಡಿದ ಕಾರ್ಯವನ್ನು ಹೇಳುತ್ತೇನೆ ಕೇಳಿರಿ. ಪೂರ್ವಜನ್ಮದಲ್ಲಿ ಇವನೊಬ್ಬ ಜೂಜುಗಾರ, ಮಹಾಪಾಪಿ, ಕಾಮುಕ, ಯಾವಾಗಲೂ ಪರಸ್ತ್ರೀಯರಲ್ಲಿಯೇ ಅವನಿಗೆ ಆಸಕ್ತಿ. ಪರದ್ರವ್ಯದಲ್ಲಿಯೇ ಅನುರಕ್ತಿ. ಒಂದು ದಿನ ಅವನಿಗೆ ಶುಕ್ರದೆಸೆ ತಿರುಗಿತ್ತು. ಅಂದಿನ ಜೂಜಾಟದಲ್ಲಿ ಕೈ ತುಂಬ ಲಾಭ ಆ ಜೂಜುಗಾರನಿಗೆ. ಅದಕ್ಕೆ ಕಾರಣ ಆ ಕಪಟ ಆಟ. ಉಳಿದ ಆಟಗಾರರನ್ನೆಲ್ಲ ವಂಚಿಸಿ ಅವರ ಕಣ್ಣಿಗೆ ಇಂಗು ಹಚ್ಚಿ ಪಣಕ್ಕಿಟ್ಟ ಹಣವನ್ನೆಲ್ಲ ಮೋಸ ಮಾಡಿ ಗೆದ್ದು ಬಿಟ್ಟ. ತನ್ನ ದ್ರವ್ಯದ ಪೆಟ್ಟಿಗೆ ತುಂಬಿದ ನಂತರ ಅಲ್ಲಿಂದ ಎದ್ದ. ಪೇಟೆಗೆ ಬಂದ. ಸುಗಂಧಿ ಎಣ್ಣೆ, ಅಡಿಕೆ, ವೀಳ್ಯದೆಲೆ, ತಾಂಬೂಲಸಾಮಗ್ರಿ, ಹೂವಿನ ಹಾರ, ಮುಂತಾದ ವಿಲಾಸಿ ಪದಾರ್ಥಗಳನ್ನೆಲ್ಲ ಕೊಂಡುಕೊಂಡ. ಕೈಯಲ್ಲಿ ಹಣ ಬಂದ ಕೂಡಲೇ ಅವನಿಗೆ ಮೊದಲು ತನ್ನ ಪ್ರಿಯ ವೇಶ್ಯೆಯ ನೆನಪು. ಅವಳಿಗೆ ಗೆದ್ದ ಹಣವನ್ನೆಲ್ಲ ಕೊಟ್ಟು ಪ್ರೀತಿಪಡಿಸಬೇಕು ಎಂಬ ತವಕ. ಅವಳಿಗೆ ಇಷ್ಟವಾದ ಪರಿಮಳ ದ್ರವ್ಯಗಳನ್ನೆಲ್ಲ ಕೊಂಡು ಅವಳ ಮನೆ ಕಡೆ ಧಾವಿಸಿದ. ಅವಸಾನಗೆಟ್ಟು ಓಡುವಾಗ ದಾರಿಯಲ್ಲಿ ತನ್ನ ಪಾದಗಳೇ ಮಡಚಿ ಅವನು ನೆಲದ ಮೇಲೆ ಉರುಳಿದ. ವೇಗದಲ್ಲಿ ಓಡುವಾಗ ಒಮ್ಮೆಲೇ ಬಿದ್ದಿದ್ದರಿಂದ ಮರಣಾಂತಿಕ ಪೆಟ್ಟು ತಗಲಿತು. ಬಿದ್ದ ಕೂಡಲೇ ಎಚ್ಚರ ತಪ್ಪಿತು, ಮೂರ್ಛೆ ಕವಿಯಿತು. ಕೆಲ ನಿಮಿಷಗಳ ನಂತರ ಸೂಸುವ ತಂಗಾಳಿಯಿಂದ ಪ್ರಾಣ ತಿರುಗಿತು. ಆದರೆ ಅಶಕ್ತಿ ಇನ್ನೂ ಇತ್ತು. ಜನ್ಮಾಂತರದ ಪುಣ್ಯದಿಂದ ಅವನ ಮನದಲ್ಲಿ ಒಳ್ಳೆ ವಿಚಾರ ಬಂದಿತು. ವಿವೇಕ ಉದಯಿಸಿತು. ಈವರೆಗೆ ಮಾಡಿದ ದುರ್ವ್ಯಾಪಾರಗಳಿಗಾಗಿ ಅವನಿಗೆ ಪಶ್ಚಾತ್ತಾಪವಾಯಿತು. ಅವನೊಬ್ಬ ಮೂರ್ಖ ಜೂಜುಗಾರನಾಗಿದ್ದರೂ ಅಲ್ಲಿಯೇ ನೆಲದ ಮೇಲೆ ಬಿದ್ದ ಹಣ್ಣು, ಹೂವು, ಕಾಯಿ ತೆಗೆದುಕೊಂಡು, ಬಿದ್ದಲ್ಲಿಯೇ ಶಿವಾರ್ಪಣೆ ಎಂದ. ಕೈ ಮುಗಿದು ಶಿವಧ್ಯಾನ ಮಾಡುತ್ತಲೇ ಜೀವ ಬಿಟ್ಟ. ತನ್ನ ಇಡೀ ಜೀವನದಲ್ಲಿ ಅವನು ಮಾಡಿದ ಪುಣ್ಯ ಕರ್ಮ ಇದು ಒಂದೇ. ಸತ್ತ ಬಳಿಕ ಯಮದೂತರು ಯಮಲೋಕಕ್ಕೆ ಸೆಳೆದೊಯ್ದರು. ಯಮಧರ್ಮನು ಅವನನ್ನು ಗದರಿಸಿ ಕೇಳಿದ.

**ಯಮ :** ಮೂರ್ಖನೇ, ನೀನು ಮಾಡಿದ ಅಸಂಖ್ಯ ಪಾಪ ಕೃತ್ಯಗಳಿಗಾಗಿ ನೀನು ಘೋರ ನರಕಗಳಲ್ಲಿ ನಿರಂತರ ನರಳಬೇಕಾಗುವದು.

**ಜೂಜುಗಾರ :** ಪುಣ್ಯಪುರುಷ, ನನ್ನ ಆಯುಷ್ಯದಲ್ಲಿ ನಾನು ಯಾವ ಪುಣ್ಯವನ್ನೂ ಮಾಡಿಲ್ಲವೇ ?

**ಚಿತ್ರಗುಪ್ತ :** ನೀನು ಸಾಯುವಾಗ ನಿನ್ನ ಕೈಯಿಂದ ನೆಲದ ಮೇಲೆ ಬಿದ್ದ ಗಂಧ ಪುಷ್ಪಾದಿಗಳನ್ನು ಶಿವನನ್ನು ಉದ್ದೇಶಿಸಿ ದಾನ ಕೊಟ್ಟೆ. ಮರಣಕಾಲದಲ್ಲಿ ಶಿವನಿಗೆ ಶರಣು ಹೋದೆ. ನೀನು ಮಾಡಿದ ದಾನ ಅಮೋಘವಾದುದು. ಈ ಪುಣ್ಯದಿಂದ ನಿನಗೆ ಮೂರುಗಳಿಗೆ ಇಂದ್ರ ಪದವಿ ದೊರೆಯಲಿರುವದು.

**ಜೂಜುಗಾರ :** ''ನಾನು ಮೊದಲು ನನ್ನ ಪುಣ್ಯದ ಫಲವನ್ನೇ ಅನುಭವಿಸುವೆನು''.

ಅವನ ಅಪೇಕ್ಷೆಯಂತೆ ಬೃಹಸ್ಪತ್ಯಾಚಾರ್ಯರು ಅಲ್ಲಿಗೆ ಆಗಮಿಸಿದರು. ಎಲ್ಲ ದೇವತೆಗಳು ಸೇರಿ ಆ ಜೂಜುಗಾರನನ್ನು ಆ ಕ್ಷಣದಲ್ಲಿ ಐರಾವತದ ಮೇಲೆ ಕೂಡಿಸಿದರು. ಮೆರವಣಿಗೆಯಿಂದ ಮಹೇಂದ್ರ ಮಂದಿರಕ್ಕೆ ಕರೆದೊಯ್ದರು. ಅಲ್ಲಿ ಆಚಾರ್ಯ ಬೃಹಸ್ಪತಿಗಳು ಇಂದ್ರನಿಗೆ ತಿಳಿಹೇಳಿದರು.

**ಬೃಹಸ್ಪತಿ :** ದೇವೇಂದ್ರ ! ಈ ಆಟಗಾರನಿಗೆ ಮೂರುಗಳಿಗೆ ನಿನ್ನ ಸಿಂಹಾಸನವನ್ನು ತೆರವು ಮಾಡಿಕೊಡು. ಅನಂತರ ನಿನ್ನ ಸ್ಥಾನ ನಿನಗೆ ಇದ್ದೇ ಇದೆ. ಇದು ನನ್ನ ಆಜ್ಞೆ. ಗುರುವಿನ ಆಜ್ಞೆಗೆ ತಲೆ ಬಾಗಿದ ಆ ಗೀರ್ವಾಣ ಚಕ್ರವರ್ತಿ. ಸಿಂಹಾಸನದಿಂದ ಕೆಳಗಿಳಿದ. ದೂರ ಎಲ್ಲಿಗೋ ಹೊರಟು ಹೋದ. ಇಂದ್ರನ ಗದ್ದುಗೆಯ ಮೇಲೆ ಈಗ ಆ ವೇಶ್ಯಾಗಾಮಿ ಜೂಜುಗಾರ.

ಇಂದ್ರಾಸನದ ಮೇಲೆ ಕುಳಿತ ಕೂಡಲೇ ಆ ಆಟಗಾರನು ತನ್ನ ದಾನ ಕಾರ್ಯವನ್ನಾರಂಭಿಸಿದ. ಅಗಸ್ತ್ಯರನ್ನು ಕರೆದ. ಅವರಿಗೆ ಐರಾವತ ದಾನಕೊಟ್ಟ. ವಿಶ್ವಾಮಿತ್ರರನ್ನು ಕೂಗಿದ. ಉಚ್ಚೈಶ್ರವವನ್ನು ದಾನ ನೀಡಿದ. ವಶಿಷ್ಠರನ್ನು ಆಮಂತ್ರಿಸಿ ಕಾಮಧೇನುವನ್ನು ಕೃಷ್ಣಾರ್ಪಣ ಎಂದ. ಮಹರ್ಷಿ ಗಾಲವರನ್ನು ಆಹ್ವಾನಿಸಿ ಚಿಂತಾಮಣಿಯನ್ನರ್ಪಿಸಿ ''ಇದಂ ನ ಮಮ'' ಎಂದ. ಕೌಂಡಿಣ್ಯರನ್ನು ಕರೆದು ಕಲ್ಪ ವೃಕ್ಷವನ್ನು ಕೊಟ್ಟು ನೀರು ಬಿಟ್ಟ. ಹೀಗೆ ಸ್ವರ್ಗದಲ್ಲಿಯ ಐಶ್ವರ್ಯವನ್ನೆಲ್ಲ ಮಹಾಮುನಿಗಳನ್ನು ಕರೆದು ! 'ಶ್ರೀ ಶಂಕರಃ ಪ್ರೀಯತಾಂ'' ಎಂದ ಆನಂದದಿಂದ. ಮೂರುಗಳಿಗೆಯ ಅವಧಿ ಮುಗಿವವರೆಗೂ ಅವನು ಅಮರಾವತಿಯ ಇಂದ್ರನ ಒಡ್ಡೋಲಗದಲ್ಲಿ ರಂಭೆ ಊರ್ವಶಿಯರ ನೃತ್ಯವನ್ನು ಬಂದು ಮಾಡಿದ. ಗಂಧರ್ವರ ಗಾನವನ್ನು ನಿಲ್ಲಿಸಿದ. ಋಷಿಮುನಿಗಳ ಸ್ತುತಿಸ್ತೋತ್ರಗಳನ್ನು ಸಾಕು ಎಂದು ತಡೆದ. ಅವನು ತಾನಲ್ಲಿ ಇರುವವರೆಗೆ ಇಂದ್ರಪದವಿ ತನ್ನ ಕೈಯಲ್ಲಿರುವವರೆಗೆ ಮಾಡಿದ್ದು ಬರೀ ದಾನ. ಮೂರುಗಳಿಗೆಯ ಸಮಯ ಮುಗಿಯಿತು. ಅವನು ಸಿಂಹಾಸನ ಬಿಟ್ಟು ಕೆಳಗಿಳಿದ. ಅಲ್ಲಿಂದ ಹೊರಟು ಹೋದ. ಹಿಂದಿನ ಇಂದ್ರ ಬಂದ, ಗಡಿಬಿಡಿಯಿಂದ ತನ್ನ ಸಿಂಹಾಸನದ ಮೇಲೆ ಹೋಗಿ ಕುಳಿತ, ಪಕ್ಕದಲ್ಲಿ ಕುಳಿತ ಬೃಹಸ್ಪತ್ಯಾಚಾರ್ಯರನ್ನು ಕೇಳಿದ.

**ಇಂದ್ರ :** ಗುರುದೇವ, ನಾನಿಲ್ಲದ ಈ ಮೂರು ಗಳಿಗೆಯಲ್ಲಿ ಎಷ್ಟು ಅನಾಹುತ ಈ ಅಮರಾವತಿಯಲ್ಲಿ ! ನಮ್ಮ ಐರಾವತವನ್ನು ಯಾರೋ ಓಡಿಸಿಕೊಂಡು ಹೋಗಿದ್ದಾರೆ. ಉಚ್ಚೈಶ್ರವವನ್ನು ಹಾರಿಸಿಕೊಂಡು ಹೋಗಿದ್ದಾರೆ. ಕಲ್ಪವೃಕ್ಷ ಕಾಣುವದೇ ಇಲ್ಲ. ಕಾಮಧೇನು ಗೋಷ್ಠದಲ್ಲಿ ಇಲ್ಲವೇ ಇಲ್ಲ. ಸ್ವರ್ಗದ ಐಶ್ವರ್ಯ ವೆಲ್ಲವೂ ಲೂಟಿಯಾಗಿ ಹೋಗಿದೆ.

**ಬೃಹಸ್ಪತಿ :** ನಿನ್ನ ಹಿಂದೆ ಮೂರು ಗಳಿಗೆಯ ಮಹೇಂದ್ರನೊಬ್ಬ ಬಂದಿದ್ದನಲ್ಲವೆ? ಆ ಜೂಜುಗಾರ ಒಂದು ಮೋಜು ಮಾಡಿಬಿಟ್ಟ. ಅವನ ಕೈಯಲ್ಲಿ ಅಧಿಕಾರವಿರುವಾಗ ಇದ್ದದ್ದನ್ನೆಲ್ಲ ದಾನಕೊಟ್ಟ. ಐರಾವತ, ಉಚ್ಚೈಶ್ರವ, ಕಾಮಧೇನು, ಚಿಂತಾಮಣಿ ಮುಂತಾದ ಸ್ವರ್ಗಸೀಮೆಯ ಸೌಭಾಗ್ಯ ನಿಧಿಯನ್ನೆಲ್ಲ ಋಷಿಮುನಿಗಳಿಗೆ ಕೊಟ್ಟು ನೀರು ಬಿಟ್ಟು ಕೈಮುಗಿದು ಕೃಷ್ಣಾರ್ಪಣ ಎಂದ. ದೇವರು ಕೊಟ್ಟಾಗ ಶಿವನ ಪ್ರೀತ್ಯರ್ಥವಾಗಿ ಕೊಡುಗೈಯಿಂದ ದಾನಕೊಡುವವನು ಶಂಕರನ ಪ್ರಿಯ ಭಕ್ತ. ಅಂಥ ಮಾನವನಿಗೆ ಕೈಲಾಸಪತಿಯು ಪ್ರೀತಿಯಿಂದ ಕರೆದು ಕೈವಲ್ಯ ನೀಡುವನು.

**ಇಂದ್ರ :** ಗುರುಗಳೇ, ಈಗ ನಾನು ಏನು ಮಾಡಬೇಕು? ಬೇಗನೇ ಹೇಳಿರಿ. ಆ ಜೂಜುಗಾರನು ಸ್ವರ್ಗವನ್ನೆಲ್ಲ ತೊಳೆದು ಇಟ್ಟಿದ್ದಾನೆ. ಭಂಡಾರವೆಲ್ಲವೂ ಬರಿದಾಗಿದೆ. ಸ್ವರ್ಗವೆಲ್ಲ ಇಂದು ಶೂನ್ಯ. ಇದಕ್ಕೆ ಮುಂದೇನು ಉಪಾಯ ?

**ಬೃಹಸ್ಪತಿ :** ದೇವೇಂದ್ರ, ಈ ವಿಷಯದಲ್ಲಿ ಯಮಧರ್ಮನೊಡನೆ ವಿಚಾರ ಮಾಡುವುದು ಲೇಸು.

ಸುರರಾಜನು ಆಚಾರ್ಯರೊಡನೆ ಯಮಧರ್ಮನ ಸಂಯಮನೀಪುರಕ್ಕೆ ಆಗಮಿಸಿದನು. ಅಲ್ಲಿ ಸ್ವರ್ಗಾಧಿಪತಿಗೆ ಸಂಭ್ರಮದ ಸ್ವಾಗತ. ಆದರದ ಆತಿಥ್ಯ, ಪ್ರೀತಿಯ ಕುಶಲ ಪ್ರಶ್ನೆ, ಅನಂತರ ದೇವೇಂದ್ರನ ಒಂದು ಶಂಕಾತಂಕ.

**ಇಂದ್ರ :** ಧರ್ಮರಾಜ, ನೀನು, ನನ್ನ ದುಷ್ಪ್ರಾಪ್ಯವಾದ ಇಂದ್ರಪದವಿಯನ್ನು ಓರ್ವ ದುಷ್ಟ, ವೇಶ್ಯಾಲಂಪಟ, ಜೂಜುಗಾರನಿಗೆ ಕೊಟ್ಟಿಟ್ಟೆ. ಅವನು ಅಲ್ಲಿ ಮೂರು ಗಳಿಗೆ ಕುಳಿತು ಸ್ವರ್ಗವನ್ನೆಲ್ಲ ಹಾಳು ಮಾಡಿಬಿಟ್ಟಿದ್ದಾನೆ. ದೇವತೆಗಳ ಸ್ವತ್ತು ಸಂಪತ್ತು ಎನಿಸಿದ, ಆನೆ, ಕುದುರೆ, ಕಲ್ಪವೃಕ್ಷವನ್ನೂ, ಕೈಗೆ ಬಂದಂತೆ ಋಷಿಮುನಿಗಳಿಗೆ ದಾನ ಕೊಟ್ಟಿದ್ದಾನೆ. ಇದೂ ಒಂದು ಅವನು ಅಲ್ಲಿ ನಡೆಸಿದ ಜೂಜಾಟವೇ ಸರಿ. ಇಂಥ ದುರ್ವ್ಯಸನಿಗೆ ನೀನು ದೇವೇಂದ್ರ ಪದವಿಯನ್ನು ಹೇಗೆ ಕೊಟ್ಟೆ ?

**ಧರ್ಮರಾಜ :** ಇಂದ್ರ, ನೀನೇನೋ ದೇವತೆಗಳ ರಾಜ ನಿಜ. ಮುದುಕನಾದೆ, ನಿನಗೆ ಇದೂವರೆಗೆ ಅಧಿಕಾರ ದಾಹ ಹೋಗಿಲ್ಲ. ವಿಷಯಲಾಲಸೆ ಹಿಂಗಿಲ್ಲ. ಹಿಂದೆ ನೂರು ಯಜ್ಞ ಮಾಡಿದ ಪುಣ್ಯದಿಂದ ಇಂದ್ರ ಪದವಿಯೇನೋ ನಿನಗೆ ದೊರಕಿದೆ. ಆದರೆ ಇಷ್ಟು ದಿನ ನೀನು ಆ ಪದವಿಯಲ್ಲಿ ಇದ್ದು ಯಾರಿಗೇನಾದರೂ ಕೊಟ್ಟೆಯಾ ದಾನವನ್ನು? ಆ ಜೂಜುಗಾರನು ಮಾತ್ರ ಮೂರು ಗಳಿಗೆ ಇದ್ದರೂ ನೂರು ವರ್ಷ ನಿಮ್ಮಂಥವರು ಇದ್ದರೂ ಮಾಡಲಾಗದ ಪುಣ್ಯ ಕರ್ಮಗಳನ್ನು ಮಾಡಿದ್ದಾನೆ. ಈಗ ನಿನಗೆ ನಿನ್ನ ಆನೆ ಕುದುರೆ ಹಾಗೂ ಇತರ ವಸ್ತುಗಳು ಬೇಕಾಗಿದ್ದರೆ ಅಗಸ್ತ್ಯ ಮೊದಲಾದ ಮುನಿಗಳಿಗೆ ಹಣ ಕೊಟ್ಟು ಅವನ್ನು ಮರಳಿ ಪಡೆಯಬಹುದು.

ಯಮಧರ್ಮನ ಸಲಹೆ ಸೂಚನೆಯಂತೆ ದೇವೇಂದ್ರನು ಮುನಿಮಹರ್ಷಿಗಳಿಗೆ ಬೇಡಿದಷ್ಟು ದುಡ್ಡು ಕೊಟ್ಟು ತನ್ನ ವಸ್ತುಗಳನ್ನೆಲ್ಲ ಅವರಿಂದ ಮರಳಿ ಪಡೆದನು. ಹಾಲುಗಡಲಿನಿಂದ ಹುಟ್ಟಿಬಂದ ಆ ಎಲ್ಲ ಹದಿನಾಲ್ಕು ರತ್ನಗಳನ್ನು ಪುನಃ ಪಡೆದು

ಸಂತಸದಿಂದ ರಾಜಧಾನಿಯನ್ನು ಪ್ರವೇಶಿಸಿದನು. ಮುಂದೆ ಯಮಧರ್ಮನು ಆ ಜೂಜುಗಾರನಿಗೆ ದೈತ್ಯಕುಲದಲ್ಲಿ ಜನ್ಮವಿತ್ತನು. ದೈತ್ಯರಾಜ ವಿರೋಚನ ಹಾಗೂ ಸುರುಚಿ ದಂಪತಿಗಳ ಮೆಚ್ಚಿನ ಮಗನಾಗಿ ಹುಟ್ಟಿದ ಆ ಜೂಜುಗಾರ. ಈ ಸುರುಚಿ ದೇವಿಯು ವೃಷಪರ್ವ ರಾಜನ ಮಗಳು. ಅವಳ ಗರ್ಭದಲ್ಲಿ ಈ ಜೂಜುಗಾರನು ಮೂಡಿದ ಕೂಡಲೇ ಪ್ರಲ್ಹಾದ ಪುತ್ರನಾದ ವಿರೋಚನ ಹಾಗೂ ಅವನ ಮಡದಿ ಸುರುಚಿ ದೇವಿಯ ಮನದಲ್ಲಿ ಔದಾರ್ಯವು ಮೂಡಿತು. ಧರ್ಮ ಬುದ್ಧಿಯು ಉದಯವಾಯಿತು. ವಿಶೇಷವಾಗಿ ದಾನಪ್ರಧಾನವಾದ ಪ್ರವೃತ್ತಿ ಬೆಳೆಯಿತು. ಈ ಜೂಜುಗಾರನು ತಾಯಿಯ ಗರ್ಭದಲ್ಲಿದ್ದಾಗಲೇ ಒಂದು ದಿನ ದೇವೇಂದ್ರನು ವಿರೋಚನನನ್ನು ಕೊಲ್ಲಬೇಕೆಂದು ಭಿಕ್ಷುಕ ಬ್ರಾಹ್ಮಣ ವೇಷದಿಂದ ಅವರ ಮನೆಗೆ ಬಂದನು. ಮತ್ತು ಅವರಿಗೆ ಹೀಗೆಂದನು. ''ರಾಜನೇ ! ನೀನು ನನ್ನ ಇಷ್ಟಾನುಸಾರವಾಗಿ ದಾನವನ್ನು ನೀಡಬಲ್ಲೆಯಾ ?'' ಪ್ರಲ್ಹಾದಪುತ್ರನಾದ ಆ ವಿರೋಚನನಿಗೆ ಎಂದೂ ಯಾರಿಗೂ 'ಇಲ್ಲ' ಎಂದು ಗೊತ್ತೇ ಇಲ್ಲ. ನಗುತ್ತಲೇ ನುಡಿದ ಆ ವೀರವರ್ಯ -

**ವಿರೋಚನ :** ಬ್ರಾಹ್ಮಣೋತ್ತಮ, ನೀನು ಬೇಕು ಎಂದು ಬೇಡಿದರೆ ನನ್ನ ತಲೆಯನ್ನಾದರೂ ಕತ್ತರಿಸಿ ಕೊಡುವೆ.

**ಬ್ರಾಹ್ಮಣ :** ಹಾಗಾದರೆ ನಿನ್ನ ತಲೆಯನ್ನೇ ಕಡಿದು ಕೊಟ್ಟೇ ಬಿಡು.

ವಿರೋಚನನು ಸಾಮಾನ್ಯನೇ ! ನುಡಿದ ಮಾತಿಗೆ ತಪ್ಪುವಂಥ ಅಪ್ರಾಮಾಣಿಕನೇ! ಕೂಡಲೇ ತನ್ನ ಕೈಯಿಂದ ಖಡ್ಗವನ್ನು ಎತ್ತಿದ. ತನ್ನ ತಲೆಯನ್ನೇ ಕಡಿದು ಇಂದ್ರನ ಮುಂದೆ ಹಿಡಿದ. ವಿರೋಚನನ ಈ ದಾನವು ಮೂರು ಲೋಕದಲ್ಲಿಯೂ ಪ್ರಸಿದ್ಧವೂ ಪ್ರಶಂಸಿತವೂ ಆಯಿತು. ವಿರೋಚನನು ಮರಣ ಹೊಂದಿದ ಬಳಿಕ ಈ ಜೂಜುಗಾರನು ಸುರುಚಿಯ ಗರ್ಭದಿಂದ ಹುಟ್ಟಿದ. ಪುತ್ರ ಜನನ ನಂತರದಲ್ಲಿ ಮಹಾಪತಿವ್ರತೆಯಾದ ಸುರುಚಿ ಮಾತೆಯು ತನ್ನ ಶರೀರ ತ್ಯಾಗಮಾಡಿ ಪತಿಲೋಕವನ್ನು ಐದಿದಳು. ಮುಂದೆ ಶುಕ್ರಾಚಾರ್ಯರು ಆ ಜೂಜುಗಾರನನ್ನು ದೈತ್ಯರಾಜ್ಯದ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕಗೈದರು. ಅವನೇ ಆ ವಿರೋಚನನ ಮಗನೇ ಈಗಿನ ಬಲಿಚಕ್ರವರ್ತಿ. ಈ ಬಲಿರಾಜನಿಂದ ಹಾಗೂ ಅವನ ಸೈನಿಕರಿಂದ ಸಂತ್ರಸ್ತರಾದ ದೇವತೆಗಳು ಕಶ್ಯಪಮುನಿಯ ಪರ್ಣಕುಟೀರಕ್ಕೆ ಹೋದುದನ್ನು ಹಿಂದೆಯೇ ಪ್ರಸ್ತಾಪಿಸಲಾಗಿದೆ. ದೇವತೆಗಳು ಅತ್ತ ಹೋದಾಗ ಆ ಬಲಿಷ್ಠ ಬಲಿಯೂ ಅವನ ದರ್ಪಿಷ್ಟ ಸೈನಿಕರೂ ಸುರಪುರವನ್ನು ಆಕ್ರಮಿಸಿದರು. ಗುರು ಶುಕ್ರರು ಅಮರಾವತಿಯ ಮಹೇಂದ್ರ ಸಿಂಹಾಸನದ ಮೇಲೆ ಬಲಿಚಕ್ರವರ್ತಿಯನ್ನು ಕೂಡಿಸಿ ತ್ರಿಲೋಕಾಧಿಪತ್ಯದ ಪೀಠದಲ್ಲಿ ಪಟ್ಟಾಭಿಷೇಕಗೈದರು. ಆ ಪುರಂದರ ಪದದಲ್ಲಿ ಪ್ರತಿಷ್ಠಿತನಾದ ಆ ದೈತ್ಯ ಸಾರ್ವಭೌಮ ಸ್ವಯಂ ಸೂರ್ಯನಾಗಿ ಬೆಳಗಿದ. ಇಂದ್ರನಾಗಿ ತೊಳಗಿದ, ಅಗ್ನಿಯಾಗಿ ಪ್ರಜ್ವಲಿಸಿದ, ವಾಯುವಾಗಿ ಜಗತ್ತಿನ ಉಸಿರಾದ. ಧರ್ಮಲೋಕದ ನಿಯಂತ್ರಣವನ್ನು ಸಮರ್ಥ ನೀತಿಯಿಂದ ನಿರ್ವಹಿಸಿದ.

ಈಶಾನ್ಯ ಕೋಣದಲ್ಲಿ ಈಶಾನನಾಗಿ, ನೈರುತ್ಯದ ನಿಟ್ಟಿನಲ್ಲಿ ನಿರತಿಯಾಗಿ, ಪಶ್ಚಿಮದಲ್ಲಿ ವರುಣನಾಗಿ, ಉತ್ತರದಲ್ಲಿ ಕುಬೇರನಾಗಿ ಸರ್ವಕಾರ್ಯ ಧೂರ್ವಹನಾಗಿ ಆ ಸಾರ್ವಭೌಮ ವಿಜೃಂಭಿಸಿದ. ಹೀಗೆ ಆ ದೈತ್ಯೇಂದ್ರನು ಒಬ್ಬನೇ ಇದ್ದರೂ ದಶ ದಿಕ್‌ಪಾಲಕರ ಕಾರ್ಯಗಳನ್ನೆಲ್ಲ ಸಮರ್ಥ ರೀತಿಯಿಂದ ನಿರ್ವಹಿಸಿದ. ಪೂರ್ವ ಜನ್ಮದಲ್ಲಿ ಜೂಜುಗಾರನಾಗಿ ಅವನು ಶಿವಭಕ್ತನೂ ಆಗಿದ್ದ. ಈಗಂತೂ ಕೇಳುವುದೇನು? ನಿರಂತರ ಶಿವೋಪಾಸಕ. ಭವನಿಷ್ಠ. ಹರಭಕ್ತ. ಲಿಂಗ ಪೂಜೈಕಲೀನ ಮಾನಸ. ಅವನು ಗೈಯುವ ದಾನ ಧರ್ಮಗಳಿಗೆ ಇತಿಯಿಲ್ಲ. ಪುಣ್ಯಕರ್ಮಗಳಿಗೆ ಮಿತಿಯಿಲ್ಲ. ಅವನ ದಾನವು ಸಾತ್ವಿಕ ದಾನ. ಅದಕ್ಕೆ ಯಾವುದೇ ಉದ್ದೇಶವಿರಲಿಲ್ಲ. ದೀನರಿಗೂ ದಲಿತರಿಗೂ, ಆರ್ತರಿಗೂ, ಯಾವ ಪ್ರತಿಫಲಾಪೇಕ್ಷೆ ಇಲ್ಲದೇ ಅವನು ದಾನ ನೀಡುತ್ತಿದ್ದ. ಮಹತ್ತರವಾದ ಪುಣ್ಯ ಬರುವದು ಇಂಥ ನಿಷ್ಕಾಮದಾನದಿಂದಲೇ.

**ತದ್ದಾನಂ ಚ ಮಹಾಪುಣ್ಯಮಾರ್ತೇಭ್ಯೋ ಯತ್ ಪ್ರದೀಯತೇ ।**
**ಸ್ವಶಕ್ತ್ಯಾ ಯಚ್ಚ ಕಿಂಚಿತ್ ಸ್ಯಾತ್ ತದಾನಂತ್ಯಾಯ ಕಥ್ಯತೇ ।**
**ದಾನಾತ್ ಪರತರಂ ನಾನ್ಯತ್ ತ್ರಿಷು ಲೋಕೇಷು ವಿದ್ಯತೇ ॥**

ಆರ್ಥಿಕ ತೊಂದರೆಯಲ್ಲಿರುವ ದೀನ ದಲಿತ ದರಿದ್ರರಿಗೆ ನೀಡುವ ದಾನವು ಅತ್ಯಂತ ಪುಣ್ಯಕರ ಹಾಗೂ ಪ್ರಶಸ್ತ. ತನ್ನ ಶಕ್ತ್ಯಾನುಸಾರ ಅತ್ಯಲ್ಪ ದಾನವನ್ನು ಸತ್ಪಾತ್ರದಲ್ಲಿ ಮಾಡಿದರೂ ಅದರಿಂದ ಅನಂತ ಫಲವು ಪ್ರಾಪ್ತವಾಗುವದು. ದಾನಕ್ಕಿಂತ ಮಿಗಿಲಾದ ಪುಣ್ಯಕಾರ್ಯವು ಮೂರು ಲೋಕಗಳಲ್ಲಿ ಬೇರೆ ಇಲ್ಲ. ಈ ಧರ್ಮ ರಹಸ್ಯವನ್ನು ಚೆನ್ನಾಗಿ ಅರಿತ ಬಲಿರಾಜನು ಕೊಡುಗೈಯಿಂದ ಬೇಡಿ ಬಯಸಿದವರಿಗೆ ಧಾರಾಳವಾಗಿ ನೀಡುತ್ತಲೇ ಇದ್ದನು. ವಿಪುಲ ದಾನವನ್ನು ಮಾಡುತ್ತಲೇ ಇದ್ದನು. ಇಂಥ ದಾನಶೂರನೂ ಶಿವಭಕ್ತನೂ ಆದ ಬಲಿರಾಜನು ಒಂದು ದಿನ ದೈತ್ಯ ದರ್ಬಾರದಲ್ಲಿ ಮಂಡಿಸಿದ್ದನು. ಸುತ್ತಲೂ ದೈತ್ಯದಾನವರ ಪರಿವಾರ. ಪಕ್ಕದಲ್ಲಿ ಅಸುರ ಗುರುಶುಕ್ರಾಚಾರ್ಯ ಉಚ್ಚಾಸನದ ಮೇಲೆ. ಆಗ ಅವನು ಅಲ್ಲಿ ನೆರೆದ ದೈತ್ಯ ದಾನವ ಜನರನ್ನು ಉದ್ದೇಶಿಸಿ ನುಡಿದ -

**ಬಲಿರಾಜ** : "ದೈತ್ಯದಾನವರೇ ! ಸ್ವರ್ಗ ಸಾಮ್ರಾಜ್ಯವೆಲ್ಲವೂ ಈಗ ನಮ್ಮ ಸ್ವಾಧೀನ. ಇನ್ನು ಮೇಲೆ ನೀವೆಲ್ಲರೂ ಆ ಪಾತಾಳ ಲೋಕದಲ್ಲಿ ಏಕೆ ಇರಬೇಕು? ಎಷ್ಟೆಂದರೂ ಅದು ಅಧೋಲೋಕ. ಸ್ವರ್ಗದ ಸುಖ ಸೌಕರ್ಯಗಳು ದೊರೆಯಲಾರವು ಆ ಕೆಳಲೋಕದಲ್ಲಿ. ಪಾತಾಳವನ್ನು ಬಿಟ್ಟು ನೀವೆಲ್ಲರೂ ಈ ಸ್ವರ್ಗಲೋಕಕ್ಕೆ ಬಂದು ಬಿಡಿರಿ. ಎಲ್ಲರೂ ಒಟ್ಟಿಗೆ ಇಲ್ಲಿಯೇ ಇದ್ದು ಬಿಡೋಣ ಆನಂದದಿಂದ''. ದೈತ್ಯ ಚಕ್ರವರ್ತಿಯ ಈ ಬಯಕೆ ಹಾಗೂ ಮಾತುಗಳನ್ನು ಕೇಳಿ ನಕ್ಕು ಬಿಟ್ಟರು ಅಸುರ ಪುರೋಹಿತರು. ಬಲಿರಾಜನನ್ನು ಉದ್ದೇಶಿಸಿ ಮಾತನಾಡಿದರು.

**ಶುಕ್ರಾಚಾರ್ಯ :** ''ದೈತ್ಯರಾಜ, ನಿರಂತರವೂ ಈ ವಿಬುಧಲೋಕದಲ್ಲಿಯೇ ವಾಸ್ತವ್ಯ ಹೂಡುವ ನಿನ್ನ ಯೋಚನೆ ಯೋಗ್ಯವೇನೋ ನಿಜ. ಆದರೆ ಪುಣ್ಯ ಮಾಡದವರಿಗೆ ದಕ್ಕದು ಈ ಲೋಕ. ಈ ನಾಕ ಲೋಕದಲ್ಲಿ ನಿರಂತರ ನೆಲೆಸಬೇಕಾದರೆ ನೂರು ಅಶ್ವಮೇಧಯಾಗಗಳನ್ನು ಮಾಡಬೇಕು. ಆ ಮಹಾಯಜ್ಞಗಳನ್ನು ಈ ಅಮರಾವತಿಯಲ್ಲಾಗಲಿ ಆ ಪಾತಾಳ ಪುರಿಯಲ್ಲಾಗಲೀ ನೆರವೇರಿಸಲು ಬರುವಂತಿಲ್ಲ. ಸ್ವರ್ಗ ಲೋಕವಂತೂ ಕೇವಲ ಭೋಗ ಭೂಮಿ. ಕರ್ಮ ಭೂಮಿಯಲ್ಲ. ಈ ಜಗತ್ತಿನಲ್ಲಿ ಒಂದೇ ಒಂದಾದ ಕರ್ಮಭೂಮಿಯೆಂದರೆ ಭೂಲೋಕ ಮಾತ್ರ. ಅದರಲ್ಲಿಯೂ ಭಾರತವರ್ಷ. ಪುಣ್ಯ ಪ್ರದೇಶವಾದ ಭರತಖಂಡದಲ್ಲಿ ಮಾಡಿದ ಧರ್ಮಕರ್ಮಗಳು ಮಾತ್ರ ಪುಣ್ಯಪ್ರದ. ಫಲಜನಕ. ಆದುದರಿಂದ ನೀನು ತಡಮಾಡಬೇಡ. ಈಗಲೇ ಮಹೀ ಮಂಡಲಕ್ಕೆ ಇಳಿ. ಅಲ್ಲಿ ಯಜ್ಞಕಾರ್ಯಗಳನ್ನು ಪ್ರಾರಂಭಿಸಿರಿ''. ಆಚಾರ್ಯರ ಈ ಹಿತೋಪದೇಶ ಕೇಳಿ ಬಲಿರಾಜನು ಸ್ವರ್ಗತೊರೆದ. ಭೂಮಿಗೆ ನಡೆದ. ಶುಕ್ರಾಚಾರ್ಯರು ಮುಂದೆ. ದೈತ್ಯ ದಾನವ ಪರಿವಾರವೆಲ್ಲವೂ ಹಿಂದೆ ಹಿಂದೆ ನೆಲದೆಡೆಗೆ ನಡೆದು ಬಂದಿತು ಈ ಅಸುರ ಪಡೆ.

ಭೂಲೋಕಕ್ಕೆ ಬಂದವನೇ ಆ ಅಸುರ ಸಾರ್ವಭೌಮನು ಮೊದಲು ಈ ಮಹೀಮಂಡಲವನ್ನು ಗೆದ್ದುಕೊಂಡು ಬಿಟ್ಟನು. ಅನಂತರ ನರ್ಮದಾ ನದೀ ತೀರಕ್ಕೆ ಪ್ರಯಾಣ, ಅಲ್ಲಿ ಭೃಗುಕಚ್ಛ ಎಂಬ ಪುಣ್ಯತೀರ್ಥ. ಅದರ ದಂಡೆಯಲ್ಲಿ ವಿಶಾಲ ಬಯಲುಪ್ರದೇಶ. ಅಲ್ಲಿಯೇ ಈ ದೈತ್ಯ ದಾನವ ಸಮೂಹದ ವಾಸ್ತವ್ಯ. ಆ ಸ್ಥಳದಲ್ಲಿ ಆಚಾರ್ಯ ಶುಕ್ರರ ನೇತೃತ್ವದಲ್ಲಿ ಪ್ರಾರಂಭವಾದವು ಬಲಿಚಕ್ರವರ್ತಿಯ ಅಶ್ವಮೇಧಯಾಗಗಳು. ಹಣೆ ಪಟ್ಟಿ ಕಟ್ಟಿಕೊಂಡು ಅಶ್ವಮೇಧದ ಕುದುರೆ ಹೊರಟಿತು. ಆ ದೈತ್ಯ ಸಾರ್ವಭೌಮನ ಕುದುರೆ ಕಟ್ಟುವ ಅದಟು ಯಾರಿಗೆ ! ನಿರ್ವಿಘ್ನವಾಗಿ ನಡೆಯಿತು ಬಲಿರಾಜನ ಪ್ರಥಮ ಅಶ್ವಮೇಧ. ಈ ಯಾಗಗಳಿಗೆ ಋತ್ವಿಜ ವರಣಿಕೊಟ್ಟ ಹದಿನಾರು ಜನ ಪುರೋಹಿತರೂ ಬ್ರಹ್ಮ ಜ್ಞಾನಿಗಳೇ. ಮಹಾತ್ಮ ಶುಕ್ರರ ಪರೀಕ್ಷೆಯ ಅಗ್ನಿ ದಿವ್ಯದಲ್ಲಿ ಉತ್ತೀರ್ಣನಾದ ಬಳಿಕವೇ ಬಲಿರಾಜನಿಗೆ ಕೊಡಲಾಗಿತ್ತು ಯಜ್ಞದೀಕ್ಷೆ. ಯಾವುದೇ ವಿಧಿವಿಧಾನ, ಮಂತ್ರ, ತಂತ್ರ, ಅನುಷ್ಠಾನ, ಆಚರಣೆಗಳಲ್ಲಿ ಲೋಪ ಕುಂದು ಕೊರತೆಗಳಿಲ್ಲದಂತೆ ಸಾಂಗವಾಗಿ ಸಂಪನ್ನವಾಗಿ ನಡೆದಿದ್ದವು ಅಶ್ವಮೇಧ ಯಾಗಗಳು. ಬಲಿರಾಜ ಮೊದಲೇ ದಾನವೀರ. ಈಗಂತೂ ಯಜ್ಞದೀಕ್ಷಿತ. ಕೇಳುವುದೇನು ! ನಿರಂತರ ದಾನ. ಸಂತತಪ್ರದಾನ, ಬಂದವರಿಗೆಲ್ಲ ಬಹುಮಾನ. ಬಯಸಿದ ಇಷ್ಟಾರ್ಥ ಪೂರಣ. ಅಭ್ಯಾಗತರಿಗೆಲ್ಲರಗೂ ಅಪೇಕ್ಷಾ ಪೂರ್ತಿ. ಅದರಿಂದ ದಶದಿಕ್ಕುಗಳಲ್ಲಿಯೂ ಅವನ ಕೀರ್ತಿ ಹಬ್ಬಿತು. ಅವನ ಬಹು ಯಜ್ಞಗಳೂ ಹೀಗೆ ನಿರಂತರಾಯವಾಗಿ ನಿರಾತಂಕದಿಂದ ನೆರವೇರಿಸಲ್ಪಟ್ಟವು. ತೊಂಬತ್ತೊಂಬತ್ತನೆಯ ಯಜ್ಞವೂ ಮುಗಿಯಿತು. ನಿರ್ವಿಘ್ನವಾಗಿ ಕೊನೆಯದಾದ ನೂರನೆಯ ಯಜ್ಞವು ವಿಜೃಂಭಣೆಯಿಂದ ಆರಂಭವಾಯಿತು. ಬಲಿರಾಜನು ''ತಾನೇನು ಇನ್ನು ಶತಕ್ರತು ಆದೆ ನೂರು ಯಜ್ಞ ಪೂರ್ತಿಮಾಡಿ ''ಶತಕ್ರತು'' ಎನಿಸಿ ತಾನೊಬ್ಬ ನೂತನ ನಾಕನಾಥನೇ ಆಗುವೆನೆಂದು'' ಕನಸು ಕಾಣುತ್ತಿದ್ದ. ದೈತ್ಯದಾನವರೆಲ್ಲರೂ ರಂಭಾ

ಊರ್ವಶಿ ಮೊದಲಾದ ದಿವ್ಯಾಂಗನೆಯರ ಅಂಗಸಂಗದ ಶೃಂಗಾರದ ಹೊಂಗ ನುಸುಗಳನ್ನು ಕಾಣುತ್ತಿದ್ದರು. ಇತ್ತ ಕಶ್ಯಪರ ಕುಟೀರದಲ್ಲಿ ಅದಿತಿದೇವಿಯ ಸಾಂಗ ವ್ರತಾನುಷ್ಠಾನ. ಅದರಿಂದ ಶ್ರೀ ಹರಿ ಸಂತುಷ್ಟ. ಪ್ರಸನ್ನನಾದ ಪರಮಾತ್ಮನ ವಾಮನಾವತಾರ ಆಯಿತು. ಕಶ್ಯಪರಿಂದ ಆ ವಟುವಾಮನನ ಉಪನಯನ. ಬ್ರಹ್ಮದೇವರಿಂದ ಯಜ್ಞೋಪವೀತದಾನ. ಚಂದ್ರನಿಂದ ದಂಡಕಾಷ್ಠಪ್ರದಾನ. ಪೃಥ್ವೀದೇವಿಯಿಂದ ಮುಂಜಿವೆ ಮಣಿಯಾದ ವಾಮನನಿಗೆ ಕಾಲಿನ ಆವಿಗೆಗಳ ಕಾಣಿಕೆ. ಹಲವರಿಂದ ಮೃಗ ಚರ್ಮ ಮೇಖಲೆ ಮುಂತಾದ ಉಪನಯನದ ಉಪಾಯನಗಳ ಅರ್ಪಣ. ಕಶ್ಯಪ ಅದಿತಿ ದಂಪತಿಗಳಿಗೆ ವಾಮನನಿಂದ ಸಾಷ್ಟಾಂಗ ಪ್ರಣಾಮ. ಮುನಿಗಳ ಪುಣ್ಯಾಶ್ರಮದಿಂದ ಆ ಮಾಯಾಮಾಣವಕನ ಪ್ರಸ್ಥಾನ. ಬಲಿಚಕ್ರವರ್ತಿಯ ಯಜ್ಞ ಶಾಲೆಯ ಕಡೆಗೆ ಸಂಭ್ರಮದ ಪ್ರಯಾಣ. ಅವನ ಸುತ್ತಲೂ ಸುರವರ್ಯರ ಜಯಘೋಷ. ಮುನಿಗಳಿಂದ ವೇದಘೋಷ, ಋಷಿಗಳಿಂದ ಉಪನಿಷತ್ ಪಾರಾಯಣ, ಯಜ್ಞದೀಕ್ಷಿತನಾದ ಬಲಿಚಕ್ರವರ್ತಿಯು ದೂರದಿಂದಲೇ ನೋಡಿದ ತನ್ನ ಯಾಗಶಾಲೆಗೆ ಬರುತ್ತಿರುವ ಮುದ್ದುಮೊಗದ ಮಗುವನ್ನು, ನೋಡಲು ಅವನೊಬ್ಬ ಅಗ್ನಿಕುಮಾರ. ರೂಪದಿಂದ ಸನತ್‌ಕುಮಾರ. ಋಷಿಗಳು, ಋತ್ವಿಜರೂ, ಉಳಿದೆಲ್ಲ ಯಾಜ್ಞಕರೂ ಆ ಬಾಲಕನ ತೇಜಃಪ್ರಕರ್ಷದಿಂದ ಧರ್ಷಿತಾಕರ್ಷಿತರು. ಸ್ವಯಂ ಬಲಿಚಕ್ರವರ್ತಿಯು ಇಂಥ ಅಪೂರ್ವ ಅತಿಥಿಯ ಲಾಭದಿಂದ ಅತ್ಯಂತ ಪ್ರಹರ್ಷಿತ. ಯಜ್ಞದೀಕ್ಷಿತನಾದ ದೈತ್ಯೇಂದ್ರನಿಂದ ಯಜ್ಞವಟುವಿಗೆ ಹೃದಯ ತುಂಬಿದ ಸ್ವಾಗತ, ಅರ್ಘ್ಯಪಾದ್ಯಾದಿ ಉಪಚಾರ. ವಟುವಾಮನನು ಸಾಮಗಾನವನ್ನು ಪ್ರಾರಂಭಿಸಿದ. ಅವನ ಕಂಠ ವಿಕಸ್ವರ, ಪಿಕಸ್ವರ. ವಿಧಿಪೂರ್ವಕ ಸಾಮಗಾಯನದ ನಂತರ ಆ ವಾಮನ ಮೂರ್ತಿಯಿಂದ ಯಜ್ಞದ ಯಜಮಾನನಾದ ಬಲಿರಾಜನ ಪ್ರಶಂಸೆ.

**ವಾಮನ** : ದೈತ್ಯ ಧುರಂಧರ ! ನೀನು ಸಾಮಾನ್ಯ ದೈತ್ಯನಲ್ಲ. ನಿಮ್ಮ ಮನೆತನ ದೊಡ್ಡ ಮನೆತನ. ನಿನ್ನ ಹಿಂದಿನವರು ಮಹತೋ ಮಹಿಮರು. ನಿನ್ನ ಅಜ್ಜನಾದ ಪ್ರಲ್ಹಾದ ಪರಮ ಭಗವದ್ ಭಕ್ತ. ಅವನಿಗಾಗಿ ಶ್ರೀ ಹರಿಯು ಸ್ವಯಂ ನರಸಿಂಹ ರೂಪದಿಂದ ಪ್ರಕಟನಾದ. ಅವನ ಮಗನೇ ನಿನ್ನ ತಂದೆ ವಿರೋಚನ. ಮಹಾವೀರ ಅಷ್ಟೇ ದಾನಶೂರ, ವಿಶ್ವವಿಖ್ಯಾತ. ದೇವೇಂದ್ರನಿಗೆ ತನ್ನ ಶಿರೋದಾನ ಮಾಡಿದ ದಾನಶೌಂಡ. ಅವನ ಮುಂದೆ ಆಖಂಡಲನು ಕೂಡ ತಲೆತಗ್ಗಿಸಬೇಕಾಯಿತು. ಅವನ ವರಪುತ್ರನೇ ನೀನು. ಆ ದಿವ್ಯಪುರುಷನ ಭವ್ಯ ಪರಂಪರೆಯಲ್ಲಿ ನೀನೊಂದು ನಾಯಕ ರತ್ನ. ನೀನೊಂದು ಜ್ಯೋತಿಃ ಪುಂಜ. ಅದರ ತೇಜೋದೀಪ್ತಿಯಲ್ಲಿ ಎಲ್ಲ ಸುರಸಂಘವೂ ಒಂದು ಪತಂಗ. ಪುರೂಹೂತ ನಿನ್ನಿಂದಲೇ ಪರಾಜಿತ. ನಾನು ವಯಸ್ಸಿನಿಂದ ಚಿಕ್ಕವನಾದರೂ ನಿನ್ನ ಯಶೋಗಾಥೆಯನ್ನು ಕೇಳಿ ತಿಳಿದಿದ್ದೇನೆ. ನಿನ್ನ ಚರಿತ ಕೌತುಕಭರಿತ. ನಿನ್ನ ದಾನಕೀರ್ತಿ ದಿಗಂತವ್ಯಾಪಿ. ಮೂರು ಲೋಕಗಳಲ್ಲಿಯೂ ನಿನ್ನ ಔದಾರ್ಯವನ್ನು ಹೊಗಳದವರು ಯಾರು? ನಿನ್ನಂಥ ದಾನಿ ಶ್ರೇಷ್ಠರಲ್ಲಿ ನನ್ನದೊಂದು ಚಿಕ್ಕ ಬೇಡಿಕೆ. ನೀನು ಎಂದೂ 'ಇಲ್ಲ' ಎನ್ನಲಾರಿ ಎಂಬ ಭರವಸೆ ನನಗೆ.

ನನಗೆ ನಿನ್ನಿಂದ ಹೆಚ್ಚಿಗೆ ಏನೂ ಬೇಡ. ಮೂರು ಅಡಿ ನೆಲವನ್ನು ಮಾತ್ರ ಕೊಡು.'' ವಾಮನ ಮೂರ್ತಿಯ ಈ ಬೇಡಿಕೆಯನ್ನು ಕೇಳಿ ನಗೆ ಬಂದಿತು ಬಲಿರಾಜನಿಗೆ. ನಸುನಕ್ಕು ಹೇಳಿದ ''ಮಹಾನುಭಾವ, ನಾನು ಬರೀ ಮೂರು ಪಾದ ಭೂಮಿ ಏಕೆ, ಎಲ್ಲ ಶೈಲ, ಸಾಗರ, ನಗರ, ಗ್ರಾಮಸಹಿತವಾದ ಅಖಂಡ ಭೂಮಂಡಲವನ್ನೇ ನಿನಗೆ ದಾನ ಕೊಡುವೆನು. ನೀನು ಸ್ವೀಕರಿಸಿದರೆ ಸಾಕು.''

**ವಾಮನ** : ದೈತ್ಯರಾಜ, ನನಗೆ ಬೇರೆ ಏನೂ ಬೇಡ. ನನ್ನ ಈ ಪುಟ್ಟಪಾದದಿಂದ ಅಳೆದು ಮೂರು ಪಾದ ಪೃಥ್ವಿಯನ್ನು ದಾನಕೊಟ್ಟರೆ ಸಾಕು.

**ಬಲಿ** : ತಮ್ಮ ಇಷ್ಟದಂತೆ ಆಗಲಿ. ಇದೋ ಕೊಟ್ಟೆ, ಸ್ವೀಕರಿಸಲು ಸಿದ್ಧರಾಗಿರಿ. ಹೀಗೆ ಹೇಳಿ ಬಲಿರಾಜನು ಕಶ್ಯಪಕುಮಾರನಾದ ಆ ವಾಮನಮೂರ್ತಿಯ ಪೂಜೆ ಮಾಡಿದನು. ಅಲ್ಲಿ ಕೂಡಿದ ಋಷಿಗಳೂ, ಋತ್ವಿಜರೂ, ಮುನಿಗಳೂ ಎಲ್ಲರೂ ಬಲಿಯ ಭಾಗ್ಯವನ್ನು ಕೊಂಡಾಡುವವರೇ. ಅತಿಥಿಪೂಜೆಗೈದು ಬಲಿರಾಜನು ದಾನಕೊಡಲು ಸಿದ್ಧನಾದ. ಕೂಡಲೇ ದೈತ್ಯಗುರು ಶುಕ್ರಾಚಾರ್ಯರು ಆ ದಾನವನ್ನು ತಡೆದು ತಮ್ಮ ಶಿಷ್ಯ ಬಲಿಯನ್ನು ಕುರಿತು ನುಡಿದರು.

**ಶುಕ್ರ** : ಬಲಿರಾಜ, ಇವನು ಬರೀ ವಟುವಲ್ಲ. ಸಾಮಾನ್ಯ ಬ್ರಹ್ಮಚಾರಿಯೂ ಅಲ್ಲ. ಇವನು ಸಾಕ್ಷಾತ್ ವಿಷ್ಣುವೇ. ಇವನಿಗೆ ನೀನು ಏನನ್ನೂ ದಾನ ಕೊಡಬೇಡ. ದೇವತೆಗಳ ಕಾರ್ಯ ಸಿದ್ಧಿಗಾಗಿ ಆ ಹರಿಯೇ ಈ ಕಪಟರೂಪದಿಂದ ಇಲ್ಲಿಗೆ ಆಗಮಿಸಿದ್ದಾನೆ. ನಿನ್ನ ಯಜ್ಞದಲ್ಲಿ ವಿಘ್ನ ಒಡ್ಡುವದೇ ಇವನ ಉದ್ದೇಶ. ಈ ವಿಷ್ಣುವು ದೈತ್ಯರಾದ ನಿಮಗೆ ಎಂದಿನಿಂದಲೂ ವಂಚಕ. ನೀವು ಕೈಕೊಳ್ಳುವ ಕಾರ್ಯಗಳಿಗೆಲ್ಲ ವಿಘ್ನವೊಡ್ಡುವ ಸುರಪಕ್ಷಪಾತಿ. ಅಮೃತಮಂಥನ ಕಾಲದಲ್ಲಿ ಅಮೃತಕಲಶ ನಿಮ್ಮ ಕೈಯಲ್ಲಿಯೇ ಬಂದಿತ್ತು. ಆಗ ಈ ವಿಷ್ಣುವೇ ಮೋಹಿನೀ ರೂಪದಿಂದ ಅಲ್ಲಿ ಬಂದು ನಿಮ್ಮನ್ನೆಲ್ಲ ವಂಚಿಸಿ ದೇವತೆಗಳಿಗೆ ಅಮೃತಪಾನ ಮಾಡಿಸಿದ. ರಾಹುವಿನ ಶಿರಚ್ಛೇದ ಮಾಡಿದ. ನಿಮ್ಮ ಹಿಂದಿನ ಹಿರಿಯ ದೈತ್ಯರನ್ನೆಲ್ಲ ಕೊಂದುಹಾಕಿದ ಕ್ರೂರ ಕರ್ಮಿಯೇ ಈ ವಿಷ್ಣು. ಕಾಲನೇಮಿ ಸತ್ತದ್ದು ಇವನಿಂದಲೇ. ಹಿರಣ್ಯಕಶ್ಯಪು ಹತನಾದದ್ದು ಇವನಿಂದಲೇ. ಈಶ್ವರನೆಂದರೆ ಇವನೇ. ಇವನೇ ಜಗತ್‌ಪಾಲಕ. ಇವನೇ ದೈತ್ಯಾಂತಕ. ಆದ್ದರಿಂದ ದೈತ್ಯರಾಜನಾದ ನೀನು ಇವನಿಗೆ ಏನನ್ನೂ ಕೊಡಬೇಡ. ಕೊಟ್ಟರೆ ಕೆಟ್ಟೆ. ಬಿಟ್ಟರೆ ಬದುಕಿದೆ.'' ಶುಕ್ರಾಚಾರ್ಯರು ಹೀಗೆ ತಿಳಿಸಿ ಹೇಳಿದ ಬಳಿಕ ಬಲಿರಾಜ ನಕ್ಕುಬಿಟ್ಟ. ಮೇಘಗಂಭೀರವಾದ ಧ್ವನಿಯಲ್ಲಿ ಮಾತನಾಡಿದ.

**ಬಲಿ** : ಗುರುದೇವ, ತಾವೇನೋ ನನ್ನ ಹಿತಕ್ಕಾಗಿಯೇ ಹೇಳುತ್ತಿರುವಿರಿ. ಆದರೆ ನಿಮ್ಮ ಮಾತು ಮಾತ್ರ ನನಗೆ ನಿಜವಾಗಿಯೂ ಅಹಿತಕಾರಕ. ಈ ಬ್ರಹ್ಮಚಾರಿ ವೇಷದಿಂದ ಬಂದವ ವಿಷ್ಣುವೇ ? ಹಾಗಾದರೆ ಬಹಳೇ ಒಳ್ಳೆಯದಾಯಿತು. ನನ್ನ ಭಾಗ್ಯದ ಬಾಗಿಲವೇ ತೆರೆದಂತಾಯಿತು. ಈ ವಿಷ್ಣುವು ಎಲ್ಲ ಕರ್ಮ ಹಾಗೂ ಫಲಗಳಿಗೆ ಸ್ವಾಮಿಯಲ್ಲವೆ? ಇಂಥ ವಿಷ್ಣು ನನ್ನ ಮನೆಯ ಬಾಗಿಲವರೆಗೆ ಬಂದು ಬೇಡಿದಾಗ ನಾನು ಹೇಗೆ ಇಲ್ಲ ಎನ್ನಲಿ? ಇವನನ್ನು ಬಿಟ್ಟರೆ ನನ್ನ ಜನ್ಮದಲ್ಲಿ ಇಂಥ ಸತ್ಪಾತ್ರ ಸಿಗಲು

ಸಾಧ್ಯವುಂಟೆ ! ಈ ಭಗವಂತನು ನನ್ನನ್ನು ಉದ್ಧರಿಸಲಿಕ್ಕಾಗಿಯೇ ನನ್ನ ಮನೆಗೆ ಬಂದಿದ್ದರಿಂದ ಅವನು ಬೇಡಿದ್ದನ್ನು ಕೊಟ್ಟುಬಿಡುತ್ತೇನೆ .''

**ದಾಸ್ಯಾಮಿ ಭಿಕ್ಷಿತಂ ತ್ವಸ್ಮೈ ವಿಷ್ಣವೇ ವಟುರೂಪಿಣೇ ।**
**ಪಾತ್ರೀಭೂತೋ ಹ್ಯಯಂ ವಿಷ್ಣುಃ ಸರ್ವಕರ್ಮ ಫಲೇಶ್ವರಃ ॥**
**ಯೇಷಾಂ ಹೃದಿ ಸ್ಥಿತೋ ನಿತ್ಯಂ ತೇ ವೈ ಪಾತ್ರತಮಾ ಧ್ರುವಮ್ ।**
**ಯಸ್ಯ ನಾಮ್ನಾ ಸರ್ವಮಿಹ ಪವಿತ್ರಮಿದಮುಚ್ಯತೇ ॥**
**ಯೇನ ವೇದಾಶ್ಚ ಯಜ್ಞಾಶ್ಚ ಮಂತ್ರ ತಂತ್ರಾದಯೋ ಹ್ಯಮೀ ।**
**ಸರ್ವೇ ಸಂಪೂರ್ಣತಾಂ ಯಾಂತಿ ಸೋಽತ ಯಂ ವಿಶ್ವೇಶ್ವರೋ ಹರಿಃ ॥**
**ಆಗತಃ ಕೃಪಯ್ಯೆ ವಾದ್ಯ ಸರ್ವಾತ್ಮಾ ಹರಿರೀಶ್ವರಃ ।**
**ಉದ್ಧರ್ತುಂ ಮಾಂ ನ ಸಂದೇಹಃ ಏತಜ್ಞಾನೀಹಿ ತತ್ವತಃ ॥**

ವಟು ರೂಪಿಯಾಗಿ ನನ್ನ ಮನೆಗೆ ಬಂದ ಈ ವಿಷ್ಣು ಸರ್ವಕರ್ಮಗಳಿಗೂ ಫಲಪ್ರದಾತನಾಗಿದ್ದಾನೆ. ಅವನು ಅತ್ಯುತ್ತಮ ಪಾತ್ರ, ಇವನನ್ನು ಯಾರು ನೆನೆಯುವರೋ ಯಾವ ಹೃದಯದಲ್ಲಿ ಇವನು ನೆಲೆಸುವನೋ ಅವರು ಕೂಡ ಅತ್ಯುತ್ತಮ ಪಾತ್ರ ಎನಿಸುವರು, ಅವನ ನಾಮೋಚ್ಚಾರಣ ಮಾಡಿದ ಮಾತ್ರಕ್ಕೆ ಎಲ್ಲರೂ ಎಲ್ಲವೂ ಪವಿತ್ರವಾಗುವದು. ವೇದಗಳಿಗೆ ಸಾರ್ಥಕತೆ ಅವನಿಂದ. ಯಜ್ಞಗಳಿಗೆ ಪೂರ್ತತೆ ಅವನಿಂದ. ಮಂತ್ರ ಸಿದ್ಧಿಸುವದು ಅವನಿಂದ. ತಂತ್ರ ಫಲಿಸುವದು ಅವನಿಂದ, ಸರ್ವವೂ ಸಂಪೂರ್ಣವಾಗುವದು ಅವನ ನಾಮಸ್ಮರಣೆಯಿಂದ. ಅವನು ವಿಶ್ವದ ಒಡೆಯ. ಸರ್ವ ಪ್ರಪಂಚಕ್ಕೆ ಅಧೀಶ್ವರ. ಅವನು ಇಲ್ಲಿಗೆ ಬಂದದ್ದೇ ನನ್ನ ಮೇಲೆ ದೊಡ್ಡ ಕೃಪೆ. ಸರ್ವಾಂತರ್ಯಾಮಿಯಾದ ಆ ಜಗದೊಡೆಯನು ಅಲ್ಪನಾದ ನನ್ನ ಮನೆಗೆ ಬಂದದ್ದು ಈ ದೈತ್ಯನನ್ನು ಉದ್ಧರಿಸಲೆಂದೇ, ಅವನು ಬೇಡಿದ್ದನ್ನು ಕೊಟ್ಟು ಕೃತಾರ್ಥನಾಗುವೆ. ಇದರಲ್ಲಿ ಸಂದೇಹವೇ ಇಲ್ಲ. ಗುರುಗಳೇ ಇದೆಲ್ಲವನ್ನು ನೀವು ತತ್ವದೃಷ್ಟಿಯಿಂದ ವಿಚಾರಿಸಿ ನೋಡಿ. ದೈತ್ಯ ದೃಷ್ಟಿಯಿಂದಲ್ಲ.''

ಬಲಿಯ ಮಾತು ಶುಕ್ರರ ಕೋಪಕ್ಕೆ ಕಾರಣವಾಯಿತು. ಧರ್ಮವತ್ಸಲನಾದ ದೈತ್ಯರಾಜನಿಗೆ ಕೋಪಾಟೋಪದಿಂದ ಅವರು ಶಾಪಕೊಡಲು ಉದ್ಯುಕ್ತರಾದರು.

**ಶುಕ್ರ** : ಮೂರ್ಖರಾಜನೇ ! ನೀನು ನನ್ನ ಆದೇಶವನ್ನು ಉಲ್ಲಂಘಿಸಿ ದಾನ ಕೊಡಲು ಹೊರಟಿರುವೆ. ನೀನು ಬೇಗನೇ ರಾಜ್ಯಭ್ರಷ್ಟನಾಗುವೆ.'' ಹೀಗೆ ಶಪಿಸಿ ಶುಕ್ರಾಚಾರ್ಯರು ತಮ್ಮ ಶಿಷ್ಯಪರಿವಾರದೊಂದಿಗೆ ಯಜ್ಞ ಮಂಟಪ ಬಿಟ್ಟು ತಮ್ಮ ಆಶ್ರಮದ ಕಡೆ ಹೊರಟರು. ನಂತರ ಬಲಿರಾಜನು ಮತ್ತೊಮ್ಮೆ ವಾಮನನ್ನು ಭಕ್ತಿಯಿಂದ ಪೂಜಿಸಲು ಉದ್ಯುಕ್ತನಾದನು, ರಾಜ ಮಹಿಷಿಯಾದ ವಿಂಧ್ಯಾವಲಿಯು ತನ್ನ ಪತಿದೇವನ ಈ ದಾನಕಾರ್ಯದಲ್ಲಿ ಸಹಕರಿಸಲು ಆನಂದದಿಂದ ಸಿದ್ಧಳಾಗಿ ನಿಂತಳು, ಬಲಿರಾಜನು ವಿಧಿಪೂರ್ವಕವಾಗಿ ವಾಮನ ವಟುವಿನ ಪಾದ ಪ್ರಕ್ಷಾಲನೆಗೈದನು. ನಂತರ ಮಂತ್ರೋಚ್ಚಾರಪೂರ್ವಕವಾಗಿ ಭೂದಾನ ಸಂಕಲ್ಪ

ಮಾಡಿದನು. ವಿಂಧ್ಯಾವಲಿಯು ಬಲಿರಾಜನ ಕೈಯಲ್ಲಿ ದಾನೋದಕವನ್ನು ಹಾಕಿದಳು. ''ಇದಂ ನ ಮಮ'' ಎಂದು ಹೇಳಿ ಪಾದತ್ರಯ ಪರಿಮಿತ ಭೂಮಿಯನ್ನು ದಾನವಿತ್ತನು.

ದಾನ ತೆಗೆದುಕೊಂಡ ಮರುಕ್ಷಣದಲ್ಲಿಯೇ ಬೆಳೆಯತೊಡಗಿದ ಆ ವಾಮನ. ಬೆಳೆದು ಭೂತಾಕಾರವಾಯಿತು ಆ ಭಗವತ್ ಸ್ವರೂಪ. ವಿರಾಟ್ ರೂಪನಾಗಿ ವಿಶ್ವವ್ಯಾಪಿಯಾಗಿ ಬೆಳೆದು ನಿಂತ ಆ ವಿಷ್ಣು. ತನ್ನ ಒಂದು ಪಾದದಿಂದ ಅಖಂಡ ಪೃಥ್ವೀ ಮಂಡಲವನ್ನೆಲ್ಲ ಅಳೆದು ಆಕ್ರಮಿಸಿದ. ಅವನ ಎರಡನೇ ಪಾದವು ಎಲ್ಲ ಲೋಕಗಳನ್ನು ವ್ಯಾಪಿಸಿ ಸತ್ಯಲೋಕದವರೆಗೂ ಬೆಳೆಯಿತು. ಆಗ ಬ್ರಹ್ಮದೇವರು ತಮ್ಮ ಲೋಕದವರೆಗೂ ಬಂದ ಆ ನಾರಾಯಣನ ಚರಣ ಕಮಲವನ್ನು ತೊಳೆದು ಪೂಜಿಸಿದರು, ಬ್ರಹ್ಮದೇವರು ಮಾಡಿದ ವಿಷ್ಣುವಿನ ಆ ಪಾದ ಪ್ರಕ್ಷಾಲನದ ಪವಿತ್ರವಾದ ಚರಣೋದಕದಿಂದಲೇ ಮಂಗಲಮಯವಾದ ಗಂಗಾನದಿಯು ಪ್ರಾದುರ್ಭೂತವಾಯಿತು. ಮುಂದೆ ಅದೇ ಗಂಗೆಯ ಪ್ರವಾಹದಿಂದ ಮೂರು ಲೋಕಗಳು ಪಾವನವಾದವು. ಸಗರಕುಮಾರರ ಉದ್ಧಾರವಾಯಿತು. ಪರಮೇಶ್ವರನ ಜಟಾಜೂಟದ ತುಂಬ ಈ ಗಂಗಾಜಲವೇ ತುಂಬಿಬಿಟ್ಟಿತು. ಭಗೀರಥನ ಬೆನ್ನು ಹತ್ತಿ ಬಂದು ಸಗರ ಕುಮಾರರನ್ನು ಉದ್ಧರಿಸಿದ್ದರಿಂದ ಇವಳಿಗೆ ಭಾಗಿರಥೀ ಎಂದು ಹೆಸರಾಯಿತು.

**ಸತ್ಯಲೋಕಸ್ಥಿತೇನೈವ ಬ್ರಹ್ಮಣಾ ಪರಮೇಷ್ಠಿನಾ ।**
**ಕಮಂಡಲುಗತೇನೈವಾಂಭಸಾ ಚಾವನಿನೇಜ ಹ ॥**

**ತತ್ಪಾದ ಸಂಪರ್ಕಜಲಾಚ್ಚ ಜಾತಾ ಭಾಗೀರಥೀ ಸರ್ವಸುಮಂಗಲಾ ಚ ।**
**ಯಯಾ ತ್ರಿಲೋಕೀ ಚ ಕೃತಾ ಪವಿತ್ರಾ, ತಥೈವ ಸರ್ವೇ ಸಗರಾಃ ಸಮುದ್ಧೃತಾಃ ।**
**ಯಯಾ ಕಪರ್ದಃ ಪರಿಪೂರಿತೋ ವೈ ಶಂಭೋಸ್ತದಾನೀಂ ಚ ಯಶಃ ಪ್ರವಾಹೈಃ ॥**

ಸಮಸ್ತ ಚರಾಚರ ಜಗತ್ತನ್ನೆಲ್ಲ ವಾಮನರೂಪಿ ಪರಮಾತ್ಮನು ತನ್ನ ಎರಡು ಪಾದಗಳಿಂದ ಅಳೆದುಕೊಂಡು ಮತ್ತೆ ಪುಟ್ಟವಾಮನ ರೂಪವನ್ನು ಸ್ವೀಕರಿಸಿ ಮೊದಲಿನಂತೆ ಬ್ರಹ್ಮಚಾರಿ ವೇಷದಿಂದ ದರ್ಭಾಸನದ ಮೇಲೆ ಕುಳಿತುಕೊಂಡನು. ಆಗ ಎಲ್ಲ ದೇವ, ಗಂಧರ್ವ, ಯಕ್ಷ, ಧನುಜ, ಮುನಿ, ಮಹರ್ಷಿ ಮುಂತಾದವರೆಲ್ಲರೂ ಬಲಿರಾಜನ ಯಜ್ಞಮಂಟಪದಲ್ಲಿ ಭಗವಂತನನ್ನು ಹೊಗಳಿ ಹಾಡಿದರು. ಬ್ರಹ್ಮದೇವರು ಶ್ರೀ ಹರಿಯ ಸ್ತೋತ್ರಗೈದರು. ಬಲಿರಾಜನ ಅಜ್ಜನಾದ ಪರಮ ಭಗವದ್ ಭಕ್ತ ಪ್ರಲ್ಹಾದನೂ ಭಗವದ್ ದರ್ಶನಕ್ಕಾಗಿ ಕಾತರಗೊಂಡು ಆಗಮಿಸಿದ. ಉಳಿದೆಲ್ಲ ದೈತ್ಯ ಕುಲದ ಧುರೀಣರೂ ಈ ಅದ್ಭುತ ಸೌಂದರ್ಯವನ್ನು ನೋಡಲೆಂದು ಯಜ್ಞ ಮಂಟಪದಲ್ಲಿ ನುಗ್ಗಿದರು. ಈ ಸಮಯದಲ್ಲಿ ವಾಮನದೇವರು ಮುಗುಳು ನಗೆ ನಗುತ್ತ ರಾಜಪತ್ನಿ ವಿಂಧ್ಯಾವಲಿಯೊಂದಿಗೆ ಮಾತನಾಡಿದರು.

**ವಾಮನ** : ಮಹಾರಾಣಿ, ''ನನಗೆ ಮೂರುಪಾದ ಭೂಮಿ ಬರಬೇಕಾಗಿದೆ. ನಿನ್ನ ಪತಿಯ ವಚನವು ಹೇಗೆ ಪೂರ್ತಿ ಯಥಾರ್ಥವಾಗಬೇಕು ಎನ್ನುವುದನ್ನು ನೀನೇ ಹೇಳು. ಪತಿ ವಾಕ್ಯವನ್ನು ಸತ್ಯಮಾಡು. ನೀನು ಮಹಾಸಾಧ್ವೀಮಣಿಯಾದ ದೈತ್ಯರಮಣಿ.'' ತ್ರಿವಿಕ್ರಮನ ಈ ಮಾತನ್ನು ಕೇಳಿ ಅವಳು ಕಿಂಚಿತ್ತಾದರೂ

ವಿಚಲಿತಳಾಗಲಿಲ್ಲ, ಹೆದರಲೂ ಇಲ್ಲ. ಧೈರ್ಯದಿಂದ ಅಷ್ಟೇ ಧರ್ಮದಿಂದ ಭಕ್ತಿ ಭಾವದಿಂದಲೇ ಬಿನ್ನವಿಸಿಕೊಂಡಳು ಆ ಭಗವಂತನಿಗೆ.

**ವಿಂಧ್ಯಾವಲಿ :** ದೇವತಾಸಾರ್ವಭೌಮ, ಈ ವಿಶ್ವಕ್ಕೆಲ್ಲ ಏಕಮಾತ್ರ ಸ್ವಾಮಿ ವಿಷ್ಣು. ಅವನೇ ನೀನು. ವಾಮನ ರೂಪದಿಂದ ಬಂದು ಭೂಮಿ ಬೇಡಿದ ನೀನು ತ್ರಿವಿಕ್ರಮ ರೂಪದಿಂದ ಬೆಳೆದು ಬೃಹದಾಕಾರನಾಗಿ ವಿರಾಟ್ ಚರಣಗಳಿಂದ ಮೂರು ಲೋಕಗಳನ್ನೇ ಅಳೆದುಕೊಂಡಿರುವೆ. ಜಗತ್ತೆಲ್ಲವೂ ನಿನ್ನದು. ನೀನೇ ಅದಕ್ಕೆ ಸ್ವಾಮಿ. ವಿಶ್ವದ ಒಡೆಯನಾದ ನಿನಗೆ ನಮ್ಮಂಥ ಬಡಪಾಯಿಗಳು ಏನು ಕೊಡಬಲ್ಲೆವು ! ಆದರೂ ನಿನ್ನ ಮೂರು ಪಾದಗಳನ್ನು ಇರಿಸಲು ಅವಕಾಶವನ್ನು ನೀನು ಕೇಳಿರುವೆ. ಕೊಡುವೆನೆಂದು ನನ್ನ ಪತಿ ಹೇಳಿರುವ. ಆದ್ದರಿಂದ ಪತಿಯ ವಚನ ಪಾಲನೆಗಾಗಿ ನನ್ನದೊಂದು ಸಣ್ಣ ಸೂಚನೆ. ಇದನ್ನು ತಾವು ಲಾಲಿಸಿ ಪಾಲಿಸಬೇಕು. ತಾವು ತಮ್ಮ ಒಂದು ಪಾದವನ್ನು ನನ್ನ ತಲೆಯಮೇಲೆ ಇರಿಸಿರಿ. ಎರಡನೆಯ ಪಾದವನ್ನು ನನ್ನ ಮಗನ ತಲೆಯ ಮೇಲೆ ಇಡಿರಿ. ಮೂರನೆಯ ಹೆಜ್ಜೆಯನ್ನು ನನ್ನ ಪತಿಯ ಮಸ್ತಕದ ಮೇಲೆ ಸ್ಥಾಪಿಸಿರಿ. ಇದರಿಂದ ಮೂರು ಪಾದ ಭೂಮಿಯನ್ನು ಕೊಡುವೆನೆಂದು ಹೇಳಿದ ನನ್ನ ಪತಿಯ ಮಾತು ಚರಿತಾರ್ಥವಾಗಲಿ,'' ನಮ್ಮ ಕುಟುಂಬ ಕೃತಾರ್ಥವಾಗಲಿ. ಪತಿವ್ರತೆಯರ ಮಸ್ತಕಮಣಿಯಾದ ವಿಂಧ್ಯಾವಲಿಯ ಈ ಮಧುರ ಮಾತುಗಳನ್ನು ಕೇಳಿ ಸುಪ್ರಸನ್ನನಾದ ಸ್ವಾಮಿ ಶ್ರೀಹರಿ. ಪರಮಾನಂದದಿಂದ ನುಡಿದ.

**ವಾಮನ :** ರಾಜದಂಪತಿಗಳೇ ! ನಾನು ನಿಮ್ಮ ಮೇಲೆ ಈಗ ಸುಪ್ರಸನ್ನ ನಾಗಿದ್ದೇನೆ. ದಾನಿಗಳಲ್ಲಿ ಎಲ್ಲರಿಗಿಂತಲೂ ನೀವು ಶ್ರೇಷ್ಠರು. ಆದ್ದರಿಂದಲೇ ನನಗೆ ಅತ್ಯಂತ ಶ್ರೇಷ್ಠರು. ನಿಮಗೆ ಬೇಕಾದುದನ್ನು ಬೇಡಿರಿ. ನಿಮ್ಮ ಎಲ್ಲ ಕಾಮನೆಗಳನ್ನು ಪೂರ್ಣಗೊಳಿಸಲು ನಾನು ಸಿದ್ಧ.'' ಹೀಗೆ ಹೇಳಿ ಬಲಿರಾಜನನ್ನು ಬಂಧನದಿಂದ ಬಿಡುಗಡೆ ಮಾಡಿ ಆ ಕಶ್ಯಪ ಕುಮಾರನು ತುಂಬು ಹೃದಯದಿಂದ ಅಪ್ಪಿಕೊಂಡ. ಆಗ ಬಲಿರಾಜನು ಭಕ್ತಿನಮ್ರನಾಗಿ ಭಗವಂತನ ಚರಣಧೂಳಿಯನ್ನು ಶಿರಸಾ ಧರಿಸಿ ಕೈಜೋಡಿಸಿ ತಲೆಬಾಗಿಸಿ ವಿನಯದಿಂದ ಬೇಡಿಕೊಂಡ.

**ಬಲಿರಾಜ :** ಪ್ರಭೋ, ಈ ಸ್ಥಾವರ ಜಂಗಮಾತ್ಮಕವಾದ ಸಮಸ್ತ ಪ್ರಪಂಚಕ್ಕೂ ನಿರ್ಮಾತಾ, ಪರಿತ್ರಾತಾ, ಅಭಯದಾತಾ, ಮುಕ್ತಿದಾತನೂ ನೀನೇ ಆಗಿರುವೆ. ನಿನ್ನ ದಿವ್ಯಚರಣಗಳಿಗೆ ಈ ಜೀವ ನಿತ್ಯ ನಿರಂತರವೂ ಶರಣಾಗಿಯೇ ಇರಲಿ. ನಿನ್ನ ಪಾದಕಮಲಗಳಲ್ಲಿ ಭಕ್ತಿಭಾಗ್ಯ ಒಂದನ್ನು ಮಾತ್ರ ನನಗೆ ಕೊಡು. ಇದರ ಹೊರತು ನನಗೆ ಬೇರೆ ಏನೂ ಬೇಡ. ಸಂಸಾರದಲ್ಲಿ ವಿರಕ್ತಿ, ಭಗವತ್ಸೇವೆಯಲ್ಲಿ ಆಸಕ್ತಿ ಇವೆರಡನ್ನು ಒಳಗೊಂಡ ನಿನ್ನಲ್ಲಿ ದೃಢವಾದ ಭಕ್ತಿಯನ್ನು ಮಾತ್ರ ನನಗೆ ಕೊಡು. ನನ್ನ ಮೇಲೆ ದಯಮಾಡು.

**ವಾಮನ :** ''ಬಲಿರಾಜ, ನಿನ್ನ ಈ ಅತಿಶಯವಾದ ಭಕ್ತಿಯಿಂದಾಗಿ ನಾನು ಅತ್ಯಂತ ಸಂತುಷ್ಟನಾಗಿದ್ದೇನೆ. ನೀನು ನಿನ್ನ ಬಂಧು ಬಳಗ ಮಿತ್ರ ಕಲತ್ರ ಪರಿವಾರ ವರ್ಗದೊಂದಿಗೆ ಕೂಡಿಕೊಂಡು ಸುತಲಲೋಕಕ್ಕೆ ಹೋಗು.''

**ಬಲಿ :** ದೇವ ದೇವ, ನನಗೆ ಯಾವ ಲೋಕವೂ ಬೇಡ. ನಿನ್ನ ಪಾದ ಸನ್ನಿಧಿಯಲ್ಲಿಯೇ ಇದ್ದುಬಿಡುವೆನು. ಸುತಲಲೋಕಕ್ಕೆ ಹೋಗಿ ನಾನು ಏನು ಮಾಡಬೇಕಾಗಿದೆ?

**ವಾಮನ :** ರಾಜನೇ, ನಾನು ಇದ್ದಲ್ಲಿಗೆ ನೀನು ಬರುವ ಪ್ರಯಾಸ ನಿನಗೆ ಬೇಡ. ನೀನಿದ್ದಲ್ಲಿಗೆ ನಾನೇ ಬರುವೆ. ಯಾವಾಗಲೂ ನಿನ್ನ ಹತ್ತಿರವೇ ನೆಲಿಸುತ್ತೇನೆ. ಸುತಲ ಲೋಕದಲ್ಲಿ ನೀನು ನೆಲಿಸು. ನಿನ್ನ ಮನೆಯ ದ್ವಾರಪಾಲಕನಾಗಿ ನಾನೂ ಅಲ್ಲಿಗೇ ಬರುವೆನು. ಇದೇ ನಾನು ನಿನಗೆ ಕೊಡುವ ವರ, ನಾನು ವರ ಕೊಡಲಿಕ್ಕಾಗಿಯೇ ಇಲ್ಲಿಗೆ ಬಂದಿದ್ದೇನೆ. ವೈಕುಂಠಲೋಕದ ನನ್ನ ಪರಿವಾರದೊಂದಿಗೆ ನಿನ್ನ ಮನೆಯ ಅಂಗಳ ಕಾಯುತ್ತೇನೆ.''

ಭಗವಂತನ ಈ ನುಡಿಯನ್ನು ಕೇಳಿ ಬಲಿರಾಜ ಸಂತೋಷದಿಂದ ಹಿಗ್ಗಿದನು. ಪರಮಾನಂದದಿಂದ ಸುತಲಲೋಕಕ್ಕೆ ಹೊರಟುಹೋದ. ಬಾಣಾಸುರನೇ ಮೊದಲಾದ ತನ್ನ ನೂರು ಜನ ಮಕ್ಕಳೊಂದಿಗೆ ಸುತಲದಲ್ಲಿಯೇ ವಾಸ್ತವ್ಯ ಹೂಡಿದ. ಅಲ್ಲಿಯೂ ನಿರಂತರ ನಡೆಯಿತು ಬಲಿರಾಜನ ಮುಕ್ತ ಹಸ್ತದ ದಾನ ಧರ್ಮ. ಭಗವಂತನೇ ಅವನ ಬೆನ್ನಿಗೆ ಭೀಮನ ರಕ್ಷೆಯಾಗಿ ಸಂಪತ್ತಿನ ಧಾರೆಯನ್ನೇ ಹರಿಸುತ್ತಿರುವಾಗ ಅವನಿಗೆ ಏತರ ಕೊರತೆ ! ಅವನು ಬಯಸಿದ್ದೆಲ್ಲವನ್ನೂ ಬೇಡದೆ ನೀಡುತ್ತಿದ್ದ ಲಕ್ಷ್ಮೀಪತಿ. ಅವನು ಕೊಟ್ಟದ್ದನ್ನೆಲ್ಲ ತನಗೆ ಇಟ್ಟುಕೊಳ್ಳದೇ ಹೆರವರಿಗೆ ದಾನಮಾಡಿ ಕೃತಾರ್ಥನಾಗುತ್ತಿದ್ದ ಆ ದೈತ್ಯರ ಅಧಿಪತಿ. ಬಲಿಚಕ್ರವರ್ತಿಯ ಈ ಎಲ್ಲ ಭೋಗ ಭಾಗ್ಯ ಸೌಭಾಗ್ಯಗಳಿಗೆ ಭಗವಾನ್ ಶಂಕರನ ಕೃಪಾದೃಷ್ಟಿಯೇ ಕಾರಣ. ಪೂರ್ವಜನ್ಮದಲ್ಲಿ ಅವನು ಜೂಜುಗಾರನಾಗಿದ್ದಾಗ ಶಿವನನ್ನು ಉದ್ದೇಶಿಸಿ ಮಾಡಿದ ಸರ್ವಾರ್ಪಣ ಭಾವವೇ ಅವನ ಈ ಎಲ್ಲ ಸಂಪತ್ ಸೌಭಾಗ್ಯಗಳಿಗೆ ಕಾರಣವಾಯಿತು. ಅಪವಿತ್ರವಾದ ನೆಲದ ಮೇಲೆ ದಾರಿಯ ಧೂಳಿಯಲ್ಲಿ ಬಿದ್ದ ಗಂಧ, ಹೂವು, ಹಣ್ಣು ಕಾಯಿಗಳನ್ನು ಶಿವಾರ್ಪಣಾ ಬುದ್ಧಿಯಿಂದ ನೀಡಿದ ಜೂಜುಗಾರನಿಗೆ ಇಂಥ ಸದ್ಗತಿ, ಸನ್ಮತಿ, ಸೌಭಾಗ್ಯ, ಸಿದ್ಧಿ, ಸುಖಸಂಪದ ಅಭಿವೃದ್ಧಿ ಉಂಟಾದ ಬಳಿಕ ಪವಿತ್ರವಾದ ಮೀಸಲು ಮುರಿಯದ ಸುಗಂಧ ಹೂವುಗಳನ್ನು, ಗಂಧಾಕ್ಷತೆ ಹಣ್ಣು ಕಾಯಿಗಳನ್ನು ಭಕ್ತಿಯಿಂದ ಭಗವಾನ್ ಭವಾನೀಪತಿಗೆ ಅರ್ಪಣ ಮಾಡಿದರೆ, ಎಂಥ ಪುಣ್ಯಫಲ ಬರಬೇಡ ! ಪೂಜನೀಯ ಸದಾಶಿವನ ಹೊರತಾಗಿ ಬೇರೆ ಕರುಣಾಶಾಲಿ ದೇವತೆಯಿಲ್ಲ. ಮೂರ್ಖ, ಮಂದ, ಅಂಧ, ಕುಂಟ, ಹುಚ್ಚ, ಯಬಡ, ಹೊಲೆಯ, ಪತಿತ, ದಲಿತ ಯಾವನೇ ಇರಲಿ, ಆ ಪಾರ್ವತೀ ಪತಿಯ ಭಜನೆ ಸ್ಮರಣ ನಮಸ್ಕಾರಾದಿಗಳನ್ನು ಭಕ್ತಿಯಿಂದ ಮಾಡಿದರೆ, ದಿವ್ಯ ಗತಿಯನ್ನು ಹೊಂದುತ್ತಾರೆ. ಆದ್ದರಿಂದ ಈ ಪ್ರಪಂಚದಲ್ಲಿ ಪೂಜನೀಯ ವಸ್ತು ಎಂದರೆ ಪರಮೇಶ್ವರ. ಚಿಂತನೀಯ ವ್ಯಕ್ತಿಯೆಂದರೆ ಚಂದ್ರಚೂಡ. ವಂದನೀಯ ದೇವತೆಯೆಂದರೆ ಸದಾಶಿವ. ಇದನ್ನು ಅರಿತುಕೊಂಡು ಜ್ಞಾನಿಯು ನಿತ್ಯನಿರಂತರವೂ ಹೃದಯದಲ್ಲಿ ಮಹಾದೇವರನ್ನೇ ಭಜಿಸಿ, ಸ್ತುತಿಸಿ, ಧ್ಯಾನಿಸಿ, ಪೂಜಿಸುತ್ತಾ ಇರುತ್ತಾನೆ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಎಂಟನೇ ಅಧ್ಯಾಯ ಮುಗಿದುದು.**

## ತಾರಕಾಸುರನಿಗೆ ಬ್ರಹ್ಮದೇವನ ವರ; ಶಚೀದೇವಿಯ ಪುನರವತಾರ; ಕಾಮದಹನ; ಪಾರ್ವತೀ ತಪಸ್ಸು

ಅಧ್ಯಾಯ - 9

**ಶೌನಕಾದಿ :** ಸೂತರೇ, ದಕ್ಷಕುಮಾರಿಯಾದ ಸತೀದೇವಿಯು ತನ್ನ ತಂದೆಯ ಯಜ್ಞದಲ್ಲಿ ಆತ್ಮದಹನ ಮಾಡಿಕೊಂಡಳಷ್ಟೇ ! ಅವಳು ಮುಂದೆ ಮತ್ತೆ ಎಲ್ಲಿ ಅವತರಿಸಿದಳು ? ಮತ್ತೆ ಶಿವನನ್ನು ಹೇಗೆ ಹೊಂದಿದಳು ?

**ಲೋಮಶ :** ದಾಕ್ಷಾಯಣಿಯು ತವರುಮನೆಯಲ್ಲಿ ಮರಣಹೊಂದಿದ ಬಳಿಕ ಆ ಪರಮೇಶ್ವರನಿಗೆ ಸಂಸಾರದಲ್ಲಿಯೇ ಜಿಗುಪ್ಸೆ ಹುಟ್ಟಿತು. ಮನೆಮಾರು ತೊರೆದು ತಪೋನುಷ್ಠಾನಕ್ಕೆ ತೊಡಗಿದನು. ಭೃಂಗಿ ಮತ್ತು ನಂದಿ ಭಕ್ತರಿಬ್ಬರೂ ಪರಶಿವ ನೊಡನೆಯೇ ಇದ್ದರು ಆ ತಪೋವನದಲ್ಲಿ. ಇದೇ ಸಮಯದಲ್ಲಿ ನಮುಚಿದಾನವನ ಮಗ ತಾರಕಾಸುರನು ಅತ್ಯುಗ್ರವಾದ ತಪಸ್ಸನ್ನು ಮಾಡಿ ಬ್ರಹ್ಮದೇವರನ್ನು ಸಂತುಷ್ಟಗೊಳಿಸಿದ. ತಾರಕಾಸುರನ ಪರಿಪರಿಯ ತಪೋನುಷ್ಠಾನದಿಂದ ಪರಿತುಷ್ಟನಾದ ಪರಮೇಷ್ಠಿಯು ಆ ದುಷ್ಟ ದೈತ್ಯನ ಎದುರು ಪ್ರತ್ಯಕ್ಷನಾಗಿ ನಿನಗೆ ಬೇಕಾದ ವರ ಬೇಡು ಎಂದು ಹೇಳಿದ.

**ತಾರಕಾಸುರ :** ತಾವು ನನ್ನ ಮೇಲೆ ಪ್ರಸನ್ನರಾದದ್ದೇ ನಿಜವಿದ್ದರೆ, ಒಂದು ವರ ನೀಡಿರಿ. ನಾನು ಅಮರನಾಗಬೇಕು. ಎಂದಿಗೂ ಸಾಯಬಾರದು.

**ಬ್ರಹ್ಮ :** ಹುಟ್ಟಿದವನು ಸಾಯಲೇಬೇಕು. ಇದು ಪ್ರಪಂಚದ ನಿಯಮ. ಇದನ್ನು ಮೀರಿ ಯಾವನೂ ಅಮರ ಆಗಲಾರ.

**ತಾರಕಾಸುರ :** ಹಾಗಿದ್ದರೆ ನಾನು ಅಜಿಂಕ್ಯ ಆಗುವಂತೆ ವರ ನೀಡಿರಿ. ನನ್ನನ್ನು ಯಾರೂ ಗೆಲ್ಲಬಾರದು.

**ಬ್ರಹ್ಮ :** ದೊಡ್ಡವರು ಯಾರೂ ನಿನ್ನನ್ನು ಗೆಲ್ಲುವದಿಲ್ಲ ಹಾಗೂ ವಧಿಸುವದಿಲ್ಲ. ಓರ್ವ ಚಿಕ್ಕ ವಯಸ್ಸಿನ ಬಾಲಕ ಮಾತ್ರ ಇದಕ್ಕೆ ಅಪವಾದ. ಅವನೊಬ್ಬನನ್ನು ಬಿಟ್ಟು ಬೇರೆ ಯಾರೂ ನಿನ್ನನ್ನು ಗೆಲ್ಲಲಾರರು ಮತ್ತು ಕೊಲ್ಲಲಾರರು.

ಬ್ರಹ್ಮದೇವರಿಂದ ಹೀಗೆ ವರ ಪಡೆದುಕೊಂಡು ತಾರಕಾಸುರನು ಬಲಿಷ್ಠನಾದ. ಅದಕ್ಕಿಂತ ಹೆಚ್ಚು ಗರ್ವಿಷ್ಠನಾದ. ತಾರಕಾಸುರನು ಮೇಲಿಂದ ಮೇಲೆ ದೇವಲೋಕದ ಮೇಲೆ ದಾಳಿ ಮಾಡಿದ. ದೇವತೆಗಳಿಗೆ ಭೂಲೋಕದ ಮುಚುಕುಂದ ಮಹಾರಾಜನು ಸಹಾಯಕನಾಗಿ ಬರುತ್ತಿದ್ದ. ಭಾರತದ ಈ ಭೂಪ ಬಂದಾಗಲೆಲ್ಲ ದೇವತೆಗಳಿಗೆ ಗೆಲುವು. ವಿಷ್ಣು ಭಕ್ತನಾದ ಮುಚುಕುಂದನ ಭೀಕರ ಬಾಣ ಪ್ರಹಾರದಿಂದ ಜರ್ಜರಿತವಾಗಿ ಹೋಗುತ್ತಿತ್ತು ದೈತ್ಯ ದಳವೆಲ್ಲವೂ. ಆ ಮುಚುಕುಂದ ಮಹಾರಾಜ ಮರಳಿ ಮೇದಿನೀ ತಳಕ್ಕೆ ಹೋದಾಗ ಸುರಸೇನೆಗೆ ಸೋಲು, ನೋವು, ಸಾವು. ಆಗ ಮತ್ತೆ ಪುನಃ ದೇವತೆಗಳ ಸಹಾಯ ಯಾಚನೆ, ಮುಚುಕುಂದನ ಆಗಮನ, ಘೋರ ಹೋರಾಟ. 'ದೈತ್ಯರ ಸಾವು' ದೇವತೆಗಳ ವಿಜಯ. ಈ ನಿರಂತರ ಯುದ್ಧದಿಂದ

ದೇವತೆಗಳು ಸೋತು ಸುಣ್ಣಾದರು. ಸೊರಗಿ ಸಣ್ಣಾದರು. ಕೊನೆಗೆ ಸತ್ಯಲೋಕಕ್ಕೆ ಪ್ರಯಾಣ. ದೀನಮುಖಿ ದೇವತೆಗಳಿಂದ ಚತುರ್ಮುಖನ ಸ್ತೋತ್ರ. ಅದರಿಂದ ಪ್ರತ್ಯಕ್ಷನಾದ ಆ ಪಿತಾಮಹನ ಎದುರು ನಿರ್ಜರರ ದುಃಖ ನಿವೇದನೆ. ಅದೇ ವೇಳೆಯಲ್ಲಿ ಆಕಾಶವಾಣಿ. ''ದೈವ ಲೋಕದ ನಾಗರಿಕರೇ ! ಶಿವನ ಸಂತಾನ ದಿಂದಲ್ಲದೇ ಈ ತಾರಕ ಸಾಯಲಾರ. ಅವನು ಸಾಯದೇ ನೀವು ಬದುಕಲಾರಿರಿ. ತಾರಕನನ್ನು ಕೊಲ್ಲುವವ ಈಗ ಬದುಕಿದ್ದವರಲ್ಲಿ ಯಾರೂ ಇಲ್ಲ. ಅಂತಹ ವೀರ ಪುರುಷ ಹುಟ್ಟಿ ಬರಬೇಕು. ಅಂಥ ಮಹಾಪರಾಕ್ರಮಿ ಸಾಮಾನ್ಯರಲ್ಲಿ ಹುಟ್ಟಲಾರ. ಶಿವನಿಂದಲೇ ತಾರಕನನ್ನು ಕೊಲ್ಲಬಲ್ಲ ಮಗನು ಜನಿಸಲು ಸಾಧ್ಯ. ಆದರೆ ಆ ಶಿವ ಈಗ ವಿರಕ್ತ, ಸಂಸಾರವೇ ಬೇಡವೆಂದು ಸಿಡಿದು ಹೋಗಿದ್ದಾನೆ. ಶೈಲಾಗ್ರದಲ್ಲಿ ಕುಳಿತಿದ್ದಾನೆ. ಉಗ್ರ ತಪಂಗೈಯುತ್ತಿದ್ದಾನೆ. ಅವನ ಮನದಲ್ಲಿ ಕಾಮ ಹುಟ್ಟುವಂತೆ ಮಾಡಿರಿ. ಪ್ರೇಮ ಮೂಡುವಂತೆ ಮಾಡಿರಿ. ಅವನು ಮದುವೆಯಾಗುವಂತೆ ಸರ್ವಪ್ರಯತ್ನವನ್ನು ಮಾಡಿರಿ.''

ದೇವತೆಗಳು ಈ ಆಕಾಶವಾಣಿಯನ್ನು ಕೇಳಿದ ಬಳಿಕ ಬ್ರಹ್ಮದೇವರೊಡನೆ ಆಲೋಚನೆ ಮಾಡಿದರು. ಆ ವಿಧಾತೃದೇವತೆಯ ಸೂಚನೆಯಂತೆ ಸುರರೆಲ್ಲರೂ ಹಿಮಾಚಲಕ್ಕೆ ಬಂದರು. ದೇವಕಾರ್ಯಕ್ಕಾಗಿ ಶ್ರೇಷ್ಠವಾದ ಕನ್ಯಾರತ್ನಕ್ಕೆ ಜನ್ಮ ನೀಡಬೇಕು. ಎಂದು ಮೇನಕಾ ಮತ್ತು ಹಿಮಾಲಯ ದಂಪತಿಗಳನ್ನು ಕೇಳಿಕೊಂಡರು. ಸುರಕಾರ್ಯಕ್ಕಾಗಿ ಸಂತೋಷದಿಂದ ಸಮ್ಮತಿಸಿದರು ಆ ಶೈಲ ದಂಪತಿಗಳು. ಕೆಲವೇ ದಿನಗಳಲ್ಲಿ ಗರ್ಭಧರಿಸಿದಳು ಶೈಲೇಂದ್ರ ಸುಂದರಿಯಾದ ಮೇನಾದೇವಿ. ಕೆಲಕಾಲದ ನಂತರ ಮಹಿಳಾಮಣಿಯಾದ ಮೇನೆಯ ಹೊಟ್ಟೆಯಿಂದ ಸತೀದೇವಿಯ ಅವತಾರ. ಗಿರಿರಾಜನಾದ ಹಿಮಾಲಯದ ಮಗಳಾಗಿ ಹುಟ್ಟಿದ್ದರಿಂದ ಗಿರಿಜಾ ಎಂಬ ಹೆಸರು ಆ ಶೈಲಪುತ್ರಿಗೆ. ಆ ದಿವ್ಯ ಕನ್ಯಾರತ್ನವು ಧರಾತಲದಲ್ಲಿ ಜನಿಸಿದಾಗ ದೇವದುಂದುಭಿಗಳು ಮೊಳಗಿದವು. ಸುರರಿಂದ ಪುಷ್ಪವೃಷ್ಟಿ. ಋಷಿಮುನಿಗಳಿಂದ ಪ್ರಶಂಸಾ ವೃಷ್ಟಿ. ಗಂಧರ್ವರ ಹಾಡು, ಅಪ್ಸರೆಯರ ನಾಟ್ಯ, ಮುನಿಪುಂಗವರಿಂದ ವೇದಘೋಷ ನಡೆದವು. ಸತೀದೇವಿಯು ಗಿರಿಜೆಯಾಗಿ ಪುನರ್ಜನ್ಮ ಪಡೆದಾಗ ಸರ್ವ ವಿಶ್ವವೇ ಆನಂದತುಂದಿಲ. ಎಲ್ಲ ಸಜ್ಜನರ ಹೃದಯಗಳೂ ಸುಪ್ರಸನ್ನ. ಆದರೆ ದೈತ್ಯರಿಗೆ ಮಾತ್ರ ಹೃದಯಗಳಲ್ಲಿ ಭಯಾತಂಕಗಳ ಅಂಕುರ. ಗಿರಿಜೆಯು ಹಿಮಗಿರಿಯ ಮಾತೃ ಮಂದಿರದಲ್ಲಿ ಆನಂದದಿಂದ ಬೆಳೆದಳು. ಎಂಟು ವರುಷದವಳಾದಳು. ಚಿಕ್ಕ ವಯಸ್ಸಿನ ಆ ಬಾಲಕಿಯ ಮುಖದ ಮೇಲೆ ವಿಲಕ್ಷಣವಾದ ಉಕ್ಕುವ ಕಾಂತಿ. ನಂದಿ ವೀರಭದ್ರ ಮೊದಲಾದ ಪಾರ್ಷದರು ಬಂದು ಬಂದು ಆ ಕನ್ಯಾಮಣಿಯನ್ನು ಕೌತುಕದಿಂದ ನೋಡಿ ನಮಿಸಿ ಆನಂದಪಟ್ಟು ಹೋಗುತ್ತಿದ್ದರು. ಒಂದು ದಿನ ಗಿರಿರಾಜನು ಪಾರ್ವತಿಯೊಂದಿಗೆ ತನ್ನ ಒಂದು ಶಿಖರ ಶ್ರೇಣಿಯಲ್ಲಿ ತಪಂಗೈಯುತ್ತಿದ್ದ ಮಹಾದೇವರ ದರ್ಶನಕ್ಕೆ ಹೋದನು. ಅಲ್ಲಿ ಒಂದು ಶೈಲಶೃಂಗದಲ್ಲಿ ತಪಂಗೈಯುತ್ತಿದ್ದ ಗಂಗಾಧರ, ಚೂಡಾಪೀಠದಲ್ಲಿ ಚಂದ್ರ, ಜಟಾಜೂಟದಲ್ಲಿ ಜಾಹ್ನವಿ.

ಅಂಗಾಂಗಗಳಲ್ಲಿ ಹಾಗೂ ಶ್ರೀಕಂಠದಲ್ಲಿ ಒಪ್ಪುವ ವಾಸುಕಿ. ಮುಖದಲ್ಲಿ ತಪೋ ಮುದ್ರೆ, ಕೈಯಲ್ಲಿ ಜಪಮಾಲೆ, ಅರ್ಧೋನ್ಮೀಲಿತ ನಯನ, ನಿರಂತರ ಆತ್ಮಧ್ಯಾನ, ಅತ್ಯುಗ್ರವಾದ ತಪೋನುಷ್ಠಾನ.

ದೂರದಿಂದಲೇ ಬಂದು ವಂದಿಸಿದ ಹಿಮಾಚಲ. ಆವನ ಜೊತೆಗೆ ಬಂದ ಶೈಲಬಾಲಕಿಯೂ ತಲೆಬಾಗಿದಳು. ಶಂಕರ ಕಣ್ಣೆತ್ತಿ ನೋಡಿದ. ಧನ್ಯತೆಯ ಅನುಭವ ಆ ಧರಾಧರನಿಗೆ. ಹೆಮ್ಮೆಯಿಂದ ಮತ್ತೊಮ್ಮೆ ನಮಸ್ಕರಿಸಿದ. ಶಿವನ ಮುಖದಲ್ಲಿ ಮಂದಹಾಸದ ರೇಖೆ. ಆದರಿಂದ ಗಿರಿರಾಜನಿಗೆ ಧೈರ್ಯ. ಸೌಜನ್ಯದಿಂದಲೇ ಬಾಯ್ದೆರೆದ.

**ಹಿಮಾಚಲ :** ಮಹಾದೇವ ! ಇಂದು ನಾನು ಧನ್ಯ. ನಿಮ್ಮ ಈ ದಿವ್ಯ ದರ್ಶನದಿಂದ ಇಂದು ಈ ಹಿಮವಂತ ಭಾಗ್ಯವಂತ. ಇನ್ನು ಮುಂದೆ ನಾನು ಅನುದಿನವೂ ತಮ್ಮ ದರ್ಶನಕ್ಕೆ ಬರುವೆ. ನನ್ನೊಡನೆ ನನ್ನ ಮಗಳಾದ ಪಾರ್ವತಿಯೂ ಕೂಡ ತಮ್ಮ ದೈನಂದಿನ ದರ್ಶನಕ್ಕಾಗಿ ಬರುವಳು.

**ಮಹಾದೇವ :** ಪರ್ವತೇಂದ್ರ ! ನೀನು ನನ್ನ ದರ್ಶನಕ್ಕೆ ಬರಲು ಯಾವ ಅಭ್ಯಂತರವೂ ಇಲ್ಲ. ಪ್ರತಿದಿನವೂ ಬರಬಹುದು. ಈ ನಿನ್ನ ಮಗಳು ಬೇಡ. ನೀನೊಬ್ಬನೇ ಬಂದು ದರ್ಶನ ತೆಗೆದುಕೊಂಡು ಹೋಗು.

**ಹಿಮಾಚಲ :** ಅದೇನು ಕಾರಣ ? ನಾನು ಬಂದ ಬಳಿಕ ಈ ಮಗಳು ಏಕೆ ಬರಬಾರದು ?

**ಮಹಾದೇವ :** ''ಹಿಮವಂತ ! ಇದು ತಪೋಭೂಮಿ. ಇಲ್ಲಿ ಹೆಣ್ಣು ಮಕ್ಕಳು ಬರಕೂಡದು. ಅದರಲ್ಲಿಯೂ ಈ ನಿನ್ನ ಮಗಳು ರೂಪವತಿ ಸೌಂದರ್ಯಶಾಲಿನಿ, ಮಧುರಭಾಷಿಣಿ. ಇಂಥವಳು ತಪೋಭೂಮಿಗೆ ಬರಬಾರದು.'' ಮಹಾದೇವರ ಮಾತಿನಿಂದ ಹೇಮಾದ್ರಿಯು ನಿರುತ್ತರನಾದ . ಆದರೆ ಗಿರಿಜೆಯು ಕೌತುಕದ ಕೊನೆಯೇರಿ ನಿಂತಳು. ಧೈರ್ಯದಿಂದ ಅವಳು ಮಹಾದೇವರಿಗೆ ಪ್ರಶ್ನೆ ಹಾಕಿದಳು.

**ಪಾರ್ವತಿ :** ದೇವೋತ್ತಮ ! ನೀವು ತಪಸ್ಸನ್ನು ಮಾಡುತ್ತಲಿದ್ದೀರಿ. ತಪಃಶಕ್ತಿ ಸಂಪನ್ನರೂ ಇದ್ದೀರಿ. ನಿಮ್ಮ ಈ ತಪೋನುಷ್ಠಾನಕ್ಕೆ ವಿಘ್ನ ಬರಬಾರದೆಂದಲ್ಲವೇ ನೀವು ನನ್ನನ್ನು ನಿಷೇಧಿಸುವದು ! ಆದರೆ ನೀವು ಯಾರು ? ಈ ಪ್ರಕೃತಿ ಯಾರು? ಇದನ್ನು ಚೆನ್ನಾಗಿ ವಿಚಾರಿಸಿ ನನಗೆ ಹೇಳಿರಿ.

**ಮಹಾದೇವ :** ಕಲ್ಯಾಣಿ, ಈ ಪ್ರಕೃತಿಯೆಂದರೆ ಮಾಯೆ. ನನ್ನ ತಪಸ್ಸಿನಿಂದ ಅದನ್ನು ನಾನು ಗೆದ್ದುಕೊಳ್ಳಬಯಸುತ್ತೇನೆ. ನಾನು ಪ್ರಕೃತಿಯಿಂದ ಅತೀತನಾಗಿ ನನ್ನ ಯಥಾರ್ಥಸ್ವರೂಪದಲ್ಲಿ ನಿಂತುಕೊಂಡಿರುತ್ತೇನೆ.

**ಪಾರ್ವತಿ :** ಪ್ರಭು ! ಯಾವ ಉತ್ತಮವಾದ ವಾಣಿಯಿಂದ ನೀವು ಮಾತನಾಡುತ್ತಿರುವಿರೋ ಇದು ಪ್ರಕೃತಿಯೇ ಅಲ್ಲವೇ ? ಅಂದಬಳಿಕ ನೀವು ಪ್ರಕೃತಿಯಿಂದ ಅತೀತರು ಹೇಗೆ? ಈ ಸಂಪೂರ್ಣವಾದ ವಿಶ್ವ ಪ್ರಕೃತಿಯಿಂದ

ಆವೃತವೇ ಆಗಿದೆ. ನಾವು, ನೀವು ಎಲ್ಲರೂ ಕೇಳುವದು, ಹೇಳುವದು, ನೋಡುವದು, ತಿನ್ನುವದು, ಉಣ್ಣುವದು ಎಲ್ಲವೂ, ಈ ಪ್ರಕೃತಿ ಕಾರ್ಯವೇ, 'ನಾನು ಪ್ರಕೃತಿಯಿಂದ ಅತೀತ' ಎಂದು ಇದೀಗ ತಾವು ನುಡಿದ ಮಾತು ನಿಜವಾದರೆ ತಮಗೆ ನನ್ನ ಭಯವೇನು ? ಈ ಆಶ್ರಮಕ್ಕೆ ತಂದೆಯೊಡನೆ ಬಂದು ಹೋಗಲು ಪ್ರಕೃತ್ಯತೀತರಾದ ತಮ್ಮಿಂದ ನನಗೆ ಈ ನಿಷೇಧವೇಕೆ?

**ಪರಮೇಶ್ವರ** : ಮಂಗಳಾಂಗಿ, ನೀನು ಹೇಳುವುದು ನಿಜ. ನಿಮ್ಮ ತಂದೆಯೊಂದಿಗೆ ಪ್ರತಿದಿನ ನೀನೂ ಬರಬಹುದು.

ಅಂದಿನಿಂದ ಪ್ರತಿನಿತ್ಯವೂ ಪರ್ವತರಾಜ ಹಿಮವಂತ ಹಾಗೂ ಪಾರ್ವತಿ ಇಬ್ಬರೂ ಆ ಶುಭಾಶ್ರಮಕ್ಕೆ ಬರತೊಡಗಿದರು. ಆ ತಂದೆ ಮಗಳು ಅನುದಿನವೂ ಆ ಪುಣ್ಯಾಶ್ರಮಕ್ಕೆ ಬಂದು ತಪಸ್ಸಮಾಧಿ ಲೀನನಾದ ಶಂಕರನ ದರ್ಶನ ತೆಗೆದುಕೊಡು ಪ್ರದಕ್ಷಿಣೆ ನಮಸ್ಕಾರಾದಿ ಸೇವೆ ಮಾಡಿ ಹೋಗುತ್ತಿದ್ದರು. ಹೀಗೆ ಹಲವಾರು ದಿನಗಳು ಕಳೆದವು. ಇತ್ತ ಇಂದ್ರಾದಿ ದೇವತೆಗಳಿಗೆ ಚಿಂತೆ. ''ಮಹಾದೇವನು ಗಿರಿಜೆಯ ಕೈ ಹಿಡಿಯಲು ಏನು ಉಪಾಯ ? ಆ ಪರ್ವತ ರಾಜಕುಮಾರಿಯಾದ ಗಿರಿಜೆಯು ಶಿವನ ದರ್ಶನಕ್ಕಾಗಿ ದಿನವೂ ಆಶ್ರಮಕ್ಕೆ ಬರುವದೇನೋ ನಿಜ. ಆದರೆ ಅವಳು ಬಂದಾಗೆಲ್ಲ ಶಿವ ಧ್ಯಾನ ಲೀನ - ಅವನ ಕಣ್ಣುಗಳಿಗೂ ಆಮೀಲನ. ಒಮ್ಮೆಯೂ ಶಿವ ಕಣ್ಣೆತ್ತಿ ಕೂಡ ನೋಡುವದಿಲ್ಲ ಪಾರ್ವತಿಯ ಕಡೆಗೆ. ಅಂದ ಬಳಿಕ ಅವರೀರ್ವರ ಮದುವೆಯಾಗುವ ಬಗೆ ಎಂತು ?

ಆಗ ದೇವೇಂದ್ರನು ಕಾಮದೇವನಿಗೆ ಕರೆಕಳಿಸಿದ. ಕೂಡಲೇ ಕಾಮದೇವ, ಅವನ ಪಟ್ಟರಾಣಿ ರತೀದೇವಿ, ಗೆಳೆಯ ವಸಂತ, ಮಂದಾನಿಲ ಎಲ್ಲರೂ ಕೂಡಿಯೇ ಸುರ ಸಭೆಗೆ ಆಗಮಿಸಿದರು. ಆ ರತಿಪತಿಯು ಕೈ ಮುಗಿದು ದೇವೇಂದ್ರನಿಗೆ ಕೇಳಿದನು. ''ಶಚೀಪತಿಯೇ ! ತಾವು ನನ್ನನ್ನು ಕರೆದದ್ದು ಏಕೆ? ಯಾವ ದೇವಕಾರ್ಯವು ನನ್ನಿಂದಾಗಬೇಕು? ಯಾರ ತಪೋಭಂಗ ಮಾಡಬೇಕು? ನನ್ನ ಪರಾಕ್ರಮವು ನಿನಗೆ ಗೊತ್ತಿಲ್ಲವೆ? ಬ್ರಹ್ಮರ್ಷಿ ಪರಾಶರರು ಮೀನುಗಾರ ಹೆಣ್ಣಿನ ಬುಟ್ಟಿಗೆ ಬೀಳುವಂತೆ ಮಾಡಿದೆ. ವಿಶ್ವಾಮಿತ್ರರು ಮೇನಕೆ ರಂಭೆ ಮೊದಲಾದ ಬೆಲೆವೆಣ್ಣುಗಳ ಬೆನ್ನು ಹತ್ತಿ ತಪೋಭ್ರಷ್ಟರಾಗುವಂತೆ ಮಾಡಿದೆ. ಈ ಚರಾಚರಾತ್ಮಕವಾದ ಪ್ರಪಂಚದಲ್ಲಿ ಕಾಮನಬಿಲ್ಲಿಗೆ ವಶರಾಗದವರಾರು? ಹೆಣ್ಣಿನ ಮಾಯೆಗೆ ಮುಗ್ಧರಾಗದವರಾರು?

**ಇಂದ್ರ** : ''ರತಿಪತಿಯೇ ! ನೀನು ಬರೀ ಹಿಂದಿನ ಕಾರ್ಯಗಳನ್ನು ಹೊಗಳುತ್ತ ಕುಳಿತುಕೊಳ್ಳಬೇಡ. ಇದೀಗ ನಿನಗೊಂದು ಹೊಸ ಸವಾಲು. ಸಾಕ್ಷಾತ್ ಶಂಕರ ಹಿಮಗಿರಿಯ ಅಂಚಿನಲ್ಲಿ ತಪಸ್ಸಿಗೆ ಕುಳಿತಿದ್ದಾನೆ. ಅವನ ಮೇಲೆ ನಿನ್ನ ಪರಾಕ್ರಮ ತೋರಿಸು. ಗಿರಿಜೆಯು ಪ್ರತಿದಿನವೂ ಶಿವನ ದರ್ಶನಕ್ಕಾಗಿ ಬರುತ್ತಾಳೆ. ಶಂಕರನು ಮೋಹನಾಂಗಿಯಾದ ಪಾರ್ವತಿಗೆ ಒಲಿಯುವಂತೆ ಮಾಡು. ಶಿವನು ಆ ಸತೀ ಮಣಿಯನ್ನು ಮೆಚ್ಚಿ ಮದುವೆಯಾಗುವಂತೆ ಮಾಡಿದರೆ ನೀನು ನಿಜವಾದ ವೀರ ''.

ಮನ್ಮಥನು ಈ ಕಾರ್ಯವನ್ನು ಆನಂದದಿಂದ ಒಪ್ಪಿಕೊಂಡ. ದೇವತೆಗಳ ಪ್ರಶಂಸೆಯ ನುಡಿಗಳಿಂದ ಉತ್ಸಾಹಗೊಂಡಿದ್ದ ಕಾಮದೇವ. ಹೇಗಾದರೂ ಮಾಡಿ ಹರನನ್ನು ಗೆಲ್ಲಬೇಕೆಂಬ ಅಭಿಲಾಷೆ ಅವನ ಹೃದಯದಲ್ಲಿ ಹಂಬಲವಾಗಿ ತುಂಬಿ ಹೋಗಿತ್ತು. ತನ್ನ ಪ್ರೇಯಸಿಯಾದ ರತೀ, ಗೆಳೆಯ ವಸಂತ, ಸಹಕಾರಿ ಮಂದ ಮಾರುತ ಮತ್ತು ರಂಭಾ, ಊರ್ವಶಿ, ತಿಲೋತ್ತಮಾ, ಮುಂತಾದ ಅಪ್ಸರೆಯರೊಂದಿಗೆ ಹಿಮಗಿರಿಯ ಶೃಂಗಾಂಗಣಕ್ಕೆ ಬಂದಿಳಿದ ಆ ಕಾಮದೇವ. ಕಾಮನ ಆಗಮನದಿಂದ ಹಿಮಾಚಲದ ಶೈಲ ಶ್ರೇಣಿಗಳ ತುಂಬ ವಸಂತದ ಸುಗ್ಗಿ. ನಿರಂತರ ಹಿಮಪಾತದಿಂದ ಮರಗಟ್ಟು ಮುದುಡಿ ಕುಳಿತ ಮರಗಳೆಲ್ಲ ಒಮ್ಮಿಂದೊಮ್ಮೆಲೆ ವಾಸಂತಿಕ ಚೈತ್ರ ಚುಂಬನದಿಂದ ಚಿಗುರಿ ಹೊಗರೇರಿ ಕಾತು ಹೂತು ನಿಂತುಕೊಂಡವು. ಕೋಗಿಲೆಗಳ ಕಲ ಕಂಠದ ಕಾಕಲೀನಿನಾದವು ಹಿಮಾಚಲದ ಧರಿಕಂದರಗಳಲ್ಲಿ ಮಾರ್ದನಿಸಿತು. ತಂಗಾಳಿ ತೀಡಿತು. ಕಮಲ ಕುಮುದಗಳು ಬಿರಿದವು. ಶುಕಪಿಕಗಳು ಬಾಯಿ ತೆರೆದವು. ಎಲ್ಲ ಕಡೆಗೂ ಹೂವಿನ ಸುಗ್ಗಿ, ಹಣ್ಣುಗಳ ಸಮೃದ್ಧಿ, ಪರಿಸರ ಪ್ರದೇಶಗಳೆಲ್ಲವೂ ಹಚ್ಚ ಹಸಿರು, ಬೆಟ್ಟ ಬಯಲುಗಳ ತುಂಬ ಪಚ್ಚೆಪಯರು.

ಇಂಥ ಶೃಂಗಾರ ಸನ್ನಿವೇಶದಲ್ಲಿ ಮನ್ಮಥನು ದೇವದಾರು ಮರದ ಹಿಂದೆ ಕುಳಿತುಕೊಂಡು ತನ್ನ ಬಿಲ್ಲಿಗೆ ಬಾಣ ಹೂಡಿದ. ಕಾಮನ ಧನುಷ್ಟಂಕಾರ ಮಾತ್ರದಿಂದಲೇ ಆ ವನಾಂತ ಪ್ರದೇಶವೆಲ್ಲವೂ ಶೃಂಗಾರಮಯ. ಮುನಿಪುಂಗವರೆಲ್ಲರೂ ಜಪಮಾಲೆ ಕೆಳಗಿಟ್ಟರು. ಅವರ ಹೃದಯಗಳಲ್ಲಿ ಕಾಮನ ಸಂಚಾರ. ಪಶು, ಪಕ್ಷಿ, ಕ್ರಿಮಿ, ಕೀಟ, ನರ, ಕಿನ್ನರ, ಎಲ್ಲ ಪ್ರಪಂಚವೇ ಶೃಂಗಾರ ಕೇಲೀ ವಿಲಾಸ ಲಾಲಸ. ಇಂಥ ಸಂದರ್ಭದಲ್ಲಿ ವಿಜನ ವಿಪಿನ ಗರ್ಭದಲ್ಲಿ ಸದಾಶಿವನ ತಪಃಸಮಾಧಿ. ವಾತಾವರಣ ಪ್ರಶಾಂತ. ಸುತ್ತು ಮುತ್ತಲು ಏಕಾಂತ. ಪರಶಿವನ ಅವ್ಯಗ್ರ ಸಮಾಧಿ. ಮುಚ್ಚಿದ ಕಣ್ಣು. ಮುಖದಲ್ಲಿ ಮೌನ ಮುದ್ರೆ. ಅಂತರಂಗದಲ್ಲಿ ಧ್ಯಾನ. ಪರಂಜ್ಯೋತಿಯಾದ ತಾನು ತನ್ನಲ್ಲಿಯೇ ಆತ್ಮಲೀನ. ಕಾಮ ದೂರದಿಂದಲೇ ನೋಡಿದ ಶಂಕರನ ಈ ತಪೋನುಷ್ಠಾನದ ಪರಿಯನ್ನು. ವಸಂತ ಮಂದಾನಿಲ, ಕೋಗಿಲೆಗಳಿಗೆ ಶಿವಕುಳಿತ ವಾತಾವರಣದ ಮೇಲೆ ಪ್ರಭಾವ ಬೀರಲು ಸನ್ನೆ ಮಾಡಿದ. ತನ್ನ ಪುಷ್ಪ ಬಾಣವನ್ನು ಮತ್ತೊಮ್ಮೆ ತೀಡಿದ. ಅದೇ ವೇಳೆಯಲ್ಲಿ ಮಂಗಳಾಂಗಿ ಪಾರ್ವತಿಯ ಪ್ರವೇಶ. ಅವಳ ಜೊತೆಗೆ ಅದೇ ವಯಸ್ಸಿನ ಚಂಚಲಾಕ್ಷಿಯರ ಗುಂಪು. ಸೇವೆಗಾಗಿ ಸದಾಶಿವನ ಸಮೀಪಕ್ಕೆ ಬಂದಳು ಆ ಪರ್ವತ ಪುತ್ರಿ. ಅವಳೊಂದು ಜೀವಭಾವ ತಳೆದ ಚಂದ್ರಜ್ಯೋತ್ಸ್ನೆ. ಶೃಂಗಾರಮೂರ್ತಿಯಂತಿದ್ದ ಶೈಲಸುತೆ ಮೆಲ್ಲನೆ ಮುಂದೆ ಬಂದಳು. ಕೂಡಲೇ ತಣ್ಣೆಲರು ಬೀಸಿತು. ಅಲ್ಲಿಯ ಅಕ್ಕಪಕ್ಕದ ಮರಬಳ್ಳಿಗಳಲ್ಲಿ ಹೊಂದಳಿರಿನ ಹಂದರ ತೂಗಿತು. ಕೋಗಿಲೆ ಕುಕಿಲಿತು. ಶೃಂಗಾರ ಪೂರ್ಣವಾಯಿತು ಆಶ್ರಮದ ವಾತಾವರಣ, ಗಿರಿರಾಜ ನಂದಿನಿಯು ಚಂದ್ರಶೇಖರನ ಬಳಿಗೆ ಬಂದು ತನ್ನ ಕೈಯಲ್ಲಿನ ಕುಸುಮ ಮಾಲೆಯ ಅವನ ಕೊರಳಿಗೆ ಹಾಕಿದಳು. ಶಂಕರನು ತನ್ನ ಕಣ್ಣುಗಳನ್ನು ಅರೆ ತೆರೆದ. ಆ ಜಗನ್ಮೋಹಿನಿಯನ್ನು

ನೇತ್ರಾಂಚಲದಿಂದಲೇ ನಿರೀಕ್ಷಿಸಿದ. ಇದೇ ವೇಳೆಯಲ್ಲಿ ಅಲ್ಲಿಯೇ ಹಿನ್ನೆಲೆಯಲ್ಲಿ ಕುಳಿತ ಮನ್ಮಥ ಹರನ ಹೃದಯಕ್ಕೆ ಹೂಬಾಣಗಳಿಂದ ಹೊಡೆದ. ಆ ಚೆಲುವಿನ ಪುತ್ಥಳಿಯನ್ನು ಮತ್ತೊಮ್ಮೆ ನೋಡಿ ಭಾವನಾಪರವಶನಾದ ಭಗವಂತ. ಓಹ! ಎಂಥ ಚೆಲುವು ! ಎಂದಿತು ಅವನ ಚಿತ್ತ.

ಆದರೆ ಇದೆಲ್ಲ ಒಂದು ಕ್ಷಣಮಾತ್ರ. ಮರುಕ್ಷಣದಲ್ಲಿಯೇ ಸಾವರಿಸಿಕೊಂಡ ಸದಾಶಿವ. ತನ್ನ ಹೃದಯದ ಈ ಚಾಂಚಲ್ಯವನ್ನು ನೋಡಿ ಪರಶಿವನಿಗೆ ಅತ್ಯಾಶ್ಚರ್ಯ. ಖಿನ್ನನಾಗಿ ತನ್ನ ಮನದಲ್ಲಿಯೇ ಯೋಚಿಸಿದ. ''ನಾನು ನಿರ್ವಿಕಾರನಲ್ಲವೇ ! ಪ್ರಕೃತಿಯಿಂದ ಅತೀತ. ಅಂದಬಳಿಕ ಇಂದು ಈ ಸುಂದರಿಯ ದರ್ಶನದಿಂದ ನನ್ನ ಚಿತ್ತವೇಕೆ ಚಲವಿಚಲವಾಗುತ್ತಿದೆ? ಇಂದು ನನ್ನ ಚೇತಸ್ಸಿನ ಈ ಚಾಂಚಲ್ಯದಲ್ಲಿ ಹಿಂದೆ ಯಾರದಾದರೂ ಕೈವಾಡವಿರಬೇಕು. ವೃಥಾ ಇಂಥ ವೈಯಾಕುಲಿಗೆ ವಶ ವಾಗುವಂಥದಲ್ಲ ನನ್ನ ಧೀರ ಚಿತ್ತ. ನನ್ನ ಮಾನಸಿಕ ವ್ಯಗ್ರತೆಗೆ, ಈ ಚಿತ್ತ ದೌರ್ಬಲ್ಯಕ್ಕೆ ಯಾರು ಕಾರಣರಾಗಿರಬಹುದು !'' ಎಂದು ಆಲೋಚಿಸಿ ಆ ಕೃತ್ತಿವಾಸನು ಸುತ್ತಲೂ ಕಣ್ಣಾಡಿಸಿದ. ಹುಡುಕುಗಣ್ಣಿಂದ ಎಲ್ಲೆಡೆಯಲ್ಲಿ ಅರಸುತ್ತಲಿರುವಾಗ ದಕ್ಷಿಣ ದಿಕ್ಕಿನಲ್ಲಿ ಮನ್ಮಥ. ಒಂದು ಕೈಯಲ್ಲಿ ಬಿಲ್ಲು, ಇನ್ನೊಂದು ಕೈಯಿಂದ ಹೂಬಾಣಗಳನ್ನು ಹೂಡಿ ಹರನ ಹೃದಯವನ್ನೇ ಗುರಿಮಾಡಿ ಮುಂದುವರಿಸಿದ್ದಾನೆ ತನ್ನ ಶರ ಪ್ರಹಾರವನ್ನು. ಹರನಿಗೆ ತನ್ನ ಚೇತಸ್ಸಿನ ಚಾಂಚಲ್ಯಕ್ಕೆ ಕಾರಣ ಗೊತ್ತಾಯಿತು. ಕೂಡಲೇ ಶಿವನ ಹೃದಯದಲ್ಲಿ ಕ್ರೋಧದ ಅಗ್ನಿ ಪರ್ವತವೇ ಉದ್ದೀಪಿತ. ಒಮ್ಮೆಲೆ ಶಿವನ ಲಲಾಟಪಟ್ಟದಲ್ಲಿಯ ಮೂರನೆಯ ಕಣ್ಣು ತಾನಾಗಿ ತೆರೆಯಿತು. ಅದರಿಂದ ಅಗ್ನಿಜ್ವಾಲೆ ಒಮ್ಮೆಲೆ ಹೊರಹೊಮ್ಮಿತು. ಕಾಮನ ಮೇಲೆ ಬೆಂಕಿಯ ಮಳೆ. ಅರೆಕ್ಷಣದಲ್ಲಿ ಆ ರತಿಯ ಪತಿಯು ಭಸ್ಮೀಭೂತ. ದೇವತೆಗಳಲ್ಲಿ ಹಾಹಾಕಾರ, ಶಿವನ ಲಲಾಟ ನೇತ್ರಾಗ್ನಿಯಲ್ಲಿ ಕಾಮಾಹುತಿಯ ಸ್ವಾಹಾಕಾರ. ಸುರಪುರದ ಪೌರರೆಲ್ಲರೂ ಹೆದರಿ ಹೌಹಾರಿದರು. ಎಲ್ಲರೂ ಕೈಮುಗಿದು ಆ ಪರಮೇಶ್ವರನನ್ನು ಪ್ರಾರ್ಥಿಸಿ ಬೇಡಿಕೊಂಡರು.

**ದೇವತೆಗಳು** : ದೇವ ದೇವ ಮಹಾದೇವ ! ತಾವು ದೇವತೆಗಳ ಮೇಲೆ ಅನುಗ್ರಹ ಮಾಡಬೇಕು. ಗಿರಿ ನಂದಿನಿಗೆ ಸಹಾಯ ಮಾಡಲೆಂದು ಈ ಮನ್ಮಥನನ್ನು ಕಳಿಸಿದವರು ನಾವು. ಇದರಲ್ಲಿ ಮನ್ಮಥನದು ಏನೂ ತಪ್ಪಿಲ್ಲ. ತಾವು ವ್ಯರ್ಥವಾಗಿಯೇ ಈ ರತಿಪತಿಯನ್ನು ಸುಟ್ಟು ಹಾಕಿದಿರಿ. ಪರಮೇಶ್ವರ ! ನೀನು ಜಗದೇಕ ಬಂಧುವಲ್ಲವೇ! ಈ ದೇವತೆಗಳ ಕಾರ್ಯಸಿದ್ಧಿಯಾಗುವದು ತಮ್ಮ ತೇಜಸ್ಸಿನಿಂದಲೇ. ನಿಮ್ಮಿಂದ ಪಾರ್ವತಿಯ ಗರ್ಭದಲ್ಲಿ ಜನಿಸುವ ಮಗುವಿನಿಂದಲೇ ದೇವತೆಗಳ ಇಷ್ಟಸಿದ್ಧಿ. ಜಗದೋದ್ಧಾರ ! ದುಷ್ಟನಾದ ಆ ತಾರಕ ವಿಶ್ವಕ್ಕೇ ಮಾರಕ. ಮೂರು ಲೋಕಗಳೂ ಅವನ ಭಯದಿಂದ ಸಂತ್ರಸ್ತ. ಶಿವಪಾರ್ವತಿಯರ ಪುತ್ರನೊಬ್ಬನೇ ಆ ದೈತ್ಯನನ್ನು ವಧಿಸಬಲ್ಲ. ಅದಕ್ಕಾಗಿ ನೀನು ಈ ಕಾಮನಿಗೆ ಜೀವದಾನ ಮಾಡು. ಪಾರ್ವತಿಯ ಪಾಣಿಗ್ರಹಣವನ್ನೂ ಮಾಡು. ಹಿಂದೆ ಗಜಾಸುರನಿಂದ ದೇವತೆಗಳನ್ನು ಉಳಿಸಿ

ಕಾಪಿಟ್ಟ ಕರುಣಾಶಾಲಿಯು ನೀನೇ ಅಲ್ಲವೆ ! ಕಾಲಕೂಟ ವಿಷದಿಂದ ಪ್ರಪಂಚವನ್ನೇ ಪಾರು ಮಾಡಿ ರಕ್ಷಿಸಿದ ದಯಾಳು ದೇವತೆ ನೀನೇ ಅಲ್ಲವೇ ! ಈ ಮದನನು ಈಗ ನಮಗಾಗಿ ತನ್ನ ಬಲಿದಾನ ಮಾಡಿದ್ದಾನೆ. ನಿರಪರಾಧಿಯಾದ ಅವನನ್ನು ನೀವೇ ರಕ್ಷಿಸಬೇಕು.

**ಮಹಾದೇವ :** ದೇವತೆಗಳೇ ! ಇನ್ನು ಮೇಲಾದರೂ ನೀವು ಕಾಮ ಶೂನ್ಯರಾಗಿರಿ. ಇಷ್ಟು ದಿನ ಕಾಮನ ಕೈಗೊಂಬೆಯಾಗಿ ವಿಷಯ ಲಂಪಟತೆಯಿಂದ ಶೃಂಗಾರಮಯ ಜೀವನವನ್ನು ನಡೆಸುತ್ತಿದ್ದಿರಿ. ಈಗ ಹೇಗೂ ನನ್ನ ನೇತ್ರಾಗ್ನಿಯಲ್ಲಿ ಕಾಮನ ಹೋಮವಾಗಿದೆ. ಕಾಮನು ಕಮರಿಹೋಗಿದ್ದಾನೆ. ಇನ್ನು ಮುಂದೆ ಎಲ್ಲ ಋಷಿಗಳೂ ದೇವತೆಗಳೂ ಮಾನವರೂ ಕಾಮನ ಹೆದರಿಕೆ ಇಲ್ಲದೇ ನಿರ್ಭಯವಾಗಿ ನಿಶ್ಚಿಂತೆಯಿಂದ ನಿರ್ವಿಘ್ನದಿಂದ ಜಪತಪೋನುಷ್ಠಾನಗಳನ್ನು ಮಾಡಬಹುದು. ಇಂದಿನಿಂದ ಇಡೀ ಜಗತ್ತೇ ನಿಷ್ಕಾಮ. ಜೀವಿಗಳೆಲ್ಲರೂ ನಿಷ್ಕಲ್ಮಷ. ಸುರಾಧೀಶರೇ ! ಈ ಕಾಮ ಮಹಾಪಾಪಿ. ಎಲ್ಲ ದುಃಖಕ್ಕೂ ಮೂಲ. ಕಾಮದಿಂದಲೇ ಪ್ರಾಣಿಗಳಿಗೆ ಕ್ರೋಧ, ಮೋಹ, ಸ್ನೇಹ, ವಿಷಯಲೌಲ್ಯ, ಚಿತ್ತಚಾಪಲ್ಯ ಮುಂತಾದ ಅನರ್ಥ ಪರಂಪರೆ. ಇನ್ನು ಮೇಲೆ ಎಲ್ಲರೂ ತ್ಯಾಗಿಗಳಾಗಬಹುದು. ವಿರಾಗಿಗಳೂ ಆಗಬಹುದು. ಯೋಗ ಮಾರ್ಗದಿಂದ ಮುಕ್ತಿಪಡೆಯಬಹುದು.

**ದೇವತೆಗಳು :** ದೇವೇಶ್ವರ! ತಾವು ಹೇಳಿದ್ದೇನೋ ಸತ್ಯ. ಆದರೆ ಈ ಸಂಸಾರದ ಸೃಷ್ಟಿಯಾದದ್ದೇ ಕಾಮನಿಂದ. ಜಗತ್ತೆಲ್ಲವೂ ಕಾಮಮಯ. ಪ್ರಪಂಚವೆಲ್ಲವೂ ಪ್ರೇಮಮಯ. ಕಾಮವೇ ಇಲ್ಲದಿದ್ದರೆ ಪ್ರೇಮವೆನ್ನುವ ಪದಾರ್ಥವು ಶೂನ್ಯ. ಯಾರು ಯಾರನ್ನೂ ರಕ್ಷಿಸುವುದಿಲ್ಲ. ಲಕ್ಷಿಸುವುದೂ ಇಲ್ಲ. ಪ್ರಪಂಚವೇ ಬೆಳೆಯುವುದಿಲ್ಲ. ಬೆಳೆದವರಾರೂ ನೆಮ್ಮದಿಯಿಂದ ಬದುಕುವುದಿಲ್ಲ.'' ಆದುದರಿಂದ ನೀನು ದಯಮಾಡಿ ಲೋಕ ಕ್ಷೇಮಕ್ಕಾಗಿ ಕಾಮ ಮತ್ತೆ ಹುಟ್ಟುವಂತೆ ಎಲ್ಲೆಡೆಗೆ ಪ್ರೇಮ ವೃದ್ಧಿಯಾಗುವಂತೆ ಮಾಡು ಎಂದು ಪ್ರಾರ್ಥಿಸಿದರು.

ಮದನನ ಈ ಆಕಸ್ಮಿಕ ಮರಣದಿಂದ ರತಿಗೆ ಮಾತ್ರ ಭಯಂಕರ ಆಘಾತವಾಯಿತು. ಶಿವನ ಹಣೆಗಣ್ಣು ಭುಗಿಲೆಂದು ಹೊರಬಿದ್ದ ಕೆಂಡದ ಉಂಡೆಯು ಮನ್ಮಥನ ಮೈಮೇಲೆ ಬಿದ್ದು ಅವನ ಸಜೀವ ದಹನವಾದದ್ದನ್ನು ಕಂಡು ಆ ಪತಿವ್ರತೆ ರತಿ ನಿಂತಲ್ಲಿಯೆ ಮೂರ್ಛೆ ಹೋದಳು ಆ ಕಾಮದಹನವನ್ನು ಕಣ್ಣಿನಿಂದ ನೋಡಕ್ಕಾಗಲಿಲ್ಲ ಆ ಬಾಲೆಗೆ. ಸಖಿಯ ಶೈತ್ಯೋಪಚಾರದಿಂದ ಎಚ್ಚೆತ್ತ ಆ ಕಾಮಾಂಗನೆಗೆ ಬದುಕು ಇನ್ನೂ ದುರ್ಭರವಾಯಿತು. ಹರನ ಕೋಪದ ದಳ್ಳುರಿಯಲ್ಲಿ ಉರಿದು ಹೋದ ತನ್ನ ಎದೆಯ ಅರಸನನ್ನು ಕಂಡು ರೋದಿಸತೊಡಗಿದಳು. ಅವಳ ಕರುಣೆಯ ಆಕ್ರಂದನಕ್ಕೆ ಆ ವಿಜನವನಾಂತರದಲ್ಲಿಯ ಪಶುಪಕ್ಷಿಗಳೆಲ್ಲವೂ ಕಣ್ಣೀರುಗರೆದವು. ತಪೋವನದ ಋಷಿಮುನಿಗಳೆಲ್ಲರೂ ಕಣ್ಣೀರಿನಲ್ಲಿ ಕರಗಿಹೋದರು. ಆ ವೇಳೆಯಲ್ಲಿ ಬೆಂಕಿಯಿಲ್ಲದೆ ಬೆಂದು ಹೋದ ಜೀವ ಎಂದರೆ ಪಾರ್ವತಿ.

ಅವಳದು ಮೂಕಶೋಕ. ಕಾಮ ಶಿವನ ಕಣ್ಣಿನ ಉರಿಯಿಂದ ದಗ್ಧನಾಗಿದ್ದರೆ ಪಾರ್ವತಿಯು ಅವಮಾನದ ಅಗ್ನಿಯಲ್ಲಿ ಇನ್ನೂ ಬೇಯುತ್ತಲೇ ಇದ್ದಳು. 'ತನಗೆ ಸಹಾಯ ಮಾಡಬಂದ ಕಾಮನನ್ನು ಕೂಡ ಸುಟ್ಟಿ ಹಾಕಿದ ಪರಮೇಶ್ವರ' ಎಂಬ ವಿಚಾರವೇ ಅವಳ ಹೃದಯಕ್ಕೆ ಕಿಚ್ಚನ್ನು ಇಟ್ಟಿತ್ತು. ಶಂಕರನು ಕಾಲಕೂಟ ವಿಷವನ್ನು ನುಂಗಿದಂತೆ ಅವಳು ತನ್ನ ದುಃಖಾಗ್ನಿಯನ್ನು ನುಂಗಿ ರತಿಯನ್ನು ಸಂತೈಸಲಿಕ್ಕೆ ಅವಳಿದ್ದಲ್ಲಿಗೆ ಬಂದಳು. ಶೋಕ ಸಂತಪ್ತಳಾದ ಆ ಕಾಮ ಕಾಮಿನಿಯ ಮೇಲೆ ತನ್ನ ವಾಣಿಯಿಂದ ಶಾಂತಿ ಸಂಜೀವಿನಿಯ ರಸ ಸಿಂಚನಗೈಯುತ್ತ ನುಡಿದಳು.

**ಪಾರ್ವತಿ :** ''ಪ್ರಿಯಸಖಿ, ನೀನು ಶೋಕ ಮಾಡಬೇಡ. ದೇವಕಾರ್ಯಕ್ಕೆ ಆತ್ಮಾರ್ಪಣೆ ಮಾಡಿದ ನಿನ್ನ ಪತಿಯ ಪ್ರಾಣಗಳ ಪುನರುಜ್ಜೀವನ ಮಾಡುವದು ನನ್ನ ಹೊಣೆ. ಬೇಗನೇ ನಿಮ್ಮಿಬ್ಬರೂ ಪ್ರೇಮಿಗಳ ಮಧುರಮಿಲನವಾಗುವಂತೆ ಮಾಡುವೆನು. ನನ್ನ ಮಾತನ್ನು ನಂಬು.'' ಹೀಗೆ ಹೇಳಿ ಮಹಾದೇವರು ಇಷ್ಟು ದಿನ ಇದ್ದು ತಪಂಗೈದ ಆ ಪುಣ್ಯಾರಣ್ಯದಲ್ಲಿಯೇ ಇದ್ದು ತಾನು ತಪಸ್ಸನ್ನು ಮಾಡಬೇಕೆಂದು ಪಾರ್ವತಿಯು ನಿಶ್ಚಯಿಸಿದಳು. ಶಿವನು ಕುಳಿತು ನಿಂತು ಓಡಾಡಿ ತಪಸ್ಸನ್ನು ಮಾಡಿದ ಆ ಪ್ರದೇಶವೆಲ್ಲವೂ ಶಿವನ ಸನ್ನಿಧಾನದಿಂದ ಪರಮ ಪವಿತ್ರವೆಂದೇ ಅವಳ ಭಾವನೆ. ಅಲ್ಲಿಯ ತೃಣರೇಣು ಅಣು ಕಣಗಳಲ್ಲಿಯೂ ಶಿವನ ಚರಣಧ್ವನಿ ಅವಳ ಕಿವಿಯಲ್ಲಿ ಅನುರಣಿಸುತ್ತಿತ್ತು. ಅವನಿದ್ದ ತಾಣ ಅವಳಿಗೆ ಈಗ ಪಂಚ ಪ್ರಾಣ. ಆ ಶಿವಯೋಗ ಕುಟೀರವನ್ನೇ ತನ್ನ ತಪಃಕುಟೀರವನ್ನಾಗಿ ಮಾರ್ಪಡಿಸಿ ಪ್ರಾರಂಭವಾಯಿತು ಹೈಮವತಿಯ ಉಗ್ರ ತಪಸ್ಸು. ತಾಯಿ ತಂದೆಗಳು ಅವಳಿಗೆ ತಪಸ್ಸು ಬೇಡವೆಂದು ಪರಿಪರಿಯಿಂದ ತಿಳಿಸಿ ಹೇಳಿದರು. ''ಮಗು, ನಿನ್ನದು ಇನ್ನೂ ಚಿಕ್ಕವಯಸ್ಸು. ಹೂವಿನಷ್ಟು ಕೋಮಲವಾಗಿದೆ ಈ ನಿನ್ನ ಶರೀರ, ನಿಷ್ಠುರವಾದ ತಪೋನುಷ್ಠಾನದ ಕಷ್ಟ ಕಾರ್ಪಣ್ಯಗಳನ್ನು ನಿನ್ನ ಕೋಮಲ ದೇಹ ಎಂತು ಸಹಿಸೀತು ! ಆದುದರಿಂದ ಮನೆಗೆ ನಡೆ.''

ತಾಯಿ ತಂದೆಗಳ ಈ ಮಮತೆಯ ಕರೆಯನ್ನು ಸೌಜನ್ಯದಿಂದಲೇ ನಿರಾಕರಿಸಿದಳು ಆ ಗಿರಿಕನ್ಯೆ. ಶಂಕರನು ನನ್ನನ್ನು ತಿರಸ್ಕರಿಸಿದ ಸ್ಥಾನದಲ್ಲಿಯೇ ಅವನು ಮತ್ತೆ ಇಲ್ಲಿಗೇ ಬಂದು ನನ್ನ ಕೈ ಹಿಡಿದು ನನ್ನ ಸತೀತ್ವಕ್ಕೆ ಹಾಗೂ ನನ್ನ ತಪಸ್ಸಿಗೆ ಪುರಸ್ಕಾರಮಾಡುವಂತೆ ಪ್ರಯತ್ನಿಸುತ್ತೇನೆ. ಇದೇ ನನ್ನ ಪ್ರತಿಜ್ಞೆ , ನನ್ನ ತಾಯಿ ತಂದೆ ಇದಕ್ಕೆ ಅನುಜ್ಞೆ ನೀಡಬೇಕು.'' ಹೀಗೆ ನುಡಿದು ಆ ಹೈಮವತಿಯು ಉಗ್ರವಾದ ತಪಸ್ಸಿಗೆ ತೊಡಗಿದಳು, ತಪೋನುಷ್ಠಾನಕ್ಕೆ ಕುಳಿತ ಪಾರ್ವತಿಯ ಚಿತ್ತ ಏಕಾಗ್ರ. ಮನಸ್ಸು ಅವ್ಯಗ್ರ. ಗುರಿಮಾತ್ರ ಅದೇ ಉಗ್ರ ಅರ್ಥಾತ್ ಶಿವ. ಸದಾಶಿವನು ಕಾಮನನ್ನು ತನ್ನ ಕಣ್ಣು ಕಿಡಿಯಿಂದ ಸುಟ್ಟು ಬೂದಿಗೈದ ನೆಲವನ್ನೇ ವೇದಿಕೆಯನ್ನಾಗಿ ಮಾಡಿಕೊಂಡು ಅದರ ಮೇಲೆ ಕುಳಿತು ಉಮೆಯ ತಪಶ್ಚರ್ಯೆಯ ಉಪಕ್ರಮ. ಜಯಾ,ವಿಜಯಾ, ಮಾಧವೀ, ಸುಲೋಚನಾ, ಸುಶ್ರುತಾ, ವಿಶ್ರುತಾ, ಶುಚೀ,

ಪ್ರಮ್ಲೋಚಾ, ಸುಭಗಾ, ಶ್ಯಾಮಾ, ಚಿತ್ರಾಂಗೀ, ವಾರುಣೀ, ಸುಧಾ ಮುಂತಾದ ಗೆಳತಿಯರು ಅವಳಿಗೆ ಸಹಾಯಕ ಸಖಿಯರು. ಕೆಲವು ದಿನ ಹಣ್ಣುಕಾಯಿಗಳ ಮೇಲೆ ನಡೆಯಿತು ಅವಳ ತಪಶ್ಚರ್ಯೆ. ಅನಂತರ ಫಲತ್ಯಾಗ. ಕೇವಲ ಎಲೆಗಳನ್ನು ತಿಂದೇ ಎಷ್ಟೋ ದಿನ ತಪಸ್ಸು. ಹಲವಾರು ಹಸಿರೆಲೆಗಳನ್ನು ಮಾತ್ರ ತಿನ್ನುವದು. ಮುಂದೆ ಎಷ್ಟೋ ವರ್ಷ ಒಣ ಎಲೆಗಳನ್ನು ತಿಂದು. ಅನಂತರ ಹಸುರೆಲೆಯೂ ಇಲ್ಲ. ಹಣ್ಣೆಲೆಯೂ ಇಲ್ಲ. ಅಪರ್ಣ ತಪಸ್ಸು. ಮುಂದೆ ಪರ್ಣಗಳನ್ನೂ ಕೂಡ ಬಿಟ್ಟು ತಪಸ್ಸು ಮಾಡಿದ್ದರಿಂದ ಅಪರ್ಣಾ ಎಂಬ ಹೆಸರು ಅವಳಿಗೆ ಬಂದಿತು. ಹೀಗೆ ಹಲವು ದಿನ ಜಲವ್ರತ ಮಾಡಿದ ಬಳಿಕ ಆ ಜಲಜಾಕ್ಷಿಯು ವಾಯು ವ್ರತ ಸುರುಮಾಡಿದಳು, ಗಾಳಿಯನ್ನು ಮಾತ್ರ ತಿಂದರೆ ಪೂರ್ಣ ನೀರಾಹಾರವೇ. ಏನನ್ನೂ ಮುಟ್ಟುವಂತಿಲ್ಲ. ಯಾವುದನ್ನೂ ಮೂಸುವಂತಿಲ್ಲ. ಉಣ್ಣುವದು ತಿನ್ನುವದಂತೂ ಮೊದಲೇ ಇಲ್ಲ. ಕಠಿನಾತ್ ಕಠಿಣತಮವಾಗಿತ್ತು ನೀರಜಾಕ್ಷಿಯ ಆ ನಿರಾಹಾರದ ತಪಸ್ಸು. ಅಲ್ಲಿಯ ಪರಿಸರದ ಪುಣ್ಯಾಶ್ರಮಗಳಲ್ಲಿದ್ದ ವಯೋವೃದ್ಧ ತಪೋವೃದ್ಧರೆಲ್ಲರೂ ಈ ಕೋಮಲಾಂಗಿಯ ಕ್ಲಿಷ್ಟ ತಪೋನುಷ್ಠಾನವನ್ನು ಕಂಡು ಬೆಕ್ಕಸಬೆರಗಾಗಿ ನಿಂತರು. ಅಚ್ಚರಿಯಿಂದ ಹುಚ್ಚಾದರು ಸುರಾಸುರರು. ಅವಳ ಅತ್ಯುಗ್ರ ತಪಶ್ಚರ್ಯೆಯ ಕಾವಿನಿಂದ ಜಗತ್ತೇ ಸಂತಪ್ತವಾಗತೊಡಗಿತು.

ಆಗ ದೇವದೈತ್ಯರು ಕೂಡಿ ಬ್ರಹ್ಮದೇವರ ಬಳಿಗೆ ಹೋದರು. ಆ ಬ್ರಹ್ಮ ದೇವರಿಗೂ ಏನೂ ತಿಳಿಯಲಿಲ್ಲ. ಏನು ಮಾಡಬೇಕೆಂಬುದೇ ತೋಚದಾಯಿತು. ಅವರೆಲ್ಲರನ್ನೂ ಕರೆದುಕೊಂಡು ಬ್ರಹ್ಮದೇವರು ಕ್ಷೀರಸಾಗರದ ತೀರಕ್ಕೆ ಹೋದರು. ವಿಷ್ಣುವನ್ನು ವೇದ ಮಂತ್ರಗಳಿಂದ ಸ್ತುತಿಸಿದರು. ದೇವಾಸುರರ ಈ ಸ್ತುತಿ ಸ್ತೋತ್ರಗಳನ್ನು ಕೇಳಿ ಪ್ರೀತಿ ಪ್ರಸನ್ನನಾದ, ಪ್ರತ್ಯಕ್ಷನಾದ ಪರಬ್ರಹ್ಮನಾದ ಶ್ರೀ ಹರಿ.

"ಜ್ಞಾತ್ವಾ ಬ್ರಹ್ಮಾ ಜಗನ್ಮೂಲಂ ಕ್ಷೀರಾಬ್ಧಿಂ ಪರಮಾದ್ಭುತಮ್ಃ
ತತ್ರ ಸುಪ್ತಂ ಸುಪರ್ಯಂಕೇ ಶೇಷಾಖ್ಯೇ ಚಾತಿ ಶೋಭನೇ ॥

ಲಕ್ಷ್ಮ್ಯಾ ಚ ಪಾದೋಪಯುಗಲಂ ಸೇವ್ಯಮಾನಂ ನಿರಂತರಂ ।
ದೂರಸ್ಥೇನಾಪಿ ತಾರ್ಕ್ಷ್ಯೇಣ ನತಕಂಧರ ಧಾರಿಣಾ ॥

ಸೇವ್ಯ ಮಾನಂ ಶ್ರಿಯಾ ಕಾಂತ್ಯಾ ತುಷ್ಟ್ಯಾ ವೃತ್ಯಾ ದಯಾದಿಭಿಃ ।
ನವಶಕ್ತಿಯುತಂ ವಿಷ್ಣುಂ ಪಾರ್ಷದೈಃ ಪರಿವಾರಿತಂ ॥

ಕುಮುದಃ ಕುಮುದಾಕ್ಷಶ್ಚ ಸನಕಶ್ಚ ಸನಂದನಃ ।
ಸನಾತನೋ ಮಹಾಭಾಗಃ ಪ್ರಸುಪ್ತೋ ವಿಜಯೋಽರಿಜಿತ್ ॥

ಜಯಂತಶ್ಚ ಜಯತ್ಸೇನೋ ಜಯಶ್ಚೈವ ಮಹಾಪ್ರಭಃ
ಸನತ್‌ಕುಮಾರಃ ಸುತಪಾ ನಾರದಶ್ಚೈವ ತುಂಬುರುಃ ॥

ಪಾಂಚಜನ್ಯೋ ಮಹಾಶಂಖೋ ಗದಾ ಕೌಮೋದಕೀ ತಥಾ ।
ಸುದರ್ಶನಂ ತಥಾ ಚಕ್ರಂ ಶಾರ್ಙ್ಗಂ ಚ ಪರಮಾದ್ಭುತಮ್ ॥

ಏತಾನಿ ವೈ ರೂಪವಂತಿ ದೃಷ್ಟಾನಿ ಪರಮೇಷ್ಠಿನಾ ॥

ಅತ್ಯದ್ಭುತ ಆ ಕ್ಷೀರಸಾಗರ. ಆ ಹಾಲುಗಡಲಿನ ಒಡಲಿನಲ್ಲಿ ಒಂದು ಹಾವಿನ ಹಾಸಿಗೆ. ಅತೀವ ಆಶ್ಚರ್ಯಕರ ಆ ಶೇಷ ಪರ್ಯಂಕ. ಅದರ ಮೇಲೆ ಪವಡಿಸಿದ್ದಾನೆ ಪರಮಾತ್ಮ. ಅವನ ಕಮಲ ಕೋಮಲ ಪಾದಗಳನ್ನು ನೀವುತ್ತಿದ್ದಾಳೆ ಲಲನಾಮಣಿ ಲಕ್ಷ್ಮಿ. ದೂರದಲ್ಲಿ ತಲೆಬಾಗಿ ನಿಂತಿದ್ದಾನೆ ಗರುಡ. ಶ್ರೀ, ತುಷ್ಟಿ, ಕಾಂತಿ, ಮುಂತಾದವುಗಳೆಲ್ಲ ಮೂರ್ತಿಮಂತಾಗಿ ನಿಂತುಕೊಂಡಿವೆ ಆ ಭಗವಂತನ ಕೈಂಕರ್ಯಕ್ಕೆ. ಸುತ್ತಮುತ್ತಲೂ ಅವನ ಪಾರ್ಷದರು, ಕುಮಾರ, ಕುಮುದ್ವಂತ, ಸನಕ, ಸನಂದನ, ಸನಾತನ, ಪ್ರಸುಪ್ತ ವಿಜಯ, ಅರಿಜಯ, ಜಯಂತ, ಜಯತ್ಸೇನ, ಜಯ, ಸನತ್ಕುಮಾರ, ಸುತಪ, ನಾರದ, ತುಂಬುರು, ಮುಂತಾದ ಭಗವತ್ಪರಿವಾರದವರೆಲ್ಲರೂ ಕೈಮುಗಿದು ನಿಂತುಕೊಂಡಿದ್ದಾರೆ. ಕೈಂಕರ್ಯಕ್ಕಾಗಿ ಕಾಯುತ್ತಿದ್ದಾರೆ. ಸುದರ್ಶನಚಕ್ರ, ಪಾಂಚಜನ್ಯ, ಶಂಖ, ಕೌಮೋದಕೀ ಗದೆ, ಶಾರ್ಙ್ಗ ಧನಸ್ಸು ನಾಲ್ಕು ಕೈಗಳಲ್ಲಿ ಶೋಭಿಸುತ್ತವೆ. ಈ ಎಲ್ಲ ಭಗವತ್ಪರಿವಾರವನ್ನು ಕಂಡು ಸಂತುಷ್ಟರಾದ ಬ್ರಹ್ಮದೇವರು ಆ ಪರಮಾತ್ಮನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಹೇಳಿದರು.

**ಬ್ರಹ್ಮ :** ಭಗವನ್, ಪಾರ್ವತಿಯ ಉಗ್ರ ತಪಸ್ಸಿನಿಂದ ನಾವೆಲ್ಲರೂ ಸಂತಪ್ತ, ಉಳಿದ ಜಗತ್ತೆಲ್ಲವೂ ತಾತಪ್ಯಮಾನ. ಅದಕ್ಕಾಗಿ ಈ ದೇವತೆಗಳೆಲ್ಲರೂ ಶರಣಾಗತ ರಕ್ಷಕನಾದ ನಿನಗೆ ಶರಣು ಬಂದಿದ್ದಾರೆ. ಇವರನ್ನು ರಕ್ಷಿಸು.'' ದೇವತೆಗಳ ಈ ಆರ್ತ ಪ್ರಾರ್ಥನೆಯನ್ನು ಕೇಳಿ ಹಾವಿನ ಹಾಸಿಗೆಯ ಮೇಲೆ ಎದ್ದು ಕುಳಿತ ಆ ಹರಿ. ವಾತ್ಸಲ್ಯ ಪೂರ್ಣ ದೃಷ್ಟಿಯಿಂದ ಅವರೆಲ್ಲರನ್ನೂ ಒಂದು ಸಲ ನೋಡಿದ.

**ಹರಿ :** ದೇವ ಪುರುಷರೇ ! ನಾನು ನೀವು ಎಲ್ಲರೂ ಕೂಡಿ ಈಗ ಆ ಮಹಾದೇವನ ಹತ್ತಿರವೇ ಹೋಗೋಣ. ಆ ನಗೇಂದ್ರ ಕನ್ಯೆಯನ್ನು ಮದುವೆಯಾಗು' ಎಂದು ಪ್ರಾರ್ಥನೆಯನ್ನು ಸಲ್ಲಿಸೋಣ. ಅವನೇನೋ ಈಗ ತಪೋಲೀನನಾಗಿದ್ದಾನೆ. ಆದರೂ ನಾವು ಅವನನ್ನೇ ಶರಣು ಹೋಗೋಣ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಒಂಭತ್ತನೇ ಅಧ್ಯಾಯ ಮುಗಿದುದು.**

# ದೇವತೆಗಳ ಪ್ರಾರ್ಥನೆ. ಶಿವ ಪಾರ್ವತಿಯರ ಭೇಟಿ ಪಾರ್ವತಿಯ ಪ್ರೇಮ ಪರೀಕ್ಷೆ ಮತ್ತು ತಪಸ್ಸಿದ್ಧಿ.

ಅಧ್ಯಾಯ -10

**ಸೂತ** : ಎಲ್ಲ ದೇವತೆಗಳೂ ವಿಷ್ಣುವಿನ ಆದೇಶದಂತೆ ಮಹಾದೇವರ ದರ್ಶನಕ್ಕಾಗಿ ಹೊರಟರು. ಭಗವಾನ್ ಶಿವನು ಸಮುದ್ರದ ಆಚೆಯ ತೀರದಲ್ಲಿ ಸಮಾಧಿಸ್ಥನಾಗಿ ಯೋಗಾಸನದಲ್ಲಿ ವಿರಾಜಮಾನವಾಗಿದ್ದ. ಅವನ ಸುತ್ತಮುತ್ತಲೂ ಪಾರ್ಷದರು. ಗಣಾಧೀಶರು, ವೃಕ್ಷಸ್ಥಲದಲ್ಲಿ ಯಜ್ಞೋಪವೀತದಂತೆ ಶೋಭಿಸುವ ವಾಸುಕಿ ಹಾವು, ಎರಡೂ ಕರ್ಣಕುಂಡಲ ರೂಪದಲ್ಲಿ ಕಂಬಲ ಮತ್ತು ಅಶ್ವತರ ಎಂಬ ಎರಡು ಹೆಬ್ಬಾವುಗಳು. ಕರ್ಕೋಟಕ ಮತ್ತು ಕುಳಿಕ ಎಂಬ ಎರಡು ನಾಗಗಳು ಕೈ ಕಂಕಣ ರೂಪದಲ್ಲಿ. ಶಂಖ ಪದ್ಮ ಎಂಬ ಎರಡು ಹಾವುಗಳಿಂದ ಭುಜ ಕಿರೀಟಗಳು. ಉಟ್ಟುಕೊಂಡಿದ್ದು ಹುಲಿಯ ಚರ್ಮ. ಹೊದ್ದುಕೊಂಡಿದ್ದು ಆನೆಯ ತೊಗಲು. ಮಸ್ತಕದಲ್ಲಿ ಮಂದಾಕಿನಿ. ಚೂಡಾಪೀಡದಲ್ಲಿ ಮರಿಚಂದ್ರ. ಮೈಯಲ್ಲಿ ಕರ್ಪೂರದಂತೆ ಶ್ವೇತಿಮ ಶೋಭೆ. ಕೊರಳಲ್ಲಿ ಮಾತ್ರ ಕಪ್ಪು ಬಣ್ಣ. ಪಕ್ಕದಲ್ಲಿ ನಂದೀಶ್ವರ, ಮುಂದೆ ಸ್ತುತಿಸುವ ಮುನಿಮಹರ್ಷಿಗಳು. ಇಂಥ ಪರಶಿವನನ್ನು ಬ್ರಹ್ಮ ವಿಷ್ಣು ಇಂದ್ರ ಮುಂತಾದ ಎಲ್ಲ ದೇವತೆಗಳೂ ಹಾಗೂ ಋಷಿ ಮುನಿಗಳೂ ಬಂದು ದರ್ಶನ ತೆಗೆದುಕೊಂಡು ವೇದ ಉಪನಿಷತ್ತು ಮಂತ್ರಗಳಿಂದ ಸ್ತೋತ್ರ ಮಾಡಿದರು.

**ಶಂಕರ** : ದೇವತೆಗಳೇ ! ನೀವು ಇಲ್ಲಿ ಬರಲು ಏನು ಕಾರಣ ? ನೀವೆಲ್ಲರೂ ಕ್ಷೇಮವಷ್ಟೇ ?

**ಬ್ರಹ್ಮ** : ಪೂಜ್ಯನಾದ ಮಹಾದೇವನೆ, ತಾರಕಾಸುರನಿಂದ ತ್ರಸ್ತರಾಗಿದ್ದಾರೆ ಈ ಸುರ ನರ ಕಿನ್ನರ ಮೊದಲಾದ ಜನರೆಲ್ಲ. ಅವನೊಬ್ಬ ದೇವ ಶತ್ರು. ಅವನ ಸಂಹಾರ ಶಿವಪಾರ್ವತಿಯರ ಸತ್ಪುತ್ರನಿಂದಲ್ಲದೇ ಬೇರೆಯವರಿಂದ ಸಾಧ್ಯವಿಲ್ಲ. ಆದ್ದರಿಂದ ನೀನು ಈ ದೇವತೆಗಳ ಮೇಲೆ ದಯೆದೋರು. ಆ ಪರ್ವತರಾಜಕುಮಾರಿಯನ್ನು ವಿಧಿಪೂರ್ವಕವಾಗಿ ಮದುವೆಯಾಗು.''

ದೇವತೆಗಳ ಈ ಪ್ರಾರ್ಥನೆಯನ್ನು ಕೇಳಿ ಶಿವನು ನಸುನಕ್ಕು ಉತ್ತರಿಸಿದ. ''ಸುರಪುರ ನಿವಾಸಿಗಳೇ ! ನಾನು ಕಾಮನನ್ನು ಸಂಹರಿಸಿದ್ದು ನಿಮ್ಮೆಲ್ಲರಿಗೂ ನಿಷ್ಕಾಮ ಭಾವನೆ ಉಂಟಾಗಲಿ ಎಂದು. ಇದರಿಂದ ಜಗತ್ತಿಗೆ ಉಪಕಾರವೇ ಆಗಿದೆ. ಹೃದಯದಲ್ಲಿನ ಕಾಮ ಕಾಲುಷ್ಯ. ತನ್ಮೂಲಕವಾದ ಸ್ನೇಹಮೋಹ ಮುಂತಾದ ದುರ್ಗುಣಗಳೆಲ್ಲವೂ ಕಳೆದುಹೋದರೆ ನೀವೆಲ್ಲರೂ ನನ್ನಂತೆ ಶುದ್ಧಾತ್ಮರಾಗುವಿರಿ. ಇದರಿಂದ ನೀವೆಲ್ಲರೂ ಇನ್ನು ಮೇಲೆ ವಿರಕ್ತರಾಗಿ ತಪಸ್ಸಮಾಧಿಯನ್ನು ಹೊಂದಿ ಆತ್ಮಾನಂದದಲ್ಲಿ ಮಗ್ನರಾಗಿರಿ. ಕಾಮವಿದ್ದರೆ ಅದರಿಂದ ಕ್ರೋಧ, ಕ್ರೋಧದಿಂದ ಸಮ್ಮೋಹ, ಅದರಿಂದ ಸ್ಮೃತಿಭ್ರಂಶ, ಅದರಿಂದ ಬುದ್ಧಿನಾಶ ಕೊನೆಗೆ ಆತ್ಮನಾಶ.

ಇಂಥ ಅನರ್ಥ ಪರಂಪರೆಗೆ ಕಾರಣನಾದ ಕಾಮನನ್ನೇ ನಾನು ಕೊಂದುಹಾಕಿದ್ದರಿಂದ ನೀವೆಲ್ಲರೂ ದೊಡ್ಡ ವೈರಿಯನ್ನೇ ಗೆದ್ದಂತೆ. ಕಾಮಮೂಲಕವಾದ ವೈರಿಬಳಗವನ್ನೆಲ್ಲ ನೀವು ಈ ಮೂಲಕ ನಾಶಮಾಡಿದಂತಾಯ್ತು. ಆದ್ದರಿಂದ ನಿರ್ದುಷ್ಟವಾದ ನಿಷ್ಕಲ್ಮಷ ಹೃದಯದಿಂದ ಭಗವಂತನನ್ನು ಭಜಿಸಿರಿ. ಭವಬಂಧನದಿಂದ ಮುಕ್ತರಾಗಿರಿ.'' ಇವೇ ಮೊದಲಾದ ಉಪದೇಶದಿಂದ ಪರಮೇಶ್ವರನು ದೇವತೆಗಳನ್ನು ಋಷಿಗಳನ್ನು ಸಮಾಧಾನಪಡಿಸಿ ''ನಿಮ್ಮ ಮನೋಭೀಷ್ಟವನ್ನು ಸಕಾಲದಲ್ಲಿ ಈಡೇರಿಸುತ್ತೇನೆ'' ಎಂದು ಆಶ್ವಾಸನೆ ಕೊಟ್ಟು ಕಳುಹಿದ. ಇತ್ತ ಪಾರ್ವತೀದೇವಿಯ ಅವ್ಯಗ್ರಮನದ ಉಗ್ರ ತಪಸ್ಸು ಅವ್ಯಾಹತವಾಗಿ ಅವಿಚ್ಛಿನ್ನ ನಡೆಯಿತು. ಆದರೆ, ಅವಳ ತಪಸ್ಸಿನ ಉಗ್ರತೆಯಿಂದ ಉಗ್ರ ಎಂಬ ಹೆಸರಿನ ಮಹಾದೇವನ ಮನಸ್ಸು ಮಾತ್ರ ವ್ಯಗ್ರವಾಯಿತು. ಹಿಂದೆ ಪಾರ್ವತಿಯ ಸೌಂದರ್ಯಕ್ಕೆ ಸೋಲದಿರುವ ಶಿವನು ಈಗ ಅವಳ ತಪಸ್ಸಿನಿಂದ ಸೋತುಹೋದ. ಸೋತು ಬಂದ. ಚಲುವಿಕೆಯಿಂದ ಸಾಧಿಸಲಾಗದ್ದನ್ನು ತನ್ನ ತ್ಯಾಗ ಹಾಗೂ ತಪಸ್ಸಿನಿಂದ ಸಾಧಿಸಿದಳು ಆ ಮಹಾಸತಿ. ಕಠಿಣ ತಪೋನುಷ್ಠಾನದಿಂದ ವಶನಾಗಿ ಸ್ವಯಂ ಮಹಾದೇವನು ಅವಳಿದ್ದಲ್ಲಿಗೆ ಬಂದ. ಅವಳ ಭಾವವನ್ನು ಪರೀಕ್ಷಿಸುವುದಕ್ಕಾಗಿ ಬ್ರಹ್ಮಚಾರಿಯ ವೇಷದಿಂದ ಶಂಕರನು ಆಶ್ರಮದ ಬಳಿಗೆ ಬಂದು ಅವಳ ಗೆಳತಿಯರನ್ನು ಕೇಳಿದ.

**ಬ್ರಹ್ಮಚಾರಿ :** ಅಂಗನಾಮಣಿಗಳೇ ! ನಿಮ್ಮ ಮಧ್ಯದಲ್ಲಿ ಕುಳಿತ ಈ ಸರ್ವಾಂಗ ಸುಂದರಿಯು ಯಾರು? ಯಾರ ಮಗಳು? ಭೀಕರವಾದ ಈ ಗಿರಿಶಿಖರಕ್ಕೆ ಏಕೆ ಬಂದಿದ್ದಾಳೆ? ಅವಳು ಮಾಡುವ ತಪಸ್ಸಿನ ಉದ್ದೇಶವೇನು?

ಪಾರ್ವತಿಯ ಗೆಳತಿಯಾದ ಜಯಾ ಎಂಬ ಕನ್ಯಾಮಣಿಯು ಉತ್ತರಿಸಿದಳು. ''ಬ್ರಹ್ಮಚಾರಿಯೇ, ಇವಳು ನಮ್ಮ ಗೆಳತಿ. ಹಿಮಗಿರಿಯ ಮಗಳು. ಪರಮೇಶ್ವರನಾದ ಮಹಾರುದ್ರನನ್ನು ಪಡೆಯಲಿಕ್ಕಾಗಿ ಅವಳ ಈ ಘೋರತಪಸ್ಸು.'' ಜಯಾ ಎಂಬ ಸತೀ ಮೈತ್ರಿಣಿಯ ಈ ಮಾತನ್ನು ಕೇಳಿ ಅಲ್ಲಿಗೆ ಬಂದ ಬ್ರಹ್ಮಚಾರಿಯು ಗಹಗಹಿಸಿ ನಗತೊಡಗಿದ ಮತ್ತು ನುಡಿದ , ''ಸಖಿಯರೇ, ಈ ನಿಮ್ಮ ಗೆಳತಿಯು ಪಾಪ ಬಹಳ ಮುಗ್ಧೆ. ಇವಳಿಗೆ ಹಿತಾಹಿತ ಜ್ಞಾನವು ಇದ್ದಂತೆ ಕಾಣುವುದಿಲ್ಲ. ಆ ರುದ್ರನಿಗಾಗಿ ತಪಸ್ಸು ಮಾಡಬೇಕೆ? ಪ್ರಪಂಚದಲ್ಲಿ ಸರ್ವ ಅಮಂಗಳಗಳ ಸಾಕ್ಷಾತ್ ಸ್ವರೂಪನೇ ಆ ರುದ್ರ. ಕೈಯಲ್ಲಿ ತಲೆಬುರುಡೆ, ಕೊರಳಲ್ಲಿ ಮುಂಡಮಾಲೆ, ನೆಲಿಸಿರುವುದು ಸ್ಮಶಾನದಲ್ಲಿ. ಉಟ್ಟಿರುವುದು ಹುಲಿಯ ತೊಗಲು. ಹೊದ್ದಿರುವುದು ಆನೆಯ ಚರ್ಮ. ಇಂಥ ಅವಲಕ್ಷಣ ಅಮಂಗಲ ಸ್ವರೂಪನಾದ ಮಹಾದೇವನನ್ನು ಮದುವೆಯಾದರೆ ಸರ್ವಮಂಗಳೆಯಾದ ಈ ನಿಮ್ಮ ಗೆಳತಿ ಕೂಡ ಅಮಂಗಳೆಯಾಗಿ ಬಿಡುವಳು. ಈ ಶಂಭುವನ್ನು ದಕ್ಷನ ಶಾಪದಿಂದ ಬ್ರಾಹ್ಮಣರು ಯಜ್ಞದಿಂದ ಬಹಿಷ್ಕರಿಸಿದ್ದಾರೆ. ನಿಮಗೆ ಗೊತ್ತಿಲ್ಲವೆ? ಅವನ ಮೈಮೇಲಿರುವುದು ಹಾರವಲ್ಲ ಹಾವು. ಅವನ ಅಂಗಾಂಗಗಳಿಗೆ ಬಳಿದುಕೊಂಡಿದ್ದು ಅಂಗಾರವಲ್ಲ, ಸ್ಮಶಾನದ ಬೂದಿ.

ಉಟ್ಟಿದ್ದು ಪೀತಾಂಬರವಲ್ಲ ಚರ್ಮಾಂಬರ. ಅವನ ಸುತ್ತಲಿರುವವರು ಮುನಿದೇವತೆಗಳಲ್ಲ, ಭೂತ ಪ್ರೇತಗಳು. ಈ ನಿಮ್ಮ ಸಖಿಯಾದ ನಗೇಂದ್ರ ನಂದಿನಿಯು ಸುಕುಮಾರಿ, ಕೋಮಲಾಂಗಿ. ಅವನು ನಾಗಭೂಷಣ ಸ್ಮಶಾನವಾಸಿ. ಇವಳು ಸ್ಫುರದ್ರೂಪಿಣಿ. ಅವನು ವಿರೂಪಾಕ್ಷ. ಇವಳು ಸರ್ವಮಂಗಳೆ, ಅವನು ಅಮಂಗಳ ಮೂರ್ತಿ, ಇವಳು ಲೇಪಿಸಿಕೊಳ್ಳುವದು ಚಂದನ. ಅವನು ಬಳೆದುಕೊಳ್ಳುವುದು ಚಿತಾಭಸ್ಮ. ರಾಜಕುಮಾರಿಯಾದ ಈ ನಿಮ್ಮ ಗೆಳತಿಗೆ ಶಿವನಿಂದ ಏನಾಗಬೇಕಾಗಿದೆ ? ಅವಳಿಗೆ ಮದುವೆ ಮಾಡಿಕೊಳ್ಳುವದೇ ಇದ್ದರೆ ಶ್ರೇಷ್ಠ ವರಗಳಿಗೇನು ಈ ಭೂಮಿಯಲ್ಲಿ ಕ್ಷಾಮವೆ? ಶೂರಸುಂದರನಾದ ಇಂದ್ರನಿಲ್ಲವೆ? ಲಕ್ಷ್ಮೀ ಕಟಾಕ್ಷಿತನಾದ ಹರಿ ಇಲ್ಲವೆ? ಲಕ್ಷ್ಮೀಶನಾದ ಕುಬೇರನಿಲ್ಲವೆ? ವರುಣ, ವಾಯು, ಯಮಧರ್ಮ, ಅಗ್ನಿ ಮುಂತಾದ ದೇವತೆಗಳಲ್ಲಿ ಯಾರೂ ಇವಳಿಗೆ ದೊರಕಲಿಲ್ಲವೆ ಪಾಣಿಗ್ರಹಣ ಮಾಡಲಿಕ್ಕೆ ! ಅಂಥ ಮಹಾ ಮಹಾ ಶಕ್ತಿಶಾಲಿ ಐಶ್ವರ್ಯ ಸಂಪನ್ನ ತೇಜೋಭಾಸುರ ಸುರೇಶ್ವರರನ್ನೆಲ್ಲ ಬಿಟ್ಟು ಈ ರುದ್ರನ ಮೇಲೆ ನಿಮ್ಮ ಸಖಿಗೆ ಅನುರಾಗ ಅಂಕುರಿತವಾದದ್ದಾದರೂ ಹೇಗೆ ?

ಬ್ರಹ್ಮಚಾರಿಯು ಹೀಗೆ ಶಿವನಿಂದೆಯನ್ನು ಮಾಡಿ ಅವನ ಹೀನತೆಯ ಮೇಲೆ ಹಾಸ್ಯಗರ್ಭಿತವಾಗಿ ಉಪನ್ಯಾಸವನ್ನು ನಡೆಸಿದಾಗ ಪಾರ್ವತಿಯು ಸಖಿಯರ ಮಧ್ಯದಲ್ಲಿ ಕುಳಿತು ತಪಸ್ಸು ಮಾಡುತ್ತಿದ್ದಳು. ಇಷ್ಟು ಹೊತ್ತು ಕಣ್ಣು ಮುಚ್ಚಿ ತಪಸ್ಸು ಮಾಡುತ್ತಿದ್ದ ಅವಳು ಈಗ ಶಿವನಿಂದೆಯನ್ನು ಕೇಳಿ ಕಿವಿಯನ್ನೂ ಮುಚ್ಚಿಕೊಳ್ಳಬೇಕಾಯಿತು. ವಿರೂಪಾಕ್ಷನ ನಿಂದಾಶ್ರವಣ ಕ್ಷಣದಲ್ಲಿಯೇ ಅವಳ ಮನಸ್ಸಿನಲ್ಲಿಯೇ ಸಿಟ್ಟು ಉಕ್ಕೇರಿತು. ಆದರೂ ಅವಳು ಉಮ್ಮಳಿಸಿ ಬರುವ ಕೋಪಕ್ಕೆ ಸಂಯಮದ ಕಟ್ಟು ಹಾಕಿ ನಿಯಂತ್ರಿಸಿ ಗೆಳತಿಯರನ್ನು ಕುರಿತು ಹೇಳಿದಳು. "ಜಯಾ, ವಿಜಯಾ, ಪ್ರಮ್ಲೋಚಾ ಸುಲೋಚನಾ ಮುಂತಾದ ಗೆಳತಿಯರೇ ! ನಾನು ಆ ಶಿವನಿಂದಕನೊಡನೆ ಮಾತ ನಾಡುವುದಿಲ್ಲ, ನಿಮ್ಮೊಡನೆ ಹೇಳುತ್ತೇನೆ ಕೇಳಿರಿ, ನಾನು ಮಾಡಿದ ಸಂಕಲ್ಪ, ತಪಸ್ಸು ಜಪ, ತಪ, ಎಲ್ಲವೂ ಸಾರ್ಥಕ , ಯೋಗ್ಯ, ಉಚಿತ, ಶ್ಲಾಘ್ಯ, ಆದರೆ, ನೀವೆಲ್ಲರೂ ಈ ಅಪ್ರಯೋಜನಕಾರಿ ಬ್ರಹ್ಮಚಾರಿಯ ಮಾತನ್ನು ಕೇಳುತ್ತ ಕುಳಿತಿರುವಿರಲ್ಲ ! ಇದೇ ನನಗೆ ಅಶ್ಚರ್ಯವೆನಿಸುತ್ತದೆ. ಇವನಾವನೋ ಶಿವದ್ರೋಹಿ. ಬ್ರಹ್ಮಚಾರಿಯ ವೇಷ ತೆಗೆದುಕೊಂಡು ಬಂದಿದ್ದಾನೆ. ಇಂಥ ಶಿವದ್ವೇಷಿಯಿಂದ ನಮಗೇನು ಪ್ರಯೋಜನವಾಗಬೇಕಾಗಿದೆ? ಇಂಥವರ ನುಡಿಯನ್ನು ಎಂದೂ ಕೇಳಬಾರದು.

"ಯೇ ನಿಂದಕಾಶ್ಚ ಪಾಪಾಶ್ಚ ಕೃತಘ್ನಾ ವೇದದೂಷಕಾಃ ।
ವೇದಭ್ರಷ್ಟಾ ಹ್ಯಪ್ರತಿಷ್ಠಾ ಅವಾಚ್ಯಾಸ್ತೇ ಮನೀಷಿಭಿಃ ॥

ಮಹತಾಂ ನಿಂದನಂ ಶ್ರುತ್ವಾ ಯೇ ನ ಯಾಂತಿ ತ್ವರಾನ್ವಿತಾಃ ॥
ಸ್ಥಾನಾಂತರಂ ಹ್ಯಪ್ರತಿಷ್ಠಾಸ್ತೇಽಪಿ ಸ್ಯುಃ ಪಾಪಿನೋ ಜನಾಃ ॥

ದೊಡ್ಡವರನ್ನು ನಿಂದಿಸುವವರು, ವೇದಗಳನ್ನು ದೂಷಿಸುವವರೂ ಮತ್ತು ವೇದಮಾರ್ಗದಿಂದ ಭ್ರಷ್ಟರಾದವರು ಇವರು ಮೂವರೂ ಮಹಾಪಾಪಿಗಳು. ಮತ್ತು ಕೃತಘ್ನರು, ಅವರಿಗೆ ಈ ಲೋಕದಲ್ಲಿ ಸುಖವಿಲ್ಲ. ಪರಲೋಕದಲ್ಲಿ ಸ್ಥಾನವಿಲ್ಲ. ಅಂಥ ವೇದದ್ವೇಷಿಗಳೊಂದಿಗೆ ಯಾರೂ ಮಾತನಾಡಬಾರದು. ಮಹಾತ್ಮರ ನಿಂದೆಯನ್ನು ಕೇಳಿ ತಕ್ಷಣ ಅಲ್ಲಿಂದ ಎದ್ದು ಹೋಗದಿದ್ದವರು ಕೂಡ ಪಾಪಿಗಳು ಎಂದೇ ಶಾಸ್ತ್ರದ ಪರಿಗಣನೆ.'' ಪಾರ್ವತಿಯ ಈ ಬಿರುನುಡಿಗಳನ್ನು ಕೇಳಿ ವಿಜಯಾ ಎಂಬ ಮೈತ್ರಿಣಿಯು ಬ್ರಹ್ಮಚಾರಿಯನ್ನು ಕುರಿತು ಹೇಳಿದಳು.

**ವಿಜಯಾ :** ಬ್ರಹ್ಮಚಾರಿಯೇ ! ಹೋಗು ಇಲ್ಲಿಂದ. ಒಂದು ಅರೆನಿಮಿಷವೂ ಇನ್ನು ಮೇಲೆ ನೀನು ಇಲ್ಲಿ ನಿಂತುಕೊಳ್ಳಬೇಡ. ಈಗಲೇ ಇಲ್ಲಿಂದ ಹೊರಟು ಹೋಗು.'' ವಿಜಯಾ ಸಖಿಯ ಈ ನಿಷ್ಠುರ ನುಡಿಯನ್ನು ಕೇಳಿ, ತತ್ಕಾಲದಲ್ಲಿಯೇ ಅದೃಶ್ಯನಾಗಿಬಿಟ್ಟ ಆ ಬ್ರಹ್ಮಚಾರಿ ವಟು. ಯಾರಿಗೂ ಗೊತ್ತಾಗಲಿಲ್ಲ. ಅವನು ಎಲ್ಲಿಂದ ಬಂದಿದ್ದ ಎಲ್ಲಿಗೆ ಹೋದ ಎಂದು. ಪಾರ್ವತಿಯೂ, ಅವಳ ಗೆಳತಿಯರೂ, ಹೌಹಾರಿ ಆಚೀಚೆ ಹುಡುಕತೊಡಗಿದರು ಆ ಬ್ರಹ್ಮಚಾರಿಗಾಗಿ. ಅದೇ ವೇಳೆಯಲ್ಲಿ ಭಗವಾನ್ ಮಹೇಶ್ವರನು ತನ್ನ ನಿಜರೂಪದಿಂದ ಅಲ್ಲಿ ಪ್ರಕಟನಾದ. ಪಾರ್ವತಿಯು ತನ್ನ ಕಣ್ಣನ್ನು ಮತ್ತೊಮ್ಮೆ ತಾನೇ ತಿಕ್ಕಿ ನೋಡಿದಳು. ಸಾಕ್ಷಾತ್ ಪೂರ್ಣರೂಪಿ ಪರಮೇಶ್ವರ. ಇಷ್ಟು ದಿನ ತಪಸ್ಸಮಾಧಿಯಲ್ಲಿ ಹೃದಯ ಪಟಲದಲ್ಲಿ ಅಂತಃಚಕ್ಷುವಿನಿಂದ ತಾನು ಕಾಣುತ್ತಿದ್ದ ಭಗವದ್ರೂಪವು ಈಗ ಅವಳ ಬಾಹ್ಯ ಚಕ್ಷುವಿಗೆ ಗೋಚರವಾಗಿ ಕಣ್ಣೆದುರೇ ನಿಂತುಕೊಂಡಿದೆ. ಅವಳ ಬಹುದಿನದ ಕನಸು ನನಸಾಗಿತ್ತು. ಮನೋರಥ ಪೂರ್ಣಗೊಂಡಿತ್ತು. ಅವಳು ತನ್ನ ತಾವರೆಗಣ್ಣನ್ನು ತೆರೆತೆರೆದು ಎವೆ ಪಿಳುಕಿಸದೇ ಮತ್ತೆ ಮತ್ತೆ ನೋಡಿದಳು. ಅದೇ ಹರರೂಪ ಸ್ಥಿರರೂಪವಾಗಿ ದೇವದೇವೇಶ್ವರ ಪರಮೇಶ್ವರ ರೂಪದಿಂದ ತನ್ನ ಎದುರೆ ರಾರಾಜಿಸುತ್ತಿದೆ. ಹಾವಿನ ಹಾರ, ಚಂದ್ರಾಲಂಕಾರ, ಗಂಗಾಧರ, ಜಟಾಧಾರಿ, ಚರ್ಮಧಾರಿ, ಅತ್ಯಂತ ಮನೋಹಾರಿ. ಶಿವನ ಆ ಸುಸ್ವರೂಪವನ್ನು ಕಂಡು ನಖಶಿಖಾಂತವಾಗಿ ಪುಲಕಿತಗೊಂಡಳು ಅವಾಕ್ ಆಗಿ ನಿಂತುಕೊಂಡ ಪಾರ್ವತಿಯು. ಅವಾಙ್ಮುಖಿಯಾಗಿಯೇ ತನ್ನ ಇಷ್ಟ ದೇವತೆಯ ಪಾದಪಂಕಜಗಳಿಗೆ ನಮಿಸಿದಳು. ಪ್ರಸನ್ನನಾದ ಶಿವ ನುಡಿದ : ಕಲ್ಯಾಣೀ ! ವರ ಬೇಡು.''

**ಪಾರ್ವತಿ :** ಪ್ರಭೋ ನಾನು ನಿನ್ನ ಚರಣದಾಸಿ. ನೀನು ನನ್ನ ಹೃದಯದ ಸ್ವಾಮಿ. ಪರಮೇಶ್ವರ. ತಮಗೆ ನೆನಪಿದೆಯೆ ಹಿಂದಿನ ಆ ದುರಂತ ಘಟನೆ? ದಕ್ಷಯಜ್ಞದಲ್ಲಿ ನಾನು ಆತ್ಮಾರ್ಪಣೆ ಗೈದೆ. ಆ ದಾಕ್ಷಾಯಿಣಿಯೇ ಹಿಮಾಚಲದ ಹೊಟ್ಟೆಯಿಂದ ಹುಟ್ಟಿ ಹೈಮವತಿಯಾಗಿ ತಮ್ಮ ಸೇವೆಗೆ ಬಂದಿದ್ದೇನೆ. ತಮ್ಮಲ್ಲಿ ನನ್ನದು ಒಂದೇ ಬಿನ್ನಹ. ತಾವು ದೇವತೆಗಳ ದುಃಖಗಳನ್ನು ದೂರ ಮಾಡಿದಿರಿ. ಸಜ್ಜನರ ಸಂಕಟವನ್ನು ಪರಿಹರಿಸಿದಿರಿ. ತಾರಕ ಲೋಕಕಂಟಕನಾಗಿದ್ದಾನೆ. ಅದಕ್ಕಾಗಿ ನಿಮ್ಮಿಂದ ನನ್ನಲ್ಲಿ ಮಹಾಶಕ್ತಿಯ ಅವತಾರವಾಗಬೇಕಾಗಿದೆ. ತಾವು ಈಗ ಋಷಿಗಳೊಂದಿಗೆ

ತಂದೆ ಹಿಮಾಚಲನ ಹತ್ತಿರ ಹೋಗಿರಿ. ನನ್ನನ್ನು ಮದುವೆಮಾಡಿಕೊಡಲು ಕೇಳಿರಿ. ಅವನು ಖಂಡಿತವಾಗಿಯೂ ಈ ಖಂಡಪರಶು ನಿಮಗೆ ನನ್ನನ್ನು ಧಾರೆಯೆರೆದು ಕೊಡುವನು. ಹಿಂದಿನಂತೆ ಇಂದಿಗೂ ಮುಂದೂ ಎಂದೆಂದಿಗೂ ಈ ಪಾರ್ವತಿಯ ದೇಹ ಶಿವನಿಗೇ ಸಮರ್ಪಿತ. ಅವನು ಎಂದಿಗೂ ಇಲ್ಲ ಎನ್ನಲಾರ. ದೇವ ಕಾರ್ಯಸಿದ್ಧಿಗಾಗಿಯೇ ನಮ್ಮ ವಿವಾಹ. ಕೇವಲ ಆತ್ಮಸುಖಕ್ಕಾಗಿ ಅಲ್ಲ. ಆದುದರಿಂದ ನೀವು ನನ್ನ ತಂದೆಯನ್ನು ಯಾಚಿಸಿರಿ. ನನ್ನ ತಂದೆ ಮದುವೆ ಮಾಡಿ ಕೊಡುವವರೆಗೆ ನಾನು ನಿಮ್ಮ ವಶವಾಗಲಾರೆ. ನೀವು ಮೊದಲು ಹೋಗಿ ನಮ್ಮ ತಂದೆಯನ್ನು ಯಾಚಿಸಿರಿ.

**ಮಹಾದೇವ :** ನಾನು ಇಂದಿನವರೆಗೂ ಯಾರನ್ನೂ ಯಾಚಿಸಿಲ್ಲ. ಈ ಜಗತ್ತಿನಲ್ಲಿ ಯಾಚನೆಯು ಬಹುಕೆಟ್ಟದ್ದು. ಯಾಚನೆಯಿಂದ ಮನುಷ್ಯ ಲಘುವಾಗಿ ಬಿಡುವನು. ಆದ್ದರಿಂದ ನಾನು ಯಾರಿಗೂ ದೇಹಿ ಎನ್ನಲಾರೆ ." ಹೀಗೆ ಹೇಳಿ ಶಿವನು ಅಲ್ಲಿಂದ ಹೊರಟು ಹೋದನು. ಕೆಲ ಸಮಯದ ನಂತರ ಹಿಮಾಲಯನು ತನ್ನ ಪತ್ನಿ ಹಾಗೂ ಉಳಿದ ಪರ್ವತಪರಿವಾರದೊಂದಿಗೆ ಅಲ್ಲಿಗೆ ಬಂದನು. ಅವನಿಗೆ ಪಾರ್ವತಿಯು ನಡೆದ ಸಮಾಚಾರವನ್ನೆಲ್ಲ ತಿಳಿಸಿದಳು. ಅದನ್ನು ಕೇಳಿ ಹಿಮವಂತನಿಗೆ ಅತ್ಯಂತ ಸಂತೋಷವಾಯಿತು. ಸಂತೋಷನಿರ್ಭರನಾಗಿ ಅವನು ಮಗಳಿಗೆ ನುಡಿದ.

**ಹಿಮಾಲಯ :** ವತ್ಸೆ ! ನೀನು ಧನ್ಯಳು. ನಿನ್ನ ತಪಸ್ಸು ಇಂದು ಸಿದ್ಧ. ನಮ್ಮ ಸ್ವಪ್ನ ಸಾಕಾರ. ನೀನು ಇನ್ನು ತಡಮಾಡಬೇಡ. ಎಲ್ಲರನ್ನೂ ಕೂಡಿ ಮನೆಗೆ ಹೋಗೋಣ ನಡೆ." ಹೀಗೆ ಹೇಳಿ ಪಾರ್ವತಿಯನ್ನು ಕರೆದುಕೊಂಡು ಶೈಲರಾಜನು ತನ್ನ ಮನೆಗೆ ನಡೆದನು. ಆಗಲೇ ದೇವದುಂದುಭಿಗಳು ಮೊಳಗಿದವು. ಶಂಖ, ತೂರ್ಯ, ಪಣವಾನಕ ಮುಂತಾದ ಮಂಗಳ ವಾದ್ಯಗಳು ಭೋರ್ಗರೆದವು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಹತ್ತನೇ ಅಧ್ಯಾಯ ಮುಗಿದುದು.**

# ಸಪ್ತರ್ಷಿಗಳ ಆಗಮನ; ವಿವಾಹ ನಿಶ್ಚಯ. ನಿಬ್ಬಣದ ಪ್ರಸ್ಥಾನ; ವಿವಾಹ ಸಿದ್ಧತೆ;

ಅಧ್ಯಾಯ -11

**ಲೋಮಶ** : ಪರಮೇಶ್ವರನು ಪಾರ್ವತಿಯ ತಪೋವನದಿಂದ ಅದೃಶ್ಯನಾಗಿ ಕೈಲಾಸ ಪರ್ವತಕ್ಕೆ ಬಂದ. ಬಳಿಕ ಸಪ್ತರ್ಷಿಗಳನ್ನು ಬರಮಾಡಿಕೊಂಡು ಅವರಿಗೆಲ್ಲ ಪಾರ್ವತಿಯನ್ನು ವಿವಾಹವಾಗುವ ತನ್ನ ಮನೋಗತವನ್ನು ತಿಳಿಸಿದ. ''ನೀವೆಲ್ಲರೂ ಹಿಮಾಲಯನ ಬಳಿಗೆ ಹೋಗಿರಿ. ಅವನು ತನ್ನ ಮಗಳನ್ನು ನನಗೆ ಕೊಡುವಂತೆ ಅವನ ಮನಸ್ಸನ್ನು ಒಲಿಸಿರಿ.'' ಎಂದು ಹೇಳಿದ. ಶಿವನ ಆಜ್ಞೆಯನ್ನು ತಲೆಯ ಮೇಲೆ ಹೊತ್ತು ಹೈಮಾಚಲಕ್ಕೆ ಬಂದರು ಮುನಿ ಮನೀಷಿಗಳು. ಸ್ವಾಗತ ಸತ್ಕಾರಗಳು ಮುಗಿದ ಬಳಿಕ ಮಹರ್ಷಿಗಳ ಶುಭಾಗಮನದ ಕಾರಣವೇನು ಎಂದು ಕೇಳಿದ ಆ ಹಿಮವಂತ.

**ಸಪ್ತ ಋಷಿಗಳು** : "ಕೈಲಾಸಪತಿಯು ನಮ್ಮನ್ನು ನಿನ್ನ ಬಳಿಗೆ ಕಳಿಸಿದ್ದಾನೆ. ನಿನ್ನ ಮಗಳಾದ ಪಾರ್ವತಿಯನ್ನೂ ಶಿವನಿಗೆ ಮದುವೆಮಾಡಿಕೊಡು ಎಂದು ಕೇಳಲಿಕ್ಕೆ ನಾವು ಇಲ್ಲಿಗೆ ಬಂದಿದ್ದೇವೆ. ನಿನ್ನ ಮಗಳನ್ನು ನಮಗೆ ತೋರಿಸು.'' ಋಷಿಗಳ ಅಪೇಕ್ಷೆಯಂತೆ ಪಾರ್ವತಿಯನ್ನು ಅಲ್ಲಿಗೆ ಕರೆದುಕೊಂಡು ಬಂದು ಮುನಿಗಳಿಗೆ ತೋರಿಸಿ ನಗುತ್ತ ಹೇಳಿದನು. ''ಇವಳೇ ನನ್ನ ಮಗಳು ಪಾರ್ವತಿ. ಇವಳನ್ನು ಶಂಕರನಿಗಾಗಿ ನೀವು ಕೇಳಲು ಬಂದಿದ್ದೀರಿ. ಇದಕ್ಕೂ ಮೊದಲು ನಾನು ನಿಮ್ಮನ್ನು ಒಂದು ವಿಷಯದಲ್ಲಿ ಕೇಳಬೇಕಾಗಿದೆ. ಶಂಕರನು ಮಹಾತಪಸ್ವಿ ಅಷ್ಟೇ ತೇಜಸ್ವಿ ಪರಮ ವೈರಾಗ್ಯ ಸಂಪನ್ನ. ಹೆಣ್ಣಿನೊಡನೆ ಹರನಿಗೆ ಸಂಪರ್ಕವನ್ನು ಕಲ್ಪಿಸಲೆಂದು ಬಂದ ಕಾಮನನ್ನೇ ಶಿವನು ಸುಟ್ಟು ಹಾಕಿದ, ಇಂಥ ವೈರಾಗ್ಯ ಮೂರ್ತಿಯಾದ ಶಂಕರನು ಈಗ ವಿವಾಹೋತ್ಸುಕನಾದದ್ದು ಹೇಗೆ? ಮೇಲಾಗಿ ಈ ಶಿವನಿಗೆ ಮನೆ ಮಾರುಗಳು ಇಲ್ಲ. ಐಶ್ವರ್ಯವಿಲ್ಲ. ಸ್ಮಶಾನದಲ್ಲಿ ವಾಸಿಸುವವನು. ಅವಧೂತನಾಗಿ ಎಲ್ಲೆಡೆಗೆ ಅಲೆದಾಡುವನು. ಮೇಲೆ ಅತ್ಯಂತ ವಿರಕ್ತನು. ಇಂಥವರಿಗೆಲ್ಲ ಕನ್ಯೆಯನ್ನು ಕೊಡಬಾರದೆಂದು ಶಾಸ್ತ್ರವಚನವಿದೆ.

**''ಅತ್ಯಾಸನ್ನೇ ಚಾತಿದೂರೇ ಅತ್ಯಾಢ್ಯೇ ಧನವರ್ಜಿತೇ ।**
**ವೃತ್ತಿಹೀನೇ ಚ ಮೂರ್ಖೇ ಚ ಕನ್ಯಾದಾನಂ ನ ಶಸ್ಯತೇ**

**ಮೂಢಾಯ ಚ ವಿರಕ್ತಾಯ ಆತ್ಮಸಂಭಾವಿತಾಯ ಚ ।**
**ಆತುರಾಯ ಪ್ರಮತ್ತಾಯ ಕನ್ಯಾದಾನಂ ನ ಕಾರಯೇತ್ ॥**

ತೀರ ಹತ್ತರದಲ್ಲಿದ್ದವನಿಗೆ ಕನ್ಯೆಯನ್ನು ಕೊಡಬಾರದು. ಅತೀ ಪರಿಚಯದಿಂದ ತಿರಸ್ಕಾರ ಹುಟ್ಟುವ ಸಂಭವ. ಬಹುದೂರ ದೇಶದಲ್ಲಿದ್ದವನಿಗೂ ಕನ್ಯೆಯನ್ನು ಕೊಡಬಾರದು. ಹೊತ್ತು ವೇಳೆ ಬಂದಾಗ ಮಮತೆಯ ಮಗಳನ್ನು ಕರೆಯಲು ತಾವೇ ಹೋಗಲೂ ಬಹಳೇ ಅನಾನುಕೂಲ. ಅತೀ ಶ್ರೀಮಂತನಿಗೂ ಕನ್ಯೆಯನ್ನು ಕೊಡಬಾರದು. ಅಂಥ ಶ್ರೀಮಂತರ ಜೊತೆ ಸಂಬಂಧ ಬೆಳೆಸಿದರೆ ಬಡವರ ಮನೆಯ

ಕನ್ಯೆ ಎಂದು ಹೀಯಾಳಿಸುವರು. ಕಡುಬಡವರಿಗೂ ಕನ್ಯೆಯನ್ನು ಕೊಡಕೂಡದು. ಹೊಸ ದ್ರವ್ಯವನ್ನು ಗಳಿಸದಿರುವ ವೃತ್ತಿಹೀನನಿಗೆ ಕನ್ಯಾದಾನವ ಮಾಡಬಾರದು. ಏನಿದ್ದರೂ ಮೂರ್ಖನಿಗಂತೂ ಮೊದಲು ಮಗಳನ್ನು ಕೊಡಕೂಡದು. ಇದರಂತೆ ಸಂಸಾರದಲ್ಲಿ ಜಿಗುಪ್ಸೆಗೊಂಡ ವಿರಕ್ತನಿಗೆ ಮಗಳನ್ನು ಕೊಟ್ಟು ಏನು ಪ್ರಯೋಜನ ! ಹಾಗೂ ಕನ್ಯೆಯನ್ನು ಅಹಂಕಾರದಿಂದ ಕೊಬ್ಬಿದವರಿಗೆ ಧಾರೆ ಎರೆದು ಕೊಡಬಾರದು. ರೋಗಿಷ್ಠನಿಗೆ ಮದುವೆ ಮಾಡಿ ಉಪಯೋಗವಿಲ್ಲ. '' ಹೀಗೆ ಶಾಸ್ತ್ರಕಾರರ ವಚನವಿದೆ. ಮುನಿಗಳೇ ! ಈಗ ನೀವೇ ಈ ಎಲ್ಲ ಶಾಸ್ತ್ರ ವಚನವನ್ನೂ ಕೂಲಂಕಷವಾಗಿ ವಿಚಾರಿಸಿರಿ. ಕನ್ಯಾದಾನ ವಿಷಯದಲ್ಲಿ ನಾನು ಒಂದು ನಿರ್ಣಯಕ್ಕೆ ಬರಬೇಕಾಗಿದೆ. ನೀವು ಹೇಳಿದ ವರನಾದ ಶಿವನು ವಿರಕ್ತನೂ, ತಪಸ್ವಿಯೂ ಆಗಿದ್ದಾನೆ. ಅವನಿಗೆ ನನ್ನ ಮಗಳಾದ ಪಾರ್ವತಿಯನ್ನು ಕೊಡುವುದು ಉಚಿತವಾಗುವುದೇ ?

**ಋಷಿಗಳು** : ಪರ್ವತಸಾರ್ವಭೌಮನೇ, ಗಂಗಾಧರನನ್ನು ವಿವಾಹವಾಗಬೇಕೆಂದು ನಿನ್ನ ಮಗಳು ತಪಸ್ಸನ್ನು ಮಾಡಿದ್ದಾಳೆ. ಅವಳ ಉಗ್ರತಪಸ್ಸಿಗೆ ಮೆಚ್ಚಿದ್ದಾನೆ ಆ ಮಹೇಶ್ವರ. ಪಾರ್ವತಿಯನ್ನೇ ವಿವಾಹವಾಗಬೇಕೆಂದು ನಿರ್ಧರಿಸಿ ನಮ್ಮನ್ನು ನಿನ್ನೆಡೆಗೆ ಕಳಿಸಿ ಕೊಟ್ಟಿದ್ದಾನೆ. ಅವರಿಬ್ಬರೂ ಪರಸ್ಪರ ಅನುರಕ್ತರಾಗಿದ್ದಾರೆ. ಅಂದ ಬಳಿಕ ವೈರಾಗ್ಯದ ಮಾತೆಲ್ಲಿ ಬಂತು ? ಶಿವನ ಮಹಾಮಹಿಮೆಯನ್ನು ನೀನು ಅರಿಯಲಾರೆ, ಅದಕ್ಕಾಗಿ ಸತಿ ಪಾರ್ವತಿಯನ್ನು ಕೊಡಲು ಹಿಂಜರಿಯುತ್ತಿರುವೆ. ಈ ವಿಷಯದಲ್ಲಿ ಮುನಿಮಂಡಲದವರಾದ ನಮ್ಮ ಮಾತನ್ನು ಕೇಳು. ಈ ಮೇನಾ ಕುಮಾರಿಯನ್ನು ಆ ಮಹಾದೇವನಿಗೆ ವಿಧಿಪೂರ್ವಕವಾಗಿ ಧಾರೆ ಎರೆದು ಕೊಡು, ಈ ಗಿರಿಜೆ ಆ ಗಿರೀಶನನ್ನು ಕೈ ಹಿಡಿದು ಕೃತಾರ್ಥಳಾಗಲಿ.'' ಮಹಾತ್ಮರಾದ ಮುನೀಶ್ವರರ, ಈ ಮಾತನ್ನು ಕೇಳಿ ಆ ಪರ್ವತೇಶ್ವರನು ಮತ್ತೂ ವಿಚಾರಣೆಗೆ ಒಳಗಾದನು. ಆಗಲೇ ಅವನು ತನ್ನ ಪರ್ವತಬಂಧುಗಳಾದ ಮೇರು, ಮಂದರ, ಮೈನಾಕ, ಗಂಧಮಾದನ, ನಿಷಧ ಮೊದಲಾದ ಮಹೀಧರರನ್ನು ಕರೆದು ವಿಚಾರಿಸಿದ. ಅವರೆಲ್ಲರೂ ಒಕ್ಕೊರಲಿನಿಂದ ತಮ್ಮ ಸಮ್ಮತಿಯನ್ನು ಕೊಟ್ಟರು, ಈ ಸಂದರ್ಭದಲ್ಲಿ ಹಿಮವಂತನ ಮನದನ್ನೆಯಾದ ಮೇನಾದೇವಿಯು ತನ್ನ ಪತಿಯನ್ನು ಉದ್ದೇಶಿಸಿ ನುಡಿದಳು.

**ಮೇನಾದೇವಿ** : ನಾಥ, ಈಗ ನಿಮ್ಮ ನಿಮ್ಮಲ್ಲಿ ವಿಚಾರವಿನಿಯಮದಿಂದ ಏನು ಲಾಭ? ನಮ್ಮ ಹೊಟ್ಟೆಯಿಂದ ಆ ಪಾರ್ವತಿಯು ಹುಟ್ಟಿದಂದೇ ನಿಶ್ಚಯವಾಗಿ ಬಿಟ್ಟದೆ ಅವಳು ಮಹೇಶನ ಮಡದಿಯೆಂದು. ಇವಳು ಹುಟ್ಟಿದ್ದು ದೇವತಾಕಾರ್ಯಕ್ಕಾಗಿ. ಪರಮೇಶ್ವರನ ಪಾಣಿಗ್ರಹಣಕ್ಕಾಗಿಯೇ ಅವಳು ಅವತಾರ ಮಾಡಿದ್ದು. ಏನಿದ್ದರೂ ಅವಳ ಜೀವ ಶಿವಾರ್ಪಿತ. ಅವಳ ಬದುಕು ಆ ಮಹಾದೇವನಿಗಾಗಿಯೇ ಮೀಸಲು. ಶಂಕರನ ಹೊರತು ಅವಳು ಬೇರೆ ಯಾರನ್ನೂ ಮದುವೆಯಾಗಲಾರಳು. ಶಿವನಿಗಾಗಿ ಈ ನಮ್ಮ ಮಗಳು ಚಿಕ್ಕ ವಯಸ್ಸಿನಲ್ಲಿಯೇ ಘೋರತಪಸ್ಸನ್ನು ಆಚರಿಸಿದ್ದಾಳೆ.

ಇದರಿಂದ ಆ ರುದ್ರದೇವನು ಪ್ರಸನ್ನನಾಗಿದ್ದಾನೆ. ತಾನಾಗಿಯೇ ಅವಳನ್ನು ಮದುವೆಯಾಗುವದಾಗಿ ವಚನ ಇತ್ತಿದ್ದಾನೆ. ಅದಕ್ಕಾಗಿ ಈಗ ಮಹಾನುಭಾವರಾದ ಈ ಸಪ್ತರ್ಷಿಗಳನ್ನು ಕಳಿಸಿಕೊಟ್ಟಿದ್ದಾನೆ. ಈ ಶಿವ-ಪಾರ್ವತಿಯರ ವಿವಾಹ ದೇವತಾ ಕಾರ್ಯ. ಇದು ದೇವತಾಸಂಕಲ್ಪವಾದ್ದರಿಂದ ನಡೆದೇತೀರುತ್ತದೆ. ಈ ಶಿವಶಕ್ತಿಯರ ಮಿಲನರೂಪ ಮಹಾಕಾರ್ಯದಲ್ಲಿ ನಾವು ನಿಮಿತ್ತ ಮಾತ್ರರು. ಅದಕ್ಕೆ "ಅಸ್ತು" ಎಂದು ಪುಣ್ಯಭಾಗಿಗಳಾಗೋಣ. ಇದರಲ್ಲಿ ವಿಚಾರಮಾಡುವುದೇನು ? ಯಾರನ್ನು ಏನು ಕೇಳುವುದು?" ಶೈಲೇಂದ್ರನಿಗೆ ತನ್ನ ಮಡದಿ ಮೇನಾಮಹಿಳೆಯು ನುಡಿದ ಮಾತನ್ನು ಕೇಳಿ ಅತ್ಯಂತ ಆನಂದವಾಯಿತು. ಅವನು ಸಪ್ತರ್ಷಿಗಳನ್ನು ಕುರಿತು ಶಿವಪಾರ್ವತಿ ವಿವಾಹಕ್ಕೆ ತನ್ನ ಸಾನಂದ ಸಮ್ಮತಿಯನ್ನು ತಿಳಿಸಿದ. ಸಕಾಲದಲ್ಲಿ ಬಂದು ಪಾರ್ವತಿಯ ಪಾಣಿಗ್ರಹಣವನ್ನು ವಿಧಿಪೂರ್ವಕವಾಗಿ ಮಾಡಿಕೊಳ್ಳಬೇಕೆಂದು ಮಹಾದೇವನಿಗೆ ಹೇಳಿ ಕಳಿಸಿದ.

ಬ್ರಹ್ಮರ್ಷಿಗಳೆಲ್ಲರೂ ಚಂದ್ರಶೇಖರನಿಗೆ ಈ ಆನಂದದ ಸಂದೇಶವನ್ನು ತಂದು ಮುಟ್ಟಿಸಿದರು. "ಮಹೇಶ್ವರ, ಆ ಗಿರಿರಾಜನು ತನ್ನ ನಂದಿನಿಯಾದ ಪಾರ್ವತಿಯನ್ನು ನಿನಗೆ ಮದುವೆ ಮಾಡಿಕೊಡುವನು. ಅದರಲ್ಲಿ ಸಂದೇಹವೇ ಇಲ್ಲ. ನೀನು ನಿನ್ನ ಎಲ್ಲ ಭಕ್ತಪರಿವಾರವನ್ನೂ ದೇವತೆಗಳನ್ನೂ ಕರೆದುಕೊಂಡು ಹಿಮಪ್ರಸ್ಥಕ್ಕೆ ಪ್ರಯಾಣ ಮಾಡು."

**ಪರಮೇಶ್ವರ** : ಮುನಿಗಳೇ ! ವಿವಾಹವು ಹೇಗೆ ಚೆನ್ನಾಗುವದು? ಯಾರು ಯಾರನ್ನು ನಾನು ಈ ಮದುವೆಯ ಮಂಗಳ ಮಹೋತ್ಸವಕ್ಕೆ ಆಮಂತ್ರಿಸಬೇಕು? ಇದೆಲ್ಲವನ್ನು ನನಗೆ ತಿಳಿಸಿರಿ.

**ಋಷಿಗಳು** : ದೇವದೇವನೇ ! ಎಲ್ಲರಿಗಿಂತ ಮೊದಲು ಖಗವಾಹನನಾದ ಭಗವಾನ್ ಶ್ರೀ ಹರಿಯನ್ನು ಇಲ್ಲಿಗೆ ಬರಮಾಡು. ಅವನೊಬ್ಬನಿದ್ದರೆ ಎಲ್ಲ ಕಾರ್ಯವೂ ಮಂಗಳವಾಗಿ ನೆರವೇರುವುದು. ಅದರಂತೆ ಉಳಿದ ದೇವತೆಗಳಾದ ಇಂದ್ರ, ಚಂದ್ರ, ವಾಯು, ವರುಣ, ಯಮ, ಕುಬೇರ, ದಶದಿಕ್‌ಪಾಲಕರು, ಅಷ್ಟ ವಸುಗಳು, ಮರದ್ಗುಣಗಳು, ದೇವತಾಗಣಗಳು, ಪ್ರಮಥಗಣಗಳು, ಎಲ್ಲರನ್ನೂ ಬರಮಾಡಿಸು.

**ಶಂಕರ** : ನಾರದರೇ, ಮೊದಲು ನೀವು ವೈಕುಂಠಕ್ಕೆ ಹೋಗಿರಿ. ಶ್ರೀ ಹರಿ ಕೂಡಲೇ ಲಕ್ಷ್ಮೀದೇವಿಯೊಂದಿಗೆ ಗರುಡಾರೂಢನಾಗಿ ಇಲ್ಲಿಗೆ ಬರಲು ಹೇಳಿರಿ. ಹಾಗೆಯೇ ಬರುವಾಗ ಸತ್ಯಲೋಕದ ಬ್ರಹ್ಮನನ್ನೂ, ಸುರಲೋಕದ ಇಂದ್ರನನ್ನೂ, ಉಳಿದೆಲ್ಲ ದೇವಾಧಿ ದೇವತೆಗಳನ್ನೂ ನನ್ನ ಪರವಾಗಿ ಆಮಂತ್ರಿಸಿ ಬೇಗ ಬರಲು ಹೇಳಿರಿ." ವೀಣಾ ವಿನೋದ ರಸಿಕನಾದ ನಾರದಮುನಿಯು ಈಶ್ವರನ ಮಾತನ್ನು ತಲೆಯ ಮೇಲೆ ಹೊತ್ತು ಮೊದಲು ಪರಂಧಾಮ ಎನಿಸಿದ ವೈಕುಂಠಕ್ಕೆ ಪ್ರಯಾಣಿಸಿದನು. ಅಲ್ಲಿ ದಿವ್ಯ ಪೀಠದಲ್ಲಿ ವಿರಾಜಮಾನನಾಗಿದ್ದ ಭಗವಂತನಾದ ಲಕ್ಷ್ಮೀಕಾಂತ.

ದದರ್ಶ ದೇವಂ ಪರಮಾಸನೇ ಸ್ಥಿತಂ ।
ಶ್ರಿಯಾ ಚ ದೇವ್ಯಾ ಪರಿಷೇವ್ಯಮಾಣಂ ॥

ಚತುರ್ಭುಜಂ ದೇವವರಂ ಮಹಾಪ್ರಭುಂ ।
ನೀಲೋತ್ಪಲ ಶ್ಯಾಮತನುಂ ವರೇಣ್ಯಮ್ ॥

ಮಹಾರ್ಹರತ್ನ ಪ್ರಭಚಾರುಕುಂಡಲಂ ।
ಮಹಾಕಿರೀಟೋತ್ತಮರತ್ನ ಭಾಸ್ವರಮ್ ॥

ಸುವೈಜಯಂತ್ಯಾ ವನಮಾಲಯಾನ್ವಿತಂ ।
ಸನಾತನಂ ತಂ ಭುವನೈಕಸುಂದರಮ್ ॥

ಉಚ್ಚಾಸನದ ಮೇಲೆ ಆಸೀನನಾದ ಆ ಶ್ರೀಹರಿಯನ್ನು ಲಕ್ಷ್ಮೀ ದೇವಿಯು ಭಕ್ತಿಯಿಂದ ಸೇವಿಸುತ್ತಿದ್ದಳು. ನಾಲ್ಕು ತೋಳುಗಳು, ಶ್ಯಾಮಸುಂದರವಾದ ಶರೀರ, ಬೆಲೆಬಾಳುವ ರತ್ನಕುಂಡಲ, ತಲೆಯ ಮೇಲೆ ಮಣಿಮಯ ಕಿರೀಟ, ಕೊರಳಲ್ಲಿ ವೈಜಂತಿಯ ಮಾಲೆ, ವಕ್ಷಸ್ಥಳದಲ್ಲಿ ವನಮಾಲೆ, ಅಂಗಾಂಗಗಳಲ್ಲಿ ಕನ್ನೆದಿಲೆಯ ಕಾಂತಿ, ಆ ಶ್ರೀಹರಿಯು ತ್ರಿಭುವನ ಸುಂದರನಾಗಿ ಕಾಣುತ್ತಿದ್ದ. ನಾರದಮುನಿ ಆ ಭಗವಂತನನ್ನು ಕಂಡಕೂಡಲೇ ಸಾಷ್ಟಾಂಗ ವಂದನೆಗೈದ. ಕುಶಲ ಪ್ರಶ್ನೆಗಳಾದ ಬಳಿಕ ಕೈಲಾಸಪತಿಯ ಕಲ್ಯಾಣಮಹೋತ್ಸವದ ಸಂದೇಶವನ್ನು ಅರುಹಿದ. ''ನಿನ್ನ ಲಲನಾಮಣಿಯಾದ ಲಕ್ಷ್ಮೀದೇವಿಯೊಡನೆ ಬೇಗನೇ ಶಂಕರನ ಮದುವೆಗೆ ಬರಬೇಕು. ''ವರಪಕ್ಷದಲ್ಲಿ ನಿಂತುಕೊಂಡು ನೀನೇ ಈ ವಿವಾಹಕಾರ್ಯವನ್ನು ವಿಜೃಂಭಣೆಯಿಂದ ನೆರವೇರಿಸಬೇಕು'' ಎಂದು ವಿನಂತಿಸಿದ್ದಾನೆ. ಆ ವಾಮದೇವ''. ನಾರದನ ನುಡಿಯನ್ನು ಕೇಳಿ ಹೊರಟೇ ಬಿಟ್ಟ ಹರಿ ತನ್ನ ಪಾರ್ಷದರೊಂದಿಗೆ. ತನ್ನ ವಾಹನನಾದ ಗರುಡನನ್ನು ಸಿರಿದೇವಿಯೊಂದಿಗೆ ಆರೋಹಣ ಮಾಡಿ ಆಕಾಶದಲ್ಲಿ ಹಾರಿಬಂದ ಶ್ರೀ ಕಾಂತ ಶ್ರೀಕಂಠ ಸನ್ನಿಧಿಗೆ. ಆ ಅರವಿಂದಾಕ್ಷನ ಆಗಮನ ಕಂಡು ಆನಂದದಿಂದ ಎದ್ದು ನಿಂತ ಶಂಕರ. ಸಂತೋಷದಿಂದ ಸ್ವಾಗತ ನೀಡಿ ಪ್ರೇಮದಿಂದ ಬಿಗಿದಪ್ಪಿದ. ಹರಿಹರರು ಏಕಾಸನದಲ್ಲಿ ಮಂಡಿಸಿದರು. ಪ್ರೀತಿಯಿಂದ ಪರಸ್ಪರ ಯೋಗಕ್ಷೇಮಗಳನ್ನು ಪ್ರಶ್ನಿಸಿದರು. ಅನಂತರ ಪರಮೇಶ್ವರನು ಪ್ರಸನ್ನಚಿತ್ತದಿಂದ ನುಡಿದನು.

**ಪರಮೇಶ್ವರ :** ''ಮಹಾವಿಷ್ಣುವೇ ! ಹಿಮಗಿರಿಯ ಮಗಳಾದ ಪಾರ್ವತಿಯು ನನಗಾಗಿ ಘೋರ ತಪವನ್ನು ಆಚರಿಸಿದಳು. ಆ ತಪಸ್ಸಿನಿಂದ ನಾನು ಸಂತುಷ್ಟನಾದೆ. ಈಗ ನಾನು ಅವಳ ಪಾಣಿಗ್ರಹಣ ಮಹೋತ್ಸವಕ್ಕೆ ಸಿದ್ಧನಾಗಿದ್ದೇನೆ. ಈಗ ಎಲ್ಲ ದೇವತೆಗಳೊಂದಿಗೆ ಆ ಹಿಮಾಚಲಕ್ಕೆ ನಾವೆಲ್ಲರೂ ನಿಬ್ಬಣದಿಂದ ಹೊರಡಬೇಕು.''

ಹೀಗೆ ಶಿವನು ನುಡಿಯುವಷ್ಟರಲ್ಲಿಯೇ ಶಾರದೆಯೊಂದಿಗೆ ಚತುರ್ಮುಖನು ಆಗಮಿಸಿದನು. ಅವನ ಹಿಂದೆಯೇ ಇಂದ್ರ ಹಾಗೂ ಇಂದ್ರಾಣೀ ದಂಪತಿಗಳು ಆವನ ಬೆನ್ನ ಹಿಂದೆಯೇ ಎಲ್ಲ ಲೋಕಪಾಲಕರು. ಅವರ ನಂತರ ಅಸಂಖ್ಯ ಸುರ, ಅಸುರ,

ನಾಗ, ಯಕ್ಷ, ವಿದ್ಯಾಧರ, ಗಂಧರ್ವ, ಅಪ್ಸರೆಯರೂ, ಮುನಿಮನುಜ ದನುಜ ಮಹರ್ಷಿ ಬ್ರಹ್ಮರ್ಷಿಗಳೂ ತಂಡ ತಂಡವಾಗಿ ಶಿವಶಕ್ತಿ ವಿವಾಹ ಮಹೋತ್ಸವಕ್ಕೆ ಆಗಮಿಸಿದರು. ಆಗ ವಿಷ್ಣು ಸಮಯೋಚಿತವಾಗಿ ನುಡಿದನು.

**ವಿಷ್ಣು :** "ಮಹಾದೇವ, ನಿನ್ನ ಈ ವಿವಾಹ ಮಹೋತ್ಸವವನ್ನು ಗೃಹ್ಯ ಸೂತ್ರೋಕ್ತ ವಿಧಿವಿಧಾನದಿಂದ ಆಚರಿಸಬೇಕು. ಅದಕ್ಕಾಗಿ ಮೊದಲು ನಾಂದೀಮುಖಶ್ರಾದ್ಧ ಮಂಟಪಸ್ಥಾಪನೆ ಮುಂತಾದ ಮಂಗಳಕಾರ್ಯಗಳೆಲ್ಲವೂ ನಡೆಯಲಿ." ವಿಷ್ಣುವಿನ ಮಾತಿನಂತೆ ಪರಮೇಶ್ವರನು ಎಲ್ಲ ಮದುವೆಯ ಪೂರ್ವಸಿದ್ಧತೆ ಮಾಡಿದನು. ಆಭ್ಯುದಯಿಕ ಶ್ರಾದ್ಧಕರ್ಮದಲ್ಲಿ ಬ್ರಹ್ಮಾದಿದೇವತೆಗಳ ಪೂಜೆಯನ್ನು ಮಾಡಲಾಯಿತು. ಅನಂತರ ನವಗ್ರಹ ಪೂಜೆಯಾಯಿತು. ಪರಮಪೂಜ್ಯರಾದ ಅತ್ರಿ, ವಶಿಷ್ಠ, ಗೌತಮ, ಭಾಗುರಿ, ಗೋಭಿಲ, ಜಮದಗ್ನಿ, ಮಾರ್ಕಂಡೇಯ, ಪರಾಶರ, ಬೃಹಸ್ಪತಿ, ಶಕ್ತಿ, ಅಗಸ್ತ್ಯ, ಚ್ಯವನ ಮುಂತಾದ ಬ್ರಹ್ಮರ್ಷಿಗಳು ಮುಂದೆ ಬಂದು ವೈವಾಹಿಕ ವಿಧಿವಿಧಾನಗಳನ್ನೆಲ್ಲ ಸುಸಂಪನ್ನಗೊಳಿಸಿದರು. ಇತ್ತ ಬ್ರಹ್ಮಾದಿದೇವತೆಗಳು ಭಗವಾನ್ ಸದಾಶಿವನಿಗೆ ಮಂತ್ರಪೂತವಾದ ಮೂರು ಕಲಶಗಳಿಂದ ಮಂಗಲಸ್ನಾನ ಮಾಡಿಸಿದರು. ಮುತ್ತೈದೆಯರು ಮುತ್ತಿನ ಆರತಿ ಎತ್ತಿದರು. ಸ್ನಾನಾನಂತರ ಸರ್ವಲೋಕ ಪಾಲಕನಾದ ಆ ಶರ್ವದೇವನು ಉತ್ತಮ ಬಟ್ಟೆಗಳನ್ನು ಉಟ್ಟುಕೊಂಡ ಬೆಲೆಬಾಳುವ ಆಭರಣಗಳನ್ನು ಧರಿಸಿದ್ದ ಮುನಿಗಳ ಆದೇಶದ ಮೇರೆಗೆ ಆನೆಯ ಮೇಲೆ ಆರೋಹಣ ಮಾಡಿದ. ಅವನ ತಲೆಯ ಮೇಲೆ ಶ್ವೇತಛತ್ರ, ಹಣೆಯ ಮೇಲೆ ಚಂದ್ರ, ಅಕ್ಕಪಕ್ಕದಲ್ಲಿ ಚಿನ್ನದ ಹಿಡಿಕೆಯ ಚಾಮರಗಳು, ಸುತ್ತು ಮುತ್ತಲೂ ವೇದಪಾರಾಯಣ ಮಾಡುವ ಮುನಿ ಮಹರ್ಷಿಗಳು, ಗಜಾರೂಢನಾದ ಶಿವನ ಮುಂಭಾಗದಲ್ಲಿ ಬ್ರಹ್ಮ, ವಿಷ್ಣು, ಇಂದ್ರ ಮತ್ತು ಲೋಕಪಾಲಕರು, ದಿಕ್‌ಪಾಲಕರು ಮುನಿಮನುಜ ವೃಂದಾರಕ ವೃಂದದವರು ಮಂದಗತಿಯಿಂದ ನಡೆದಿದ್ದರು.

ಈ ಮೆರವಣಿಗೆಯ ಮುಂಭಾಗದಲ್ಲಿ ಅಪ್ಸರೆಯರ ನರ್ತನ, ಗಂಧರ್ವರ ಗಾಯನ, ಇದರ ಮುಂದೆ ಶಂಖ, ಭೇರಿ ಮೃದಂಗ, ಪಟಹ, ಅನಕ, ಗೋಮುಖ, ಮುಂತಾದ ಬಾಜಾ ಬಜಂತ್ರಿಗಳ, ಮಂಗಳವಾದ್ಯಗಳ ಭೋರ್ಗರೆತ, ಹಿಂಭಾಗದಲ್ಲಿ ಅರುಂಧತಿ, ಅನುಸೂಯಾ, ಸಾವಿತ್ರಿ ಮೊದಲಾದ ಅನೇಕ ಮುತ್ತೈದೆಯರಿಂದಲೂ ಮಾತೃಕಾಗಣದಿಂದಲೂ ಕೂಡಿಕೊಂಡು ಮಹಾಲಕ್ಷ್ಮೀ ದೇವಿಯು ಆ ಶೋಭಾಯಾತ್ರೆಗೆ ಒಂದು ಹೊಸ ಕಳೆಯನ್ನು ತಂದುಕೊಟ್ಟಿದ್ದಳು. ಇವರೆಲ್ಲರ ನಡುವೆ ಗಜಾರೂಢನಾಗಿ ತನ್ನ ಶುಭ್ರಕಾಂತಿಯಿಂದ ದೇದೀಪ್ಯಮಾನನಾಗಿ ದಿಙ್ಮುಖಗಳನ್ನೆಲ್ಲ ಬೆಳಗುತ್ತ ನಡೆದಿದ್ದ ಲೋಕಕ್ಕೆಲ್ಲ ಕ್ಷೇಮಂಕರನಾದ ಭಗವಾನ್ ಶಂಕರ. ಸಾಕ್ಷಾತ್ ವಾಯುದೇವನು ಆ ಶಿವನಿಗೆ ಗಾಳಿ ಬೀಸುತ್ತಿದ್ದ. ಚಂದ್ರನು ಛತ್ರಿಯನ್ನು ಎತ್ತಿ ಹಿಡಿದಿದ್ದ. ಸೂರ್ಯನು ಮುಂಭಾಗದಲ್ಲಿ ಸ್ವಯಂ ತಾನೇ ಆರದ ದೀಪವಾಗಿ ಬೆಳಕು ಬೀರುತ್ತಿದ್ದ. ಸುರಸಾಮ್ರಾಟನಾದ ದೇವೇಂದ್ರನು ಕೈಯಲ್ಲಿ ಬೆತ್ತ ಹಿಡಿದು ವರನ ವಾಹನವಾದ ಐರಾವತಕ್ಕೆ ದಾರಿ ಬಿಡಿಸುತ್ತಿದ್ದ. ಮುಗಿಲಿನಿಂದ ದೇವತೆಗಳು

ಮಹೇಶ್ವರನ ಮೇಲೆ ಮಂದಾರ ಪುಷ್ಪ ವೃಷ್ಟಿಯನ್ನು ಮಾಡುತ್ತಲಿದ್ದರು. ಈ ಮೆರವಣಿಗೆಯು ವಿವಾಹಮಂಟಕ್ಕೆ ಬಂದ ಕೂಡಲೇ ಶಿವನು ಗಜರಾಜನನ್ನು ಬಿಟ್ಟು ಕೆಳಗೆ ಇಳಿದ. ಅಲ್ಲಿ ಅವನಿಗೆ ವಿಶೇಷ ಪೂಜೆಯಾದ ಬಳಿಕ ಸ್ವಾಗತದಿಂದ ಯಜ್ಞ ಮಂಟಪದಲ್ಲಿ ಆ ಮಹಾದೇವನನ್ನು ಕರೆದುಕೊಂಡು ಬಂದರು. ಅಲ್ಲಿ ಮಂಗಲ ಪೀಠದ ಮೇಲೆ ಕೂಡಿಸಿ ಮೇನಾದೇವಿಯು ಸಖಿಯರೊಡನೆ ಆರತಿ ಮಾಡಿದಳು. ಮಧುಪರ್ಕ ಮುಂತಾದ ವಿಧಿಗಳನ್ನು ಪೂರೈಸಿ ಮಹಾದೇವನನ್ನು ಅಂತರ್ವೇದಿಗೆ ಗಿರಿರಾಜನಾದ ಹಿಮಾಲಯನು ಕರೆದುಕೊಂಡು ಬಂದನು. ಆ ವೇದಿಕೆಯ ಮೇಲೆ ಮಂಗಳಸ್ನಾತಳಾದ ಗಿರಿರಾಜ ನಂದಿನಿಯು ಮುತ್ತು, ರತ್ನದ ಅನೇಕ ಆಭರಣಗಳಿಂದ ಅಲಂಕೃತಳಾಗಿ ಕುಳಿತುಕೊಂಡಿದ್ದಳು. ಅಲ್ಲಿಯೇ ಶಂಕರನನ್ನು ಕೂಡಿಸಿ ಗರ್ಗಾಚಾರ್ಯರು ಓಂಕಾರವನ್ನು ಉಚ್ಚರಿಸಿ ಮಂಗಲ ಮೂಹೂರ್ತವು ಸನ್ನಿಹಿತ ವಾಗಿದೆಯೆಂದು ನಿವೇದನಗೈದರು. ಆಚಾರ್ಯ ಗರ್ಗರ ಆದೇಶದಂತೆ ಗಿರಿರಾಜ ದಂಪತಿಗಳು ಕನ್ಯಾದಾನ ಮಾಡಿಕೊಡಲು ಉದ್ಯುಕ್ತರಾದರು, ಪಾರ್ವತಿಯು ಪುರೋಹಿತರ ಹೇಳಿಕೆಯ ಮೇರೆಗೆ ತನ್ನ ಹಸ್ತಾಂಜಲಿಯಲ್ಲಿ ರತ್ನಾಕ್ಷತೆಗಳನ್ನು ತೆಗೆದುಕೊಂಡು ಶಿವನ ತಲೆಯ ಮೇಲೆ ತೂರಿದಳು. ಮೊಸರು ಮತ್ತು ಅಕ್ಷತೆ ಹಾಗೂ ಕುಶೋದಕದಿಂದ ಶಿವಪೂಜೆ ಮಾಡಿದಳು. ಅನಂತರ ಕನ್ಯಾದಾನ ಮಾಡಿಕೊಡುವುದಕ್ಕಿಂತ ಮೊದಲು ಹಿಮಗಿರಿಯು ಮಹಾದೇವನನ್ನು ಕುರಿತು ''ಮಹಾನುಭಾವನೆ ! ನಿಮ್ಮ ಕುಲಗೋತ್ರಗಳನ್ನು ಹೇಳಿರಿ'' ಎಂದು ಕೇಳಿದನು ಅದಕ್ಕೆ ಮಹಾದೇವನು ಏನೂ ಉತ್ತರ ಕೊಡಲಿಲ್ಲ. ಅದನ್ನು ನೋಡಿ ನಾರದ ನಕ್ಕುಬಿಟ್ಟ. ತನ್ನ ತಂಬೂರಿಯ ತಂತಿಯನ್ನು ಮೀಟುತ್ತ ಅದರಿಂದ ಮಧುರನಾದ ತರಂಗಗಳನ್ನು ಹೊರಡಿಸಿದ. ಹಿಮಾಚಲನ ಮುಖದಲ್ಲಿ ಮುನಿಸು. ''ನಾರದ ! ನಿಲ್ಲಿಸಿ ನಿಮ್ಮ ಈ ವೀಣಾವಾದನವನ್ನು'' ಎಂದು ಅಬ್ಬರಿಸಿದ.

**ನಾರದ** : ''ಗಿರಿರಾಜ ! ನೀನು ಗೋತ್ರ ಪ್ರವರಗಳನ್ನು ಹೇಳಬೇಕೆಂದು ನೇರವಾಗಿ ನಾಗಭೂಷಣನಾದ ಈ ಶಿವನನ್ನು ಕೇಳಿದೆ. ಅವನಂತೂ ಏನೂ ಉತ್ತರ ಕೊಡಲಿಲ್ಲ. ಅದಕ್ಕಾಗಿ ನಾನಾದರೂ ನಿನ್ನ ಮಾತಿಗೆ ಉತ್ತರ ಕೊಡಬೇಕೆಂದು ಈ ವೀಣಾನಾದವನ್ನು ಹೊರಡಿಸುತ್ತಿದ್ದೇನೆ. ಈ ಪರಮೇಶ್ವರನ ಕುಲಗೋತ್ರವೆಲ್ಲವೂ ನಾದವೇ ಆಗಿದೆ. ವಾಸ್ತವವಾಗಿ ವಿಚಾರ ಮಾಡಿದರೆ, ಈ ಶಿವನಿಗೆ ಯಾವ ಕುಲವೂ ಇಲ್ಲ, ಯಾವ ಗೋತ್ರವೂ ಇಲ್ಲ, ಎಲ್ಲ ಕುಲಗೋತ್ರದವರಿಗೂ ಸದ್ಗತಿಯನ್ನು ನೀಡುವ ಶ್ರೇಷ್ಠ ದೈವತವೇ ಶಿವ. ಜಗತ್ತನ್ನೇ ಸೃಷ್ಟಿಸುವ ಈ ಪರಶಿವನನ್ನು ಸೃಷ್ಟಿಸುವ ತಂದೆ ಯಾರಿದ್ದಾರೆ? ಇವನಿಗೆ ತಂದೆ ತಾಯಿಯಾಗಲೀ ಕುಲಗೋತ್ರವಾಗಲೀ ಇಲ್ಲ. ಈ ಶ್ರೀಕಂಠನು ನಾದಲೀನ. ಇವನಲ್ಲಿ ನಾದ ಪ್ರತಿಷ್ಠಿತ. ನಾದದಲ್ಲಿ ಈ ಶಿವನು ಪ್ರತಿಷ್ಠಿತ, ನಾದಮಯನಾದ ಶಂಕರನು ನಾದದಿಂದಲೇ ಉಪಲಬ್ಧನಾಗುತ್ತಾನೆ. ಇದನ್ನೆಲ್ಲ ತಿಳಿದೇ ನಾನು ಈಗ ವೀಣಾನಾದವನ್ನು ಮಾಡಿದೆ. ಬ್ರಹ್ಮ ದೇವನೂ ಅರಿಯಲಾರ ಇವನ ಕುಲ ಯಾವುದೆಂಬುದನ್ನು.

ಅನಂತರ ಕೈಲಾಸ ಪರ್ವತದಿಂದ ವರಪಕ್ಷದ ನಿಬ್ಬಣ ಹೊರಟಿತು. ಮುಂಭಾಗದಲ್ಲಿ ಬಂಗಾರದ ಕಳಶವನ್ನು ತಲೆಯ ಮೇಲಿಟ್ಟುಕೊಂಡು ಚಂಡೀ ದೇವಿಯು ಹೊರಟಳು. ಅವಳ ಹಿಂದೆ ಶಿವಗಣ, ಅವರ ಹಿಂದೆ ಇಂದ್ರಾದಿ ದೇವತೆಗಳು ಲೋಕಪಾಲಕರು, ಮುನಿಮಹರ್ಷಿಗಳು ಹೊರಟರು. ಇವರೆಲ್ಲರ ಬೆನ್ನ ಹಿಂದೆ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡಲು ಸಮರ್ಥನಾದ ಏಕೈಕ ದೇವತೆ ವಿಷ್ಣುಪರಮಾತ್ಮನು, ಲಕ್ಷ್ಮೀದೇವಿಯೊಂದಿಗೆ ಗರುಡಾರೂಢನಾಗಿ ಶಂಕರನೊಂದಿಗೆ ನಡೆದಿದ್ದನು, ಈ ಹರಿಹರರ ಅಕ್ಕಪಕ್ಕದಲ್ಲಿ ಮಹಾಮುನೀಶ್ವರರು ಚಾಮರ ಬೀಸುತ್ತಿದ್ದರು. ಹಂಸದ ಹೆಗಲ ಮೇಲೆ ಬ್ರಹ್ಮದೇವರು ಕುಳಿತುಕೊಂಡು ಮೂರ್ತಿಮಂತ ವೇದ ವೇದಾಂಗಗಳೊಂದಿಗೆ ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಇವರೆಲ್ಲರ ಮಧ್ಯದಲ್ಲಿ ದೇವದೇವೇಶ್ವರನಾದ ಋಷಿವೃಂದ ವಂದನೀಯ ಚಂದ್ರಚೂಡನು ನಂದಿಯನ್ನು ಏರಿಕೊಂಡು ಮಂದಗತಿಯಲ್ಲಿ ಚಲಿಸುತ್ತಿದ್ದನು. ಆ ಮಹಾದೇವನ ಸುತ್ತಲೂ ಮಹರ್ಷಿಗಳೂ, ಸಿದ್ಧಪುರುಷರೂ, ವೇದಘೋಷ ಮಾಡುತ್ತ ನಡೆದಿದ್ದರು. ಅತ್ತ ಹಿಮಗಿರಿಯಲ್ಲಿ ವಧೂಮಾತೆ ಮೇನಾದೇವಿಯು ತಮ್ಮ ಕುಲಪುರೋಹಿತ ಗರ್ಗಾಚಾರ್ಯರ ಆದೇಶದ ಮೇರೆಗೆ ಮದುವೆಯ ಮೊದಲು ಮಾಡಬೇಕಾದ ಮಾಂಗಲಿಕ ಕೃತ್ಯಗಳನ್ನೆಲ್ಲ ನೆರವೇರಿಸಿದಳು, ವಿಶ್ವಕರ್ಮನನ್ನು ಕರೆಸಿ ಅತ್ಯಂತ ವಿಶಾಲವೂ ದಿವ್ಯಭವ್ಯವೂ ಆದ ಸುಂದರವಾದ ವಿವಾಹಮಂಟಪವನ್ನು ನಿರ್ಮಿಸಲಾಗಿತ್ತು. ದೇವತೆಗಳ ಬಡಿಗನಾದ ವಿಶ್ವಕರ್ಮನು ತನ್ನ ಶಿಲ್ಪಕಲಾಕೌಶಲ್ಯವನ್ನೆಲ್ಲ ಉಪಯೋಗಿಸಿ ಎಲ್ಲ ದೇವತೆಗಳಿಗೂ, ಋಷಿಮುನಿಗಳಿಗೂ, ಯಕ್ಷರಾಕ್ಷಸರಿಗೂ, ಶಿವಗಣಂಗಳಿಗೂ ವಿಷ್ಣು ಪಾರ್ಷದರಿಗೂ ಉಳಿದುಕೊಳ್ಳಲು ಅನುಕೂಲವಾಗುವಂತೆ ಸ್ನಾನ, ಪೂಜೆ, ಭೋಜನ ಶಯನಾಸನಗಳಿಗೆಲ್ಲ ಸೌಕರ್ಯವಾಗುವಂತೆ ಪ್ರತ್ಯೇಕ ಪ್ರತ್ಯೇಕವಾಗಿಯೇ ಏರ್ಪಾಡನ್ನು ಮಾಡಿದ್ದನು.

ಎಲ್ಲ ದೇವತೆಗಳೂ ಅತಿ ಅದ್ಭುತವಾದ ವೈದುಷ್ಯ ನಿದರ್ಶನದಂತಿದ್ದ ಆ ಭವ್ಯ ಪ್ರಾಸಾದಗಳಲ್ಲಿ ತಮ್ಮ ಅಪರಿಮಿತ ಪರಿವಾರದೊಂದಿಗೆ ಪ್ರವೇಶಗೈದರು. ಸ್ವಯಂ ಹಿಮವಂತನು ಎಲ್ಲರನ್ನೂ ನಗೆಮೊಗದಿಂದ ಸ್ವಾಗತಿಸಿ ಅವರವರಿಗಾಗಿ ನಿರ್ಮಿಸಿಟ್ಟ ವಿಶಿಷ್ಟ ಪ್ರಕೋಷ್ಠಗಳಿಗೆ ಎಲ್ಲ ದೇವತೆಗಳನ್ನೂ, ಗಂಧರ್ವರನ್ನೂ, ಸಿದ್ಧ ದೇವತೆಗಳನ್ನೂ, ಯಕ್ಷರಕ್ಷಕರನ್ನೂ ತಂದು ಇಳಿಸಿದನು. ವರಪಕ್ಷದವರಿಗಾಗಿ ವಿಶ್ವಕರ್ಮನು ನಿರ್ಮಿಸಿದ ಆ ಭವ್ಯಭವನ ಶ್ರೇಣಿಗಳಲ್ಲಿ ವಿಷ್ಣುವಿಗಾಗಿ ನಿರ್ಮಿಸಿದ ಭವನವು ವೈಕುಂಠದಂತೆಯೇ ಒಪ್ಪುತ್ತಿತ್ತು. ಅದರಲ್ಲಿ ಆನಂದದಿಂದ ವಿಷ್ಣುವು ಲಕ್ಷ್ಮೀದೇವಿಯೊಡನೆ ತಂಗಿದ. ಸತ್ಯಲೋಕದಂತಿರುವ ಮತ್ತೊಂದು ಸುಂದರ ಸದನದಲ್ಲಿ ಸಾವಿತ್ರಿ ಗಾಯಿತ್ರಿಯರ ಜೊತೆಗೆ ಬ್ರಹ್ಮದೇವರ ಗೃಹಪ್ರವೇಶೋತ್ಸವ.

ಪ್ರತಿಕೈಲಾಸದಂತಿರುವ ಅತ್ಯಂತ ಶೋಭಾಯಮಾನವಾದ ಒಂದು ರತ್ನ ಭವನದಲ್ಲಿ ಶಿವನನ್ನು ಇಳಿಸಿದರು. ಆ ಮಹಾಮಂದಿರ ಹೆಬ್ಬಾಗಿಲಲ್ಲಿಯೇ

ಹಿಮವಂತನ ಮಡದಿಯಾದ ಮೇನಾದೇವಿಯು ಸಖಿಯರೊಂದಿಗೆ ವರನಾಗಿ ಬಂದ ಆ ಪರಮೇಶ್ವರನಿಗೆ ಆನಂದದಿಂದ ಆರತಿ ಬೆಳಗಿದಳು. ತನ್ನ ಭಾವೀ ಅಳಿಯನನ್ನು ಕಂಡು ಸಂತಸದಿಂದ ಅವಳ ದೇಹ ಪುಳಕಿತವಾಯಿತು. 'ನನ್ನ ಮಗಳು ಹೇಳಿದ್ದಕ್ಕಿಂತ ನೂರುಪಟ್ಟು ಚೆಲುವನಾಗಿದ್ದಾನೆ ಈ ನನ್ನ ಅಳಿಯ. ಮಗಳಿಗೆ ತಕ್ಕ ವರ, ಈ ಭವನಿಗೆ ನನ್ನ ಮಗಳು ಭವಾನಿಯೇ ಯೋಗ್ಯ ಕನ್ಯೆ. ಎಂದು ತನ್ನ ಮನದಲ್ಲಿಯೇ ಅಂದುಕೊಂಡಳು, ಇಂಥ ಸುಕುಮಾರ ಸುಂದರ ಶರೀರಿಯಾದ ಇಂದುಧರನಿಗಾಗಿ ನನ್ನ ಮಗಳು ಘೋರ ತಪಸ್ಸು ಮಾಡಿದ್ದು ಆಚ್ಚರಿಯೇನಲ್ಲ ಎಂದೆನಿಸಿತು ಅವಳಿಗೆ. ಅಳಿಯನಿಗೆ ಆರತಿ ಬೆಳಗಿ ಅವಸರದಿಂದ ತನ್ನ ಮನೆಗೆ ಬಂದಳು ಆ ಪರ್ವತೇಶ್ವರನ ಪತ್ನಿ. ಮನೆಗೆ ಬಂದು ಮಗಳಿಗೆ ಅಭ್ಯಂಗ ಸ್ನಾನ ಮಾಡಿಸಿದಳು. ಮಂಗಳ ಪೀಠದ ಮೇಲೆ ಮಂಡಿಸಿದಳು ಆ ಮಹಾದೇವಿ. ಹಿರಿಯರಾದ ಬ್ರಾಹ್ಮಣ ಮುತ್ತೈದೆಯರು ಆರತಿ ಬೆಳಗಿದರು. ಆ ಕಾಲದಲ್ಲಿ ಗರ್ಗಾಚಾರ್ಯರು ಅಲ್ಲಿಗೆ ಆಗಮಿಸಿ ಅಲ್ಲಿದ್ದ ಮಹರ್ಷಿಗಳಿಗೂ, ಮಂತ್ರಿ ಮಾನ್ಯರಿಗೂ ಹೇಳಿದರು. ''ನೀವೆಲ್ಲರೂ ಶಂಕರನನ್ನು ಪಾಣಿಗ್ರಹಣಕ್ಕಾಗಿ ವಿವಾಹ ಮಂಟಪಕ್ಕೆ ಕರೆದುಕೊಂಡು ಬನ್ನಿರಿ. ತಡಮಾಡುವುದು ಬೇಡ'' ಎಂದು. ಆಗ ನಾರದರು ಹಿಮವಂತನಿಗೆ ಹೇಳಿದರು ''ವಾಸ್ತವಿಕವಾಗಿ ನಿನ್ನ ಮಗಳಾದ ಪಾರ್ವತಿಯೂ ಹೆಸರು, ಕುಲ, ಗೋತ್ರ, ಜನನ, ಮರಣಗಳಿಂದ ರಹಿತಳು, ದೇವತಾಕಾರ್ಯಸಿದ್ಧಿಗಾಗಿ ನಿನ್ನ ಮನೆಯಲ್ಲಿ ಅವತರಿಸಿದ್ದಾಳೆ, ಈ ಸಂಪೂರ್ಣವಿಶ್ವವೆಲ್ಲವೂ ಜನಿಸುವುದು ಪಾರ್ವತಿಯಿಂದ. ಜೀವಿಸುವದು ಪಾರ್ವತಿಯಿಂದ. ಇವರಿಬ್ಬರಿಗೂ ಕುಲ ಗೋತ್ರ ನಾಮ ಮುಂತಾದವುಗಳ ಸೀಮೆ ಇಲ್ಲ. ಜಾತಿ ದೇಶಗಳ ಕಟ್ಟು ಯಾವುದೂ ಇಲ್ಲ. ಇವರಿಬ್ಬರೂ ಕುಲ, ಜಾತಿ, ಮತಗಳಿಂದ ಅತೀತರು. ಇಂಥ ಪಾರ್ವತೀಪತಿಯನ್ನು ನೀನು ಕುಲಗೋತ್ರ ಕೇಳಿದರೆ ಅವನು ಏನು ಉತ್ತರ ಕೊಡಬೇಕು? ಅದಕ್ಕೇ ನಾನು ನಿನ್ನ ಪ್ರಶ್ನೆಗೆ ಉತ್ತರ ರೂಪವಾಗಿ ಈ ತಂಬೂರಿಯನ್ನು ಬಾರಿಸಿದೆ.'' ನಾರದರ ಈ ನುಡಿಯನ್ನು ಕೇಳಿ ಹೇಮಾದ್ರಿ ಮುಂತಾದ ಪರ್ವತಗಳೂ, ಇಂದ್ರಾದಿ ದೇವತೆಗಳೂ ಆಶ್ಚರ್ಯಚಕಿತರಾಗಿ ಕೌತುಕದ ಉದ್ಗಾರ ತೆಗೆದರು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಹನ್ನೊಂದನೇ ಅಧ್ಯಾಯ ಮುಗಿದುದು**

# ಹಿಮವಂತನಿಂದ ಕನ್ಯಾದಾನ : ಶಿವಮಹಿಮೆ ಮತ್ತು ಕುಮಾರ ಜನ್ಮ

ಅಧ್ಯಾಯ -12

**ಸೂತ :** ಅನಂತರ ಬ್ರಹ್ಮದೇವರ ಆಜ್ಞೆಯಿಂದ ಗಿರಿರಾಜನು ''ಇಮಾಂ ಕನ್ಯಾಂ ತುಭ್ಯಂ ಅಹಂ ದದಾಮಿ. ಪರಮೇಶ್ವರ ! ಭಾಯಾರ್ಥಂ ಪ್ರತಿಗೃಹ್ಣೀಷ್ವ'' *(ಪರಮೇಶ್ವರನೇ ಈ ನನ್ನ ಕನ್ಯೆಯನ್ನು ನಿನ್ನ ಧರ್ಮಪತ್ನಿಯಾಗಿರಲು ನಿನಗೆ ನಾನು ಕೊಡುತ್ತಿದ್ದೇನೆ. ಇವಳನ್ನು ನೀನು ಸ್ವೀಕರಿಸು)* ಎಂಬ ವಾಕ್ಯವನ್ನು ಉಚ್ಚರಿಸಿದ, ಆ ಹಿಮಾಲಯ ದಂಪತಿಗಳು ಕನ್ಯಾದಾನ ಸಂಕಲ್ಪ ಮಾಡಿದರು. ಹೋಮಕಾರ್ಯವು ಮುಗಿದ ಬಳಿಕ ಆ ಪಾರ್ವತೀ ಪರಮೇಶ್ವರರನ್ನು ಹೊರಗಿನ ವೇದಿಕೆಯ ಮೇಲೆ ಕೂಡಿಸಿದರು. ಬ್ರಾಹ್ಮಣರು ತಮ್ಮ ಉಚ್ಚಕಂಠದಿಂದ ವೇದೋಕ್ತವಾದ ಶಾಂತಿ ಪಾಠದ ಮಂತ್ರವನ್ನು ಪಠಿಸಿ ಮಂಗಳಾಷ್ಟಕ ಹೇಳಿದರು. ಎಲ್ಲ ದೇವತೆಗಳೂ ಬ್ರಾಹ್ಮಣರೂ ಶಿವ ಪಾರ್ವತಿಯರ ತಲೆ ಮೇಲೆ ರತ್ನಾಕ್ಷತೆ, ಮಂತ್ರಾಕ್ಷತೆಗಳನ್ನು ಹಾಕಿದರು. ಅನಂತರ ದೇವಪುರದ ಮಂಗಳಾಂಗಿಯರು ಆ ಮಹಾದೇವ ದಂಪತಿಗಳಿಗೆ ಆರತಿ ಎತ್ತಿದರು. ಹಿಮಾಚಲದ ಮುತ್ತೈದೆಯರೂ ಋಷಿಪತ್ನಿಯರೂ ಬೇರೆ ಬೇರೆಯಾಗಿ ಬಂದು ಆ ವಧೂವರರಿಗೆ ಆರತಿ ಬೆಳಗಿದರು. ಗಂಧರ್ವರೂ ಮಹಾಮುನಿಗಳೂ ಸುಸ್ವರದಿಂದ ಹಾಡಿ ಪಾಡಿ ಆ ಶಿವ ದಂಪತಿಗಳನ್ನು ಕೊಂಡಾಡಿದರು.

ಉದಾರ ಮನಸ್ಸಿನ ಆ ಗಿರಿಸಾರ್ವಭೌಮನು ಮದುವೆಗೆ ಆಗಮಿಸಿದ ಬ್ರಾಹ್ಮಣರಿಗೂ ಋತ್ವಿಜರಿಗೂ, ಮುನಿಮಹರ್ಷಿಗಳಿಗೂ ಕೈ ತುಂಬ ದಾನ ದಕ್ಷಿಣೆ ಕೊಟ್ಟನು. ಉಳಿದೆಲ್ಲ ದೇವತೆ ಗಂಧರ್ವ ಯಕ್ಷ ಮುಂತಾದ ಅಭ್ಯಾಗತರೆಲ್ಲರಿಗೂ ಅಮೂಲ್ಯವಾದ ರತ್ನಗಳನ್ನು ಮದುವೆ ಉಡುಗೊರೆಯಾಗಿ ನೀಡಿದನು. ಅನಂತರ ಎಲ್ಲರಿಗೂ ಒಳ್ಳೆಯ ಸುಗ್ರಾಸ ಭೋಜನವನ್ನು ಏರ್ಪಡಿಸಲಾಗಿತ್ತು. ಬ್ರಹ್ಮ ವಿಷ್ಣು ಮಹೇಶ್ವರ ಈ ತ್ರಿಮೂರ್ತಿಗಳೂ ಇಂದ್ರಾದಿ ದೇವತೆಗಳೂ ಏಕ ಪಂಕ್ತಿಯಲ್ಲಿ ಕುಳಿತು ಷಡ್ರಸ ನವರಸ ಭೋಜನದ ರಸಪಾಕ ಉಂಡು ತೃಪ್ತಿಪಟ್ಟರು. ಶೃಂಗಿ, ಭೃಂಗಿ, ನಂದಿ, ವೀರಭದ್ರ ಮೊದಲಾದ ಶೈವ ಪರಿವಾರವೆಲ್ಲವೂ ಶಂಕರನ ಹಿಂದಿನ ಸಾಲಿನಲ್ಲಿ ಊಟಕ್ಕೆ ಕುಳಿತುಕೊಂಡಿದ್ದರು. ಅದರ ಹಿಂದೆ ಮತ್ತೊಂದು ಪಂಕ್ತಿಯಲ್ಲಿ ಚಂಡೀದೇವಿಯ ಅನುಯಾಯಿ ವರ್ಗವು ಶ್ರೇಣೀಬದ್ಧವಾಗಿ ಭೋಜನಕ್ಕೆ ಕುಳಿತಿತ್ತು. ಕೊನೆಯ ಪಂಕ್ತಿಯಲ್ಲಿ ವೇತಾಳ, ಕ್ಷೇತ್ರಪಾಲ, ಕೂಷ್ಮಾಂಡ ಭೈರವ, ಶಾಕಿನಿ, ಡಾಕಿನಿ, ಯಕ್ಷಿಣಿ, ಮಾತೃಕಾ ಮೊದಲಾಗಿ ಅರವತ್ತನಾಲ್ಕು ಯೋಗಿನಿಯರ ಗಣಗಳೂ, ಉಳಿದ ಶಿವಗಣಗಳೂ ಕುಳಿತು ಭೋಜನ ಮಾಡಿದರು. ಈ ಮದುವೆಗೆ ಬಂದ ಶಿವಭಕ್ತರು ಹನ್ನೊಂದು ಕೋಟಿ ಸಂಖ್ಯೆಯಲ್ಲಿ ಇದ್ದರು. ಮೂವತ್ತ್ಮೂರು ಕೋಟಿ ದೇವತೆಗಳೂ, ಇವರಲ್ಲದೆ ಇನ್ನೂ ಅನೇಕಾನೇಕ ಋಷಿಮುನಿ ಮಾನವರೂ ಈ ವಿವಾಹ ಮಹೋತ್ಸವಕ್ಕೆ ಆಗಮಿಸಿದ್ದರು. ಬಂದವರೆಲ್ಲರೂ ಭೋಜನದಿಂದ ತುಷ್ಟರೂ ಉಡುಗೊರೆಗಳಿಂದ ಸಂತೃಪ್ತರೂ ಆಗಿದ್ದರು. ಕೊನೆಯ ದಿನ ಆ ಪರ್ವತ

ಸಾರ್ವಭೌಮನು ತನ್ನ ಅಳಿಯ ಮಗಳಿಗೆ ಅಸಂಖ್ಯ ರತ್ನಾಭರಣವಿಟ್ಟು ಪೂಜೆ ಮಾಡಿದನು. ಬಳಿಕ ಹಿಮವಂತನು ಶ್ರೇಷ್ಠವಾದ ವಸ್ತು ಹಾಗೂ ಅಮೂಲ್ಯ ಮುತ್ತು ರತ್ನಗಳನ್ನು ನೀಡಿ ಲಕ್ಷ್ಮೀನಾರಾಯಣರನ್ನೂ, ಬ್ರಹ್ಮ ಭಾರತಿಯರನ್ನೂ ಶಚೀ ಪುರಂದರರನ್ನೂ ಪೂಜಿಸಿ ಗೌರವಿಸಿದನು. ಅನಂತರ ಶಿವ ಪರಿವಾರದವರೆಲ್ಲರಿಗೂ ಹಾಗೂ ಚಂಡೀದೇವಿಗೂ ಉಳಿದೆಲ್ಲ ದೇವ, ಯಕ್ಷ, ಗಂಧರ್ವ, ಅಪ್ಸರೆ, ದಾನವ , ಮಾನವರಿಗೂ ಮುತ್ತು ರತ್ನಗಳ ಕಾಣಿಕೆಯಿತ್ತು ಹಿಮರಾಜನು ಸತ್ಕರಿಸಿದ.

ಮದುವೆಯ ಕೊನೆಯಲ್ಲಿ ಸ್ವಯಂ ಶ್ರೀ ಹರಿಯು ಹಿಮಗಿರಿಯ, ಪರ್ವತ ಪರಿವಾರದಲ್ಲಿ ಪ್ರಮುಖರಾದ ಮೇರು, ಮಂದರ, ಗಂಧಮಾಧನ, ಮಲಯ, ಮೈನಾಕ, ಮಾಲ್ಯವಂತ, ವಿಂದ್ಯಾಚಲ, ಸಹ್ಯಾಚಲ ಮುಂತಾದ ಗಿರಿ ದೇವತೆಗಳನ್ನೆಲ್ಲ ಸತ್ಕರಿಸಿದ. ಶ್ವೇತಗಿರಿ, ಉದಯಗಿರಿ, ಅಸ್ತಾಚಲ, ಕೈಲಾಸ, ಲೋಕಾಲೋಕ ಮುಂತಾದ ಶಿವ ಸಾನ್ನಿಧ್ಯದಿಂದ ಪಾವನತರವಾದ ಪರ್ವತಗಳನ್ನು ಬ್ರಹ್ಮದೇವರು ಪೂಜಿಸಿದರು. ಮರುದಿನ ನಿಬ್ಬಣವು ಮರಳಿ ಹೊರಟಿತು. ಶೈಲ ಸಾಮ್ರಾಟನಾದ ಹಿಮಾಲಯನು ತನ್ನ ಪತ್ನಿ ಹಾಗೂ ಬಂಧು ಬಾಂಧವರೊಡನೆ ಕೂಡಿಕೊಂಡು ಗಂಧಮಾದನ ಪರ್ವತದವರೆಗೆ ಬೀಳ್ಕೊಡಲು ಬಂದನು. ಶಿವಪಾರ್ವತಿಯರು ಆನೆಯ ಮೇಲೆ, ಬ್ರಹ್ಮನು ವಿಮಾನದಲ್ಲಿ, ವಿಷ್ಣು ಗರುಡನ ಮೇಲೆ, ಇಂದ್ರನು ಐರಾವತದ ಮೇಲೆ ಕುಬೇರನು ತನ್ನ ಪುಷ್ಪಕ ವಿಮಾನದ ಮೇಲೆ, ವರುಣನು ಮೊಸಳೆಯ ಮೇಲೆ, ಯಮಧರ್ಮನು ಕೋಣದ ಮೇಲೆ, ಅಗ್ನಿದೇವನು ಆಡಿನ ಮೇಲೆ, ವಾಯುದೇವನು ಜಿಗರೆಯ ಮೇಲೆ, ಉಳಿದೆಲ್ಲ ಜನರು ತಮ್ಮ ತಮ್ಮ ವಾಹನಗಳನ್ನು ಆರೋಹಣ ಮಾಡಿ ಹಿಮಪ್ರಸ್ಥದಿಂದ ಹೊರಹೊರಟರು ಮೆರವಣಿಗೆಯಿಂದ. ಪರಮಪುರುಷನಾದ ಆ ಮಹೇಶ್ವರನಿಗೆ ಕನ್ಯಾದಾನ ಮಾಡಿಕೊಟ್ಟು ಧನ್ಯನಾದ ಧರಾಧರ ಧುರಂಧರನಾದ ಆ ಹಿಮಪರ್ವತ. ಶಿವನನ್ನು ಭಕ್ತಿಯಿಂದ ನೆನೆದು ನಾಮೋಚ್ಚಾರಣೆ ಮಾಡುವ ನರರೆಲ್ಲರೂ ಧನ್ಯರೇ. ಅಂದ ಬಳಿಕ ಶಿವನಿಗೆ ಕನ್ಯಾದಾನ ಮಾಡಿದ ಹಿಮವಂತ ಎಷ್ಟು ಭಾಗ್ಯವಂತ!

**"ತೇ ಧನ್ಯಾಸ್ತೇ ಮಹಾತ್ಮಾನಃ ಕೃತಕೃತ್ಯಾಸ್ತ ಏವ ಹಿ ।**
**ದ್ವ್ಯಕ್ಷರಂ ನಾಮ ಯೇಷಾಂ ವೈ ಜಿಹ್ವಾಗ್ರೇ ಸಂಸ್ಥಿತಂ ಸದಾ ॥**

**ಶಿವ ಇತ್ಯಕ್ಷರಂ ನಾಮ ಯೈರುದೀರಿತಮದ್ಧ ವೈ ।**
**ತೇ ವೈ ಮನುಷ್ಯರೂಪೇಣ ರುದ್ರಾ, ಸ್ಯುರ್ನಾತ್ರ ಸಂಶಯಃ ॥**

ಶಿವ ಎಂಬ ಎರಡು ಅಕ್ಷರಗಳು ಯಾರ ನಾಲಿಗೆಯ ಮೇಲೆ ನಲಿದಾಡುವವೋ ಅವರು ನಿಜವಾಗಿಯೂ ಮಹಾತ್ಮರು. ಅವರ ಜನ್ಮವು ಧನ್ಯ. ಅವರು ಭೂಲೋಕಕ್ಕೆ ಬಂದದ್ದು ಸಾರ್ಥಕ. ಶಿವನಾಮವನ್ನು ಭಕ್ತಿಯಿಂದ ಪಠಿಸುವವನು ಮನುಷ್ಯ ರೂಪದ ಮಹಾದೇವ. ಇದರಲ್ಲಿ ಸಂದೇಹವೇ ಇಲ್ಲ. ಇಂಥ ದೇವೋತ್ತಮನಿಗೆ ಕನ್ಯಾದಾನ ಮಾಡಿ ಹಿಮಾಲಯನು ವಿಶ್ವವಂದನೀಯನಾದ.

ಅನಂತರ ಭಗವಾನ್ ನೀಲಲೋಹಿತನು ಗಂಧಮಾದನ ಪರ್ವತದಲ್ಲಿ ಏಕಾಂತ ಪ್ರದೇಶಗಳಲ್ಲಿ ಅತ್ಯಂತ ಸುಂದರವಾದ ರೂಪವನ್ನು ಧರಿಸಿ ಜಗನ್ಮೋಹಿನಿಯಾದ

ಆ ಅಂಬಿಕೆಯೊಡನೆ ಕಾಮ ಕೇಳೀ ವಿಲಾಸದಲ್ಲಿ ಮಗ್ನನಾದ . ಬಹುಕಾಲದವರೆಗೆ ನಡೆಯಿತು ಅವರ ಈ ವಿಹಾರ ಕ್ರೀಡೆ. ಶಿವಾಶಿವೆಯರ ವಿಹಾರ ಲೀಲೆಯು ನಿಲ್ಲದೇ ಚಿರಕಾಲ ನಡೆದ ಬಳಿಕ ಅವರ ಮಹಾವೀರ್ಯದಿಂದ ಜಗತ್ತೇ ನಾಶಹೊಂದತೊಡಗಿತು. ಆಗ ವಿಷ್ಣುವು ಅಗ್ನಿಯನ್ನು ನೆನೆದು ಮಹಾದೇವನಿದ್ದಲ್ಲಿಗೆ ಕೊಟ್ಟು ಕಳಿಸಿದನು. ಹರಿಯ ಆಜ್ಞೆಯಂತೆ ಆ ವೈಶ್ವಾನರನು ಪರಮಹಂಸ ಸನ್ಯಾಸಿ ರೂಪದಿಂದ ಆ ಶಿವಸದನದಲ್ಲಿ ಪ್ರವೇಶ ಮಾಡಿದನು ಮತ್ತು ಪಾರ್ವತಿಯನ್ನು ಕುರಿತು ಬೇಡಿಕೊಂಡನು 'ತಾಯಿ ನಾನು ಸನ್ಯಾಸಿ, ಪಾತ್ರೆ ಹಿಡಿದು ಬಂದಿದ್ದೇನೆ. ಭಿಕ್ಷೆಯನ್ನು ನೀಡು.'

ಆಗ ಪಾರ್ವತಿಯು ಭಿಕ್ಷು ರೂಪದಿಂದ ಬಂದ ಆ ಅಗ್ನಿಗೆ ತಮ್ಮ ಶಕ್ತಿಯನ್ನು ಕೊಟ್ಟಳು. ಅದನ್ನು ಅಗ್ನಿಯು ಅವಳೆದುರೇ ಭಕ್ಷಣ ಮಾಡಿದನು. ಅದನ್ನು ನೋಡಿ ಪಾರ್ವತಿಗೆ ಸಿಟ್ಟು ಬಂದು. ''ಎಲೈ ಭಿಕ್ಷುಕ, ನೀನು ಬೇಗನೇ ಸರ್ವಭಕ್ಷಕನಾಗು. ಈ ನಮ್ಮ ವೀರ್ಯದಿಂದ ನಿನಗೆ ಭಯಂಕರ ಪೀಡೆಯು ಪ್ರಾಪ್ತವಾಗುವದು.'' ಆಗ ಆ ಧನಂಜಯನು ಕ್ಷೇಮಂಕರನಾದ ಶಿವನನ್ನು ಕುರಿತು ಪ್ರಾರ್ಥಿಸಿದನು. ''ನಾನು ಈಗೇನು ಮಾಡಲಿ? ಈ ಅಂಬಿಕೆಯ ಶಾಪದಿಂದ ನನ್ನನ್ನು ಪಾರುಮಾಡು. ನಾನು ಎಂದಿನಂತೆ ದೇವತೆಗಳ ಮುಖನಾಗಿ ಅವರ ಹವಿಸ್ಸನ್ನು ವಹಿಸುವಂತೆ ಕೃಪೆ ಮಾಡು.

**ಶಂಕರ :** ವಹ್ನಿ ದೇವ ! ನಿನ್ನ ದೇಹದಲ್ಲಿದ್ದ ಆ ನನ್ನ ಶಕ್ತಿಯನ್ನು ಸ್ತ್ರೀ ಗರ್ಭದಲ್ಲಿ ನೀನು ಸ್ಥಾಪಿಸು.

**ಅಗ್ನಿ :** ಭಗವನ್ ! ನಿನ್ನ ತೇಜ ದುಃಸಹ. ಪ್ರಾಕೃತ ಸ್ತ್ರೀಯರು ಅದನ್ನು ಹೇಗೆ ಧರಿಸಬಲ್ಲರು ? '' ಇದೇ ವೇಳೆಯಲ್ಲಿ ಅಲ್ಲಿಗೆ ನಾರದ ಮುನಿಗಳು ಆಗಮಿಸಿ ನುಡಿದರು. ''ಅಗ್ನಿದೇವ, ನಾನು ಇದಕ್ಕೊಂದು ಉಪಾಯ ಹೇಳುತ್ತೇನೆ. ಮಾಘ ಮಾಸದಲ್ಲಿ ಪ್ರಾತಃ ಸ್ನಾನ ಮಾಡಿ ಚಳಿಯಿಂದ ನಡುಗುವವರು ತಮ್ಮ ಮೈಯನ್ನು ಬೆಚ್ಚಗಾಗಿಸಲು ಬೆಂಕಿಯನ್ನು ಹೊತ್ತಿಸುವರು. ಅವರ ದೇಹದಲ್ಲಿ ನೀನು ಈ ಶಿವನ ತೇಜವನ್ನು ಸ್ಥಾಪಿತಗೊಳಿಸು.'' ಜಾತವೇದನು ನಾರದ ಮುನಿಯ ಮಾತಿನಂತೆ ಬ್ರಾಹ್ಮಿಮುಹೂರ್ತದಲ್ಲಿ ಎದ್ದು ತನ್ನ ತೇಜದಿಂದ ಪ್ರಜ್ವಲಿತನಾಗಿ ಕುಳಿತನು. ಅದೇ ಕಾಲದಲ್ಲಿ ಮಾಘಸ್ನಾನ ಮಾಡಿದ ಕೃತ್ತಿಕೆಯರು ತಮ್ಮ ಮೈ ಕಾಯಿಸಿಕೊಳ್ಳಬೇಕೆಂದು ಅಗ್ನಿಯ ಬಳಿಗೆ ಬಂದರು. ಅರುಂಧತಿ ದೇವಿಯು ಅವರನ್ನು ತಡೆದರೂ ಕೇಳದೇ ಅವರು ಅಗ್ನಿಯ ಬಳಿಗೆ ಸಾರಿದರು. ಆ ಬೆಂಕಿಯ ಸುತ್ತಲೂ ಕುಳಿತು ತಮ್ಮ ಶರೀರವನ್ನು ಬೆಚ್ಚಗೆ ಮಾಡಿಕೊಳ್ಳತೊಡಗಿದರು. ಅದರಿಂದ ಶಿವನ ತೇಜದ ಎಲ್ಲ ಪರಮಾಣುಗಳು ಆ ಕೃತ್ತಿಕೆಯರ ದೇಹದಲ್ಲಿ ಪ್ರವೇಶಿಸಿ ಅವರ ರೋಮಕೂಪಗಳಲ್ಲಿ ಸೇರಿಕೊಂಡವು. ಅಗ್ನಿಯು ಮುಕ್ತನಾದನು. ಅದರಿಂದ ಕೃತ್ತಿಕೆಯರು ಶಿವತೇಜವನ್ನು ಧರಿಸಿ ಗರ್ಭವತಿಯರಾದರು. ಅವರ ಪತಿಗಳಾದ ಮಹರ್ಷಿಗಳು ಶಿವತೇಜದಿಂದ ಗರ್ಭಧರಿಸಿದ ಆ ತಮ್ಮ ಮಡದಿಯರನ್ನು ಶಾಪವಿಟ್ಟು ಮನೆಬಿಟ್ಟು ಹೊರಗೆ ಹಾಕಿದರು. ಆಗ ಎಲ್ಲ ಆ ಕೃತ್ತಿಕಾಕಾಮಿನಿಯರು ನಕ್ಷತ್ರ ರೂಪಧರಿಸಿ ನಭೋಮಂಡಲದಲ್ಲಿ ಸಂಚರಿಸತೊಡಗಿದರು. ಅವರಿಗೂ ಆ ಶಿವಶಕ್ತಿ ಸಹಿಸಲಾಗದೆ ಹಿಮಾಲಯದ

ಶಿಖರದಲ್ಲಿ ಅದನ್ನು ಇಳಿಸಿದರು. ಬಂಗಾರದಂತೆ ಅದು ಗಿರಿಶಿಖರದಲ್ಲಿ ಹೊಳೆಯ ತೊಡಗಿತು. ಅದನ್ನು ಅಲ್ಲಿಂದ ಎತ್ತಿ ಗಂಗಾಪ್ರವಾಹದಲ್ಲಿ ತೇಲಿ ಬಿಡಲಾಯಿತು. ಗಂಗೆಯಲ್ಲಿ ತೇಲುತ್ತಾ ಆ ಶಿವನ ತೇಜಸ್ಸು ನದೀತೀರದ ಒಂದು ಶರಸ್ತಂಭದಲ್ಲಿ ಬಂದು ಬಿದ್ದಿತು. ಅಲ್ಲಿ ಅದು ಆರು ಮುಖದ ಒಂದು ಮಗುವಿನ ಜನನಕ್ಕೆ ಕಾರಣವಾಯಿತು. ಅದನ್ನು ನೋಡಿ ನಾರದರು ಪಾರ್ವತೀ ಪರಮೇಶ್ವರರ ಬಳಿಗೆ ಬಂದು ಶರಸ್ತಂಭದಲ್ಲಿ ಅವರಿಗೆ ಒಂದು ಮಗು ಜನಿಸಿದ ಸಮಾಚಾರವನ್ನು ತಿಳಿಸಿದರು. ದೇವತೆಗಳಿಗೆಲ್ಲ ಈ ಸಮಾಚಾರವನ್ನು ಕೇಳಿ ಪರಮಾನಂದವಾಯಿತು. ಶಿವಪಾರ್ವತಿಯರಿಗೆ ಓರ್ವ ತೇಜಸ್ವಿಯಾದ ಪುತ್ರನು ಜನಿಸಿದ್ದಾನೆ ಎಂಬ ಸಮಾಚಾರವನ್ನು ಕೇಳಿದ ಕೂಡಲೇ ಆನಂದೋಲ್ಲಾಸದಿಂದ ಕುಣಿಯತೊಡಗಿದರು ಪ್ರಮಥ ಗಣಾಧೀಶರು. ಎಲ್ಲ ಕಡೆಗೂ ವಿಜಯೋತ್ಸವ. ಗಿರಿಶಿಖರ ಮರಬಳ್ಳಿಗಳ ಮೇಲೆ ವಿಜಯ ಧ್ವಜಗಳು. ಆ ಸಮಯದಲ್ಲಿ ಎಲ್ಲ ದೇವತೆ, ಋಷಿ, ಸಿದ್ಧ ಮುಂತಾದವರ ಆಗಮನ ಆ ಗಂಗಾತೀರದಲ್ಲಿ. ಚಂದ್ರಶೇಖರನು ಕೂಡ ತನ್ನ ವಾಹನವಾದ ನಂದಿಯ ಮೇಲೆ ಏರಿ ಉಮೆಯೊಂದಿಗೆ ಆ ಗಂಗಾತೀರಕ್ಕೆ ಆನಂದದಿಂದ ಆಗಮಿಸಿದ. ಎಲ್ಲ ದೇವತೆಗಳು ಶಿವನೊಂದಿಗೆ ಆ ಗಂಗಾ ತೀರದ ಹುಲ್ಲುಜೊಂಡಿನಲ್ಲಿ ದೇದೀಪ್ಯಮಾನನಾಗಿ ಬೆಳಗುವ ಆ ತೇಜಸ್ವಿ ಮಗುವನ್ನು ನೋಡಿದರು. ಬೆಂಕಿಯಲ್ಲಿಟ್ಟ ಬಂಗಾರದಂತೆ ಹೊಳೆಯುವ ಬಣ್ಣ, ಸುಂದರ ಮುಖ, ಪುಟಕ್ಕೆ ಹಾಕಿದಂತೆ ಹೊಳೆಯುವ ಅಂಗಾಂಗಗಳು, ನೀಟಾದ ಮೂಗು, ಮಂದಹಾಸದಿಂದ ಸುಂದರವಾದ ಮುಖಕಮಲ, ಹೊಳೆಯುವ ಹಲ್ಲು, ಕಪ್ಪು ಕೂದಲು, ಎಲ್ಲ ಲಕ್ಷಣಗಳಿಂದ ಬಹಳ ಮುದ್ದಾಗಿತ್ತು ಆ ಮಹೇಶ ದಂಪತಿಗಳ ಮಗು.

ಆ ಶಿವಕುಮಾರರನ್ನು ಕಂಡಕೂಡಲೇ ಆನಂದಭರಿತರಾದ ದೇವತೆಗಳೆಲ್ಲರೂ ವಂದನೆ ಸಲ್ಲಿಸಿದರು. ಬ್ರಹ್ಮ ವಿಷ್ಣು ಮಹೇಶ್ವರರು ಸ್ನಿಗ್ಧಕಟಾಕ್ಷದಿಂದ ನೋಡುತ್ತ ಆ ಮಗುವಿನ ಬಳಿಯೆ ನಿಂತರು. ಮಂಗಳ ವಾದ್ಯಗಳು ಭೋರ್ಗರೆದವು. ಋಷಿಮುನಿಗಳು ಶಾಂತಿಸೂಕ್ತಗಳನ್ನು ಪಠಿಸಿದರು. ಆಗಲೇ ಅಲ್ಲಿಗೆ ಆಗಮಿಸಿದ ಶಿವಪಾರ್ವತಿಯರಿಗೆ ಪುತ್ರಸ್ನೇಹವು ಉಕ್ಕೇರಿತು. ಆಗ ಪಾರ್ವತಿಯ ಹೃದಯದಿಂದ ಹಾಲು ಚಿಮ್ಮತೊಡಗಿತು. ಅವಳು ಧಾವಿಸಿ ಬಂದು ಆ ಮಗುವನ್ನು ಎತ್ತಿಕೊಂಡು ಹೃದಯದಿಂದ ಬಿಗಿದಪ್ಪಿದಳು. ಆ ಮಗುವನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ತನ್ನ ಎದೆ ಹಾಲನ್ನು ಊಡಿಸಿದಳು. ದೇವಾಂಗನೆಯರು ಆನಂದದಿಂದ ಆ ತಾಯಿಗೆ ಆರತಿಯನ್ನು ಎತ್ತಿದರು. ಎಲ್ಲ ಕಡೆಗೂ ಆ ಪಾರ್ವತೀ ಕುಮಾರನ ಜೈ ಜೈಕಾರ. ಋಷಿಮುನಿಗಳ ವೇದಘೋಷ. ದೇವ ದುಂದುಭಿಗಳ ಮಂಜುಘೋಷ. ಎಲ್ಲ ಸಾಧು ಸಜ್ಜನರ ಪ್ರಶಂಸಾ ಉದ್ಗಾರ. ಶಂಕರನ ಹೃದಯದಲ್ಲಿಯೂ ಉಕ್ಕೇರಿತು ಪುತ್ರ ಪ್ರೇಮ. ತಕ್ಷಣವೇ ಅವನು ಆ ಮಗುವನ್ನು ಎತ್ತಿ ತೊಡೆಯ ಮೇಲೆ ಕೂಡಿಸಿಕೊಂಡು ಅದರ ಮೈ ಮೇಲೆ ಪ್ರೀತಿಯಿಂದ ಕೈ ಆಡಿಸಿದ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಹನ್ನೆರಡನೇ ಅಧ್ಯಾಯ ಮುಗಿದುದು.**

# ದೇವತೆಗಳಿಗೂ, ತಾರಕಾಸುರನಿಗೂ ಯುದ್ಧ. ಸ್ಕಂದನಿಂದ ತಾರಕನ ವಧೆ.

ಅಧ್ಯಾಯ -13

**ಸೂತ :** ಭಗವಾನ್ ಗೌರೀಪತಿಯು ತನ್ನ ಕುಮಾರರನ್ನು ತೊಡೆಯ ಮೇಲೆ ಕೂಡಿಸಿಕೊಂಡು ಅಲ್ಲಿ ನೆರೆದ ದೇವತೆಗಳಿಗೆ ಕೇಳಿದ ''ಸುರಾಧೀಶರೇ ! ಇದೀಗ ಹುಟ್ಟಿದ ನನ್ನ ಕುಮಾರನು ಮಹಾಪರಾಕ್ರಮಶಾಲಿ. ಇವನಿಂದ ಏನು ಕಾರ್ಯವಾಗಬೇಕು ಹೇಳಿ. ಸುರಕಾರ್ಯಕ್ಕೆ ಇವನು ಈಗಲೇ ಸಿದ್ಧ''.

**ದೇವತೆಗಳು :** ಭಗವನ್ ! ದುಷ್ಟನಾದ ತಾರಕಾಸುರನಿಂದ ಜಗತ್ತಿಗೆ ದೊಡ್ಡ ಸಂಕಟ ಬಂದಿದೆ. ಅವನನ್ನು ಈಗಲೇ ಸಂಹರಿಸಬೇಕಾಗಿದೆ. ಅದಕ್ಕಾಗಿ ಈ ಕುಮಾರನನ್ನು ನಮ್ಮ ದೇವ ಸೇನಾಪತಿಯನ್ನಾಗಿ ಮಾಡಿಕೊಂಡು ಈಗಲೇ ಹೊರಡೋಣ'' ಎಂದು ಹೇಳಿ ಸೇನಾಪತಿ ಪಟ್ಟದಲ್ಲಿ ಅಭಿಷೇಕಗೈದರು. ಅಂದಿನಿಂದ 'ಸೇನಾನೀ' ಎಂದು ಹೆಸರಾದ ಆ ಪಾರ್ವತಿ ಪುತ್ರ. ಕೃತ್ತಿಕಾಮಾತೆಯರು ತಮ್ಮ ಗರ್ಭದಲ್ಲಿ ಧರಿಸಿದ್ದರಿಂದ ಕಾರ್ತಿಕೇಯನೆಂದೂ ಪ್ರಸಿದ್ಧನಾದ ಆ ಶಿವಕುಮಾರ. ಆರು ಮುಖಗಳಿದ್ದುದರಿಂದ ಷಣ್ಮುಖ. ಕೆಳಗೆ ಬಿದ್ದ ಶಿವನ ತೇಜದಿಂದ ಜನಿಸಿದ್ದರಿಂದ ಸ್ಕಂದ, ಶಿವನ ಮಗನಾದ್ದರಿಂದ ಕುಮಾರ, ನವಿಲನ್ನೇ ವಾಹನ ಮಾಡಿಕೊಂಡದ್ದರಿಂದ ಮಯೂರ ವಾಹನ, ಶಿಖಿವಾಹನ, ದೇವತೆಗಳ ಸೇನಾಪತಿಯಾದ್ದರಿಂದ ಸೇನಾನಿ ಮುಂತಾದ ಅನೇಕ ಹೆಸರುಗಳು ಪ್ರಾಪ್ತವಾದವು ಆ ಶಿವಪುತ್ರನಿಗೆ. ಆ ಷಣ್ಮುಖನನ್ನು ಮುಂದೆ ಮಾಡಿಕೊಂಡು ದೇವತೆಗಳು ತಾರಕಾಸುರನ ಮೇಲೆ ಯುದ್ಧ ಸಾರಿದರು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಮುಂಚೂಣಿಯಲ್ಲಿ ನಿಂತರು. ಈ ಸಮಾಚಾರ ತಾರಕಾಸುರನಿಗೆ ತಿಳಿದಕೂಡಲೇ ಪ್ರಚಂಡ ದೈತ್ಯ ಸೇನೆಯೊಂದಿಗೆ ಅವನೂ ಯುದ್ಧಕ್ಕೆ ಆಗಮಿಸಿದ. ಇದೇ ಸಮಯದಲ್ಲಿ ಸ್ಕಂದನನ್ನು ವರಿಸಲಿಕ್ಕೆಂದು ಮೃತ್ಯು ಕನ್ಯೆಯಾದ ದೇವಸೇನೆಯು ಅಲ್ಲಿಗೆ ಆಗಮಿಸಿದಳು. ಬ್ರಹ್ಮದೇವನ ಆದೇಶದಂತೆ ಸ್ಕಂದನು ದೇವಸೇನೆಯ ಪಾಣಿಗ್ರಹಣ ಮಾಡಿದ. ದೇವತೆಗಳೆಲ್ಲರೂ ತಮ್ಮ ಸೇನಾಪತಿ ಪಟ್ಟದಲ್ಲಿ ಸ್ಕಂದನಿಗೆ ಪಟ್ಟಾಭಿಷೇಕ ಮಾಡಿದರು. ದೇವದುಂದುಭಿಗಳು ಮೊಳಗಿದವು. ಎರಡು ರೀತಿಯಿಂದಲೂ ಸ್ಕಂದ 'ಸೇನಾಪತಿ' ಆದ.

ದೇವರಾಜ ಇಂದ್ರನು ತಮ್ಮ ಸೇನಾಪತಿ ಕುಮಾರನನ್ನು ಆನೆಯ ಮೇಲೆ ಕೂಡಿಸಿ ಪ್ರಚಂಡ ದೇವಸೇನೆಯೊಂದಿಗೆ ತಾನೂ ಅವನ ಬೆನ್ನ ಹಿಂದೆ ಹೊರಟನು. ಎಲ್ಲ ದೇವತೆಗಳೂ ತಮ್ಮ ತಮ್ಮ ಸೇನಾದಳಗಳೊಂದಿಗೆ ಯುದ್ಧದಲ್ಲಿ ಭಾಗವಹಿಸಿದರು. ಮರುದ್ಗಣಗಳೊಂದಿಗೆ ವಾಯು, ಜಲಚರರೊಂದಿಗೆ ವರುಣ, ಗುಹ್ಯಕರೊಂದಿಗೆ ಕುಬೇರನು, ಪ್ರಮಥಗಣಗಳೊಂದಿಗೆ ಈಶಾನನು ಬಂದು ಕಾರ್ತಿಕೇಯನನ್ನು ಬೆಂಬಲಿಸಿದರು. ಎಲ್ಲ ದೇವತೆಗಳೂ ಆ ಶಿವಕುಮಾರನನ್ನು ಮುಂದೆ ಮಾಡಿಕೊಂಡು

ಗಂಗಾ ಯಮುನಾ ಮಧ್ಯದ ಅಂತರ್ವೇದಿಯಲ್ಲಿ ಬಂದು ನಿಂತುಕೊಂಡರು. ಇತ್ತ ತಾರಕಾಸುರನು ಕೂಡ ದೇವತೆಗಳ ವಧೆಗಾಗಿ ತನ್ನ ಅಪಾರ ಸೇನೆಯನ್ನು ಸಜ್ಜುಗೊಳಿಸಿದ. ಪಾತಾಳ ಮೂಲದಿಂದ ಅಸಂಖ್ಯ ಅಸುರರು ಬಂದು ಕೂಡಿಕೊಂಡರು ತಾರಕಾಸುರನ ಆ ದೈತ್ಯಸೇನೆಯಲ್ಲಿ. ದೇವಸೇನಾಪತಿಯಾದ ಕಾರ್ತಿಕೇಯನು ತಾನು ಆರೋಹಣ ಮಾಡಿದ ಐರಾವತವನ್ನು ದೇವೇಂದ್ರನಿಗೆ ಕೊಟ್ಟು ಆಕಾಶ ಯುದ್ಧಕ್ಕೆ ಅನುಕೂಲವಾಗಲೆಂದು ವಿಮಾನಾರೋಹಣ ಮಾಡಿದನು. ಇದನ್ನು ದೂರದಿಂದಲೇ ನಿರುಕಿಸಿದ ಆ ದೈತ್ಯಸೇನಾಪತಿ ತಾರಕ. ಕುಮಾರನನ್ನು ಎದುರಿಸಲಿಕ್ಕಾಗಿ ತಾನೂ ಒಂದು ಅಂಥದೇ ವಿಮಾನವನ್ನು ಏರಿದ. ಇಬ್ಬದಿಯಲ್ಲಿ ಚಾಮರ, ತಲೆಯ ಮೇಲೆ ಛತ್ರ, ಹಿಂಬದಿಯಲ್ಲಿ ಪ್ರಚಂಡ ದೈತ್ಯಸೇನೆ. ಎಲ್ಲರೂ ಶಕ್ತಿ, ಶೂಲ, ಖಡ್ಗ, ಬಿಲ್ಲುಬಾಣ, ಮುದ್ಗರ, ಪಟ್ಟಿಶ ಮುಂತಾದ ಘೋರಾಸ್ತ್ರಗಳನ್ನು ಎತ್ತಿ ಹಿಡಿದುಕೊಂಡಿದ್ದರು. ಆರಂಭವಾಯಿತು ಆ ಸುರಾಸುರ ಸೇನೆಗಳ ನಡುವೆ ಘನಘೋರ ಸಂಗ್ರಾಮ. ನೆತ್ತರಿನ ಹೊಳೆ ಹರಿಯಿತು. ರುಂಡಮುಂಡಗಳ ರಾಶಿ ಬಿದ್ದಿತು. ಕೆಲಹೊತ್ತಿನ ನಂತರ ದೇವದಾನವರಲ್ಲಿ ದ್ವಂದ್ವ ಯುದ್ಧವಾರಂಭವಾಯಿತು. ವಾಯು-ದನು, ಜಂಭ-ಯಮರಾಜ, ಬಲಿ-ವರುಣ, ಅವಧ್ಯ-ಕುಬೇರ, ಅಗ್ನಿ-ಸಲ್ಹಾದ, ಇಂದ್ರ ತಾರಕಾಸುರ ಮುಂತಾದ ಪ್ರತಿದ್ವಂದ್ವಿ ಯಕ್ಷ, ಪಿಶಾಚ, ಪ್ರಮಥ, ಗುಹ್ಯಕ ಮೊದಲಾದವರೂ ಕೂಡಿ ತಮ್ಮ ಶಸ್ತ್ರಾಸ್ತ್ರಗಳಿಂದ ಯುದ್ಧೋನ್ಮುಖರಾದರು.

ಈ ಸಮಯದಲ್ಲಿ ತಾರಕಾಸುರನು ಭಯಂಕರವಾದ ಒಂದು ಅಗ್ನಿ ಅಸ್ತ್ರವನ್ನು ಎಸೆದನು. ಇದರಿಂದ ದೇವತಾ ಸೈನ್ಯದಲ್ಲಿ ಅಗ್ನಿ ತಾಂಡವ. ನೋಡಿದಲ್ಲೆಲ್ಲ ಕಾಡಗಿಚ್ಚು. ಸಹಸ್ರಾವಧಿ ದೇವತೆಗಳು ಬೆಂದು ಬೂದಿ. ದೇವಸೇನೆಯಲ್ಲಿ ಕೋಲಾಹಲ. ಆದರೆ ಇದರಿಂದ ದೈತ್ಯರಿಗೆಲ್ಲ ಪರಮೋತ್ಸಾಹ. ದಾನವರ ವಿಜಯಘೋಷ. ಅದರಿಂದ ಉತ್ಸಾಹಗೊಂಡ ತಾರಕಾಸುರನಿಂದ ಖಿನ್ನನಾಗಿ ನಿಂತುಕೊಂಡ ದೇವರಾಜನ ಮೇಲೆ ಭೀಕರ ಅಸ್ತ್ರಪ್ರಹಾರ. ಅದರಿಂದ ದೇವೇಂದ್ರನು ಐರಾವತದಿಂದ ಉರುಳಿಬಿದ್ದ ನೆಲದ ಮೇಲೆ. ಮೂರ್ಛೆ ಆವರಿಸಿತು ಆ ಸುರರಾಜನಿಗೆ. ಇದನ್ನು ನೋಡಿದ ದೇವಸೇನೆ ಮತ್ತಷ್ಟು ಉತ್ಸಾಹ ಕುಂದಿ ಹತಪತಿತವಾಯಿತು. ಅದನ್ನು ಕಂಡು ದೇವತೆಗಳ ಸಹಾಯಕ್ಕೆಂದು ಭೂಲೋಕದಿಂದ ಬಂದ ಮುಚುಕಂದ ಮಹಾರಾಜನ ಬಾಹುಗಳಲ್ಲಿ ಶಕ್ತಿಸ್ಫುರಣ. ರೊಚ್ಚಿಗೆದ್ದು ಅವನು ತಾರಕನನ್ನು ಚಚ್ಚಿದ. ತಾರಕ ಮುಚುಕುಂದರ ನಡುವೆ ತುರುಸಿನ ತುಮುಲ. ಕೊನೆಗೆ ತಾರಕಾಸುರನಿಂದ ಶಕ್ತಿ ಆಯುಧ ಪ್ರಯೋಗ. ನೆಲದ ಮೇಲೆ ಉರುಳಿಬಿದ್ದ ಆ ಮಹಾರಾಜ. ಆದರೂ ತಕ್ಷಣದಲ್ಲಿಯೇ ಚೇತರಿಸಿಕೊಂಡ. ಬ್ರಹ್ಮಾಸ್ತ್ರವನ್ನು ಹಿರಿದ. ಅಷ್ಟರಲ್ಲಿ ನಾರದರ ಆದೇಶ. 'ಮಹಾರಾಜ. ಈ ತಾರಕನ ತಲೆ ದೇವಸೇನಾನಿ ಸ್ಕಂದನಿಗೆ ಮೀಸಲು. ನೀನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಬೇಡ.' ಅದನ್ನು ಕೇಳಿದ ರಾಜ ಮುಚುಕುಂದ ಪರಾವೃತ್ತ. ಅವನ ಸ್ಥಾನದಲ್ಲಿ ವೀರಭದ್ರನ ಆಗಮನ.

ತ್ರಿಶೂಲದಿಂದ ತಾರಕಾಸುರನ ಮೇಲೆ ಪ್ರಹಾರ. ವೀರಭದ್ರನ ತ್ರಿಶೂಲ ಪ್ರಹಾರವನ್ನು ತಾಳಲಾಗಲಿಲ್ಲ ತಾರಕಾಸುರನಿಗೆ. ಮೂರ್ಛೆ ಬಂದು ನೆಲಕ್ಕೆ ಉರುಳಿದ. ಮರುಕ್ಷಣದಲ್ಲಿ ಚೇರಿಸಿಕೊಂಡು ಎದ್ದುನಿಂತ. ತನ್ನ ಭೀಕರವಾದ ತ್ರಿಶೂಲಾಯುಧದಿಂದ ವೀರಭದ್ರನನ್ನು ತರಿದ ಆ ವೀರ ತಾರಕ. ಹೀಗೆ ತಾರಕ ವೀರಭದ್ರರ ನಡುವೆ ದಾರುಣ ಯುದ್ಧ. ವೀರಭದ್ರನ ಅನುಯಾಯಿಗಳಾದ ಶಿವಗಣಾಧೀಶರೂ ಅವನಷ್ಟೇ ಪರಾಕ್ರಮಿಗಳು. ಅವರೆಲ್ಲರೂ ದೈತ್ಯ ಸೇನೆಯ ಮೇಲೆ ವೀರಾವೇಶದಿಂದ ಎರಗಿದರು. ಅವರ ಶಸ್ತ್ರಾಸ್ತ್ರ ಪ್ರಹಾರಗಳ ಭೀಕರ ಆಘಾತವನ್ನು ತಾಳಲಾರದೇ ತತ್ತರಿಸಿ ಹೋಯಿತು ದೈತ್ಯಸೇನೆ. ತಲ್ಲಣಿಸಿ ದಿಕ್ಕು ಸಿಕ್ಕ ಕಡೆ ಓಡತೊಡಗಿತು ತಾರಕನ ಸೈನ್ಯ. ಅಂದು ಜಯಲಕ್ಷ್ಮಿಯ ಮಾಲೆ ಪ್ರಮಥ ಗಣಾಧೀಶರ ಕೊರಳಿಗೆ. ತಾರಕನ ಸೇನೆಯೆಲ್ಲವೂ ತಾಡಿತ. ಅಸ್ತ್ರಪ್ರಹಾರಗಳಿಂದ ಪೀಡಿತ ಮತ್ತು ಸಂಪೂರ್ಣ ಪರಾಜಿತ.

ಮರುದಿನ ಮತ್ತೆ ಪ್ರಾರಂಭ ಮಹಾ ಸಂಗ್ರಾಮ. ಮುನ್ನದಿನ ಸೋಲಿನಿಂದ ಕನಲಿ ಕೆಂಡವಾಗಿದ್ದ ತಾರಕಾಸುರ. ಕ್ರುದ್ಧನಾದ ಆ ದೈತ್ಯರಾಜನು ಸಿಂಹದ ಮೇಲೆ ಸವಾರಿಯಾಗಿ ದೇವಸೇನೆಯಲ್ಲಿ ಒಳನುಗ್ಗಿದ. ಹತ್ತುಸಾವಿರ ತೋಳುಗಳು ಅವನಿಗೆ ಚಿಗುರಿದಂತಾದವು. ಕುರಿಯ ಹಿಂಡಿನಲ್ಲಿ ಸಿಂಹದಂತೆ ಹೊಕ್ಕ. ಅವನ ಭೀಕರ ಶಸ್ತ್ರಾಘಾತಗಳಿಂದ ದೇವಸೇನೆಯೆಲ್ಲವೂ ಕ್ಷತವಿಕ್ಷತ. ದೈತ್ಯಸೇನೆಯ ಸಿಂಹಗಳೆಲ್ಲವೂ ಶಿವಗಣದ ವಾಹನವಾದ ಎತ್ತುಗಳನ್ನು ಕೊಂದು ತಿಂದವು. ಗಾಳಿಗೆ ಈಡಾದ ಮೋಡಗಳಂತೆ ಚದುರಿ ಚೆಲ್ಲಾಪಿಲ್ಲಿಯಾದ ಆ ದೇವಗಣವನ್ನು ಕಂಡು ಭಗವಾನ್ ಶ್ರೀ ಹರಿಯು ಶಿವಕುಮಾರನಾದ ಸ್ಕಂದನಿಗೆ ಹೇಳಿದನು.

**ಶ್ರೀ ಹರಿ :** ಕಾರ್ತಿಕೇಯ, ಈ ತಾರಕನನ್ನು ಸಂಹರಿಸಲು ನೀನೊಬ್ಬನೇ ಸಮರ್ಥ. ಆದ್ದರಿಂದ ಇವನನ್ನು ಬೇಗ ಮುಗಿಸಿಬಿಡು. ಈ ತಾರಕ ಸಾಮಾನ್ಯನಲ್ಲ. ಅವನು ಉಗ್ರತಪಸ್ಸನ್ನು ಕೈಕೊಂಡಿದ್ದ ಪೂರ್ವಕಾಲದಲ್ಲಿ. ಅವನಿಗೆ ಈ ಯುದ್ಧದಲ್ಲಿ ಗೆಲವು ಬಂದದ್ದು ಆ ತಪಸ್ಸಿನ ಪ್ರಭಾವ. ಹಿಂದೆ ಅವನು ಸ್ವರ್ಗವನ್ನು ಗೆದ್ದದ್ದು, ಸುರಸಾಮ್ರಾಜ್ಯವನ್ನು ಆಕ್ರಮಿಸಿದ್ದು ಆ ತಪೋಬಲದಿಂದಲೇ. ಮೂರು ಲೋಕಗಳನ್ನೆಲ್ಲ ತನ್ನ ಅಂಕಿತದಲ್ಲಿ ಇಟ್ಟುಕೊಂಡ ಈ ದೈತ್ಯನ ಅಧಿಕಾರ ದಾಹ ಇಂದು ಅತೀ ಉಲ್ಬಣವಾಗಿದೆ. ಪ್ರಪಂಚವನ್ನೇ ಅವನು ಈಗ ಪೀಡಿಸುತ್ತಿದ್ದಾನೆ. ಈ ಲೋಕ ಕಂಟಕನನ್ನು ನೀನು ಇಂದು ಸಂಹರಿಸಿ ಬಿಡು.'' ವಿಷ್ಣುವಿನ ಈ ಮಾತನ್ನು ನಾರದರು ಬೆಂಬಲಿಸಿದರು. ಅದನ್ನು ಕೇಳಿ ಸ್ಕಂದನಿಗೆ ನಗೆ ಬಂದಿತು. ಕೂಡಲೇ ಅವನು ತನ್ನ ವಿಮಾನದಿಂದ ಕೆಳಗೆ ಇಳಿದು ಬಿಟ್ಟನು. ಕೈಯಲ್ಲಿ ತನ್ನ ಅಮೋಘಶಕ್ತಿ ಆಯುಧವನ್ನು ಎತ್ತಿದನು. ಉಲ್ಕೆಯಂತೆ ಹೊಳಪು ಅದರದು. ಬೆಂಕಿಯ ಜ್ವಾಲೆಗಳನ್ನೇ ಉಗುಳುತ್ತಿತ್ತು ಆ ಅಸ್ತ್ರ. ಅದನ್ನು ಕೈಯಲ್ಲಿ ಹಿಡಿದು ಕುಮಾರನು ತಾರಕಾಸುರನ ಕಡೆಗೆ ಧಾವಿಸಿದ. ಅನೇಕ ದೈತ್ಯ ವೀರರನ್ನು ಸಂಹರಿಸಿದ. ಆ ಬಾಲಕನನ್ನು ತಾನೇ

ಕೊಲ್ಲಬೇಕೆಂದು ತಾರಕನೂ ಮುಂದಾದ. ಆದರೆ ಮಧ್ಯೆ ದೇವೇಂದ್ರನು ಮುಂಚಿನ ದಿನ ತನಗೆ ಆಘಾತ ಮಾಡಿದ್ದರ ಸೇಡನ್ನು ತೀರಿಸಿಕೊಳ್ಳಬೇಕೆಂದು ತಾನೇ ಮುಂದಾಗಿ ವಜ್ರಾಯುಧದಿಂದ ತಾರಕನಿಗೆ ಭೀಕರ ಪ್ರಹಾರ ಮಾಡಿದ. ಇಂದ್ರನ ವಜ್ರವು ಬಹುವೇಗದಿಂದ ಅಪ್ಪಳಿಸಿತು ತಾರಕನ ತಲೆಗೆ. ತಕ್ಷಣವೇ ನೆಲಕ್ಕೆ ಕುಸಿದ ಆ ದೈತ್ಯರಾಜ. ಅದೆಷ್ಟು ಸಮಯ ! ಒಂದು ಕ್ಷಣ ಮಾತ್ರ. ಮರುಕ್ಷಣದಲ್ಲಿಯೇ ಸಾವರಿಸಿಕೊಂಡು ಎದ್ದುನಿಂತ. ಅವನ ಹೃದಯದಿಂದ ರೋಷದ್ವೇಷಗಳು ಎದ್ದು ಕುಣಿಯತೊಡಗಿದವು. ಐರಾವತದ ಹೆಗಲ ಮೇಲೆ ಹತ್ತಿ ಹೋರಾಡುತ್ತಲಿರುವ ಪುರೂಹೂತನೆಡೆಗೆ ತೂಗಿ ಒಗೆದ ತನ್ನ ಶಕ್ತ್ಯಾಯುಧವನ್ನು ಆ ಸುರವೈರಿ. ತಕ್ಷಣವೇ ಇಂದ್ರ ಹೊರಳಿದ ಆನೆಯ ಹೆಗಲಿನಿಂದ ಭೂಮಿಯ ಬಗಲಿಗೆ. ಅದನ್ನು ಕಂಡು ಕೋಪಗೊಂಡು ಕೆಂಡದ ಉಂಡೆಯಾದ ವೀರಭದ್ರ. ತನ್ನ ವಜ್ರಾಯುಧದಂತಿರುವ ತ್ರಿಶೂಲವನ್ನು ಎತ್ತಿ ಇಂದ್ರನ ದೇಹವನ್ನು ರಕ್ಷಣೆಮಾಡುತ್ತಲೇ ತಾರಕಾಸುರನ ಮೇಲೆ ಎರಗಿದ. ಭಯಂಕರ ಪ್ರಹಾರವನ್ನು ಮಾಡಿದ. ತಾರಕಾಸುರನ ನಡುನೆತ್ತಿಗೆ ಏಟುಬಿದ್ದಿತು ಆ ತ್ರಿಶೂಲದಿಂದ. ಕ್ಷಣಮಾತ್ರದಲ್ಲಿ ತಾರಕಾಸುರ ಮರಳಿ ಮಣ್ಣಿಗೆ. ದೈತ್ಯಸೇನೆಯಲ್ಲಿ ಹಾಹಾಕಾರ. ದೇವತಾದಳದಲ್ಲಿ ಪ್ರಶಂಸೆಯ ಉದ್ಗಾರ. ಇದೆಲ್ಲವೂ ಒಂದು ಕ್ಷಣ ಮಾತ್ರ. ಬಿದ್ದರೂ ಮರುಕ್ಷಣದಲ್ಲಿಯೇ ಜಿದ್ದಿನಿಂದ ಜಿಗಿದು ನಿಂತ ಬಲಿಷ್ಠನಾದ ತಾರಕ. ಕೋಪಾಟೋಪದಿಂದ ಅವನು ಒಮ್ಮೆಲೆ ತನ್ನ ಶಕ್ತಿ ಆಯುಧವನ್ನು ಎತ್ತಿದ. ವೀರಭದ್ರನ ವಕ್ಷಸ್ಥಲಕ್ಕೆ ಗುರಿಯಿಟ್ಟ. ಪ್ರಾಣಾಂತಿಕವಾಗಿತ್ತು ವೀರಭದ್ರನಿಗೆ ಆ ಆಘಾತ. ಬೇರೊಬ್ಬರಾಗಿದ್ದರೆ ಯಮ ಪಟ್ಟಣವನ್ನೇ ಮುಟ್ಟಿ ಬಿಡುತ್ತಿದ್ದರು. ವೀರಭದ್ರನಿಗೆ ಮಾತ್ರ ಮೃತ್ಯು ಹೆದರಿ ಮೂರ್ಛೆ ಮಾತ್ರ ಬಂದಿತು. ಈಗ ಹಾಹಾಕಾರದ ಪಾಳಿ ಶಿವಗಣದ್ದಾಯಿತು. ದೇವಗಣವೂ ಈ ಹಾಹಾಕಾರದ ದುಃಖೋದ್ಗಾರಗಳಿಗೆ ದನಿಕೂಡಿಸಿತು.

ದೈತ್ಯರ ಜಯಘೋಷಕ್ಕೆ ಬಾನು ಬಿರಿಯಿತು. ಭೂಮಿ ಬಾಯಿ ತೆರೆಯಿತು. ಆದರೆ ಅದೇ ವೈರಿಗಳ ಜಯಘೋಷದಿಂದ ವೀರಭದ್ರನಿಗೂ ಸನ್ನಿಹಿತವಾಯಿತು ಮತ್ತೆ ಎಚ್ಚರ. ಇಮ್ಮಡಿಸಿದ ಕೋಪದಿಂದ ಹೊಳೆಯುವ ತ್ರಿಶೂಲದ ಉದ್ಧರಣೆ. ತಾರಕನ ಮರಣ. ಒದಗಿತೆ ಅಷ್ಟರಲ್ಲಿ ಹಿಂದೆ ನಿಂತಿದ್ದ ಸ್ಕಂದ - 'ವೀರಭದ್ರ, ಇವನ ತಲೆಯನ್ನು ನೀನು ಈಗಲೇ ಛಿದ್ರ ಮಾಡಬೇಡ. ಇನ್ನೂ ಕೆಲಕಾಲ ಸುಭದ್ರವಾಗಿರಲಿ ಅವನ ಶಿರ ಅದೇ ಶರೀರದ ಮೇಲೆ, ಅದನ್ನು ಇಳಿಸುವ ಭಾರ ನನ್ನದು.' ಎಂದು ಹೇಳಿ ಕಡುಗಲಿಯಾದ ಕಾರ್ತಿಕೇಯನು ಸಿಂಹನಾದ ಮಾಡಿದ. ಅದರ ಹಿಂದೆಯೇ ಬಂದಿತ್ತು ದೇವತೆಗಳ ಜಯಜಯಕಾರ. ದೇವ ದುಂದುಭಿಗಳು ಮೊಳಗುತ್ತಿರುವಾಗಲೇ ಕಾರ್ತಿಕೇಯನು ತಾರಕಾಸುರನ ಮೇಲೆ ಏರಿ ಬಂದ. ತನ್ನ ಶಕ್ತ್ಯಾಯುಧವನ್ನು ತೂರಿದ ವೈರಿಯ ಕಡೆಗೆ. ಇತ್ತ ದೈತ್ಯ ಸೇನಾಪತಿಯಾದ ತಾರಕಾಸುರನು ಕೂಡ ಅದೇ ಸಮರ ಭಾಷೆಯಲ್ಲಿಯೇ ಸ್ಕಂದನಿಗೆ ಉತ್ತರಿಸಿದ. ಶಕ್ತಿಗೆ ಪ್ರತಿಶಕ್ತಿಯನ್ನು ಹೂಡಿದ. ಶಕ್ತಿ

ಪಾಣಿಗಳಾದ ಆ ಇಬ್ಬರೂ ಶಕ್ತಿಮಾನ್ ವೀರರಲ್ಲಿ ಒಳ್ಳೆಯ ನಿಕರದ ಕಾಳಗ ಮಸಗಿತು. ಪರಸ್ಪರ ಶಸ್ತ್ರಾಸ್ತ್ರಗಳ ಘರ್ಷಣೆಯಿಂದ ಕೆಂಡಗಳ ಉಂಡೆಗಳೇ ಉರುಳುತ್ತಿದ್ದವು. ಇಬ್ಬರೂ ಸಂಗ್ರಾಮದಲ್ಲಿ ಪಳಗಿದ ಹುಲಿಗಳು. ಇಬ್ಬರ ಕೈಯಲ್ಲಿಯೂ ಶಕ್ತ್ಯಾಯುಧಗಳು. ಒಂದು ಭೀಕರ ಮತ್ತೊಂದು ಭೀಷಣ. ಇಬ್ಬರೂ ಒಬ್ಬರ ಮೇಲೊಬ್ಬರು ಹೊಂಚು ಹಾಕಿ ಮಿಂಚಿನಂತೆ ಎರಗುತ್ತಿದ್ದರು. ಇನ್ನೊಬ್ಬ ಆ ವಿದ್ಯುದಾಘಾತವನ್ನು ಚಾಕಚಕ್ಯತೆಯಿಂದಲೇ ತಪ್ಪಿಸಿಕೊಳ್ಳುತ್ತಿದ್ದ. ಅಂತ ಪಾರವಿಲ್ಲದೇ ನಡೆಯಿತು ಈ ಷಣ್ಮುಖ ಹಾಗೂ ತಾರಕಾಸುರರಲ್ಲಿಯ ಪ್ರಾಣಾಂತಿಕ ಹೋರಾಟ. ದೇವತೆಗಳಿಗೂ ಕೂಡ ತಿಳಿಯದಂತಾಯಿತು ಇವರಿಬ್ಬರಲ್ಲಿ ಯಾರು ಯಾರನ್ನು ಗೆಲ್ಲುವರು ! ಯಾರು ಯಾರನ್ನು ಕೊಲ್ಲುವರು ! ಎಂದು. ಏತನ್ಮಧ್ಯೆ ಆಕಾಶವಾಣಿ ''ವೀರಾಧಿವೀರ ತಾರಕ. ಈ ಸ್ಕಂದ ಅವನಿಗೂ ಮಾರಕ. ಎಲ್ಲ ದೈತ್ಯರ ಸಂಹಾರಕ''. ಈ ದೈವೀ ವಾಣಿಯಿಂದ ದೇವತೆಗಳಿಗೆಲ್ಲ ಸಂತಸ. ಯುದ್ಧ ಮಾಡಲು ಮತ್ತಿಷ್ಟು ಹುಮ್ಮಸ. ಕಾರ್ತಿಕೇಯನ ಉತ್ಸಾಹ ದ್ವಿಗುಣಿತ, ಬಲ ಶತಗುಣಿತ. ಈ ದೇವತಾ ವೈರಿಯನ್ನು ಇಂದೇ ಸಂಹರಿಸಬೇಕೆಂದು ಮನಸ್ಸಿನಲ್ಲಿಯೇ ಸಂಕಲ್ಪ.

ದೊಡ್ಡವರ ''ಜಾನಾತಿ ಇಚ್ಛತಿ ಯತತೇ''ಗಳ ನಡುವೆ ಅಂತರ ಇರುವದಿಲ್ಲ. ಇಚ್ಛೆಯ ಜೊತೆಗೆ ಪ್ರಯತ್ನ ಪ್ರಾರಂಭವಾಗಿಯೇ ಬಿಟ್ಟತು. ಅದರ ಫಲವೇ ತಾರಕಾಸುರನ ಹೃದಯ ಪೀಠದ ಮೇಲೆ ಸ್ಕಂದನಿಂದ ಭೀಕರ ಶಕ್ತಿಪಾತ. ಇಂಥ ಪ್ರಹಾರ ಇನ್ನೊಬ್ಬರಿಗಾಗಿದ್ದರೆ ಕೂಡಲೇ ಸಂಹಾರವಾಗುತ್ತಿತ್ತು. ಆದರೆ ತಾರಕನಂಥ ದೈತ್ಯೇಶ್ವರರಿಗೆ ಈ ಶಕ್ತಿಪ್ರಹಾರ ಒಂದು ಹೂವಿನ ಹಾರದಿಂದ ಹೊಡೆದಂತೆ. ಹೊಡೆದಿದ್ದರ ಅರಿವೇ ಇರಲಿಲ್ಲ ಆ ವೀರಾಧಿವೀರನಿಗೆ. ಆದರೆ ಇದರಿಂದ ಅವನ ಕೋಪದ ಕುಳ್ಳಿಗೆ ಕಿಡಿ ತಾಕಿಸಿದಂತಾಯಿತು. ಸಿಡಿದು ಕಾಡ್ಗಿಚ್ಚಾದ ಆ ವೀರಾಗ್ರಣಿ. ತನ್ನ ಶಕ್ತಿಯನ್ನು ಎತ್ತಿ ತನ್ನ ಬಲವನ್ನೆಲ್ಲ ಕೇಂದ್ರೀಕರಿಸಿ ಷಣ್ಮುಖನ ಮೇಲೆ ಪ್ರಹರಿಸಿದ. ಮೂರ್ಛೆ ಆ ದೇವತಾಸೇನಾಪತಿಯ ಮರಣವನ್ನು ತಪ್ಪಿಸಿತು. ಆದರೆ ಅತ್ಯಲ್ಪ ಸಮಯದಲ್ಲಿಯೇ ಚೇತರಿಸಿಕೊಂಡು ಎದ್ದು ನಿಂತ ಆ ಸ್ಕಂದ ಕುಮಾರ. ಋಷಿ ದೇವತೆಗಳ ಪ್ರಶಂಸೆಯಿಂದ ಉತ್ಸಾಹಗೊಂಡ. ವನರಾಜ ಸಿಂಹವು ಆನೆಯ ಮೇಲೆ ಎರಗುವಂತೆ ಎರಗಿ ದ್ವೇಷೋದ್ರೇಕದಿಂದ ತಾರಕನನ್ನು ಚಚ್ಚತೊಡಗಿದ. ಈ ಸಂದರ್ಭದಲ್ಲಿ ಬೀಸುವ ಗಾಳಿಗೂ ಉಸಿರುಗಟ್ಟಿತು. ಸೂರ್ಯನ ಕಾಂತಿ ಕಳೆಗಟ್ಟಿತು. ನೆಲ ನಡುಗಿತು. ಮುಗಿಲು ಸಿಡಿಯಿತು. ಆಗ ಪಾರ್ವತೀ ನಂದನನು ತಲ್ಲಣಿಸಿ ಹೋದ ಸಜ್ಜನರನ್ನು ಸಮಾಧಾನ ಪಡಿಸಿದ. ಮನದಲ್ಲಿಯೇ ತನ್ನ ಮಾತೆಗೆ ನಮಿಸಿದ. ತಂದೆಗೆ ವಂದಿಸಿದ. ಶಿವನನ್ನು ನೆನೆದು ಶಕ್ತಿಯನ್ನು ಸ್ಮರಿಸಿ, ಕೈ ಎತ್ತಿ, ಶಕ್ತ್ಯಾಯುಧವನ್ನು ತನ್ನ ಮೈಯಲ್ಲಿಯ ಸಾಮರ್ಥ್ಯವನ್ನೆಲ್ಲ ಒಗ್ಗೂಡಿಸಿ ತಾರಕನ ಮೇಲೆ ಒಂದೇ ಒಂದು ಏಟನ್ನು ಕೊಟ್ಟ. ಅದರಿಂದ ಆ ದೈತ್ಯ ಪ್ರಾಣವನ್ನೇ ಬಿಟ್ಟ. ಧರಾತಲಕ್ಕೆ ಉರುಳಿ ಬಿದ್ದು ಬಿಟ್ಟ.

ತಾರಕನ ಈ ಮರಣಾಂತಿಕ ಧರಾಪಾತವನ್ನು ನೋಡುತ್ತಿದ್ದ ಸುರಾಧೀಶ್ವರನ ಸೈನಿಕರೆಲ್ಲರಿಗೂ ಆಶ್ಚರ್ಯ, ಭಯ, ಕೌತುಕ, ಆನಂದ ಎಲ್ಲವೂ ಏಕ ಕಾಲಕ್ಕೆ ಆದವು. ಅಸುರ ಸೈನಿಕರೆಲ್ಲರಿಗೂ ಅಷ್ಟೇ ಆಘಾತ, ಉದ್ವೇಗ, ನೈರಾಶ್ಯ, ಸಂತಾಪ, ಭಯ, ಭ್ರಾಂತಿಗಳು ಉಂಟಾಗಿ ಅವರು ಕಂಗೆಟ್ಟು ಓಡತೊಡಗಿದರು. ಮಗನ ಈ ವಿಜಯದ ವಾರ್ತೆಯನ್ನು ತಿಳಿದ ತಕ್ಷಣವೇ ಆಗಮಿಸಿದರು ಗಿರಿಜಾಶಂಕರರು. ಮಹಾದೇವಿಯು ಜಯಲಕ್ಷ್ಮಿ ವರಿಸಿದ ತನ್ನ ಆ ಸುಕುಮಾರ ಕುಮಾರನನ್ನು ತೊಡೆಯ ಮೇಲೆ ಕೂಡಿಸಿಕೊಂಡು ಬಿಗಿದಪ್ಪಿ ಆನಂದಬಾಷ್ಪಗಳನ್ನು ಉದುರಿಸಿದಳು. ದೇವಾಂಗನೆಯರು ಈ ತಂದೆ ತಾಯಿ ಹಾಗೂ ಮಗನನ್ನು ಕೂಡಿಸಿ ಆನಂದದಿಂದ ಆರತಿ ಮಾಡಿದರು. ಅನಂತರ ಪರ್ವತ ಸಾರ್ವಭೌಮನಾದ ಹಿಮಾಲಯನೂ ತನ್ನ ಗಿರಿಪರಿವಾರದೊಂದಿಗೆ ಅಲ್ಲಿಗೆ ಬಂದು ಕುಮಾರನನ್ನು ಹೊಗಳಿದ. ದೇವೇಂದ್ರನು ತನ್ನ ಸಾವಿರ ಕಣ್ಣುಗಳನ್ನು ಅರಳಿಸಿ ಆನಂದದಿಂದ ನೋಡಿದ. ಸುರಲೋಕದ ಪುಷ್ಪ ವೃಷ್ಟಿಯೊಂದಿಗೆ ಸ್ತೋತ್ರ ವೃಷ್ಟಿಯನ್ನೂ ಸೇರಿಸಿ ಸುರಿಸಿದ. ಆ ನಂತರ ಗಂಧರ್ವ ಅಪ್ಸರಾಸ್ತ್ರೀಯರು ಸಂಗೀತ, ನೃತ್ಯ, ಮಂತ್ರ, ಪಾಠ, ಪೂಜೆ ಇತ್ಯಾದಿ ಸೇವೆಗಳನ್ನು ಸಲ್ಲಿಸಿದರು. ಋಷಿಗಳೇ ! ಕುಮಾರ ವಿಜಯ ಎಂಬ ಈ ಸ್ಕಂದ ಚರಿತ್ರೆಯು ಅದ್ಭುತ ರಮ್ಯ, ಕೇಳಲಿಕ್ಕೂ ರಮ್ಯ, ಇದರ ಶ್ರವಣ ಪಾರಾಯಣಗಳಿಂದ ಇಷ್ಟಾರ್ಥ ಸಿದ್ಧಿ. ಸರ್ವ ಸಮೃದ್ಧಿ ಹಾಗೂ ಸರ್ವ ಪಾಪಗಳ ಪರಿಹಾರ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಹದಿಮೂರನೇ ಅಧ್ಯಾಯ ಮುಗಿದುದು.**

# ಯಮಧರ್ಮನಿಂದ ಶಿವನ ಸ್ತುತಿ ಶಿವನಿಂದ ಯಮನಿಗೆ ತತ್ತ್ವೋಪದೇಶ

ಅಧ್ಯಾಯ -14

**ಲೋಮಶ** : ಹಿಂದೊಮ್ಮೆ ಪಿತೃಪತಿ, ಪರೇತಪತಿ ಎಂದು ಪ್ರಸಿದ್ಧನಾದ ಯಮರಾಜ 'ಶಂಕರನೇ ಜಗದ್ರಕ್ಷಕ' ಎಂಬ ಮಾತನ್ನು ಕೇಳಿದ್ದ. ಇದನ್ನು ಸಂಪೂರ್ಣವಾಗಿ ಅರಿತುಕೊಳ್ಳಬೇಕೆಂದು ಆತ ಧಾವಿಸಿ ಬಂದ ಶಿವನ ಸನ್ನಿಧಿಗೆ. ಏಕಾಗ್ರಚಿತ್ತದಿಂದ ಶಿವನನ್ನು ಸ್ತೋತ್ರಮಾಡಿ ಪ್ರಶ್ನೆ ಮಾಡಿದ.

**ಯಮ** : ದೇವ ದೇವ ! ನೀನು ಸರ್ವ ಜಗತ್ತಿಗೆ ಕಲ್ಯಾಣಕಾರಕ. ಯಾವನಾದರೂ ತಪಸ್ಸು ಮಾಡಿದರೆ ಅವನ ಮೇಲೆ ನೀನು ಪ್ರಸನ್ನನಾಗುವೆ. ಬೇಡಿದ ವರ ನೀಡುವೆ. ಇದರಂತೆ ಲೋಕ ಪಿತಾಮಹನಾದ ಬ್ರಹ್ಮನು ಧರ್ಮಕಾರ್ಯ ಮಾಡಿದವರಿಗೆ ಪುಣ್ಯಫಲಗಳನ್ನು ನೀಡುವನು. ಇದರಂತೆ ವೇದ ವೇದಾಂತಗಳನ್ನು ಅಧ್ಯಯನ ಮಾಡಿ ಆತ್ಮ ತತ್ವವನ್ನು ಅರಿತು ಧ್ಯಾನೋಪಾಸನೆ ಗೈಯುವವರಿಗೆ ಭಗವಾನ್ ವಿಷ್ಣು ಮೋಕ್ಷಾದಿ ಪುರುಷಾರ್ಥಗಳನ್ನು ನೀಡುವನು. ದುರ್ಗಾದೇವಿಯು ತನ್ನನ್ನು ಆರಾಧಿಸುವವರಿಗೆ ಸ್ವರ್ಗಾದಿ ಸುಖಗಳನ್ನೆಲ್ಲ ಕೊಡುವಳು. ಇದರಂತೆ ಸೂರ್ಯನ ಆರಾಧನೆಯಿಂದ ಆರೋಗ್ಯ. ಗಣಪತಿಯ ಸೇವೆಯಿಂದ ವಿಘ್ನನಿವಾರಣ, ಗೌರೀ ಪೂಜೆಯಿಂದ ಸೌಭಾಗ್ಯ ಮುಂತಾದ ಫಲಪ್ರಾಪ್ತಿಯೂ ಜಗತ್ತಿನಲ್ಲಿ ಕಂಡಿವೆ. ಈ ಎಲ್ಲ ದೇವತೆಗಳು ಜೀವಿಗಳಿಗೆ ಸೇವೆ, ಆರಾಧನೆ, ಉಪಾಸನೆ, ಯಜ್ಞ, ಯಾಗ ಮುಂತಾದ ಧರ್ಮಕರ್ಮಗಳನ್ನು ಮಾಡಿದರೆ ಮಾತ್ರ ಆ ಕರ್ಮ ವಿಧಾನಕ್ಕೆ ಅನುಗುಣವಾದ ಪುಣ್ಯವನ್ನೂ ಅದಕ್ಕೆ ಅನುರೂಪವಾದ ಫಲೋಪಭೋಗ ಭಾಗ್ಯಗಳನ್ನೂ ನೀಡುವರು. ಆದರೆ ನಿಮ್ಮ ಈ ಕುಮಾರ ಕಂಠೀರವನಲ್ಲಿ ಮಾತ್ರ ಎಲ್ಲವೂ ತಿರುವು ಮುರುವು. ಇವನು ಸ್ವರ್ಗದ ಬಾಗಿಲುಗಳನ್ನು ಕಿತ್ತಿಬಿಟ್ಟಿದ್ದಾನೆ. ಸುಖದ ಭಾಂಡಾರದ ಬೀಗವನ್ನೇ ತೆಗೆದು ಹಾಕಿದ್ದಾನೆ. ಈ ನಿಮ್ಮ ವರ ಕುಮಾರನನ್ನು ಕಣ್ಣಿನಿಂದ ಕಂಡವರಿಗೆಲ್ಲ ಸ್ವರ್ಗ. ಅವನ ಪುಟ್ಟ ಪಾದಗಳನ್ನು ಮುಟ್ಟಿದವರಿಗೆಲ್ಲ ಮುಕ್ತಿ ಮಂದಿರವೇ ಮುಕ್ತದ್ವಾರ. ಇದೇನು ಆಶ್ಚರ್ಯ! ಇದು ಹೀಗೆ ಹೇಗೆ ಆಗುವದು? ಇಂದ್ರಿಯಗಳನ್ನು ಬಿಗಿಹಿಡಿದು ಕಾಮಕ್ರೋಧಗಳನ್ನು ತಡೆಹಿಡಿದು, ಯಜ್ಞಯಾಗಾದಿಗಳನ್ನು ಮಾಡಿ ಮಡದಿ ಮಕ್ಕಳನ್ನು ತ್ಯಜಿಸಿ, ಕಾಡು ಬೀಡುಗಳನ್ನು ಆಶ್ರಯಿಸಿ, ತಪಂಗೈಯುವ ತ್ಯಾಗಿ, ಯೋಗಿ, ಯಾಗಿ, ವಿರಾಗಿ, ಜ್ಞಾನಿ, ಮೌನಿ, ಸಾಧು ಸಂತರೂ ಕೂಡ ತಮ್ಮ ಜೀವಿತಾವಧಿ ದೇಹದಂಡನೆ ಮಾಡಿ ಯಾವ ಪುಣ್ಯಫಲವನ್ನು ಪಡೆಯುವರೋ ಅದನ್ನು ಈಗ ದುರಾಚಾರಿಗಳು ಅವ್ಯಾಪಾರಿಗಳು, ಪಾಪಿಷ್ಠರು, ದರ್ಪಿಷ್ಠರು, ಘಾತಕಿಗಳು, ಪಂಚ ಮಹಾಪಾತಕಿಗಳೂ ಕೂಡ ಯಾವ ಆಯಾಸವೂ ಇಲ್ಲದೇ ಕೇವಲ ಈ ಸ್ಕಂದ ದೇವನ ದರ್ಶನದಿಂದಲೇ ಪಡೆದು ಬಿಡುವರು. ಇದು ಎಂಥ ವಿಚಿತ್ರ ! ಅಧಮಾಧಮರೂ ನೀಚಕರ್ಮ

ಮಾಡುವ ಚಂಡಾಲರೂ ಈ ನಿಮ್ಮ ಕುಮಾರ ಸ್ವಾಮಿಯ ದರ್ಶನ ಮಾತ್ರದಿಂದ ಸ್ವರ್ಗಾಪವರ್ಗಗಳನ್ನು ಸುಲಭವಾಗಿಯೇ ಹೊಂದಿ ಬಿಡುತ್ತಿದ್ದಾರೆ. ಇದೆಂಥ ವಿಪರ್ಯಾಸ ! ಇದೆಂಥ ಧರ್ಮದ ಆಭಾಸ !

**ಮಹೇಶ್ವರ :** ಧರ್ಮರಾಜ ! ಇದರಲ್ಲಿ ಆಶ್ಚರ್ಯವೇನಿದೆ ? ಭಗವಂತನನ್ನು ಸದಾ ಸರ್ವದಾ ಧ್ಯಾನ ಮಾಡುವ ಶಿವಭಕ್ತರು ಭೂಲೋಕದಲ್ಲಿಯ ನನ್ನ ಪ್ರತಿನಿಧಿಗಳು. ದೇವರ ದರ್ಶನದಿಂದ ಎಂಥೆಂಥ ಪಾಪಗಳು ಪರಿಹಾರವಾಗುವುದಿಲ್ಲ! ಭಗವದ್ ಭಕ್ತರು ಈ ವಿಷಯದಲ್ಲಿ ಭಗವಂತನಿಗಿಂತ ಒಂದು ಕೈ ಮಿಗಿಲು. ಅಂಥ ಏಕಾಂತ ಭಕ್ತರ ದರ್ಶನದಿಂದ ಈ ಪ್ರಪಂಚದಲ್ಲಿ ಪರಿಹಾರವಾಗದ ಪಾಪವೇ ಇಲ್ಲ. ಸ್ಕಂದ ಮಹಾಜ್ಞಾನಿ, ದೇವಭಕ್ತ, ಶೈವಾಗ್ರಣಿ, ದೇವತಾ ಕಾರ್ಯಕ್ಕಾಗಿ ತನ್ನ ಜೀವನವನ್ನೇ ಮುಡುಪಾಗಿಟ್ಟ ಏಕೈಕ ದೇವತೆ. ನನ್ನ ಹಾಗೂ ಪಾರ್ವತಿಯ ಪ್ರೇಮದ ಪುತ್ಥಳಿ. ಸಾಧು ಸಜ್ಜನರ ಉದ್ಧಾರಕ್ಕಾಗಿ ಸಿದ್ಧ ಹಸ್ತ. ಇಂಥ ಮಹಾವ್ಯಕ್ತಿಯನ್ನು ಭಕ್ತಿಯಿಂದ ಪೂಜಿಸಿದವರಲ್ಲಿ ಪಾಪಗಳು ಉಳಿಯುವವೇ ? ಪಾಪಗಳೆಲ್ಲವೂ ಲೋಪವಾದ ಬಳಿಕ ಅಥವಾ ನಾಶವಾದ ಬಳಿಕ ಕುಮಾರಸ್ವಾಮಿಯ ದರ್ಶನದ ಪುಣ್ಯದ ಫಲದಿಂದ ಸ್ವರ್ಗಾದಿ ದಿವ್ಯಲೋಕ ಪ್ರಾಪ್ತಿಯಾದರೆ ನೀವೇಕೆ ಆಶ್ಚರ್ಯ ಪಡಬೇಕು? ದೊಡ್ಡವರ ದರ್ಶನವು ಎಂಥ ಪಾಪಿಯೇ ಇರಲಿ ಸದ್ ಬುದ್ಧಿಯನ್ನು ಹುಟ್ಟಿಸುವದು. ಮೊದಲು ದುಷ್ಟನೂ ದುರಾಚಾರಿಯೂ ಆದ ದುರುಳನು ದೇವರ ಹಾಗೂ ದೇವಭಕ್ತರ ದರ್ಶನವಾದ ಬಳಿಕ ಮನಃಪರಿವರ್ತನೆಯಾಗಿ ನಂತರ ಪುಣ್ಯ ಕರ್ಮಗಳನ್ನು ಮಾಡತೊಡಗುವನು. ತೀರ್ಥಕ್ಷೇತ್ರ ಯಾತ್ರೆ ಗೈಯುವನು. ತೀರ್ಥ ಸ್ನಾನ ದಾನ ಯಜ್ಞಾನುಷ್ಠಾನಗಳಿಂದ ಮಾನವನ ಅಂತಃಕರಣವು ಶುದ್ಧವಾಗುವದು. ಶುದ್ಧಾಂತಃಕರಣದಿಂದ ದೇವರ ಆರಾಧನೆ ಜ್ಞಾನಧ್ಯಾನಗಳಿಂದ ಸ್ವರ್ಗಾಪವರ್ಗಗಳು ಕೈಯಲ್ಲಿ ಕುಣಿದಾಡುವವು. ಇಂಥ ಆತ್ಮಜ್ಞಾನಿಗೆ ಪುನಃ ಸಂಸಾರ ಬಂಧನ ಉಂಟಾಗುವದಿಲ್ಲ. ಆದರೆ ಈ ಹಂತವನ್ನು ಮಾನವನು ಮುಟ್ಟುವದು ಮಾತ್ರ ಒಮ್ಮೆಲೆ ಸುಲಭ ಸಾಧ್ಯವಲ್ಲ. ಕಾಮ ಕ್ರೋಧಗಳನ್ನೂ ಲೋಭ ಮೋಹಗಳನ್ನೂ ಸಂಪೂರ್ಣವಾಗಿ ತೊರೆಯಬೇಕು.

**ಯಾವತ್ ಕಾಮಶ್ಚ ಲೋಭಶ್ಚ ರಾಗದ್ವೇಷವ್ಯವಸ್ಥಿತಿಃ ।**
**ನಾಪ್ನುವಂತಿ ಪರಾಂ ಸಿದ್ಧಿಂ ಶಬ್ದಮಾತ್ರೈಕ ಬೋಧತಃ ॥**

ಕಾಮ, ಕ್ರೋಧ, ರಾಗ, ದ್ವೇಷಗಳು ಹೃದಯದಲ್ಲಿ ಪಟ್ಟು ಹಿಡಿದು ಗಟ್ಟಿಯಾಗಿ ಕುಳಿತುಕೊಂಡಿರುವವರೆಗೆ ಬರೀ ಪುಸ್ತಕೀಯ ವೇದಾಂತ ಜ್ಞಾನದಿಂದಾಗಲೀ ಭಕ್ತಿ ಇಲ್ಲದ ಧ್ಯಾನಭಜನೆಗಳಿಂದಾಗಲಿ ಅಥವಾ ಮಂತ್ರ ಘೋಷದ ಮಂಜುಳತರ ಉಚ್ಚ ಸ್ವರದ ಸದ್ದುಗದ್ದಲಗಳಿಂದಾಗಲಿ ನಿಜವಾದ ಸಿದ್ಧಿಯು ಅಥವಾ ಭಗವತ್ ಪ್ರಾಪ್ತಿಯು ಎಂದಿಗೂ ಆಗುವದಿಲ್ಲ. ಕೇವಲ ಶಾಸ್ತ್ರಜನ್ಯ ಜ್ಞಾನದಿಂದ ಮಾತ್ರ ಮೇಲೆ ಮೇಲೆಯೇ ಭಗವತ್ ಸ್ವರೂಪವನ್ನು ಅರಿತು ಪರೋಪದೇಶಗೈಯುತ್ತ ಶಬ್ದಾಡಂಬರ ಮಾಡುವವರಿಗೆ ಆ ಆತ್ಮ ತತ್ವವು ಎಂದಿಗೂ ನಿಲುಕದು.

**ಯೈಸ್ತ್ಯಕ್ತೋ ಮಮತಾಭಾವೋ ಲೋಭ ಮೋಹೌ ನಿರಾಕೃತೌ ।**
**ತೇ ಯಾಂತಿ ಪರಮಂ ಸ್ಥಾನಂ ಕಾಮ ಕ್ರೋಧ ವಿವರ್ಜಿತಾಃ ॥**

ಮಮಕಾರ ಅಹಂಕಾರಗಳನ್ನು ಬಿಟ್ಟು, ಮೋಹ ತೊರೆದು, ಲೋಭವನ್ನು ವರ್ಜಿಸಿ, ಕಾಮವನ್ನು ಕಳೆದುಕೊಂಡು, ಕ್ರೋಧವನ್ನು ತ್ಯಜಿಸಿ, ಪರಮಾತ್ಮನ ಹಾಗೂ ಸಂತರ ಸಂತತ ಧ್ಯಾನ ಮಾಡುವವರು ಮಾತ್ರ ಪರಮ ಪದವನ್ನು ಹೊಂದುವರು.

ಈ ಪ್ರಪಂಚವೆಲ್ಲವೂ ಹೋತಿನ ಮೊಲೆಯಂತೆ ನಿರರ್ಥಕವೂ, ತಾವರೆಯ ದಳದ ಮೇಲಿನ ತೋಯದ ತುಂತುರು ಕಣದಂತೆ ಚಂಚಲವೂ ನಶ್ವರವೂ ಆಗಿದೆ. ಇದೆಲ್ಲವೂ ನಿಸ್ಸಾರ. ಈ ಸಂಸಾರದಲ್ಲಿ ಇದ್ದ ಮಾನವನು ಧೂಮಸ್ತೋಮದಂತೆ ಲಘುತರ. 'ಅಜ್ಞಾನಾವೃತ' ಎಂದು ತಿಳಿದು ಇದೆಲ್ಲವನ್ನು ಪರಿತ್ಯಜಿಸಿ ಪರಮಾತ್ಮ ತತ್ವವನ್ನೇ ಸಂತತವೂ ಚಿಂತಿಸಬೇಕು. ನೀನಾದರೂ ಇಂಥ ಆತ್ಮ ಚಿಂತನ ರೂಪವಾದ ಭಗವದುಪಾಸನೆಯನ್ನು ಗೈದು ಆತ್ಮೋದ್ಧಾರವನ್ನು ಮಾಡಿಕೋ.

**ಸೂತ** : ಭಗವಾನ್ ಶಂಕರನ ಈ ಮಾರ್ಮಿಕ ಉಪದೇಶವನ್ನು ಕೇಳಿ ಯಮಧರ್ಮನು ತಾನೂ ಅದರಂತೆಯೇ ಆತ್ಮೋಪಾಸನೆಯನ್ನು ಮಾಡಿ ಉದ್ಧಾರ ಹೊಂದಿದನು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಹದಿನಾಲ್ಕನೇ ಅಧ್ಯಾಯ ಮುಗಿದುದು.**

## ಸ್ಕಂದನ ಸ್ತುತಿ. ಪರ್ವತನಿಗೆ ವರದಾನ. ಶ್ವೇತರಾಜ ಚರಿತ್ರೆ.

ಅಧ್ಯಾಯ -15

**ಶೌನಕಾದಿ ಋಷಿಗಳು** : ಪೂಜ್ಯರೇ, ಷಣ್ಮುಖನು ತಾರಕಾಸುರನನ್ನು ನಾಶ ಮಾಡಿದ್ದಲ್ಲದೇ ಮತ್ತೆ ಬೇರೆ ಯಾವ ಕಾರ್ಯವನ್ನು ಮಾಡಿದನು? ಇದನ್ನು ನಮಗಾಗಿ ಹೇಳಿರಿ.

**ಸೂತ** : ಸ್ಕಂದ ದೇವನು ತಾರಕಾಸುರನನ್ನು ಕೊಂದದ್ದು ಇಂದ್ರನಿಗೆ ಪರಮಾನಂದವಾಯಿತು. ಲೋಕೋಪಕಾರಕನಾದ ಆ ಕಾರ್ತಿಕೇಯನನ್ನು ಕೃತಜ್ಞತೆಯಿಂದ ದೇವತೆಗಳೆಲ್ಲರೂ ಇಂದ್ರನೊಂದಿಗೆ ಅವನನ್ನು ಸ್ತುತಿಸಿ ಕೊಂಡಾಡಿದರು.

**ಸುರರು** : ನಮಃ ಕಲ್ಯಾಣರೂಪಾಯ ನಮಸ್ತೇ ಶಿವನಂದನ ।
ವಿಶ್ವಬಂಧೋ ನಮಸ್ತೇಽಸ್ತು ನಮಸ್ತೇ ವಿಶ್ವಭಾವನ ॥

ವರಿಷ್ಠಾಃ ಶ್ವಪಚಾ ಯೈಸ್ತು ಕೃತಂ ವೈ ದರ್ಶನಂ ತವ ।
ತ್ವಾಂ ನಮಾಮೋ ಜಗದ್ಬಂಧೋ ತ್ವಾಂ ವಯಂ ಶರಣಂ ಗತಾಃ ॥

ಕಲ್ಯಾಣ ಸ್ವರೂಪಿಯೂ, ಶಂಕರ ಕುಮಾರನೂ, ಜಗದ್ಬಂಧುವೂ ಆದ ಸ್ಕಂದನಿಗೆ ನಮಸ್ಕಾರ. ಈ ಪ್ರಪಂಚಕ್ಕೆಲ್ಲ ನೀನೇ ಕ್ಷೇಮಪ್ರದನಾಗಿರುವೆ. ನಿನ್ನ ದರ್ಶನಮಾಡಿದ ಸ್ವಪಚರೂ ಚಾಂಡಾಲರೂ ಮಹಾಮಹಿಮರಾಗಿ ವರಿಷ್ಠರೆನಿಸುವರು. ಜಗದ್ಬಂಧುವಾದ ನಿನಗೆ ಶರಣು ಬಂದಿದ್ದೇವೆ. ಭಕ್ತಿಯಿಂದ ನಿನ್ನನ್ನು ನಮಿಸುತ್ತೇವೆ.'' ದೇವತೆಗಳು ಹೀಗೆ ಸ್ತುತಿಸಿದ ಬಳಿಕ ಪರ್ವತಗಳೂ ಸ್ಫೂರ್ತಿಗೊಂಡು ಆ ಪಾರ್ವತೀ ನಂದನನ್ನು ಭಕ್ತಿಭಾವಭರಿತರಾಗಿ ಸ್ತೋತ್ರ ಮಾಡಿದರು.

**ಪರ್ವತಗಳು:** ತ್ವಂ ನಾಥೋಽಸಿ ಹ್ಯನಾಥಾನಾಂ ಶಂಕರಾತ್ಮಜ ತೇ ನಮಃ ।
ನಮೋ ದೇವವರೈಃ ಪೂಜ್ಯ ನಮೋ ಜ್ಞಾನವಿದಾಂ ವರ ॥
ನಮೋಽಸ್ತು ತೇ ದಾನವ ವರ್ಯ ಹಂತಃ ।
ನಮೋಽಸ್ತು ತೇ ದೇವವರ ಪ್ರಸೀದ ॥

ಮಹಾದೇವರ ಮಗನಾದ ಷಣ್ಮುಖ ! ಅನಾಥರಿಗೆ ನೀನೇ ನಾಥ. ದೀನ ದಲಿತರಿಗೆ ನೀನೇ ಗತಿ. ದೇವಾಧಿದೇವತೆಗಳಿಗೆಲ್ಲ ನೀನು ಪರಮಪೂಜನೀಯ. ಜ್ಞಾನಿಗಳಲ್ಲಿ ಸರ್ವಶ್ರೇಷ್ಠ, ದುಷ್ಟದಾನವರನ್ನೆಲ್ಲ ಸಂಹರಿಸಿದ ವೀರವರೇಣ್ಯನು ನೀನೇ. ದೇವಾಧಿದೇವನಾದ ನಿನಗೆ ನಮ್ಮ ನಮಸ್ಕಾರ. ದೇವ ಶ್ರೇಷ್ಠನೇ ! ನಿನಗೆ ನಮ್ಮ ನಮೋ ನಮಃ'' ಪರ್ವತಗಳ ಈ ಸ್ತುತಿಸ್ತೋತ್ರವನ್ನು ಕೇಳಿ ಸ್ಕಂದ ಆನಂದಿತನಾದ. ತನ್ನ ತಂದೆ ಹರನಂತೆ ಈ ಕುಮಾರನೂ ವರ ನೀಡುವಲ್ಲಿ ಶೂರ. ತನ್ನನ್ನು ಬಣ್ಣಿಸುವ ಬೆಟ್ಟಗಳಿಗೆಲ್ಲ ಪರ್ವತಾಭಿಮಾನಿ ದೇವತೆಗಳಿಗೆಲ್ಲ ವರಕೊಡಬೇಕೆಂದು ಸಂಕಲ್ಪಿಸಿ ಅವನು ನುಡಿದ.

**ಸ್ಕಂದ :** ಮೇರುಮಂದರ ಮುಂತಾದ ಗಿರೀಶ್ವರರೇ, ನೀವೆಲ್ಲ ಗಿರಿಗಳೂ ನನಗೆ ವಂದನೀಯರಾಗಿದ್ದೀರಿ. ಪರ್ವತಗಳೆಲ್ಲವೂ ನನಗೆ ಪೂಜನೀಯ. ಋಷಿಮುನಿಗಳೆಲ್ಲರೂ ತಪೋನುಷ್ಠಾನಕ್ಕಾಗಿ ಆಶ್ರಯಿಸುವದು ನಿಮ್ಮನ್ನೇ. ಇಂದಿನಿಂದ ನೀವೆಲ್ಲ ಪರ್ವತಗಳು ಪುಣ್ಯಾತ್ಮರು. ನಿಮ್ಮಲ್ಲಿ ಲೋಕ ಪಾವನ ಶಕ್ತಿಯು ಇಂದಿನಿಂದ ತಾನಾಗಿ ಬರುವದು, ಇಂದಿನಿಂದ ಸರ್ವಪರ್ವತಗಳೂ ಒಂದೊಂದು ತೀರ್ಥವಿದ್ದಂತೆ. ಈ ಶೈಲಗಳ ಪ್ರತಿಯೊಂದು ಪ್ರದೇಶವೂ ಒಂದು ಕ್ಷೇತ್ರ. ಈ ಗಿರಿಗಳ ಮೇಲೆಲ್ಲ ಇನ್ನು ಅನೇಕ ಪುಣ್ಯಾಶ್ರಮಗಳೂ, ಶಿವಾಲಯಗಳೂ, ಹರಿಮಂದಿರಗಳೂ, ಚಿತ್ರವಿಚಿತ್ರ ಗೃಹಗಳೂ, ಅನೇಕ ತಪೋವನಗಳೂ ಕಂಗೊಳಿಸುವವು. ಶಂಕರನ ವಿಶಿಷ್ಟ ಲಿಂಗವು ನಿಮ್ಮ ಶಿಖರಗಳ ಮೇಲೆ ಶೋಭಾಯಮಾನವಾಗುವದು. ನನ್ನ ಅಜ್ಜನಾದ ಹಿಮಾಚಲನು ಇಂದಿನಿಂದ ತಪಸ್ವಿಗಳಿಗೆಲ್ಲ ಫಲಪ್ರದಾಯಕನಾಗುವನು. ಅದ್ರಿಗಳಿಗೆಲ್ಲ ಅರಸನಾದ ಈ ಮೇರು ಮಹೀಧರನು ದೇವತೆಗಳಿಗೂ, ಋಷಿಮುನಿಗಳಿಗೂ ಮುಖ್ಯವಾದ ಆಶ್ರಯನಾಗುವನು. ಲೋಕಾಲೋಕ ಮತ್ತು ಉದಯಗಿರಿ ಎರಡೂ ಶಿವಲಿಂಗ ಸ್ವರೂಪಿ ಎಂದು ಇನ್ನು ಮುಂದೆ ಜಗತ್ತಿನಲ್ಲಿ ಪೂಜಿಸಲ್ಪಡುವವು. ಇದರಂತೆ ಶ್ರೀಶೈಲ, ಸಹ್ಯಾದ್ರಿ, ಮಹೇಂದ್ರ, ಮಾಲ್ಯವಂತ, ಮಲಯ, ಗಂಧಮಾದನ,

ಶ್ವೇತಕೂಟ, ತ್ರಿಕೂಟ, ವಿಂಧ್ಯಾದ್ರಿ ಮುಂತಾದ ಪರ್ವತಗಳೆಲ್ಲವೂ ಸಾಕ್ಷಾತ್ ಶಿವಲಿಂಗ ಸ್ವರೂಪವೆಂದೇ ಈ ಜಗತ್‌ಸ್ಥಳದಲ್ಲಿ ಗೌರವಿಸಲ್ಪಡುವವು.''

ಶಿವಕುಮಾರನಾದ ಷಡಾನನನು ಅಲ್ಲಿಗೆ ಬಂದು ಅಚಲಗಳಿಗೆಲ್ಲ ಹೀಗೆ ವರಗಳನ್ನು ನೀಡಿ ಉಳಿದ ಮಾನವರಿಗೂ ವರಗಳನ್ನು ಕರುಣಿಸಿದನು. ''ಯಾರ ಮುಖದಲ್ಲಿ ನಮಃ ಶಿವಾಯ'' ಎಂಬ ಪಂಚಾಕ್ಷರಿ ಮಂತ್ರವು ನೆಲಿಸಿರುವದೋ ಮತ್ತು ಅದೇ ವೇಳೆಯಲ್ಲಿ ಚಂದ್ರಚೂಡನ ಚಾರು ಚರಣಗಳಲ್ಲಿ ಯಾರ ಮನಸ್ಸು ಮಗ್ನವಾಗಿರುವದೋ ಅಂಥ ಪುರುಷನ ಮೇಲೆ ಶೇಷಭೂಷಣನು ವಿಶೇಷ ಕೃಪಾದೃಷ್ಟಿಯನ್ನು ಹರಿಸುವನು. ಎಲ್ಲ ಪ್ರಾಣಿಗಳನ್ನು ಸಮದೃಷ್ಟಿಯಿಂದ ನೋಡಿ ಪರನಿಂದೆಯಲ್ಲಿ ಮೂಕನಾಗಿ, ಪರಸ್ತ್ರೀಯರ ವಿಷಯದಲ್ಲಿ ಷಂಢನಾಗಿ ಶಿವಧ್ಯಾನ ಗೈಯುವವನು ಸಂಪೂರ್ಣ ಶಿವ ಕೃಪೆಗೆ ಪಾತ್ರನಾಗುವನು.''

**ಶೌನಕ :** ಸೂತರೆ ! ನಾವು ಪರಮ ಮಂಗಲಮಯವಾದ ಸ್ಕಂದನ ಮಹಾ ಮಹಿಮೆಯನ್ನು ಕೇಳಿ ಆನಂದಪಟ್ಟದ್ದಾಯಿತು. ಈಗ ನಮಗೆ ಪರಮ ಹರಭಕ್ತನಾದ ಶ್ವೇತರಾಜನ ಚಾರುಚರಿತ್ರೆಯನ್ನು ಬಿತ್ತರಿಸಿರಿ.

**ಸೂತ :** ಮಹಾನುಭಾವರಾದ ಮಹರ್ಷಿಗಳೇ ! ಶ್ವೇತರಾಜನ ಚರಿತ್ರೆಯನ್ನು ಕೇಳಿರಿ. ಅದೂ ಒಂದು ಅದ್ಭುತ ಆಖ್ಯಾನ. ಮಹಾತ್ಮನಾದ ಶ್ವೇತ ಭೂಪಾಲನಿಗೆ ಭೂಮಂಡಲದಲ್ಲಿ ಎಲ್ಲ ವಿಧವಾದ ಭೋಗಾನುಭೋಗ ಸೌಭಾಗ್ಯವಿತ್ತು. ಆದರೂ ಅವನು ಧರ್ಮಕರ್ಮಾನುಷ್ಠಾನದಲ್ಲಿ ಎಂದೂ ಅಶ್ರದ್ಧೆಯನ್ನು ತೋರುತ್ತಿರಲಿಲ್ಲ. ಧರ್ಮಾಚರಣೆ ಅವನ ಜೀವನದ ಪ್ರಧಾನ ಉದ್ದೇಶವಾಗಿದ್ದಿತು. ಅವನು ತನ್ನ ಸತ್ಕರ್ಮಗಳಿಂದ ಹಾಗೂ ಪ್ರಜಾಪಾಲನ ಪದ್ಧತಿಯಿಂದ ಧರ್ಮಚಕ್ರವನ್ನು ಸರಿಯಾಗಿ ಪ್ರವರ್ತನೆಗೈಯುತ್ತಾ ಪ್ರಜೆಗಳನ್ನೆಲ್ಲ ಪ್ರಸನ್ನರನ್ನಾಗಿ ಇರಿಸಿದ್ದನು. ಅವನು ಯಾವಾಗಲೂ ಬ್ರಾಹ್ಮಣ ಭಕ್ತ. ಶಿವಧ್ಯಾನ ತತ್ಪರ. ಮತ್ತು ಪರೋಪಕಾರ ನಿರತ. ನ್ಯಾಯದಿಂದ ಪೃಥ್ವೀಪಾಲನ ರೂಪವಾದ ತನ್ನ ಮುಖ್ಯ ಕಾರ್ಯವನ್ನು ಮಾಡಿ ಉಳಿದ ವೇಳೆಯಲ್ಲೆಲ್ಲ ಶಿವಧ್ಯಾನವನ್ನು ಮಾಡುತ್ತಿದ್ದ. ಹೀಗೆ ನಿರಂತರ ಶಿವೋಪಾಸನೆಯಲ್ಲಿಯೇ ಕ್ಷೀಣವಾಯಿತು ಅವನ ಆಯುಷ್ಯವೆಲ್ಲ. ಅವನಿಗೆ ತನ್ನ ಆಯುಷ್ಯದಲ್ಲಿ ಎಂದೂ ಬೇನೆ ಬೇಸರಿಕೆಗಳು ಬರಲಿಲ್ಲ. ಮನಸ್ಸಿಗೆ ವ್ಯಥೆಯಾಗಲಿಲ್ಲ, ಅವರ ರಾಜ್ಯದ ಪ್ರಜೆಗಳೆಲ್ಲರೂ ನಿರುಪದ್ರವಿಗಳು. ಅದರಿಂದ ಅವರಿಗೆ ಯಾವ ಉಪದ್ರವಗಳೂ ಉಂಟಾಗಲಿಲ್ಲ. ಅಕಾಲ ಮರಣ, ಮನೋರೋಗ, ದೈಹಿಕ ವ್ಯಾಧಿ, ಭೌತಿಕ ಅನಿಷ್ಟ, ಪ್ರಜಾಪೀಡೆ, ಮುಂತಾದ ಅರಿಷ್ಟಗಳ ಪರಿಚಯವೇ ಅವನ ಪ್ರಜೆಗಳಿಗೆ ಆಗಿರಲಿಲ್ಲ. ದಾರಿದ್ರ್ಯವೆಂದರೆ ಅವರಿಗೆ ಗೊತ್ತೇ ಇರಲಿಲ್ಲ. ಹೀಗೆ ನಿರಾತಂಕವಾಗಿ ಶಿವಪೂಜೆಯಲ್ಲಿ ದೇಹವನ್ನು ಸವೆಸುತ್ತಿರುವ ಶ್ವೇತರಾಜನ ಜೀವನದ ಬಹು ಭಾಗವು ಸಫಲತೆಯಿಂದ ಕಳೆಯಿತು. ಕೊನೆಗೆ ಒಂದು ದಿನ ಆ ಶ್ವೇತರಾಜನಿಗೆ ಮರಣವು ಒದಗಿ ಬಂದಿತು. ಯಮನು ದೂತರನ್ನು ಕಳುಹಿಸಿದನು. ಒಡೆಯನ ಅಪ್ಪಣೆಯನ್ನು

ಮನ್ನಿಸಿ ಶ್ವೇತರಾಜನನ್ನು ಒಯ್ಯಬೇಕೆಂದು ಕಾಲಪಾಶವನ್ನು ಹಿಡಿದುಕೊಂಡು ಯಮದೂತರು ಹೊರಟರು. ದಾರಿಯಲ್ಲಿ ಅವರು ಒಂದು ಶಿವಮಂದಿರಲ್ಲಿ ಪ್ರವೇಶಿಸಿದರು. ಅದೇ ಶಿವ ಮಂದಿರದಲ್ಲಿ ಮಹಾರಾಜ ಶ್ವೇತನು ಗಹನ ಸಮಾಧಿಯಲ್ಲಿ ಕುಳಿತು ಶಿವಧ್ಯಾನಗೈಯುತ್ತಿದ್ದನು. ಆ ಯಮದೂತರಿಗೆ ಧ್ಯಾನಾಸಕ್ತನಾದ ಮಹಾರಾಜನ ಪ್ರಾಣವನ್ನು ಸೆಳೆಯಲಿಕ್ಕೆ ಆಗಲಿಲ್ಲ. ಅವರು ನಿಶ್ಚೇಷ್ಟಿತರಾಗಿ ನಿಂತುಬಿಟ್ಟರು. ಬಹಳ ಹೊತ್ತಾದರೂ ತನ್ನ ದೂತರು ಮರಳಿ ಬಾರದ್ದನ್ನು ನೋಡಿ ಸ್ವಯಂ ಯಮಧರ್ಮನೇ ಬಂದನು.

ಶ್ವೇತರಾಜನನ್ನು ಸೆಳೆದೊಯ್ಯಬೇಕೆಂದು ಒಮ್ಮೆಲೇ ತನ್ನ ಯಮದಂಡವನ್ನು ಮೇಲೆಕ್ಕೆತ್ತಿದನು. ಆದರೆ ಶ್ವೇತರಾಜನು ಶಿವಚಿಂತನದಲ್ಲಿ ತಲ್ಲೀನನಾಗಿದ್ದನು. ರಾಜನ ಈ ಧ್ಯಾನಸಮಾಧಿಯನ್ನು ಕಂಡು ಯಮಧರ್ಮನಿಗೂ ಆಶ್ಚರ್ಯವಾಯಿತು. ಮಹಾರಾಜನ ಏಕಾಗ್ರಮನಸ್ಸಿನ ಶಿವಧ್ಯಾನವನ್ನು ನೋಡಿ ಪ್ರೇತರಾಜನಿಗೆ ಅವನ ಮೇಲೆ ಎತ್ತಿದ ತನ್ನ ಯಮದಂಡದಿಂದ ಪ್ರಹರಿಸಲು ಮನಸ್ಸೇ ಆಗಲಿಲ್ಲ. ಆ ಮಹಾ ಭಗವದ್ಭಕ್ತನನ್ನು ನೋಡುತ್ತ ನಿಂತುಬಿಟ್ಟನು. ಬಹಳ ಹೊತ್ತಿನವರೆಗೆ ಯಮಧರ್ಮನೂ ಯಮಧರ್ಮನ ದೂತರೂ ಕಲ್ಲುಬೊಂಬೆಯಂತೆ ನಿಶ್ಚಲರಾದರು. ಧ್ಯಾನಾರೂಢನಾಗಿ ತತ್ಪರತೆಯಿಂದ ಶಿವನ ತಪಃಸಮಾಧಿಯಲ್ಲಿ ಏಕತಾನಲೀನನಾಗಿ ತಪಂಗೈಯುತ್ತಿದ್ದ ಶ್ವೇತರಾಜನನ್ನು ನಿಷ್ಪಂದಮಂದನೇತ್ರದಿಂದ ನಿರೀಕ್ಷಿಸುತ್ತ ಎಲ್ಲರೂ ಅಲ್ಲಿಯೇ ನಿಂತುಬಿಟ್ಟರು.

ಈ ಯಮ ಮತ್ತು ಯಮದೂತರು ಇಬ್ಬರೂ ಶ್ವೇತರಾಜನನ್ನು ಎಳೆದು ತರಲು ಹೋದವರು ಮರಳಿ ಬಾರದುದನ್ನು ಕಂಡು ಸ್ವಯಂ ಸಂಹಾರಕನಾದ ಕಾಲ ಪುರುಷನೇ ಅಲ್ಲಿ ಬಂದನು. ಆ ಶಿವಮಂದಿರಲ್ಲಿ ಶಿವಧ್ಯಾನರತನಾದ ಶ್ವೇತರಾಜನನ್ನು ನಿರೀಕ್ಷಿಸುತ್ತ ನಿಶ್ಚಲ ಶಿಲಾಪ್ರತಿಮೆಗಳಂತೆ ನಿಶ್ಚೇಷ್ಟಿತರಾಗಿ ನಿಂತುಕೊಂಡ ಯಮ ಹಾಗೂ ಯಮದೂತರನ್ನು ನೋಡಿ ಕ್ರುದ್ಧನಾದ ಕಾಲಪುರುಷ ಗರ್ಜಿಸಿ ಕೇಳಿದ.

**ಕಾಲಪುರುಷ :** ''ನೀವೆಲ್ಲರೂ ಹೀಗೇಕೆ ಇಲ್ಲಿ ಬಂದು ನಿಶ್ಚೇತನರಂತೆ ನಿಂತು ಬಿಟ್ಟಿದ್ದೀರಿ? ಈ ರಾಜನನ್ನು ಏಕೆ ಸೆಳೆದು ತರಲಿಲ್ಲ? ಯಮಧರ್ಮನೇ ! ಇವರು ಕೂಡ ನಿನ್ನ ಜೊತೆಗೆ ಹೆದರಿದವರಂತೆ ನಿರ್ವ್ಯಾಪಾರಸ್ಥಿತಿಯಲ್ಲಿ ನಿಂತುಬಿಟ್ಟಿದ್ದಾರೆ. ಈ ರಾಜನನ್ನು ಎಳೆದುಕೊಂಡು ಬರಲು ನಿಮಗೇಕೆ ಭಯ?''

**ಯಮಧರ್ಮ :** ''ಈ ಶ್ವೇತರಾಜನು ಶಂಕರನ ಆತ್ಯಂತಿಕ ಭಕ್ತ. ಬಾಹ್ಯ ಪ್ರಜ್ಞೆಯಿಲ್ಲದೆ, ಅಸಂಪ್ರಜ್ಞಾತ ಸಮಾಧಿಯಲ್ಲಿ ನಿಂತುಕೊಂಡು ಅಖಂಡ ಶಿವಧ್ಯಾನವನ್ನು ನಡೆಸಿದ್ದಾನೆ. ಹೀಗೆ ಶಿವಭಗವಂತನ ಧ್ಯಾನದಲ್ಲಿ ಏಕಾಗ್ರಚಿತ್ತದಿಂದ ತಲ್ಲೀನನಾದ ಈ ರಾಜನನ್ನು ಕಾಲಪಾಶದಲ್ಲಿ ಜಗ್ಗಿ ಹೇಗೆ ಎಳೆಯುವದು ? ಎಂದು ತಿಳಿಯದೇ ನಾವು ಅವನನ್ನೇ ನೋಡುತ್ತಾ ಚಿತ್ರಲಿಖಿತ ಗೊಂಬೆಗಳಂತೆ ನಿಶ್ಚೇಷ್ಟಿತರಾಗಿ ನಿಂತುಬಿಟ್ಟಿದ್ದೇವೆ.'' ಯಮಧರ್ಮನ ಈ ಮಾತುಗಳನ್ನು ಕೇಳಿ ಕ್ರೋಧಾಕ್ರಾಂತನಾದ ಆ ಕಾಲಪುರುಷ. ಆ ಶ್ವೇತರಾಜನನ್ನು ಈ ಧ್ಯಾನಾವಸ್ಥೆಯಲ್ಲಿಯೇ ಕೊಂದುಬಿಡ ಬೇಕೆಂದು ತನ್ನ ಖಡ್ಗವನ್ನು ಎತ್ತಿದ.

ಶಿವಮಂದಿರದ ಗರ್ಭಗುಡಿಯಲ್ಲಿಯೇ ನುಗ್ಗಿದ. ಶಿವಲಿಂಗದ ಬಳಿಯಲ್ಲಿಯೇ ಮಹಾಸಮಾಧಿಯಲ್ಲಿ ಮಗ್ನನಾದ ಶ್ವೇತರಾಜನನ್ನು ಪ್ರಹರಿಸಬೇಕೆಂದು ಅಹಂಕಾರದಿಂದ ಅವನ ಬಳಿಗೆ ಹೋದ. ಆಗ ಭಕ್ತವತ್ಸಲನಾದ ಭಗವಾನ್ ಶಂಕರನು ತನ್ನ ಭಕ್ತನ ರಕ್ಷಣೆಗಾಗಿ ತನ್ನ ಮೂರನೇ ಕಣ್ಣನ್ನು ತೆರೆದ. ಅಗ್ನಿ ಜ್ವಾಲೆಗಳೇ ಸಿಡಿದು ಬಂದವು ತ್ರಿಲೋಚನನ ನೇತ್ರಾಗ್ನಿಯಿಂದ.

ಅದೇ ಕ್ಷಣದಲ್ಲಿ ಕಾಲಪುರುಷನು ಪ್ರಳಯಾಗ್ನಿಯಂತಿರುವ ಪರಮೇಶ್ವರನ ಆ ಲಲಾಟ ನೇತ್ರಾಗ್ನಿಯಲ್ಲಿ ಉರಿಯತೊಡಗಿದ. ಅವನ ದೇಹ ಉರಿಯುತ್ತಿರುವಾಗಲೇ ಶ್ವೇತರಾಜನಿಗೆ ಸಮಾಧಿಯಿಂದ ಎಚ್ಚರವಾಯಿತು. ಅವನ ಕಣ್ಣೆದುರು ಕಾಲಪುರುಷನ ದೇಹ ದಂದಹ್ಯಮಾನವಾಗತೊಡಗಿತ್ತು. ಅದನ್ನು ನೋಡಿ ಶ್ವೇತರಾಜನು ಆ ಕೈಲಾಸ ಪತಿಗೆ ಕೈ ಜೋಡಿಸಿ ಬೇಡಿಕೊಂಡ.

**ಶ್ವೇತರಾಜ :-** ''ಸರ್ವಪ್ರಾಣಿಗಳ ದುಃಖವನ್ನು ದೂರಮಾಡುವ ಮಹಾ ದೇವನಿಗೆ ನಮಸ್ಕಾರ. ಸ್ವಯಂ ಪ್ರಕಾಶರೂಪನಾದ ಶಾಂತಸ್ವರೂಪದ ಶಂಕರದೇವರ ಪಾದಾರವಿಂದಗಳಿಗೆ ನನ್ನ ಭಕ್ತಿಯ ವಂದನೆ. ಈ ಪ್ರಪಂಚಕ್ಕೆಲ್ಲ ನೀನೇ ತಂದೆ, ತಾಯಿ, ಬಂಧು, ಬಳಗ ಹಾಗೂ ಸಂರಕ್ಷಕನೂ ನೀನೇ ಅಲ್ಲವೆ ! ಆದರೆ ಇದು ಏನು ಅನಾಹುತ! ನನ್ನ ಕಣ್ಣೆದುರೇ ಯಾರ ದೇಹ ಸುಟ್ಟು ಉರಿಯುತ್ತಲಿದೆ? ಇದು ಯಾವ ಜೀವ? ಇದಕ್ಕೆ ಕೊಳ್ಳಿ ಕೊಟ್ಟವರಾರು? ಬೆಂಕಿ-ಇಟ್ಟವರಾರು? ನಿನ್ನ ಗರ್ಭಾಗಾರದಲ್ಲಿಯೇ ಈ ದೇಹ ದಾಹ ನಡೆದುದೆಂತು?

**ಶಂಕರ :** ಭಕ್ತಾಗ್ರೇಸರ ! ಇವನು ಕಾಲಪುರುಷ. ನಿನ್ನನ್ನು ಕೊಲ್ಲಲಿಕ್ಕಾಗಿ ಇಲ್ಲಿಗೆ ಆಗಮಿಸಿದ್ದ.ಇವನನ್ನು ನಾನು ನನ್ನ ನೇತ್ರಾಗ್ನಿಯಿಂದ ದಗ್ಧನನ್ನಾಗಿ ಮಾಡುತ್ತಲಿದ್ದೇನೆ.

**ಶ್ವೇತರಾಜ :** ಇವನು ಮಾಡಿದ ಅಂಥ ಘೋರ ಅಪರಾಧ ಏನು? ಅವನನ್ನು ನೀನು ಏಕೆ ದಹಿಸುತ್ತಲಿರುವೆ?

**ಶಂಕರ :** ಈ ಕಾಲನು ಬಹಳ ಕ್ರೂರ, ಅಷ್ಟೇ ಕರಾಳ. ಸರ್ವ ಪ್ರಾಣಿಗಳ ಭಕ್ಷಕ. ಈಗ ನಿನ್ನನ್ನೂ ಕೊಲ್ಲಬೇಕೆಂದು ಇಲ್ಲಿಗೆ ಬಂದಿದ್ದ. ಅವನು ಮಹಾಪಾಖಂಡಿ. ಮತ್ತು ಲೋಕಾಂತಕ. ಈಗ ನನ್ನ ಭಕ್ತಾಗ್ರೇಸರನಾದ ನಿನ್ನನ್ನು ಕಬಳಿಸ ಬಂದ ಈ ನಿಷ್ಕರುಣಿ ಕಾಲಪುರುಷನನ್ನು ನಾನು ಸುಟ್ಟುಹಾಕುತ್ತಲಿರುವೆ .

**ಶ್ವೇತರಾಜ :** ಭಗವನ್ ! ಈ ಕಾಲನೂ ಕೂಡ ನಿಮ್ಮ ಕಿಂಕರನೇ ಅಲ್ಲವೆ ! ನಿಮ್ಮ ಆಜ್ಞೆಯನ್ನು ಶಿರಸಾ ಧಾರಣಮಾಡಿ ಇವನು ವಿಶ್ವವನ್ನು ನಿಯಂತ್ರಿಸುವನು, ತಮ್ಮ ಆಜ್ಞೆಯಿಂದಲೇ ಆಯುರ್ಮಾನ ಮುಗಿದವರನ್ನು ಇವನು ಸೆಳೆದೊಯ್ಯುವನು. ಇವನ ಅಂಜಿಕೆಯಿಂದಲೇ ಜನರು ಧರ್ಮ ಕರ್ಮಾನುಷ್ಠಾನ ಮಾಡುವರು, ಇದರಲ್ಲಿ ಇವನ ತಪ್ಪೇನು? ಆದುದರಿಂದ ತಾವು ಕೂಡಲೇ ಈ ಕಾಲನನ್ನು ಮರಳಿ ಬದುಕುವಂತೆ ಮಾಡಿರಿ.'' ಶ್ವೇತರಾಜನ ಮಾತುಗಳನ್ನು ಕೇಳಿ ಪರಮೇಶ್ವರನಿಗೆ ಮೆಚ್ಚುಗೆಯಾಯಿತು. ಭಕ್ತನ ಮಾತನ್ನು ಎಂದೂ ಮೀರಲಾರ ಭಕ್ತವತ್ಸಲನಾದ ಆ

ಭವಾನೀಪತಿ. ಶ್ವೇತರಾಜನ ಅಪೇಕ್ಷೆಯಂತೆ ಕಾಲಪುರುಷನಿಗೆ ಪುನರ್ಜೀವನವನ್ನು ಕರುಣಿಸಿದ ಆ ಪರಮೇಶ್ವರ, ಆಗ ಪುನರುಜ್ಜೀವಿತನಾದ ಆ ಕಾಲಪುರುಷನು ಕರಕಮಲಗಳನ್ನು ಜೋಡಿಸಿ ಶಂಕರನನ್ನು ಸ್ತೋತ್ರಮಾಡಿದನು.

**ಕಾಲಪುರುಷ :** ಶಂಕರನಿಗೆ ನಮಸ್ಕಾರ. ಪ್ರಪಂಚಕ್ಕೆಲ್ಲ ಕ್ಷೇಮಂಕರನಿಗೆ ವಂದನೆ. ವೈರಿ ಭಯಂಕರನಿಗೆ ಪ್ರಣಾಮ, ಸ್ವಾಮಿ ! ಕಾಲ ನಾಮಕನಾದ ನನ್ನನ್ನು ಸಂಹರಿಸಿದ ನೀನು ತ್ರಿಪುರಾಸುರನನ್ನೂ ವಧಿಸಿದೆ. ನೇತ್ರಾಗ್ನಿಯಿಂದ ನನ್ನನ್ನು ಭಸ್ಮಮಾಡಿದಂತೆ ಕಾಮನನ್ನು ಕೂಡ ನಿನ್ನ ಕಡೆಗಣ್ಣಿನ ಕಿಡಿಯಿಂದ ಸುಟ್ಟು ಹಾಕಿದೆ. ದಕ್ಷಪ್ರಜಾಪತಿಯ ಯಜ್ಞವನ್ನು ಧ್ವಂಸಮಾಡಿದೆ. ಸರ್ವಸಂಹಾರಕನಾದ ನಿನಗೆ ನಮೋನಮಃ. ನೀನು ವಿಶ್ವಮಂಗಲನೂ ಆಗಿರುವೆ. ಕಾಲಕೂಟವನ್ನು ಭಕ್ಷಿಸಿ ಪ್ರಪಂಚವನ್ನೇ ಉಳಿಸಿದ ಕರುಣಾಶಾಲಿ ನೀನು. ವೇದಾಂತಗಳು ನಿನ್ನನ್ನೇ ಸ್ತುತಿಸುತ್ತವೆ. ಜಗತ್ತಿನ ಸಂಹಾರಕನಾದಂತೆ ಸಂರಕ್ಷಕನೂ ನೀನೇ ಆಗಿರುವೆ. ನಿನಗೆ ಅನಂತ ಪ್ರಣಾಮಗಳು.'' ಹೀಗೆ ಮಹಾದೇವನನ್ನು ಸ್ತೋತ್ರ ಮಾಡಿ ಆ ಕಾಲಪುರುಷನು ಅಲ್ಲಿಯೇ ಭಕ್ತಿಯಿಂದ ಕೈಮುಗಿದು ನಿಂತ ಶ್ವೇತರಾಜನನ್ನು ಕುರಿತು ಹೇಳಿದನು. ''ರಾಜನೇ, ನಿನ್ನಂಥ ಭಗವದ್ಭಕ್ತನನ್ನು ನಾನು ಎಲ್ಲಿಯೂ ನೋಡಲಿಲ್ಲ. ಕಾಲಾಂತಕನಾದ ನನ್ನನ್ನು ಕೂಡ ನೀನು ಗೆದ್ದುಬಿಟ್ಟೆ. ಇಂದಿನಿಂದ ನಾನು ನಿನ್ನ ಅನುವರ್ತಕ. ನಿನ್ನ ಅನುಚರ. ಈ ಮಹಾಪ್ರಭುವಿನಿಂದ ನಿನ್ನ ಅನುವರ್ತಕ ನಿನ್ನ ಅನುಚರ ಆದ ನನಗೆ ಅಭಯದಾನ ಮಾಡಿಸು.''

ಕಾಲಪುರುಷನ ಕೋರಿಕೆಯಂತೆ ಶ್ವೇತರಾಜನು ಕಾಲನ ಮೇಲೆ ಕರುಣೆದೋರಬೇಕೆಂದು ಪ್ರಾರ್ಥಿಸಿದ ಪರಶಿವನನ್ನು. ನಂತರ ಶ್ವೇತರಾಜನ ಪ್ರಾರ್ಥನೆಯಂತೆ ಆ ಕಾಲನ ಮೇಲೆ ಕರುಣೆದೋರಿದ ಆ ರುದ್ರದೇವ. ಅನಂತರ, ಆ ಕಾಲಪುರುಷನು ಮಹಾದೇವರಿಗೆ ನಮಸ್ಕಾರ ಮಾಡಿ ಶ್ವೇತರಾಜನನ್ನು ವಂದಿಸಿ ಯಮ ಹಾಗೂ ಯಮದೂತರೊಂದಿಗೆ ತನ್ನ ಲೋಕಕ್ಕೆ ಪ್ರಯಾಣಿಸಿದ ಮತ್ತು ಯಮನ ದೂತಗಣಗಳಿಗೆಲ್ಲ ಅಲ್ಲಿ ಅಪ್ಪಣೆ ನೀಡಿದ.

**ಕಾಲಪುರುಷ :** ''ದೂತರೇ, ಈ ಪ್ರಪಂಚದಲ್ಲಿ ವಿಭೂತಿಯಿಂದ ಹಣೆಯ ಮೇಲೆ ತ್ರಿಪುಂಡ್ರಧಾರಣ ಮಾಡುವವರು ಶಿವಭಕ್ತರು. ಅವರನ್ನು ನೀವು ಈ ಯಮಲೋಕಕ್ಕೆ ಎಳೆದು ತರಬೇಡಿರಿ. 'ನಮಃ ಶಿವಾಯ' ಎಂಬ ಪಂಚಾಕ್ಷರಿ ಮಂತ್ರವನ್ನು ಜಪಿಸುವವರೂ, ಕೊರಳಲ್ಲಿ ರುದ್ರಾಕ್ಷಿಮಾಲೆಯನ್ನು ಧರಿಸುವವರೂ, ತಲೆಯ ಮೇಲೆ ಜಟಾಧಾರಣ ಮಾಡಿದವರೂ, ಹಣೆಯ ಮೇಲೆ ಭಸ್ಮಧಾರಣೆ ಮಾಡಿದವರೂ ಈ ಪ್ರಪಂಚದಲ್ಲಿ ಪೂಜನೀಯರು. ಇವರೆಲ್ಲರೂ ಶಿವಸ್ವರೂಪರೇ ಸರಿ. ಇವರಾರನ್ನೂ ಮುಟ್ಟಬೇಡಿರಿ ಮತ್ತು ಯಮಲೋಕಕ್ಕೆ ಸೆಳೆದು ತರಬೇಡಿರಿ.''

ಯಮಧರ್ಮನೂ ಕೂಡ ಇದರಂತೆ ತನ್ನ ಸೇವಕರಿಗೆಲ್ಲ ಅಪ್ಪಣೆ ನೀಡಿದನು. ಪರಮಭಗವದ್ಭಕ್ತನಾದ ಶ್ವೇತರಾಜನು ಮರಣ ಭಯದಿಂದ ಮುಕ್ತನಾಗಿ ಬದುಕಿ

ಇರುವವರೆಗೂ ಶಿವಧ್ಯಾನ ಮಾಡಿ ಕೊನೆಗೆ ಶಿವ ಸಾನಿಧ್ಯವನ್ನೇ ಪಡೆದನು. ಆದ್ದರಿಂದ ಮನುಷ್ಯರು ಸದಾಕಾಲ ಸದಾಶಿವನ ಭಜನ, ಸೇವನ, ವಂದನ, ಪೂಜನ, ಈ ನಾಲ್ಕು ವಿಧವಾದ ಸಂಪೂರ್ಣ ಸೇವೆಯನ್ನು ಮಾಡುತ್ತಲೇ ಇರಬೇಕು.



**ಶ್ರೀ ಸ್ಕಂದ ಮಹಾ ಪುರಾಣದಲ್ಲಿ ಹದಿನೈದನೆಯ ಅಧ್ಯಾಯ ಮುಗಿದುದು.**

## ಶಿವರಾತ್ರಿ ವ್ರತದ ಮಹಿಮೆ

ಅಧ್ಯಾಯ -16

**ಲೋಮಶ :-** ಬ್ರಹ್ಮದೇವರು ಸೃಷ್ಟಿಸಿದರು. ಹನ್ನೆರಡು ರಾಶಿಗಳಿಂದ ಕಾಲಚಕ್ರವು ರೂಪಗೊಂಡಿತು. ಈ ಕಾಲಚಕ್ರದಲ್ಲಿ ಕಾರ್ಯಸಿದ್ಧಿಗಾಗಿ ದ್ವಾದಶ ರಾಶಿ ಹಾಗೂ ಸಪ್ತವಿಂಶತಿ ನಕ್ಷತ್ರಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುವದು. ಈ ಇಪ್ಪತ್ತೇಳು ನಕ್ಷತ್ರ ಮತ್ತು ಹನ್ನೆರಡು ರಾಶಿಗಳಿಂದ ಕ್ರೀಡೆ ಮಾಡುತ್ತ ಕಾಲನಾಮಕನಾದ ಪರಮಾತ್ಮನು ಕಾಲಚಕ್ರ ಸಹಿತವಾಗಿಯೇ ಈ ಪ್ರಪಂಚವನ್ನು ರೂಪಗೊಳಿಸುತ್ತಾನೆ. ಒಂದು ಕೀಟದಿಂದ ಆರಂಭಿಸಿ ಬ್ರಹ್ಮದೇವರವರೆಗೆ ಸಮಸ್ತ ಜಗತ್ತನ್ನು ನಿರ್ಮಾಣ ಮಾಡುವವನು ಆ ಕಾಲಾಭಿಮಾನಿ ಭಗವಂತನೇ. ಈ ಜಗತ್‌ಪಾಲಕನೂ ಸಂಹಾರಕನೂ ಅವನೇ ಆಗಿದ್ದಾನೆ. ಈ ಚರಾಚರ ಪ್ರಪಂಚವೆಲ್ಲವೂ ಕಾಲಬದ್ಧ. ಕಾಲದ ಒಂದು ಪರಿಮಾಣವಾದ ತ್ರುಟಿಯಿಂದ ಲವ, ಲವದಿಂದ ಕ್ಷಣ, ಕ್ಷಣದಿಂದ ನಿಮಿಷ, ಜನಿಸಿದವು. ಪ್ರಾಣಿಗಳು ಕಣ್ಣಿನ ಎಮೆ ಪಿಳಿಕಿಸುವ ಅವಧಿಯೇ ನಿಮಿಷ ಎನಿಸುವದು. ಅರವತ್ತು ನಿಮಿಷ ಎಂದರೆ ಒಂದು ಪಲ. ಅರವತ್ತು ಪಲ = ಒಂದು ಘಟಿ. ಅರವತ್ತು ಘಟಿ=ಒಂದು ಹಗಲಿರುಳು. ಹದಿನೈದು ಹಗಲಿರುಳು = ಒಂದು ಪಕ್ಷ, ಎರಡು ಪಕ್ಷ=ಒಂದು ಮಾಸ. ಹನ್ನೆರಡು ಮಾಸ = ಒಂದು ವರ್ಷ. ಪ್ರತಿಪದೆಯಿಂದ ಹುಣ್ಣಿಮೆಯವರೆಗೆ ಒಂದು ಪಕ್ಷ ಪೂರ್ತಿ. ಅಂದು ಹದಿನೈದು ದಿನದ ಒಂದು ಪಕ್ಷ ಪೂರ್ಣವಾಗುವದರಿಂದ ಅದನ್ನು ಪೂರ್ಣಿಮೆ ಎಂದು ಕರೆಯುತ್ತಾರೆ. ಪೂರ್ಣ ಚಂದ್ರನು ಅಂದು ಉದಯವಾಗುವದರಿಂದ ಈ ಪೂರ್ಣಿಮಾತಿಥಿ ದೇವತೆಗಳಿಗೆ ಪ್ರಿಯವಾಗಿದೆ. ಇದರಂತೆ ಚಂದ್ರನು ಪೂರ್ಣ ಲುಪ್ತವಾದ ದಿನವನ್ನು ಅಮಾವಾಸ್ಯೆ ಎಂದು ಕರೆಯುತ್ತಾರೆ. ಅಗ್ನಿಷ್ವಾತ್ತರೇ ಮೊದಲಾದ ಪಿತೃಗಣದವರಿಗೆ ಈ ಅಮಾವಾಸ್ಯೆ ತಿಥಿಯು ಅಧಿಕ ಪ್ರಿಯ. ಈ ಹುಣ್ಣಿಮೆ, ಅಮಾವಾಸ್ಯೆ ಸಹಿತವಾದ ಮೂವತ್ತು ದಿನಗಳು ಮಾಸ ಎನಿಸುತ್ತವೆ. ಈ ಎಲ್ಲ ತಿಥಿಗಳಲ್ಲಿ ಅಮಾವಾಸ್ಯೆ ಪೂರ್ಣಿಮಾ, ಸಂಕ್ರಾಂತಿಕಾಲ ಇವು ಪವಿತ್ರವಾಗಿವೆ. ಯೋಗಗಳಲ್ಲಿ ವ್ಯತೀಪಾತ, ನಕ್ಷತ್ರಗಳಲ್ಲಿ ಶ್ರವಣಾ ಶ್ರೇಷ್ಠ. ಉಳಿದ ತಿಥಿಗಳಲ್ಲಿ ಕೆಲವು ತಿಥಿಗಳು ವಿಶಿಷ್ಟ ದೇವತೆಗಳಿಗೆ ಪ್ರಿಯ. ಗಣಪತಿಗೆ ಚತುರ್ಥಿ, ನಾಗರಾಜ, ಶೇಷ, ವಾಸುಕಿ ಮುಂತಾದ ಪನ್ನಗಣಪತಿಗಳಿಗೆ

ಪಂಚಮಿ, ಷಣ್ಮುಖನಿಗೆ ಷಷ್ಠಿ, ಸೂರ್ಯನಿಗೆ ಸಪ್ತಮಿ, ಮಹಾದೇವನಿಗೆ ಅಷ್ಟಮಿ, ದುರ್ಗಾದೇವಿಗೆ ನವಮಿ, ಬ್ರಹ್ಮದೇವರಿಗೆ ದಶಮಿ, ರುದ್ರದೇವರಿಗೆ ಏಕಾದಶಿ, ವಿಷ್ಣುವಿಗೆ ಏಕಾದಶಿಯೊಂದಿಗೆ ದ್ವಾದಶೀ, ಕಾಮನಿಗೆ ತ್ರಯೋದಶಿ, ಶಂಕರನಿಗೆ ಚತುರ್ದಶಿ ತಿಥಿಗಳು ಪ್ರಿಯಕರವಾಗಿವೆ.

**ನಿಶೀಥಸಂಯುತಾ ಯಾ ತು ಕೃಷ್ಣಪಕ್ಷೇ ಚತುರ್ದಶೀ ।**
**ಉಪೋಷ್ಯಾ ಸಾ ತಿಥಿಃ ಸರ್ವೈಃ ಶಿವಸಾಯುಜ್ಯಕಾರಿಕಾ ॥**

ಯಾವ ಕೃಷ್ಣ ಪಕ್ಷ ಚತುರ್ದಶಿ ಅರ್ಧರಾತ್ರಿ ವ್ಯಾಪಿನಿ ಆಗಿದೆಯೋ ಅಂದು ಎಲ್ಲರೂ ಉಪವಾಸ ಮಾಡಬೇಕು. ಅದರಿಂದ ಸಾಯುಜ್ಯ ಮುಕ್ತಿ. ಆ ತಿಥಿಯು ಶಿವರಾತ್ರಿಯೆಂದು ಪ್ರಸಿದ್ಧವಾಗಿದೆ. ಈ ಶಿವರಾತ್ರಿ ವ್ರತದ ಅನುಷ್ಠಾನದಿಂದ ಸರ್ವಪಾಪಪರಿಹಾರ. ಅತ್ಯಂತ ಭಕ್ತಿಯಿಂದ ಶಿವಪೂಜೆ ಮಾಡಿದರೆ ಶಿವಸಾಕ್ಷಾತ್ಕಾರ. ಈ ವಿಷಯದಲ್ಲಿ ಉದಾಹರಣೆಗಾಗಿ ಒಂದು ಪ್ರಾಚೀನ ಇತಿಹಾಸವನ್ನು ಹೇಳುತ್ತೇನೆ.

ಪೂರ್ವಕಾಲದಲ್ಲಿ ಒಬ್ಬ ಬ್ರಾಹ್ಮಣ ವಿಧವೆ ಇದ್ದಳು. ಅವಳ ಸ್ವಭಾವ ಅತೀ ಚಂಚಲ, ಮನಸ್ಸು ವಿಷಯಾಸಕ್ತ. ಕಾಮವಾಸನೆ ಅವಳಲ್ಲಿ ಯಾವಾಗಲೂ ಜಾಗರೂಕ. ಕೊನೆಗೆ ಚಾಂಡಾಲ ಸಂಪರ್ಕ ಆ ದುಷ್ಟ ವಿಧವೆಗೆ. ಅದರಿಂದ ಗರ್ಭಧಾರಣೆ. ಓರ್ವ ಚಾಂಡಾಲ ಪುತ್ರನ ಜನನ. ಅವನಿಗೆ ಹೇಳಿ ಮಾಡಿಸಿದಂತೆ ಹೆಸರು ದುಃಸಹ. ಹೆಸರಿಗೆ ತಕ್ಕಂತೆ ಮಹಾದುಷ್ಟ. ಇಂಥ ಪಾಪಿಷ್ಠೆಯ ಹೊಟ್ಟೆಯಿಂದ ಸತ್ಪುತ್ರನ ಉತ್ಪತ್ತಿ ಹೇಗೆ ಆದೀತು ! ಅವನು ಮಾಡುವುದು ಧರ್ಮದ್ರೋಹ, ದೇವದ್ವೇಷ, ಭಗವದ್ ಭಕ್ತರ ಹಿಂಸೆ. ಜಗತ್ತಿನಲ್ಲಿ ಪಾಪಗಳು ಎಂದು ಎಷ್ಟು ಇವೆಯೋ ಅವೆಲ್ಲವನ್ನೂ ಆಚರಿಸಿಬಿಟ್ಟ ಆ ದುಷ್ಟ. ಅವನ ಜೀವನ ಎಂದರೆ ಬಗೆ ಬಗೆಯ ಪಾಪಗಳ ಒಂದು ಪ್ರಯೋಗಶಾಲೆ. ಕುಡಿತ, ಕಳವು, ಕೊಲೆ, ಹಿಂಸೆ, ಪರಸ್ತ್ರೀಗಮನ, ಗುರುಸ್ತ್ರೀಗಮನ, ಬ್ರಹ್ಮಹತ್ಯೆ, ಜೂಜಾಟ, ಬಾಲಹತ್ಯೆ ಒಂದೇ ಎರಡೇ! ಎಲ್ಲ ಪಾಪಗಳನ್ನೂ ಮಾಡಿ ಮುಗಿಸಿದ್ದ ಆ ಮಹಾಪಾಪಿ. ಹೊಲೆಯರೂ ಹೇಸುತ್ತಿದ್ದರು ಅವನು ಮಾಡುತ್ತಿದ್ದ ನೀಚಕೃತ್ಯಗಳನ್ನು ಕಂಡು.

ಒಂದು ರಾತ್ರಿ ಬಹಳ ಜನರು ಶಿವಮಂದಿರಕ್ಕೆ ಹೋಗುತ್ತಿದ್ದರು. ಗುಡಿಗೆ ಹೋಗುವ ಸಿರಿವಂತ ಜನರ ಮೈಮೇಲಿನ ಮತ್ತು ಲಿಂಗದ ಮೇಲಿನ ಮುತ್ತು ರತ್ನ ಬಂಗಾರದ ಆಭರಣಗಳ ಮೇಲೆಯೇ ಕಣ್ಣು ಆ ಪಾಪಿಗೆ. ಸುವರ್ಣಸ್ತೇಯ ಪಾಪಕ್ಕೆ ಇದೇ ಅನುಕೂಲ ಕಾಲ ಎಂದು ಹೊಂಚು ಹಾಕಿದ ಆ ದುರ್ಬುದ್ಧಿ. ಅಂದು ದೈವಯೋಗದಿಂದ ಶಿವರಾತ್ರಿ. ಶಿವಾಲಯಕ್ಕೆ ಬಂದ ಆ ಹಂಚಿಕೆಗಾರ. ಗರ್ಭಾಗಾರದಲ್ಲಿಯೇ ಭಕ್ತನಂತೆ ನಟಿಸುತ್ತ ಕಾದು ಕುಳಿತ. ಅಂದು ತಾನಾಗಿಯೇ ಅವನಿಗೆ ಉಪವಾಸವಾಯಿತು. ರಾತ್ರಿ ಅಲ್ಲಿ ಕುಳಿತಾಗ ಶಿವಪುರಾಣದ ಶ್ರವಣವೂ ಅನಿವಾರ್ಯವಾಗಿ ಆಯಿತು. ಎಂತೆಂಥ ಆಭರಣ ಅಲಂಕಾರಗಳು ಇವೆ ಎನ್ನುವದನ್ನು ನಿರೀಕ್ಷಿಸಲಿಕ್ಕಾಗಿ ಅವನು ಆಶೆಗಣ್ಣಿನಿಂದ

ಶಿವಲಿಂಗವನ್ನು ನೋಡುತ್ತಲೇ ಇದ್ದ. ಅಂತೂ ಯೋಗಾಯೋಗದಿಂದ ಶಿವರಾತ್ರಿ ಉಪವಾಸ ಶಿವಪುರಾಣ ಶ್ರವಣ, ಶಿವಲಿಂಗ ದರ್ಶನ ಮೂರೂ ಘಟಿಸಿದವು ಆ ಮಹಾಪಾಪಿಗೆ. ಅವನಿಗೆ ಗೊತ್ತಿಲ್ಲದಂತೆಯೇ ಶಿವರಾತ್ರಿ ವ್ರತದ ಪಾಲನೆ ಅವನಿಂದಾಗಿತ್ತು.

ಶಿವರಾತ್ರಿ ವ್ರತಾನುಷ್ಠಾನ ಪುಣ್ಯವು ಸಾಮಾನ್ಯವೇ ! ಅನಿಚ್ಛೆಯಿಂದಾದರೂ ಆಚರಿಸಿದ ಆ ಶಿವರಾತ್ರಿ ವ್ರತದ ಪುಣ್ಯದಿಂದ ಅವನಿಗೆ ಪುಣ್ಯಲೋಕ ಪ್ರಾಪ್ತವಾಯಿತು. ಅನೇಕ ವರ್ಷಗಳ ವರೆಗೆ ಅವನು ಪುಣ್ಯ ಪುರುಷರೊಂದಿಗೆ ಪುಣ್ಯ ಲೋಕಗಳಲ್ಲಿ ನೆಲಿಸಿದ, ಬಹುವಿಧವಾದ ಸುಖೋಪಭೋಗಗಳನ್ನು ಅನುಭವಿಸಿದ. ಅನಂತರ ಚಿತ್ರಾಂಗದೆಯ ಮಗನಾಗಿ ಜನಿಸಿದ. ವಿಚಿತ್ರವೀರ್ಯ ಎಂದು ಅವನ ಹೆಸರು. *(ಇವನು ಶಂತನುರಾಜನ ಮಗನಾದ ವಿಚಿತ್ರವೀರ್ಯನಲ್ಲ).* ಈ ವಿಚಿತ್ರವೀರ್ಯ ಪರಮಸುಂದರ. ಲಾವಣ್ಯವತಿಯರಾದ ಲಲನೆಯರೆಲ್ಲರೂ ಮರುಳಾಗುತ್ತಿದ್ದರು ಇವನ ಲೋಭನೀಯ ಲಾವಣ್ಯವನ್ನು ಕಂಡು. ಅಷ್ಟೇ ವೀರ ಶೂರ ಆಗಿದ್ದ ಆ ವಿಚಿತ್ರವೀರ್ಯ. ಸಹಜವಾಗಿಯೇ ಅವನ ಹೃದಯದಲ್ಲಿ ಅಹಂಕಾರದ ಅಂಕುರ ಉದ್ಭವಿಸಬಹುದಾಗಿತ್ತು. ಆದರೆ ಅವನು ಎಂದಿಗೂ ಅದಕ್ಕೆ ಅವಕಾಶ ಕೊಡಲಿಲ್ಲ. ಇಂಥ ಪ್ರಾಜ್ಯ ಸಾಮ್ರಾಜ್ಯ, ತಾರುಣ್ಯ, ಲಾವಣ್ಯ, ಅಧಿಕಾರ, ಐಶ್ವರ್ಯ ಎಲ್ಲ ಇದ್ದರೂ ಅವನು ಮದಮೋಹಮುಕ್ತ. ಸದಾ ಶಿವನ ಧ್ಯಾನದಲ್ಲಿಯೆ ಆಸಕ್ತ. ಶೈವ ಶಾಸ್ತ್ರೋಕ್ತವಾಗಿಯೇ ಪೂಜೆ. ಸರ್ವಪ್ರಯತ್ನದಿಂದಲೂ ಶಿವ ಧರ್ಮಪಾಲನ. ಶಿವರಾತ್ರಿಯಂದು ಇಡೀ ರಾತ್ರಿ ಜಾಗರಣ. ಶಿವಕಥಾ ಗಾನ. ಶಿವನ ಮಹಿಮೆಯನ್ನು ನೆನೆದು ರೋಮಾಂಚನ. ನೇತ್ರಗಳಿಂದ ಆನಂದ ಮಂದಾಕಿನಿಯಾಗಿ ಬಾಷ್ಪಧಾರೆ. ಹೀಗೆ ಉಪವಾಸ, ಜಾಗರ, ಶಿವಪೂಜೆಗಳಿಂದ ಶಿವರಾತ್ರಿ ವ್ರತದ ಶಾಸ್ತ್ರೋಕ್ತ ಅನುಷ್ಠಾನ. ಅದರಿಂದ ಉತ್ತಮ ಜ್ಞಾನಪ್ರಾಪ್ತಿ ಅದರ ಮಧುರ ಫಲ.

ಕೊನೆಗೆ ಅವನಿಗೆ ಶಿವಸಾಕ್ಷಾತ್ಕಾರ. 'ಸರ್ವಂ ಶಿವಮಯಂ ಜಗತ್ ' ಎನ್ನುವದು ಅವನ ಅನುಭವ. ಶಿವನ ಹೊರತು ಈ ಪ್ರಪಂಚದಲ್ಲಿ ಬೇರೆ ಏನೂ ಇಲ್ಲ. ಎನ್ನುವದು ಅವನು ಕಂಡುಕೊಂಡ ತತ್ವ. ಇಂಥ ಜ್ಞಾನ ಮುನಿಮಹರ್ಷಿಗಳಿಗೂ ದುರ್ಲಭ. ಇಂಥ ಆತ್ಮಾನುಭವವಂತೂ ಕೋಟಿಯಲ್ಲಿ ಒಬ್ಬಗೆ.

ಈ ಪುಣ್ಯ ಪ್ರಭಾವದಿಂದ ಶಿವನ ಲೀಲಾವತಾರಗಳಲ್ಲಿ ಭಾಗವಹಿಸುವ ಮಹಾಭಾಗ್ಯ ಆ ವಿಚಿತ್ರವೀರ್ಯನಿಗೆ. ದಾಕ್ಷಾಯಣಿಯು ತನ್ನ ತಂದೆಯ ಮನೆಯಲ್ಲಿ ಸಜೀವ ದೇಹದಹನ ಮಾಡಿಕೊಂಡಾಗ ಶಿವ ಜಡೆಯನ್ನು ಅಪ್ಪಳಿಸಿದನಲ್ಲವೆ ! ಧೂರ್ಜಟಿಯ ಜಟಾಸ್ಫಾಲನೆಯಿಂದ ಸತ್ಪುತ್ರ ವೀರಭದ್ರನಾಗಿ ಅವತರಿಸಿದವ ಈ ವಿಚಿತ್ರವೀರ್ಯ ರಾಜನೇ. ಅವನು ಸಾಕ್ಷಾತ್ ಶಿವಪುತ್ರನಾಗಿ 'ವೀರಭದ್ರ' ನಾಮದಿಂದ ಶಿವಲೀಲೆಯಲ್ಲಿ ಪ್ರಮುಖಪಾತ್ರ ವಹಿಸಿದ್ದು ಅವನು ಹಿಂದಿನ ವಿಚಿತ್ರವೀರ್ಯ ಜನ್ಮದಲ್ಲಿ ಅನುಷ್ಠಾನ ಮಾಡಿದ ಶಿವರಾತ್ರಿ ವ್ರತದ ಪ್ರಭಾವದಿಂದಲೇ.

ಮುಂದೆ ವಿಚಿತ್ರವೀರ್ಯನ ಅವತಾರವಾದ ಈ ವೀರಭದ್ರನು ದಕ್ಷಪ್ರಜಾಪತಿಯ ಯಜ್ಞವನ್ನು ಉಧ್ವಸ್ತಗೊಳಿಸಿ ಪರಮೇಶ್ವರನ ಪೂರ್ಣಾನುಗ್ರಹಕ್ಕೆ ಪಾತ್ರನಾದ.

ಹೀಗೆ ಶಿವರಾತ್ರಿ ವ್ರತದ ಅನೂಚಾನ ಆಚರಣೆಯಿಂದ ಶುದ್ಧಿ ಸಿದ್ಧಿ ಪಡೆದ ಭಗವದ್ ಭಕ್ತರಿಗೆಲ್ಲ ಲೆಕ್ಕವಿಲ್ಲ. ರಾಜಾ ಭರತ, ಮಾಂಧಾತ, ಧುಂಧುಮಾರ, ಹರಿಶ್ಚಂದ್ರ ಮುಂತಾದ ಅಸಂಖ್ಯ ಸಾಮಂತ ಚಕ್ರಚೂಡಾಮಣಿಗಳಾದ ಸಾರ್ವಭೌಮರು ಶಿವರಾತ್ರಿ ವ್ರತದ ಆಚರಣೆಯ ಪ್ರಭಾವದಿಂದ ನೆಲದಲ್ಲಿಯೇ ನಂದನದ ಸುಖವನ್ನು ಕಂಡಿದ್ದಾರೆ. ಈ ಮೇದಿನೀ ತಳದಲ್ಲಿಯೇ ಮೋಕ್ಷಾನಂದವನ್ನು ಹೊಂದಿದ್ದಾರೆ.

ದೇವಾಧಿದೇವನಾದ ಆ ಮಹಾದೇವನು ಕೈಲಾಸ ಪರ್ವತದಲ್ಲಿ ಗೌರಿಯೊಂದಿಗೆ ಗಣಪತಿ, ಷಣ್ಮುಖ, ವೀರಭದ್ರ, ನಂದೀಶ್ವರ ಮೊದಲಾದ ಶಿವಭಕ್ತರೊಡನೆ ಕೂಡಿಕೊಂಡು ಆನಂದದಿಂದ ವಾಸಮಾಡಿರುತ್ತಾನೆ.



**ಶ್ರೀ ಸ್ಕಂದ ಮಹಾಪುರಾಣಲ್ಲಿ ಹದಿನಾರನೇ ಅಧ್ಯಾಯ ಮುಗಿದುದು**

## ಕುಮಾರಿಕಾ ಖಂಡ | ಅಧ್ಯಾಯ -17

## ಪಂಚಾಕ್ಷರ ತೀರ್ಥದಲ್ಲಿ ಅರ್ಜುನನಿಂದ ಅಪ್ಸರೆಯರ ಉದ್ಧಾರ.

**ಶೌನಕಾದಿಗಳು** : ಸೂತ ಮಹಾಶಯರೇ ! ದಕ್ಷಿಣ ಸಮುದ್ರ ತೀರದಲ್ಲಿ ಪಂಚಾಪ್ಸರ ಎಂದು ಐದು ತೀರ್ಥಗಳು ಇರುತ್ತವೆ. ಅವು ಪರಮಪಾವನ ಎಂದು ಮುನಿಗಳ ಹೇಳಿಕೆ. ಆ ವಿಷಯವನ್ನು ಕೇಳಬೇಕೆಂಬ ಕುತೂಹಲ ನಮಗೆ.

**ಲೋಮಶ** : ಮುನಿವರ್ಯರೇ ! ಈ ವಿಷಯದಲ್ಲಿ ಮೊಟ್ಟಮೊದಲು ನಾರದರು ಒಂದು ಕತೆ ಹೇಳಿದರು, ಅದು ಕೌತುಕಕಾರಕ.

ಇದು ನಡೆದದ್ದು ಬಹು ಕಾಲಗಳ ಹಿಂದೆ, ಮಧ್ಯಮ ಪಾಂಡು ನಂದನನಾದ ಅರ್ಜುನನು ಹಿಂದೆ ಹನ್ನೆರಡು ವರ್ಷ ತೀರ್ಥಯಾತ್ರೆಗೆ ಹೋಗಿದ್ದನಲ್ಲವೇ ! ಆಗ ನಡೆದ ಘಟನೆಯಿದು. ಅರ್ಜುನನು ಮಣಿಪುರ ಮಾರ್ಗವಾಗಿ ದಕ್ಷಿಣ ಸಮುದ್ರದ ತೀರಕ್ಕೆ ಬಂದನು. ಅಲ್ಲಿ ಐದು ತೀರ್ಥಗಳಿವೆ. ಭಕ್ತಿಯಿಂದ ಅವುಗಳಲ್ಲಿ ಸ್ನಾನಮಾಡಿದ ಪಾಂಡು ನಂದನ. ಈ ಪಂಚತೀರ್ಥಗಳಲ್ಲಿ ಯಾವ ತಪಸ್ವಿಗಳೂ ಸ್ನಾನ ಮಾಡುತ್ತಿರಲಿಲ್ಲ. ಅಲ್ಲಿಗೆ ಸ್ನಾನಕ್ಕೆ ಹೋಗುವವರನ್ನು ತಡೆದು ನಿಲ್ಲಿಸುತ್ತಿದ್ದರು ತಪಸ್ವಿಗಳು. ಕುಮಾರೇಶ್ವರ, ಸ್ತಂಭೇಶ್ವರ, ಸೌಭದ್ರೇಶ್ವರ, ಮಹಾಕಾಲೇಶ್ವರ,

ಸಿದ್ದೇಶ್ವರ ಎಂಬ ಹೆಸರಿನ ಈ ಐದು ತೀರ್ಥಗಳನ್ನು ಬಹಿಷ್ಕರಿಸಿ ಬಿಟ್ಟಿದ್ದರು ಋಷಿಮುನಿಗಳು. ಅರ್ಜುನನು ಮುನಿಜನರು ತ್ಯಜಿಸಿದ ಈ ತೀರ್ಥಗಳಿಗೆ ಹೋಗಿ ದರ್ಶನ ತೆಗೆದುಕೊಂಡು ನಾರದ ಮುನಿಗಳನ್ನು ಕೇಳಿದ - ''ಮಹಾತ್ಮರೇ, ಈ ಪಂಚ ತೀರ್ಥಗಳನ್ನು ಮುನಿಗಳೆಲ್ಲ ತೊರೆದು ಬಿಟ್ಟಿದ್ದಾರೆ. ಬೇರೆ ಜನರನ್ನು ಅಲ್ಲಿಗೆ ಸ್ನಾನಕ್ಕೆ ಬಿಡುವುದಿಲ್ಲ. ಇದಕ್ಕೆ ಏನು ಕಾರಣ?''

**ನಾರದ :** ಕುರುನಂದನ ! ಈ ಪಂಚತೀರ್ಥಗಳಲ್ಲಿ ಭಯಂಕರ ಮೊಸಳೆಗಳು ಇರುತ್ತವೆ. ಬಂದವರನ್ನೆಲ್ಲ ಸೆಳೆದೊಯ್ದು ಕೊಂದು ತಿಂದು ಹಾಕುತ್ತವೆ. ಈ ಪಂಚ ತೀರ್ಥಗಳ ತೀರದಲ್ಲಿ ಇಳಿದವರು ತೀರಿಹೋದಂತೆಯೇ. ಅದಕ್ಕಾಗಿ ಈ ಪಂಚ ತೀರ್ಥಗಳಲ್ಲಿ ಸ್ನಾನ ಮಾಡಿದವರು ಪಂಚತ್ವವನ್ನೇ ಹೋದುವರೆಂದು ಮುನಿಗಳು ತಾವೂ ಸ್ನಾನ ಮಾಡುವದಿಲ್ಲ. ಬೇರೆಯವರನ್ನೂ ಅಲ್ಲಿ ಬಿಡುವದಿಲ್ಲ.

ನಾರದರ ಈ ನುಡಿಯನ್ನು ಕೇಳಿದರೂ ಅರ್ಜುನನು ತನ್ನ ಪಂಚತೀರ್ಥ ಸ್ನಾನ ನಿರ್ಣಯದಿಂದ ಕದಲಲಿಲ್ಲ. ''ಈ ಧರಾತಲದ ಎಲ್ಲ ತೀರ್ಥಗಳಲ್ಲಿಯೂ ಸ್ನಾನ ಮಾಡಬೇಕೆಂದು ನಾನು ಹೊರಟಿದ್ದೇನೆ. ಈ ಪಂಚತೀರ್ಥಗಳಲ್ಲಿ ಸ್ನಾನಮಾಡದಿದ್ದರೆ ನನ್ನ ಭಾರತದ ಸರ್ವ ತೀರ್ಥಾಭಿಷೇಕದ ಸಂಕಲ್ಪ ಈಡೇರುವದಿಲ್ಲ. ಆದ್ದರಿಂದ ನಾನು ಅಲ್ಲಿ ಸ್ನಾನಮಾಡಿಯೇ ಬರಬೇಕೆಂದು'' ಹೊರಟನು. ತಪಸ್ವಿಗಳು ಅವನನ್ನು ತಡೆದು ಹೇಳಿದರು.

**ತಪಸ್ವಿಗಳು :** ಪುಣ್ಯಾತ್ಮ, ನೀನು ಹನ್ನೆರಡು ವರ್ಷ ತೀರ್ಥಯಾತ್ರೆ ಮಾಡಿರುವೆ. ಮಂದಾಕಿನಿಯೇ ಮೊದಲಾದ ಭಾರತದ ಎಲ್ಲ ತೀರ್ಥಗಳಲ್ಲಿ ಮಿಂದು ಬಂದಿರುವೆ. ಈ ಪಂಚ ತೀರ್ಥಗಳನ್ನು ಬಿಟ್ಟರೆ ಏನಾಗುವದು? ಈ ಐದು ತೀರ್ಥಗಳು ಮೃತ್ಯು ತೀರ್ಥಗಳೆಂದೇ ಪ್ರಸಿದ್ಧವಾಗಿವೆ. ಅಲ್ಲಿ ಮೀಯಲಿಕ್ಕೆ ಹೋದರೆ ಸಾಯಲಿಕ್ಕೆ ಹೋದಂತೆಯೇ. ಅಲ್ಲಿ ಮುಳುಗಿದವರಾರೂ ಮೇಲೆ ಎದ್ದೇ ಇಲ್ಲ. ಅಲ್ಲಿಯ ಪ್ರತಿಯೊಂದು ತೀರ್ಥಗಳಲ್ಲಿ ನರಭಕ್ಷಕ ನಕ್ರಗಳು ಪ್ರಾಣಿಗಳ ಪ್ರಾಣಾಪಹರಣಕ್ಕಾಗಿ ಕಾಯ್ದಿರುತ್ತವೆ. ದಳ್ಳುರಿಯ ಜ್ವಾಲೆಗೆ ಎರಗುವ ದೀಪದ ಹುಳದಂತೆ ನೀನು ಆ ತೀರ್ಥಗಳಿಗೆ ಹೋಗಿ ಪ್ರಾಣ ಕಳೆದುಕೊಳ್ಳುವದು ಬೇಡ.

**ಅರ್ಜುನ :** ಮುನಿ ಮಾನ್ಯರೇ, ನೀವು ಪರಮ ದಯಾಳುಗಳು, ಸರ್ವ ಜನರಿಗೆ ಲೇಸನ್ನೇ ಬಯಸುವವರು. ನಿಮ್ಮ ದಯಾಳು ಸ್ವಭಾವಕ್ಕೆ ಅನುಸರಿಸಿ ನೀವು ಹೇಳಿದ್ದೇನೋ ಸರಿ. ಆದರೆ ಪುಣ್ಯಾಪೇಕ್ಷೆಯಿಂದ ತೀರ್ಥಸ್ನಾನಕ್ಕೆ ಹೊರಟ ನನ್ನನ್ನು ತಡೆಯಬೇಡಿರಿ.

**ಯಜ್ಜೀವಿತಂ ಚಾಚಿರಾಂಶುಸಮಾನಂ ಕ್ಷಣಭಂಗುರಮ್ ।**
**ತಚ್ಚೇದ್ಧರ್ಮಕೃತೇ ಯಾತಿ ಯಾತು ದೋಷೋऽಸ್ತಿ ಕೋ ನನು ॥**
**ಜೀವಿತಂ ಚ ಧನಂ ದಾರಾಃ ಪುತ್ರಾಃ ಕ್ಷೇತ್ರಂ ಗೃಹಾಣಿ ಚ, ।**
**ಯಾತಿ ಯೇಷಾಂ ಧರ್ಮಕೃತೇ ತ ಏವ ಭುವಿ ಮಾನವಾಃ ॥**

ಹೇಗೂ ಈ ಮಾನವ ಜೀವನವು ಮಿಂಚಿನಂತೆ ಚಂಚಲ, ಕ್ಷಣಿಕವಾದ ಈ ದೇಹವು ತೀರ್ಥಸ್ನಾನಾದಿ ಧರ್ಮಕರ್ಮ ಮಾಡುವಾಗ ನಾಶವಾದರೆ ತಪ್ಪೇನು ? ಅದಕ್ಕೇಕೆ ಹೆದರಬೇಕು? ಮನುಷ್ಯನ ಜೀವನ, ಧನ, ಮಡದಿ, ಮಕ್ಕಳು, ಮನೆ, ಮುಂತಾದವುಗಳೆಲ್ಲ ಇರುವುದಾದರೂ ಏತಕ್ಕೆ ! ಕೇವಲ ಧರ್ಮಸಾಧನೆಗಾಗಿ ಮಾತ್ರ ಅಲ್ಲವೆ? ಯಾರ ಜೀವಿತ ಸರ್ವಸ್ವವೂ ಧರ್ಮಸಾಧನೆಗಾಗಿ ಅರ್ಪಿತವಾಗುವುದೋ ಅವರೇ ಮನುಷ್ಯ ಎಂದು ಕರೆಯಲು ಅರ್ಹರಾಗಿರುತ್ತಾರೆ.''

ಅರ್ಜುನನು ಈ ರೀತಿ ವೈರಾಗ್ಯದ ಮಾತನ್ನು ಆಡಿದ ಬಳಿಕ ಮುನಿಗಳು ತಮ್ಮ ಸಮ್ಮತಿಯನ್ನು ನೀಡಿದರು ಆ ಪಂಚತೀರ್ಥ ಸ್ನಾನಕ್ಕೆ. ಆ ಋಷಿ ಪ್ರವರರಿಗೆಲ್ಲ ನಮಿಸಿದ ಅರ್ಜುನ. ಅವರ ಅನುಮತಿ ಪಡೆದ. ತೀರ್ಥಸ್ನಾನಕ್ಕೆ ನಡೆದ. ಮೊದಲು ಸೌಭದ್ರ ಮಹರ್ಷಿಯ ತೀರ್ಥದಲ್ಲಿ ನೀರಿನಲ್ಲಿ ಇಳಿದ. ಮುಳುಗು ಹಾಕಿದ. ಅಷ್ಟರಲ್ಲಿ ದೊಡ್ಡದಾದ ಒಂದು ಮೊಸಳೆ ಬಂದು ಅವನ ಕಾಲನ್ನು ಕಚ್ಚಿ ಹಿಡಿಯಿತು. ಮಹಾಬಲಿಷ್ಠ ಆ ಅರ್ಜುನ. ಅವನು ತನ್ನ ಶಕ್ತಿಯನ್ನೆಲ್ಲ ಒಗ್ಗೂಡಿಸಿ ಮೊಸಳೆ ಸಹಿತವಾಗಿ ತನ್ನ ಕಾಲನ್ನು ಎತ್ತಿ ಇಡುತ್ತಾ ನೀರಿನಿಂದ ಮೇಲೆ ಬಂದ. ನೀರಿನಿಂದ ಮೇಲೆ ಬಂತು ಆ ಕ್ರೂರ ನಕ್ರ. ಆಗ ಒಂದು ಪವಾಡ ನಡೆಯಿತು. ಜಲಚರ ಪ್ರಾಣಿಯಾದ ಮೊಸಳೆ ಮಹಿಳೆಯಾಗಿ ಮಾರ್ಪಟ್ಟಿತು. ನಕ್ರ ಹೋಗಿ ನಾರಿಯಾಗಿ ನಿಂತಿತು. ಮನಸ್ಸನ್ನು ಮುಗ್ಧಗೊಳಿಸುವ ರೂಪ. ಅರ್ಜುನನು ಅವಳಿಗೆ ಕೇಳಿದ-''ಕಲ್ಯಾಣಿ ! ನೀನು ಯಾರು? ನೀನು ನೀರಿನಲ್ಲಿ ಮೊಸಳೆಯಾಗಿ ಬೀಳಲು ಕಾರಣವೇನು?''

**ಮಹಿಳೆ :** ''ಪಾಂಡುನಂದನ, ನಾನೊಬ್ಬ ಅಪ್ಸರೆ, ನನ್ನ ಹೆಸರು ವರ್ಚಾ. ಹಿಂದೆ ನನ್ನ ವಿಹಾರ ನಂದನವನದಲ್ಲಿ. ನನಗೆ ನಾಲ್ವರು ಗೆಳತಿಯರು. ಒಬ್ಬರಿಗಿಂತ ಒಬ್ಬರು ಮಿಗಿಲು ಮನಮೋಹಕ ಸೌಂದರ್ಯದಲ್ಲಿ. ಎಲ್ಲರಿಗೂ ಸ್ವಚ್ಛಂದ ಸಂಚಾರ ಸಾಮರ್ಥ್ಯ. ಒಂದು ದಿನ ನಾನು ನನ್ನ ನಾಲ್ವರು ಸಖಿಯರೊಂದಿಗೆ ಅಮರಾವತಿಯ ಅರಸನ ಮನೆಯಿಂದ ಹೊರಟೆವು. ಕ್ರೀಡಾವನಕ್ಕೆ ಬಂದೆವು. ಅಲ್ಲಿ ಒಬ್ಬ ಬ್ರಾಹ್ಮಣ. ಸ್ವಾಧ್ಯಾಯ ನಿರತ. ಅತ್ಯಂತ ಸುಂದರ. ನವಯುವಕ, ಮಹಾತೇಜಸ್ವಿ, ಅವನ ತೇಜೋದೀಪ್ತಿಯಿಂದ ಆ ವನಾಂತ ಪ್ರದೇಶವೆಲ್ಲವೂ ಪ್ರಕಾಶಿತ. ಸೌಮ್ಯಾಕಾರದ ಸೂರ್ಯನಂತೆ ಇರುವ ಅವನ ಕಮನೀಯ ಕಲೇವರದ ಕಾಂತಿಕಿರಣದಿಂದ ದಶದಿಕ್ಕುಗಳೂ ಉದ್ಭಾಸಿತ. ಆಗ ನನಗೆ ನವತಾರುಣ್ಯ. ಆದರೂ ಬಾಲ್ಯಚಾಪಲ್ಯ ಹೋಗಿರಲಿಲ್ಲ. ಆ ಯುವಕನೋ ಬಹು ಗಂಭೀರನಾಗಿ ಸ್ವಾಧ್ಯಾಯ ತಪಸ್ಸನ್ನು ಮಾಡುತ್ತಿದ್ದ. ಆ ತರುಣ ತೇಜಸ್ವಿಯ ತಪಸ್ಸಿಗೆ ವಿಘ್ನವನ್ನು ಒಡ್ಡಬೇಕೆಂದು ನನಗೆ ಚಪಲ. ನಾನು ನನ್ನ ಪ್ರೀತಿಯ ಗೆಳತಿ ಸೌರಭೇಯಿ, ಮಮತೆಯ ಮೈತ್ರಿಣಿ ಮೈತ್ರೇಯಿ, ಪ್ರಾಣ ಸಖಿ ಬುದ್‌ಬುದಾ, ಜೀವಮಿತ್ರೆ ಲತಾ ಐವರೂ ಕೂಡಿ ಆ ಬ್ರಾಹ್ಮಣನ ಬಳಿಗೆ ಹೋದೆವು. ಅಲ್ಲಿ ಸುರುವಾಯಿತು ನಮ್ಮ ಹಾಡು, ಕೋಲು, ಕುಣಿತ, ಶೃಂಗಾರ ವಿಲಾಸ, ಅಂಗಚೇಷ್ಟೆ. ಆ ಯುವ ತಪಸ್ವಿಯನ್ನು ಮರುಳ

ಗೊಳಿಸಬೇಕೆಂದು ಬಗೆಬಗೆಯ ಬೆಡಗು ಬಿನ್ನಾಣಗಳಿಂದ ಬೇಕಾದಷ್ಟು ಶೃಂಗಾರ ಚೇಷ್ಟೆಗಳನ್ನು ನಾವು ಮಾಡಿದೆವು. ನಮ್ಮ ಈ ವಿಲಾಸ ಚೇಷ್ಟೆಗಳಿಂದ ಇನಿತೂ ಚಲಿತವಾಗಲಿಲ್ಲ ಅವನ ಚಿತ್ತ. ಇಷ್ಟೆಲ್ಲ ಹಾಡಿ ಪಾಡಿ, ಕುಣಿದು ಕುಪ್ಪಳಿಸುವ ನಮ್ಮ ಕಡೆ ಆ ಧೀರ ತಪಸ್ವಿಯು ಒಮ್ಮೆಯೂ ಕಣ್ಣೆತ್ತಿ ನೋಡಲಿಲ್ಲ. ನಿರ್ವಿಕಾರ ಭಾವದಿಂದಲೇ ತನ್ನ ಸ್ವಾಧ್ಯಾಯವನ್ನು ಮುಂದುವರೆಸಿದ. ಆಗ ನಮ್ಮ ಹಾವಭಾವಗಳು ಇನ್ನೂ ಹೆಚ್ಚಾದವು. ಹೇಗಾದರೂ ಮಾಡಿ ಅವನ ತಪೋಭಂಗ ಮಾಡಬೇಕೆಂದು ನಾವು ನಿಶ್ಚಯಿಸಿದೆವು. ನಮ್ಮ ಶೃಂಗಾರ ಚೇಷ್ಟೆಗಳು ಮಿತಿಮೀರಿದಾಗ ಆ ಬ್ರಾಹ್ಮಣ ಕೆರಳಿ ಕೆಂಡವಾದ. ನಮಗೆಲ್ಲ ಕಿಡಿ ನುಡಿಗಳಿಂದ ಶಾಪವಿತ್ತ - ''ನಾರಿಯರೇ, ನೀವು ಈಗ ನನ್ನ ತಪಸ್ಸಿಗೆ ಅಡ್ಡಿಯಾದಿರಿ. ಆತಂಕ ಒಡ್ಡಿದಿರಿ. ಆದುದರಿಂದ ನಿಮ್ಮ ಈ ವಕ್ರಬುದ್ಧಿಯ ಫಲವಾಗಿ ನಕ್ರರಾಗಿ ನೀರಿನಲ್ಲಿ ಬೀಳಿರಿ ನೂರು ವರುಷದವರೆಗೆ.'' ತರುಣ ತಪಸ್ವಿಯು ಕೋಪೋದ್ರೇಕದಿಂದ ಕೊಟ್ಟ ಆ ಶಾಪವನ್ನು ಕೇಳಿ ನಮಗೆ ಬಹಳ ದುಃಖವಾಯಿತು. ನಾವು ಮತ್ತೆ ಅವನಿಗೇ ಮೊರೆ ಹೋದೆವು. ಅವನನ್ನು ಪ್ರಾರ್ಥಿಸಿದೆವು.

**ಅಪ್ಸರೆಯರು :** ''ವಿಪ್ರೋತ್ತಮ ! ನಮ್ಮದು ಸರ್ವಾಪರಾಧವಾಯಿತು. ಎಷ್ಟೆಂದರೂ ನಾವು ಹೆಣ್ಣುಮಕ್ಕಳು. ನಿಮ್ಮಂಥ ತಪಸ್ವಿಗಳು ಕ್ಷಮಾನಿಧಿಗಳು. ಎಲ್ಲ ಪ್ರಾಣಿಗಳ ಮೇಲೆಯೂ ದಯೆಯನ್ನು ತೋರುವವರು. ಶರಣು ಬಂದವರನ್ನು ಕರುಣೆಯಿಂದ ಕಾಪಾಡುವವರು. ನೀನು ನಮ್ಮ ಅಪರಾಧವನ್ನು ಕ್ಷಮಿಸಿ ಉದ್ಧಾರಮಾಡು'' ಐವರು ಅಪ್ಸರೆಯರು ಅಂಗಲಾಚುತ್ತಿರುವದನ್ನು ಕೇಳಿ ಕರಗಿಹೋದ ಆ ತಪೋನಿಧಿ. ತಾನು ಸಿಟ್ಟಿಗೆದ್ದು ಶಾಪಕೊಟ್ಟದ್ದು ಕೆಟ್ಟೆನಿಸಿತು ಆ ಮುನಿಗೆ. ಆ ಪಂಚಾಪ್ಸರೆಯರಿಗೆ ಹೇಳಿದ.

**ತಪಸ್ವಿ :** **ಮಸ್ತಕಸ್ಥಾಯಿತಂ ಮೃತ್ಯುಂ ಯದಿ ಪಶ್ಯೇದಯಂ ಜನಃ ।**
**ಆಹಾರೋಽಪಿನ ರೋಚೇತ ಕಿಮುತಾಕಾರ್ಯಕಾರಿತಾ ॥**

**ಅಹೋ ಮಾನುಷ್ಯಕಂ ಜನ್ಮ ಸರ್ವರತ್ನ ಸುದುರ್ಲಭಮ್ ।**
**ತೃಣವತ್ ಕ್ರಿಯತೇ ಕೈಶ್ಚಿದ್ ಯೋಷಿನ್ಮೂಢೈರ್ನರಾಧಮೈಃ ॥**

ಮಾನವರ ತಲೆಯ ಮೇಲೆಯೆ ತೂಗಾಡುತ್ತಿರುತ್ತದೆ ಮೃತ್ಯುವಿನ ಖಡ್ಗ. ಇದರ ಎಚ್ಚರ ಇದ್ದರೆ ಮನುಷ್ಯನಿಗೆ ಆಹಾರವೇ ಸೇರಲಿಕ್ಕಿಲ್ಲ. ಮೃತ್ಯು ಕಣ್ಣೆದುರು ಕುಣಿಯುತ್ತಿದ್ದರೆ, ಯಾರಿಗೆ ತಾನೇ ಊಟ ತಿಂಡಿ ರುಚಿಸೀತು? ನಿಜವಾಗಿ ವಿಚಾರಿಸಿದರೆ, ಎಲ್ಲ ರತ್ನಗಳಿಗಿಂತ ಅಮೂಲ್ಯವಾದದ್ದು ಈ ಮಾನವನ ಬದುಕು. ಇಂಥ ಅನರ್ಘ್ಯವಾದ ಈ ಮಾನವ ಜನ್ಮವನ್ನು ಹೆಣ್ಣಿನ ಮೋಹದಿಂದ ಹಾಳುಮಾಡಿಕೊಳ್ಳುವ ಮಾನವರು ಮಹಾಮೂರ್ಖರು. ಹಾಳುಮಾಡಿಕೊಳ್ಳುತ್ತಿರುವದನ್ನು ಕಂಡು ನನಗಂತೂ ಅತ್ಯಾಶ್ಚರ್ಯ. ನೀವು ಹೆಣ್ಣುಗಳು ಹುಟ್ಟಿದ್ದಾದರೂ ಏತಕ್ಕಾಗಿ? ಈ ನಾರೀ ಜನ್ಮದ ಫಲವೇನು? ಲಾಭವೇನು ? ಇದನ್ನು ನೀವೇ ವಿಚಾರಿಸಿರಿ. ಸ್ತ್ರೀಯರನ್ನು ನಿಂದಿಸಲು ನಾನೀಗ ಹೊರಟಿಲ್ಲ. ನನಗೆ ಅವರ ಬಗ್ಗೆ

ಪೂಜ್ಯ ಬುದ್ಧಿಯೇ ಇದೆ. ನಾವೆಲ್ಲರೂ ಹುಟ್ಟಿದ್ದು ನಾರಿಯರಿಂದಲೇ ಅಲ್ಲವೇ ! ಆದುದರಿಂದ ನಾನೆಂದಿಗೂ ನಿಂದಿಸುವದಿಲ್ಲ ನಾರೀಕುಲವನ್ನು. ಆದರೆ ನಾರಿಯರನ್ನು ನೋಡಿ ನೀತಿಗೆಟ್ಟು, ನಾಚಿಕೆ ಬಿಟ್ಟು, ಉಚ್ಛೃಂಖಲರಾಗಿ ನಡೆಯುವ ಮತಿಗೆಟ್ಟ ಮಾನವರನ್ನು ಮಾತ್ರ ನಿಂದಿಸುತ್ತೇನೆ. ಮಿಥುನ ಧರ್ಮವನ್ನು ಪಾಲಿಸಲಿಕ್ಕೆಂದೇ ಸ್ತ್ರೀ ಪುರುಷರನ್ನು ನಿರ್ಮಿಸಿದ್ದಾನೆ ಆ ಬ್ರಹ್ಮದೇವ. ಇದರಲ್ಲಿ ಯಾವ ದೋಷವೂ ಇಲ್ಲ. ಅಗ್ನಿಸಾಕ್ಷಿಯಾಗಿ ತಂದೆ ಧಾರೆಯೆರೆದು ಕೊಟ್ಟ ಪತಿಯೊಂದಿಗೆ ದಾಂಪತ್ಯ ಧರ್ಮವನ್ನು ಅನುಸರಿಸಿ ಸುಖೋಪಭೋಗ ಮಾಡುವದು ಸರ್ವಶ್ರೇಷ್ಠ ಗೃಹಿಣೀಧರ್ಮ ಎನಿಸುತ್ತದೆ.

ಶಾಸ್ತ್ರ ಮರ್ಯಾದೆಯನ್ನು ಅನುಸರಿಸಿ ಇಂಥ ಗೃಹಿಣಿಯನ್ನು ವಿವಾಹವಾಗಿ ಗೃಹಸ್ಥ ಧರ್ಮವನ್ನು ಅನೂಚಾನವಾಗಿ ಪಾಲನ ಮಾಡುವವರು ಪುಣ್ಯಭಾಗಿಗಳು. ಆದರೆ, ಈ ಗೃಹಸ್ಥ ಧರ್ಮವನ್ನು ಮೀರಿ ಕಾಮಾಚಾರ ವಾಮಾಚಾರಗಳಿಗೆ ಬಿದ್ದು ತನ್ನ ಮನಬಂದಂತೆ ನಡೆಯುವ ಜನರು ಅನರ್ಥ ಪರಂಪರೆಯನ್ನೇ ಅನುಭವಿಸಬೇಕಾಗುವದು. ಮಾನವನು ಉಂಡ ಅನ್ನವೆಲ್ಲವೂ ರಕ್ತವಾಗಿ ಸಾರಭೂತ ವೀರ್ಯವಾಗಿ ಪರಿಣಮಿಸುವದು. ಅದನ್ನು ನೀತಿ ಭ್ರಷ್ಟನಾಗಿ ಮೋಹಾಂಧನಾಗಿ ನಿಂದಿತ ಯೋನಿಯಲ್ಲಿ ಇಟ್ಟರೆ, ಅವನು ಪಂಚಮಹಾದ್ರೋಹಿ ಎಂದು ಎನಿಸುತ್ತಾನೆ. ಅನ್ನ ದ್ರೋಹಿ, ಆತ್ಮದ್ರೋಹಿ, ನಾರೀದ್ರೋಹಿ, ಪಿತೃದ್ರೋಹಿ ಕೊನೆಯದಾಗಿ ವಿಶ್ವದ್ರೋಹಿ ಎನಿಸುವನು. ಇಂಥ ನೀತಿಗೆಟ್ಟ ನರನಾರಿಯರು ಅನಂತ ಕಾಲದವರೆಗೆ ಕಗ್ಗತ್ತಲೆಯಿಂದ ಕೂಡಿದ ನರಕದಲ್ಲಿ ನವೆಯಬೇಕಾಗುವದು. ದೇವತೆ, ಪಿತರ, ಋಷಿ, ಅತಿಥಿ ಮತ್ತು ಭೂತ (ಪ್ರಾಣಿ) ಈ ಐವರ ಸಹಾಯದಿಂದ ಮಾನವನು ಈ ಪ್ರಪಂಚದಲ್ಲಿ ನೆಮ್ಮದಿಯಿಂದ ಬಾಳುತ್ತಾನೆ. ಈ ಐವರ ಉಪಕಾರವನ್ನು ಮಾನವನಾಗಿ ಹುಟ್ಟಿ ಬಂದ ಬಳಿಕ ತೀರಿಸಬೇಕು. ಯಾವ ಮನುಷ್ಯನು ತನ್ನ ಕಿವಿ, ಕಣ್ಣು, ನಾಲಿಗೆ, ವಾಣಿ ಮತ್ತು ಮನಸ್ಸು, ಇವು ಐದನ್ನು ಗೆದ್ದು ತನ್ನ ವಶದಲ್ಲಿಟ್ಟುಕೊಳ್ಳುವನೋ, ಹಂಸತೀರ್ಥ ಎಂದು ಅವನು ಕರೆಯಲ್ಪಡುವನು. ಇಂದ್ರಿಯನಿಗ್ರಹವಿಲ್ಲದ ಉಚ್ಛೃಂಖಲ ಮನುಷ್ಯರು ಕಾಕತೀರ್ಥ ಎಂದು ಕರೆಯಲ್ಪಡುತ್ತಾರೆ. ಈ ಕಾಕತೀರ್ಥದಲ್ಲಿ ಹಂಸ ಬುದ್ಧಿಯಿಂದ ಪ್ರೇಮ ಮಾಡುವವನೇ ಮಹಾಮೂರ್ಖ. ಅಪ್ಸರೆಯರೇ, ಮನುಷ್ಯರು ಕಾಮಾಂಧರಾಗಿ ತಾವು ಮಾಡುವ ದುಷ್ಕರ್ಮಗಳಿಗೆ ಎಂಥ ಘೋರವಾದ ಯಮಯಾತನೆಯನ್ನು ಅನುಭವಿಸುವರು ಎಂಬುದನ್ನು ನಾನು ಯಮಲೋಕಕ್ಕೆ ಹೋಗಿ ಪ್ರತ್ಯಕ್ಷವಾಗಿ ನೋಡಿ ಬಂದಿದ್ದೇನೆ. ಅಂದಬಳಿಕ ನನ್ನ ಮನುಸ್ಸು ವಿಷಯ ಸುಖದ ಕಡೆಗೆ ಹೇಗೆ ಒಲಿದೀತು! ನೀವು ಮಾಡಿದ ಪಾಪದಿಂದ ಮೊಸಳೆಯಾಗಿ ಬಹುಕಾಲ ಈ ನೀರಿನಲ್ಲಿ ನೆಂದ ಬಳಿಕ ಓರ್ವ ಮಹಾಪುರುಷನು ಇಲ್ಲಿ ಬರುವನು. ಅವನು ನಿಮ್ಮನ್ನು ನೀರಿನಿಂದ ಎತ್ತಿ ತೀರದಲ್ಲಿ ಎಳೆದು ತಂದಾಗ ನಿಮಗೆ ಮೊಸಳೆಯ ರೂಪವು ಹೋಗಿ ನಿಮ್ಮ ಮೊದಲಿನ ಅಪ್ಸರಾ ಸ್ವರೂಪವು ಪ್ರಾಪ್ತವಾಗುವದು.

**ಸ್ತ್ರೀಯರು :** ತಪಸ್ವಿ ಬ್ರಾಹ್ಮಣನ ಈ ಮಾತನ್ನು ಕೇಳಿ ನಮಗೆ ಇದ್ದುದರಲ್ಲಿಯೇ ತುಸು ಸಮಾಧಾನವೆನಿಸಿತು. ಆ ಬ್ರಾಹ್ಮಣನಿಗೆ ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡಿ ಅಲ್ಲಿಂದ ಹೊರಟು ಬಂದೆವು. ನಾವು ಆ ಬ್ರಾಹ್ಮಣನನ್ನು ಬಿಟ್ಟು ಬಂದರೂ ಅವನು ಕೊಟ್ಟ ಶಾಪದ ಚಿಂತೆ ಮಾತ್ರ ನಮ್ಮನ್ನು ಬಿಟ್ಟಿದ್ದಿಲ್ಲ. ನಮ್ಮನ್ನು ಉದ್ಧರಿಸುವ ಮನುಷ್ಯನು ಎಲ್ಲಿರಬಹುದು? ಮೊಸಳೆಯಾಗಿ ನಾವು ಯಾರ ಕಾಲನ್ನು ಹಿಡಿಯಬೇಕು? ಎಂಬುದನ್ನು ಪರಿಚಯಿಸಿಕೊಳ್ಳಲು ನಾವು ಆತುರರಾಗಿದ್ದೆವು. ದೈವಯೋಗದಿಂದ ನಮಗೆ ದಾರಿಯಲ್ಲಿಯೇ ಕಾಣಸಿಕ್ಕರು ನಾರದ ಮುನಿಗಳು. ಅವರಿಗೆ ನಮಸ್ಕರಿಸಿ ನಮ್ಮ ದುಃಖವನ್ನೆಲ್ಲ ತೋಡಿಕೊಂಡೆವು. ನಮ್ಮನ್ನು ಮೊಸಳೆಯ ಜನ್ಮದಿಂದ ವಿಮೋಚನ ಮಾಡಿ ಮಹಿಳೆಯರನ್ನಾಗಿ ಮಾಡುವ ಮಹಾಪುರುಷನು ಯಾರು ಎಂದು ಕೇಳಿದೆವು. ನಮ್ಮ ಮಾತನ್ನು ಕೇಳಿ ಮಹಾನುಭಾವರಾದ ನಾರದರು ಉತ್ತರಿಸಿದರು.

**ನಾರದ :** ''ದಕ್ಷಿಣ ಸಮುದ್ರ ತೀರದಲ್ಲಿ ಪರಮ ಪವಿತ್ರವಾದ ಐದು ತೀರ್ಥಗಳಿವೆ. ನೀವೆಲ್ಲರೂ ಅಲ್ಲಿಗೆ ಹೋಗಿರಿ. ಅಲ್ಲಿಗೆ ಸ್ನಾನಕ್ಕೆ ಬಂದ ಅರ್ಜುನನು ನಿಮ್ಮನ್ನು ಉದ್ಧರಿಸುವನು'' ದೇವಮುನಿಯ ಆದೇಶದಂತೆ ನಾವು ಈ ಸಾಗರತೀರದ ಪಂಚತೀರ್ಥದಲ್ಲಿ ಬಂದು ನೆಲಿಸಿದ್ದೇವೆ. ಈಗ ನೀವು ಆ ಬ್ರಾಹ್ಮಣ ತಪಸ್ವಿಯ ಉಶ್ಶಾಪವನ್ನು ನಿಜವನ್ನಾಗಿ ಮಾಡಿದ್ದೀರಿ. ನಿಮ್ಮಂಥ ಸಾಧು ಪುರುಷರ ಜನ್ಮವೇ ದೀನ ದುಃಖಿತರ ಉದ್ಧಾರಕ್ಕಾಗಿ ಅಲ್ಲವೆ ! ನಿಮ್ಮ ಪಾದಸ್ಪರ್ಶದಿಂದ ಈಗ ನಾನು ಉದ್ಧೃತಳಾಗಿರುವೆ. ಉಳಿದ ತೀರ್ಥಗಳಲ್ಲಿ ಮೊಸಳೆಯಾಗಿ ಮುಳುಗಿದ ನನ್ನ ಪ್ರೀತಿಯ ಗೆಳತಿಯರನ್ನು ದಯಮಾಡಿ ಉದ್ಧರಿಸಿರಿ.

ವರ್ಚಾವನಿತೆಯ ಈ ವಿನಂತಿಯನ್ನು ಕೇಳಿ ಅರ್ಜುನನು ಉಳಿದ ನಾಲ್ಕೂ ತೀರ್ಥಗಳಿಗೆ ಸ್ನಾನಕ್ಕೆ ಹೋದನು. ಅಲ್ಲಿ ಎಲ್ಲ ಕಡೆಗೂ ಮೊಸಳೆಯಾಗಿ ತನ್ನ ಕಾಲು ಹಿಡಿದ ನಾಲ್ವರು ಅಪ್ಸರೆಯನ್ನು ನೀಚ ಯೋನಿಯಿಂದ ಮುಕ್ತರನ್ನಾಗಿ ಮಾಡಿ ದಿವ್ಯಾಂಗನೆಯರನ್ನಾಗಿ ಮಾರ್ಪಡಿಸಿದನು. ಅನಂತರ ಆ ಐವರೂ ಅಪ್ಸರಾ ಕಾಮಿನಿಯರೂ ವೀರಾಗ್ರಣಿಯಾದ ಅರ್ಜುನನಿಗೆ ನಮಸ್ಕರಿಸಿ, ತಮ್ಮ ತಮ್ಮ ಸ್ಥಾನಗಳಿಗೆ ಹೋಗಲಿಕ್ಕಾಗಿ ಆಕಾಶದಲ್ಲಿ ಉಡ್ಡಾಣ ಮಾಡಿದರು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಹದಿನೇಳನೇ ಅಧ್ಯಾಯ ಮುಗಿದುದು.**

## ಸಾರಸ್ವತ ಹಾಗೂ ಕಾತ್ಯಾಯನ ಸಂವಾದ. ದಾನ ಮತ್ತು ತ್ಯಾಗಗಳ ಮಹಿಮೆ.

ಅಧ್ಯಾಯ -18

**ಲೋಮಶ :** ಅನಂತರ ಅರ್ಜುನನು ನಾರದರ ಬಳಿಗೆ ಹೋದನು. ಅವರ ಸುತ್ತಲೂ ಅನೇಕ ಬ್ರಹ್ಮಜ್ಞಾನಿಗಳು. ಅವರೆಲ್ಲರಿಗೂ ಪ್ರತ್ಯೇಕ ಪ್ರತ್ಯೇಕ ಪ್ರಣಾಮ ಅರ್ಜುನನಿಂದ. ಆಗ ನಾರದರು ಅರ್ಜುನನಿಗೆ ಹೇಳಿದರು ''ಅರ್ಜುನಾ ! ನಿನಗೆ ಗೆಲುವು ಉಂಟಾಗಲಿ. ದೇವಬ್ರಾಹ್ಮಣರ ಆರಾಧನೆಯಲ್ಲಿ ನಿನ್ನ ಮನಸ್ಸು ದೇಹ ಎರಡೂ ತೊಡಗಲಿ. ಹನ್ನೆರಡು ವರುಷ ತೀರ್ಥಯಾತ್ರೆ ಗೈಯುವಾಗ ನಿನಗೇನು ಕಷ್ಟವಾಗಲಿಲ್ಲವಷ್ಟೇ ! ಯಾವನ ಕೈ, ಮನುಸ್ಸು, ಕಾಲು ನಿಯಂತ್ರಣದಲ್ಲಿರುವವೋ ಅವನೇ ಜಿತೇಂದ್ರಿಯ. ಸರ್ವತೀರ್ಥಗಳ ಸ್ನಾನದ ಸಂಪೂರ್ಣ ಪುಣ್ಯವನ್ನು ಪಡೆಯುತ್ತಾನೆ. ಇದನ್ನು ನೀವು ಚೆನ್ನಾಗಿ ತಿಳಿದುಕೊಳ್ಳಿರಿ.

**ಯಸ್ಯಹಸ್ತೌಚ :''ಪಾದೌ ಚ ಮನಶ್ಚೈವ ಸುಸಂಯತಮ್ ।**
**ನಿರ್ವಿಕಾರಾಃ ಕ್ರಿಯಾಃ ಸರ್ವಾಃ ಸ ತೀರ್ಥಫಲಮಶ್ನುತೇ ॥''**

ಯಾವನಿಗೆ ಯುಧಿಷ್ಠಿರನು ಸೋದರ, ಭಗವಾನ್ ಶ್ರೀ ಕೃಷ್ಣನು ಮಿತ್ರ, ಭೀಮಸೇನನು ಅಣ್ಣನಾಗಿದ್ದಾನೆಯೋ ಮತ್ತು ಮನಸ್ಸು ಹಾಗೂ ಇಂದ್ರಿಯಗಳು ವಶವರ್ತಿಯಾಗಿರುವವೋ ಅಂಥ ನಿನಗೆ ಸರ್ವತೀರ್ಥ ಸ್ನಾನ ಪುಣ್ಯವು ಬರುವದರಲ್ಲಿ ಆಶ್ಚರ್ಯವೇನಿದೆ? ಅರ್ಜುನ ! ನಿನಗೆ ನಾನು ಒಂದು ಪ್ರಿಯವಾರ್ತೆ ಹೇಳುತ್ತೇನೆ. ಕೇಳು. ನೀನು ಊರು ಬಿಟ್ಟು ಬಹಳ ದಿನಗಳಾದವು. ನಿನ್ನ ಕುರುವಂಶದವರೂ ಕೃಷ್ಣನ ಯದುವಂಶಜರೂ ಕ್ಷೇಮದಿಂದ ಇರುತ್ತಾರೆ. ಮಹಾರಾಜ ಧೃತರಾಷ್ಟ್ರನ ಆಜ್ಞೆಯಿಂದ ಭೀಮಸೇನನು ವೀರವರ್ಮರಾಜನನ್ನು ಸಂಹರಿಸಿದ್ದಾನೆ. ನಿನ್ನ ಸೋದರರೆಲ್ಲರೂ ಕೂಡ ಕ್ಷೇಮದಿಂದ ಇದ್ದಾರೆ.

**ಅರ್ಜುನ :** ಕೃಷ್ಣನ ಆಜ್ಞಾಪಾಲಕನಾದವರಿಗೆ ಹಾಗೂ ಬ್ರಹ್ಮಜ್ಞಾನಿಯ ಮಾರ್ಗದರ್ಶನದಲ್ಲಿ ನಡೆಯುವವರಿಗೆ ಅಕುಶಲವು ಎಂತು ಬಂದೀತು ! ತೀರ್ಥ ಯಾತ್ರೆಗೆ ಎಂದು ಹೊರಟ ನಾನು ಸ್ನಾನ ದರ್ಶನ ಮಾಡಿದ ತೀರ್ಥಗಳು ಅಸಂಖ್ಯ. ತೀರ್ಥಸ್ನಾನಕ್ಕಿಂತ ತಮ್ಮಂಥ ಭಗವದ್ಭಕ್ತರ ದರ್ಶನದಿಂದ ಇನ್ನೂ ಹೆಚ್ಚಿನ ಪುಣ್ಯ. ಅವರ ಬಾಯಿಂದ ತೀರ್ಥಗಳ ಮಹಿಮೆಯನ್ನು ಶ್ರವಣ ಮಾಡುವುದು ಎಲ್ಲಕ್ಕಿಂತ ಪುಣ್ಯತಮ ಎಂದು ಓರ್ವ ಋಷಿಗಳು ಅಪ್ಪಣೆ ಕೊಡಿಸಿದ್ದಾರೆ.

**ತೀರ್ಥಾನಾಂ ದರ್ಶನಂ ಪುಣ್ಯಮವಗಾಹಸ್ತತೋಽಧಿಕಃ ।**
**ಮಾಹಾತ್ಮ್ಯ ಶ್ರವಣಂ ತಸ್ಮಾದಿತ್ಯೋರ್ವೋ ಮುನಿರಬ್ರವೀತ್ ॥**

ತೀರ್ಥಗಳ ದರುಶನ ಪುಣ್ಯ, ಅವುಗಳಲ್ಲಿ ಸ್ನಾನ ಪುಣ್ಯತರ, ಅವುಗಳ ಮಹಾತ್ಮ್ಯ ಶ್ರವಣ ಪುಣ್ಯತಮ ಎಂದು ಓರ್ವ ಋಷಿಗಳ ಅಭಿಪ್ರಾಯ.

**ನಾರದ :-** ಅರ್ಜುನ ! ನೀನು ಧನ್ಯ. ನಿಮ್ಮಂಥ ಸಜ್ಜನರ ಕಾಲವು ಧರ್ಮ ಶ್ರವಣದಿಂದ ಸಾರ್ಥಕವಾಗುವುದು.

**ಸಾಧೂನಾಂ ಧರ್ಮಶ್ರವಣೈಃ ಕೀರ್ತನೈರ್ಯಾತಿ ಚಾನ್ವಹಮ್ ।**
**ಪಾಪಾನಾಮಸದಾಲಾಪೈರಾಯುರ್ಯಾತಿ ವೃಥಾತ್ಮಯಮ್ ॥**

ಸಜ್ಜನರು ಭಗವತ್ ಕಥಾಶ್ರವಣ ಮತ್ತು ತೀರ್ಥಕ್ಷೇತ್ರ ಮಹಿಮಾಶ್ರವಣಗಳಿಂದ ತಮ್ಮ ಜೀವನವನ್ನು ಸಾರ್ಥಕಮಾಡಿಕೊಂಡರೆ, ದುರ್ಜನರು ಹಾಳುಹರಟೆ ಮತ್ತು ದುರ್ವಿಚಾರಗಳಿಂದ ತಮ್ಮ ಜೀವನವನ್ನೇ ವ್ಯರ್ಥಮಾಡಿಕೊಳ್ಳುವರು. ಅರ್ಜುನನೇ! ನಾನು ಈಗ ನಿನ್ನ ಅಪೇಕ್ಷೆಯ ಮೇರೆಗೆ ತೀರ್ಥಗಳ ಗುಣ ಹಾಗೂ ಮಹಿಮೆಯನ್ನು ಬಣ್ಣಿಸುತ್ತೇನೆ ಕೇಳು. ಇದೊಂದು ಪೂರ್ವಕಾಲದ ಅಪೂರ್ವ ಘಟನೆ, ಭಗವಾನ್ ಕಪಿಲದೇವನೊಂದಿಗೆ ನಾನು ಲೋಕಸಂಚಾರಗೈಯುತ್ತ ಬ್ರಹ್ಮದೇವರ ಸತ್ಯಲೋಕಕ್ಕೆ ಹೋಗಿದ್ದೆ. ಬ್ರಹ್ಮದೇವರು ಪ್ರಸನ್ನ ಚಿತ್ತದಿಂದ ನಮ್ಮ ಕಡೆ ನೋಡಿ ಸ್ವಾಗತ ನೀಡಿ ಕುಶಲ ಪ್ರಶ್ನೆ ವಿಚಾರಿಸಿದರು. ಅದೇ ವೇಳೆಗೆ ಲೋಕಹಿತಕ್ಕಾಗಿ ಸ್ವೈರ ಸಂಚರಣಗೈಯುವ ಕೆಲವೊಂದು ಬ್ರಾಹ್ಮಣರು ಅಲ್ಲಿಗೆ ಬಂದರು. ಬ್ರಹ್ಮದೇವರಿಗೆ ವಂದಿಸಿ ಅವರು ತೋರಿದ ಆಸನದ ಮೇಲೆ ಆಸೀನರಾದರು ಆ ಧರಿಣೀದೇವರು. ಆಗ ಅವರನ್ನು ಕುರಿತು ಚತುರ್ಮುಖನು "ಬ್ರಾಹ್ಮಣೋತ್ತಮರೇ ! ನೀವು ಎಲ್ಲಿ ಎಲ್ಲಿ ಸಂಚರಿಸಿದಿರಿ? ಏನೇನು ನೋಡಿದಿರಿ? ಏನೇನು ಕೇಳಿದಿರಿ? ನೀವು ನೋಡಿ ಕೇಳಿದ್ದರಲ್ಲಿ ಅತೀ ಅದ್ಭುತ, ಅಸಾಧಾರಣ, ವಿಲಕ್ಷಣ ಯಾವುದಾದರೂ ಉಂಟೆ?" ಬ್ರಹ್ಮದೇವರ ಈ ಪ್ರಶ್ನೆಗೆ ತಲೆಬಾಗಿಸಿ ಕೈ ಜೋಡಿಸಿ ನಮ್ರತೆಯಿಂದ ನುಡಿದ ಸುಶ್ರವ ಎಂಬ ಒಬ್ಬ ಬ್ರಾಹ್ಮಣ.

**ಸುಶ್ರವ :** ಸರ್ವಜ್ಞಚೂಡಾಮಣಿಗಳಾದ ಚತುರ್ಮುಖರ ಎದುರು ಯಾವುದಾದರೂ ಹೇಳುವದು ನಮ್ಮ ಅಜ್ಞತೆಯ ದ್ಯೋತಕ. ಆದರೂ ಅದ್ಭುತವೇನಾದರೂ ಇದ್ದರೆ ಹೇಳಿರಿ ಎಂಬ ತಮ್ಮ ಆಜ್ಞೆಯನ್ನು ಉಲ್ಲಂಘಿಸಲಾರದೇ ವಿಜ್ಞಾಪನ ಮಾಡಿಕೊಳ್ಳುತ್ತಲಿದ್ದೇನೆ. ಕಾತ್ಯಾಯನ ಓರ್ವ ಮಹಾಮುನಿ. ಅವನು ಧರ್ಮಶ್ರವಣ ಮಾಡಿದ್ದು ಹತ್ತು ಹಲವಾರು ಮಹಾಮುನೀಶರುಗಳಿಂದ. ಆದರೆ ಈ ಎಲ್ಲ ಧರ್ಮತತ್ವಗಳ ಸಾರವೇನು ಎಂಬುದು ತಿಳಿಯದೇ ಹೋಯಿತು ಆ ಕಾತ್ಯಾಯನನಿಗೆ. ಧರ್ಮತತ್ವದ ಸಾರವನ್ನು ತಿಳಿಯುವ ಉದ್ದೇಶದಿಂದ ಅವನು ನೂರು ವರುಷ ನೆಲದ ಮೇಲೆ ಕಾಲಿನ ತುದಿಬೆರಳಿನ ಮೇಲೆ ನಿಂತು ತಪಂಗೈದ, ಆಗ ಒಮ್ಮೆಲೇ ಆಕಾಶವಾಣಿ "ಕಾತ್ಯಾಯನ, ನೀನು ಧರ್ಮದ ರಹಸ್ಯ ತತ್ವವನ್ನು ತಿಳಿಯಬಯಸಿದರೆ ಸರಸ್ವತೀ ತೀರಕ್ಕೆ ಹೋಗು. ಅಲ್ಲಿಯ ಆ ನದೀ ತಟದಲ್ಲಿ ನೆಲಿಸಿದ ಸಾರಸ್ವತ ಮುನಿ ಒಂದು ಜ್ಞಾನನಿಧಿ. ಅವನೇ ನಿಜವಾದ ಧರ್ಮತತ್ವದ ಸಾರವೇತ್ತಾ. ಅವನನ್ನು ಕೇಳಿದರೆ, ನಿನಗೆ ಧರ್ಮತತ್ವದ ತಿರುಳನ್ನು ತಿಳಿಸಿ ಹೇಳುವ ಆ ತಪಸ್ವಿ" ಈ ನಭೋವಾಣಿಯನ್ನು ಆಲಿಸಿದ ಕಾತ್ಯಾಯನ ಅಲ್ಲಿಂದ ಹೊರಟ. ಸರಸ್ವತೀ ನದಿಯ ದಂಡೆಗೆ ಬಂದ. ಅಲ್ಲಿ ತಪಸ್ವಿಯನ್ನು ಕಂಡ. ಸಾಷ್ಟಾಂಗ ಪ್ರಣಾಮ ಹಾಕಿದ. ಕೈ ಮುಗಿದು ಕೇಳಿದ.

**ಕಾತ್ಯಾಯನ** :- ಪೂಜ್ಯರೇ ! ದೊಡ್ಡವರ ಮಾತು ಪ್ರಮಾಣ ಎಂದು ವೇದದ ಆಜ್ಞೆ. ನಮ್ಮ ದೇಶದಲ್ಲಿ ದೊಡ್ಡವರಿಗೂ, ಜ್ಞಾನಿಗಳಿಗೂ, ಮುನಿಗಳಿಗೂ ಕೊರತೆಯಿಲ್ಲ. ಅನೇಕ ಜ್ಞಾನಿಗಳು, ಅಗಣಿತ ತಪಸ್ವಿಗಳು, ಅಪರಿಮಿತ ಮುನಿಗಳು ಇರುತ್ತಾರೆ ಈ ದೇಶದ ತುಂಬ. ಇವರಲ್ಲಿ ಒಬ್ಬೊಬ್ಬರು ಒಂದೊಂದನ್ನು ಹೇಳುತ್ತಾರೆ. ಒಂದೊಂದನ್ನು ಹೊಗಳುತ್ತಾರೆ. ಇದರಲ್ಲಿ ಸತ್ಯ ಯಾವುದು, ಮಿಥ್ಯ ಯಾವುದು? ಕೆಲವರು ಸತ್ಯವನ್ನು ಹೊಗಳುವರು. ಕೆಲವರು ತಪಸ್ಸು ಶ್ರೇಷ್ಠ ಎಂದು ಹೇಳುವರು. ಶೌಚ ಸದಾಚಾರಗಳೇ ಪ್ರಧಾನವೆಂದು ಎಷ್ಟೋ ಮುನಿಗಳ ಅಭಿಮತ. ಕೆಲವರು ಜ್ಞಾನ ಪ್ರಾಧಾನ್ಯವಾದಿಗಳು, ಹಲವಾರು ಮುನಿಗಳು ಕರ್ಮಪ್ರಶಂಸಕರು, ಯೋಗಮಾರ್ಗವನ್ನು ಹೊಗಳುವ ಮುನಿಗಳೂ ಕಡಿಮೆ ಇಲ್ಲ. ಕೆಲವರ ದೃಷ್ಟಿಯಲ್ಲಿ ಕ್ಷಮಾಗುಣವೇ ಸರ್ವಶ್ರೇಷ್ಠ. ಇಂದ್ರಿಯ ನಿಗ್ರಹಕ್ಕೆ ಕೆಲವರಲ್ಲಿ ಪ್ರಾಶಸ್ತ್ಯ. ಶಾಸ್ತ್ರ ಸ್ವಾಧ್ಯಾಯದಿಂದ ಬಂದ ಜ್ಞಾನವೇ ತಾರಕವೆಂದು ಪ್ರಶಂಸಿಸುವವರೂ ಪ್ರಚಂಡ ಪ್ರಮಾಣದಲ್ಲಿದ್ದಾರೆ ನಮ್ಮಲ್ಲಿ. ಇದರಂತೆ ಕೆಲವರು ವೈರಾಗ್ಯ, ಹಲವರು ಅಗ್ನಿಷ್ಟೋಮಾದಿ ಯಜ್ಞ, ಕೆಲವರು ಆತ್ಮಜ್ಞಾನ, ಕೆಲವರು ಲೋಕಸೇವೆ, ಮತ್ತಿತರು ವರ್ಣಾಶ್ರಮವಿಹಿತ ಕರ್ತವ್ಯ ಮುಂತಾದವುಗಳೇ ಶ್ರೇಷ್ಠ ಎಂದು ಸಾಧಿಸುತ್ತಾರೆ.

'ನೈಕೋ ಮುನಿಃ ಯಸ್ಯ ಮತಂ ಪ್ರಮಾಣಂ' ಹೀಗೆ ಜ್ಞಾನಿಗಳೆನ್ನುವರೇ ತಲೆಗೊಂದು ವಿಚಾರ ಹೇಳಿದರೆ, ನಾವು ಯಾವುದನ್ನು ನಂಬಬೇಕು ನಿಜವೆಂದು ! ಈ ಎಲ್ಲ ಜ್ಞಾನಿಗಳ ಭಿನ್ನ ಭಿನ್ನ ಅಭಿಪ್ರಾಯಗಳ ಸಮನ್ವಯ ಸೂತ್ರವೇನು? ಈ ಎಲ್ಲ ಕಥಿತಾರ್ಥಗಳ ವಿಶಿಷ್ಟ ಮಥಿತಾರ್ಥ ಏನು ? ಇವುಗಳಲ್ಲಿ ಸರ್ವಶ್ರೇಷ್ಠ ಯಾವುದು ?

**ಸಾರಸ್ವತ** : ಕಾತ್ಯಾಯನ ! ನನ್ನ ತಾಯಿ ಸರಸ್ವತೀ ದೇವಿಯು ನನಗೆ ಪ್ರೀತಿಯಿಂದ ತಿಳಿಹೇಳಿದ್ದಾಳೆ ಒಂದು ತತ್ವವನ್ನು. ಅವಳು ಹೇಳಿದ ತತ್ವಸಾರವನ್ನು ನಾನು ನಿನಗೆ ಉಸಿರುತ್ತೇನೆ ಕೇಳು. ಈ ಪ್ರಪಂಚವೆಲ್ಲವೂ ನೆರಳಿನಂತೆ ಅಸ್ಥಿರ. ಹುಟ್ಟು ಸಾವುಗಳನ್ನು ಉಡಿಯಲ್ಲಿ ಕಟ್ಟಿಕೊಂಡೇ ಬಂದಿದೆ. ಹಣ, ಕೀರ್ತಿ, ಅಧಿಕಾರ, ಭೋಗ, ಭಾಗ್ಯ ಇವೆಲ್ಲವೂ ಮಿಂಚಿಗಿಂತ ಚಂಚಲ, ಮಂಜುಗಡ್ಡೆಯಂತೆ ತೀವ್ರ ನಶಿಷ್ಣು. ಇದನ್ನೆಲ್ಲ ತಿಳಿದು ಆ ಚಂದ್ರಚೂಡನ ಚಾರು ಚರಣಗಳಿಗೆ ಶರಣು ಹೋಗಬೇಕು. ಈ ಜೀವನವು ಅಸ್ಥಿರ ಎಂದು ತಿಳಿದು ಕೊಡುಗೈಯಿಂದ ದಾನ ನೀಡಬೇಕು. ಯಾವಾಗಲೂ ಪಾಪ ಮಾಡಬಾರದು. ಇದೇ ವೇದಗಳ ಆಜ್ಞೆ. ಪೂರ್ವಕಾಲದಲ್ಲಿ ಸಾವರ್ಣಿ ಮುನಿ ಒಂದು ಮಾರ್ಮಿಕ ಮಾತನ್ನು ಹೇಳಿದ್ದಾನೆ. ಧರ್ಮಕ್ಕೆ ವೃಷ ಎಂದು ಹೆಸರು. ಈ ವೃಷಭ ವಾಹನನೆಂದರೆ ನಂದಿವಾಹನನಾದ ಮಹಾದೇವನು.

ಈ ವೃಷಭವಾಹನನನ್ನು ಪೂಜಿಸುವುದೇ ಮಹಾಧರ್ಮ. ಈ ಸಂಸಾರವೆಂಬುದು ಒಂದು ದೊಡ್ಡ ಸಮುದ್ರ. ಧರ್ಮಾಧರ್ಮಗಳೇ ಇಲ್ಲಿ ನೀರು. ದುಃಖದ ತೆರೆ,

ಅಜ್ಞಾನದ ಪ್ರವಾಹ, ಕ್ರೋಧವೇ ಹಾವುಸೆ. ಮದವು ಈ ಮಡುವಿನಲ್ಲಿ ಅಡಗಿದ ಮೊಸಳೆ. ಲೋಭ ಇದರ ಮೇಲಿನ ಗುಳ್ಳೆ, ಅಹಂಕಾರವೇ ಇದರ ಆಳ. ಸತ್ವ ಗುಣವು ಈ ಸಾಗರದಲ್ಲಿ ತೇಲುವ ಏಕಮಾತ್ರ ಮಹಾ ನೌಕೆ. ಇಂಥ ಭೀಕರ ಸಂಸಾರ ಸಮುದ್ರದಲ್ಲಿ ಮುಳುಗುತ್ತಿರುವ ಜೀವರನ್ನು ಕಡೆಹಾಯಿಸುವ ಒಬ್ಬನೇ ನಂಬಿಗನಾದ ಅಂಬಿಗನೆಂದರೆ, ಅಂಬಾರಮಣನಾದ ರುದ್ರ. ಆ ಶಂಕರನನ್ನು ನಿತ್ಯ ನಿರಂತರವೂ ಧ್ಯಾನ ಮಾಡಬೇಕು. ಈ ಅಸಾರವಾದ ಶರೀರದಿಂದ ಮಾಡುವ ದಾನ, ಸದಾಚಾರ, ವ್ರತ, ಸತ್ಯ, ಮಧುರಮಾತು, ದಿವ್ಯಕೀರ್ತಿ, ಧರ್ಮಪಾಲನ, ಹಾಗೂ ಪರೋಪಕಾರ ಇವಿಷ್ಟೂ ಸಾರವಸ್ತುಗಳಾಗಿವೆ. ನಿಮ್ಮಲ್ಲಿ ರಾಗವು ಇರುವುದೇ ಆದರೆ, ಧರ್ಮದಲ್ಲಿ ರಾಗವು ಇರಲಿ. ಚಿಂತೆ ಮಾಡುವುದಾದರೆ, ಶಾಸ್ತ್ರ ಚಿಂತೆಯನ್ನೇ ಮಾಡಿರಿ. ವ್ಯಸನವು ಬೇಕಾದರೆ, ದಾನ ಮಾಡುವ ವ್ಯಸನವೇ ಇರಲಿ. ಇವಲ್ಲದೆ ಜೊತೆಗೆ ವಿಷಯ ವೈರಾಗ್ಯವು ಹುಟ್ಟಿದರೆ ಆ ಮನುಷ್ಯನು ತನ್ನ ಜನ್ಮದ ಫಲವನ್ನೇ ಪಡೆದಂತಾಯಿತು.

**"ದಾನಂ ವೃತ್ತಂ ವ್ರತಂ ಸತ್ಯಂ ಕೀರ್ತಿರ್ಧರ್ಮಸ್ತಥಾಯುಷಃ ।**
**ಪರೋಪಕರಣಂ ಕಾಯಾದಸಾರಾತ್ ಸಾರಮುದ್ಧರೇತ್ ॥**

**ಧರ್ಮೇ ರಾಗಃ ಶ್ರುತೌ ಚಿಂತಾ ದಾನೇ ವ್ಯಸನ ಮುತ್ತಮಮ್ಃ ।**
**ಇಂದ್ರಿಯಾರ್ಥೇಷು ವೈರಾಗ್ಯಂ ಸಂಪ್ರಾಪ್ತಂ ಜನ್ಮನಃ ಫಲಮ್ ॥**

ನಿಜವಾದ ವಿಷಯ ವೈರಾಗ್ಯವೇ ಮನುಷ್ಯ ಜೀವಿತದ ಸಾಫಲ್ಯ ಎನ್ನುವುದೇ ಸಾವರಣಿ ಮುನಿಯ ಉಪದೇಶದ ಸಾರವಾಗಿದೆ. ಮನುಷ್ಯದೇಹ ಅದರಲ್ಲಿಯೂ ಭಾರತದಲ್ಲಿ ಜನ್ಮ ಅತ್ಯಂತ ದುರ್ಲಭ. ಅದನ್ನು ಪಡೆದು ಆತ್ಮೋನ್ನತಿಯ ಸಾಧನ ಮಾಡಿಕೊಳ್ಳದಿದ್ದರೆ, ಅವನಂಥ ಮೂರ್ಖನು ಬೇರೆ ಯಾರು ! ಪೂರ್ವ ಜನ್ಮದಲ್ಲಿ ಬಹಳ ಪುಣ್ಯರೂಪವಾದ ಮೂಲ್ಯವನ್ನು ಕೊಟ್ಟು ನೀವು ಈ ಮಾನವ ಶರೀರ ರೂಪವಾದ ನೌಕೆಯನ್ನು ಕೊಂಡಿದ್ದೀರಿ. ಬಹಳ ಬೆಲೆ ಕೊಟ್ಟು ಕೊಂಡ ಈ ನಿಮ್ಮ ಅಮೂಲ್ಯ ನೌಕೆಯು ಯಾವುದಾದರೂ ಬಂಡಗಲ್ಲಿಗೆ ಬಡೆದು, ಭಿನ್ನ ಭಿನ್ನವಾಗಿ, ತುಂಡು ತುಣುಕಾಗಿ ಹೋಗುವುದಕ್ಕಿಂತ ಮೊದಲು ನಿಮ್ಮ ಈ ಸಂಸಾರ ರೂಪವಾದ ದುಃಖ ಸಾಗರದಿಂದ ಪಾರಾಗಿ ಹೋಗಿರಿ.

**ಕಾತ್ಯಾಯನ** : ದಾನ ಮತ್ತು ತಪಸ್ಸು ಇವೆರಡರಲ್ಲಿ ಯಾವುದು ಶ್ರೇಷ್ಠ ? ಪರಲೋಕದಲ್ಲಿ ಫಲವನ್ನು ಯಾವುದು ಕೊಡುವದು ?

**ಸಾರಸ್ವತ** : ಮಹಾಮುನಿಯೆ ! ಈ ಭೂಮಂಡಲದಲ್ಲಿ ದಾನಧರ್ಮಗಳಂಥ ದುಷ್ಕರ ಕಾರ್ಯ ಬೇರೊಂದಿಲ್ಲ. ಇದನ್ನು ನಾವು ಎಲ್ಲ ಕಡೆಗೂ ಪ್ರತ್ಯಕ್ಷ ನೋಡುತ್ತೇವೆ. ಎಲ್ಲ ಮಾನವರೂ ಇದಕ್ಕೆ ಸಾಕ್ಷಿ. ಹಣಕ್ಕಾಗಿ ಮಾನವನು ತನಗೆ ಅತ್ಯಂತ ಪ್ರಿಯತಮವಾದ ಪ್ರಾಣಗಳನ್ನೂ ಬಿಡಲು ಸಿದ್ಧನಾಗುತ್ತಾನೆ. ಆ ದ್ರವ್ಯದ ಆಶೆಯಿಂದ ಭಯಂಕರವಾದ ಸಮುದ್ರದ ಆಳಕ್ಕೆ ಇಳಿಯುತ್ತಾನೆ. ಬೆಟ್ಟದ ತುದಿ ಏರುತ್ತಾನೆ. ಕಾಡು ಮೇಡುಗಳಲ್ಲಿ ಅಲೆಯುತ್ತಾನೆ. ನೀಚ ಜನರ ಸೇವೆ ಗೈಯುತ್ತಾನೆ.

ಅಧಮರನ್ನು ಸೇವಿಸುವದು ನಾಯಿಯ ವೃತ್ತಿ ಎಂದು ಹಳಿಯಲ್ಪಟ್ಟಿದೆ ಹಿರಿಯರಿಂದ. ಹಣಕ್ಕಾಗಿ ಅಂಥ ಕೀಳು ಕೆಲಸವನ್ನೂ ಮಾಡಲಿಕ್ಕೆ ಸಿದ್ಧನಾಗುತ್ತಾನೆ ಮಾನವ. ಇಷ್ಟು ಶ್ರಮಪಟ್ಟು ಗಳಿಸಿದ ಹಣವನ್ನು ಕೊಡುವದು ಬಹಳ ಕಷ್ಟ.

ಮಾನವನು ತಾನು ಕೈಯೆತ್ತಿ ಮತ್ತೊಬ್ಬರಿಗೆ ಕೊಟ್ಟದ್ದು, ತಾನು ತಿಂದು ಉಂಡು ಭೋಗಮಾಡಿದ್ದು ಮಾತ್ರ ಅವನ ಧನ, ಉಳಿದ ಸಂಪತ್ತು ಎಲ್ಲವೂ ಅನ್ಯರದೇ ಸೊತ್ತು. ಇವನು ಕೂಡಿಟ್ಟ ಹಣದಿಂದ ಯಾರೋ ವಿಲಾಸಗೈಯುವರು.

**ಅಹನ್ಯಹನಿ ಯಾಚಂತಮಹಂ ಮನ್ಯೇ ಗುರುಂ ತಥಾ ।**
**ಮಾರ್ಜನಂ ದರ್ಪಣಸ್ಯೇವ ಯಃ ಕರೋತಿ ದಿನೇ ದಿನೇ ॥**

ಪ್ರತಿದಿನ ಬಂದು ಯಾಚನೆ ಮಾಡಿ ಹಣವನ್ನು ಒಯ್ಯುವವನು ನನಗೆ ಗುರು ಎಂದು ತಿಳಿದಿದ್ದೇನೆ. ಕನ್ನಡಿಯನ್ನು ಒರಿಸಿ ಸ್ವಚ್ಛಮಾಡಿ ಇಟ್ಟಂತೆ ಯಾಚಕನು ನಮ್ಮ ಪಾಪಗಳನ್ನೆಲ್ಲ ತೆಗೆದುಕೊಂಡು ನಮ್ಮನ್ನು ಪರಿಶುದ್ಧ ಪಡಿಸುತ್ತಾನೆ.

**ದೀಯಮಾನಂ ಹಿ ನಾಪೈತಿ ಭೂಯ ಏವಾಭಿವರ್ಧತೇ ।**
**ಕೂಪ ಉತ್ಸಿಚ್ಯಮಾನೋ ಹಿ ಭವೇಚ್ಛುದ್ಧೋ ಬಹೂದಕಃ ॥**

ದಾನಕೊಟ್ಟಂತೆ ದ್ರವ್ಯವು ಮತ್ತಿಷ್ಟೂ ಅಭಿವೃದ್ಧಿಯಾಗುವದೆ ಹೊರತು ನಾಶವಾಗುವದಿಲ್ಲ. ಬಾವಿಯಲ್ಲಿಯ ನೀರನ್ನು ಸೇದಿದಂತೆ ಅಲ್ಲಿ ಹೆಚ್ಚು ನೀರು ಬರುವದು ಮತ್ತು ಇದ್ದ ನೀರೂ ಶುದ್ಧವೂ ಆಗುವದು.

**"ಏಕಜನ್ಮ ಸುಖಸ್ಯಾರ್ಥೇನ ಸಹಸ್ರಾಣಿ ನ ಲೋಪಯೇತ್ ।**
**ಪ್ರಾಜ್ಞೋ ಜನ್ಮಸಹಸ್ರಾರ್ಥಂ ಸಂಚಿನೋತ್ಯೇಕ ಜನ್ಮನಿ ॥**

ಈ ಒಂದು ಜನ್ಮದ ಸುಖಕ್ಕಾಗಿ ಬುದ್ಧಿವಂತನಾದವನು ಮುಂದಿನ ಸಾವಿರಾರು ಜನ್ಮಗಳ ಸುಖಗಳನ್ನು ನಾಶಮಾಡಿಕೊಳ್ಳಬಾರದು. ಆದರೆ ನಿಜವಾಗಿ ತಿಳಿವಳಿಕೆಯುಳ್ಳ ಮಾನವನು ಮುಂದಿನ ಸಾವಿರಾರು ಜನ್ಮಗಳಲ್ಲಿ ಸುಖವಾಗುವಂತೆ ಈ ಒಂದು ಜನ್ಮದಲ್ಲಿ ಸಾಧನೆ ಮಾಡಿಕೊಳ್ಳುತ್ತಾನೆ.

**"ಮೂರ್ಖೋ ಹಿ ನ ದದಾತ್ಯರ್ಥಾನಿಹ ದಾರಿದ್ರ್ಯ ಶಂಕಯಾ ।**
**ಪ್ರಾಜ್ಞಸ್ತು ವಿಸೃಜತ್ಯರ್ಥಾನಮುತ್ರೈತಸ್ಯ ಶಂಕಯಾ ॥**

ತನ್ನಲ್ಲಿದ್ದ ಹಣವನ್ನು ದಾನ ಕೊಟ್ಟರೆ ನಾನು ದರಿದ್ರನಾದೇನು ಎಂದು ಹೆದರಿ ಮೂರ್ಖನು ದಾನವನ್ನೇ ಕೊಡುವದಿಲ್ಲ. ಆದರೆ ಪ್ರಾಜ್ಞನಾದವನು ಮುಂದೆ ಜನ್ಮಾಂತರದಲ್ಲಿ ತಾನು ದರಿದ್ರನಾಗಬಾರದೆಂದು ಈ ಜನ್ಮದಲ್ಲಿ ಧಾರಾಳವಾಗಿ ಧನವನ್ನು ದಾನ ಕೊಡುತ್ತಾನೆ.

**ಕಿಂ ಧನೇನ ಕರಿಷ್ಯಂತಿ ದೇಹಿನೋ ಭಂಗುರಾಶ್ರಯಾಃ ।**
**ಯದರ್ಥಂ ಧನಮಿಚ್ಛಂತಿ ತಚ್ಛರೀರಮಶಾಶ್ವತಮ್ ॥**

ಮಾನವರು ಹಣವನ್ನು ತೆಗೆದುಕೊಂಡು ಏನು ಮಾಡುತ್ತಾರೆ ? ಯಾವ ದೇಹದ ಸುಖಕ್ಕಾಗಿ ದ್ರವ್ಯಸಂಪಾದನೆ ಮಾಡುವರೋ ಆ ದೇಹವು ಅಶಾಶ್ವತವಾಗಿದೆ.

**"ಅಕ್ಷರದ್ವಯಮಭ್ಯಸ್ತಂ ನಾಸ್ತಿ ನಾಸ್ತೀ ತಿ ಯತ್ಪುರಾ ॥**
**ತದಿದಂ ದೇಹಿ ದೇಹೀತಿ ವಿಪರೀತಮುಪಸ್ಥಿತಂ ॥**

ಹಿಂದೆ ಶ್ರೀಮಂತನಾಗಿದ್ದಾಗ ಬೇಡಲು ಬಂದವರಿಗೆಲ್ಲ 'ಇಲ್ಲ, ಇಲ್ಲ' ಎಂದು ನುಡಿದದ್ದರಿಂದ ಈಗ ಅದರ ಫಲವಾಗಿ ದಾರಿದ್ರ್ಯ ಬಂದು 'ದೇಹಿ, ದೇಹಿ' ಎಂದು ನುಡಿಯುವ ಪ್ರಸಂಗವು ಬಂದಿರುತ್ತದೆ. ಆದ್ದರಿಂದ ದೇವರು ಕೊಟ್ಟಾಗ ಯಾರೂ ಇಲ್ಲ ಎನ್ನಬಾರದು.

**ಬೋಧಯಂತಿ ನ ಯಾಚಂತೇ ದೇಹೀತಿ ಕೃಪಣಂ ಜನಾಃ ।**
**ಅವಸ್ಥೇಯಮದಾನಸ್ಯ ಮಾ ಭೂದೇವಂ ಭವಾನಪಿ ॥**

ಭಿಕ್ಷುಕರು, ಜಿಪುಣನ ಹತ್ತಿರ ಬಂದು ಬರೀ ಕೊಡು ಎಂದು ಕೇಳುವುದಿಲ್ಲ. ಆದರೆ ಅವನಿಗೆ ದಾನ ಕೊಡದಿದ್ದುದರಿಂದ ನಮಗೆ ಹೀಗೆ ಭಿಕ್ಷೆ ಬೇಡುವ ಪ್ರಸಂಗ ಬಂದಿದೆ. ನಿನಗೂ ಮುಂದೆ ನಮ್ಮಂತೆ ಇಂಥ ಕಂಗಾಲ ಪರಿಸ್ಥಿತಿ ಬರಬಾರದೆಂದಿದ್ದರೆ ದಾನಕೊಡು' ಎಂದು ಬೋಧನೆ ಮಾಡುತ್ತಾರೆ.

**ದಾತುರೇವೋಪಕಾರಾಯ ವದತ್ಯರ್ಥೀತಿ ದೇಹಿ ಮೇ ।**
**ಯಸ್ಮಾದ್ದಾತಾ ಪ್ರಯಾತ್ಯೂರ್ಧ್ವಮಧಸ್ತಿಷ್ಠೇತ್ ಪ್ರತಿಗ್ರಾಹೀ ।**

ಯಾಚಕನು ಬಂದು 'ದೇಹಿ' ಎಂದು ಕೇಳುವದು ದಾನಿಯ ಉಪಕಾರಕ್ಕಾಗಿಯೇ. ಏಕೆಂದರೆ ದಾನ ಕೊಟ್ಟವನು ಮೇಲಿನ ದಿವ್ಯಲೋಕಕ್ಕೆ ಹೋಗುತ್ತಾನೆ. ದಾನಕೊಂಡವನು ಕೆಳಗೆ ಇದೇ ಲೋಕದಲ್ಲಿ ಇರುತ್ತಾನೆ.

**ದರಿದ್ರಾ ವ್ಯಾಧಿತಾ ಮೂರ್ಖಾಃ ಪರಪ್ರೇಷ್ಯಕರಾಃ ಸದಾ ।**
**ಅದತ್ತದಾನಾ ಜಾಯಂತೇ ದುಃಖಸ್ಯೈತೇ ಹಿ ಭಾಜನಾಃ ॥**

ಹಿಂದೆ ದಾನವನ್ನು ಮಾಡದಿದ್ದವರು ಆ ಜಿಪುಣತನದ ಫಲವಾಗಿ ದಟ್ಟ ದರಿದ್ರರೂ, ರೋಗಿಷ್ಠರೂ, ಮೂರ್ಖರೂ, ಇನ್ನೊಬ್ಬರ ಕೈಯಲ್ಲಿ ಚಾಕರಿ ಮಾಡುವವರೂ, ದೂತರೂ ಆಗುವರು ಮತ್ತು ಬಹಳ ದುಃಖವನ್ನು ಅನುಭವಿಸುವರು, ಇದೆಲ್ಲವೂ ದಾನ ಕೊಡದಿರುವದರ ದುಷ್ಫಲ.

**ಧನವಂತಮದಾತಾರಂ ದರಿದ್ರಂ ಚಾತಪಸ್ವಿನಂ ।**
**ಉಭಾವಂಭಸಿ ಮೋಕ್ತವ್ಯೌ ಗಲೇ ಬಧ್ವಾ ಮಹಾಶಿಲಾಮ್ ॥**

ಧನಿಕನಾಗಿಯೂ, ದಾನ ಮಾಡದೇ ಇದ್ದವ, ದರಿದ್ರನಾಗಿಯೂ ದೇವರ ಧ್ಯಾನ ಮಾಡಿ ತಪಸ್ಸು ಮಾಡದಿದ್ದವ ಇವರಿಬ್ಬರನ್ನೂ ಕೊರಳಲ್ಲಿ ದೊಡ್ಡ ಕಲ್ಲು ಕಟ್ಟಿ ನೀರಿನಲ್ಲಿ ಮುಳುಗಿಸಬೇಕು.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ಶತಸಹಸ್ರೇಷು ದಾತಾ ಜಾಯೇತ ವಾ ನ ವಾ ॥**

ನೂರರಲ್ಲಿ ಒಬ್ಬನು ಶೂರನಾಗುತ್ತಾನೆ. ಸಾವಿರದಲ್ಲಿ ಒಬ್ಬನು ಪಂಡಿತನಾಗುತ್ತಾನೆ. ಹತ್ತು ಸಾವಿರದಲ್ಲಿ ಒಬ್ಬನು ಒಳ್ಳೆಯ ವ್ಯಕ್ತಿತ್ವವುಳ್ಳ ವಾಗ್ಮಿಯಾಗುತ್ತಾನೆ. ಆದರೆ ದಾನಿಯಾದ ಮಾನವನು ಒಬ್ಬನಾದರೂ ಆಗುತ್ತಾನೋ ಇಲ್ಲವೋ ಸಂದೇಹವೇ .

**ಗೋಭಿರ್ವಿಪ್ರೈಶ್ಚ ವೇದೈಶ್ಚ ಸತೀಭಿಃ ಸತ್ಯವಾದಿಭಿಃ ।**
**ಅಲುಬ್ಧೈರ್ದಾನಶೀಲೈಶ್ಚ ಸಪ್ತಭಿರ್ಧಾರ್ಯತೆ ಮಹೀ ॥**

ಈ ಭೂಮಿಯು ಈ ಏಳು ಜನರ ಮೇಲೆ ನಿಂತಿದೆ. ಗೋವು, ಬ್ರಹ್ಮಜ್ಞಾನಿಗಳು. ವೇದ, ಪತಿವ್ರತಾಸ್ತ್ರೀಯರು, ಸತ್ಯಮಾತನಾಡುವ ಪ್ರಾಮಾಣಿಕರು, ಲೋಭವಿಲ್ಲದವರು ಹಾಗೂ ದಾನಶೀಲರು ಈ ಏಳು ಜನರೇ ಈ ಭೂಮಿಯನ್ನು ಧರಿಸಿರುತ್ತಾರೆ. ಅರ್ಥಾತ್ ಈ ಭೂಲೋಕದ ವ್ಯವಹಾರಗಳೆಲ್ಲವೂ ಒಳ್ಳೆಯ ರೀತಿಯಿಂದ ನಡೆಯುವದು ಈ ಏಳು ವಿಧರಾದ ಸಜ್ಜನರಿಂದ. ಉಶೀನರ ದೇಶದ ರಾಜನಾದ ಶಿಬಿ ಚಕ್ರವರ್ತಿಯು ತನ್ನ ದೇಹದ ಮಾಂಸವನ್ನೇ ದಾನ ಕೊಟ್ಟು ಸ್ವರ್ಗಲೋಕಕ್ಕೆ ಹೋದನು. ಮಿಥಿಲೆಯ ಅರಸು ನಿಮಿರಾಜನು ತನ್ನ ಸಂಪೂರ್ಣ ರಾಜ್ಯವನ್ನು, ಪರಶುರಾಮನು ಭೂಮಂಡಲವನ್ನೂ, ಗಯರಾಜನು ಗ್ರಾಮನಗರಸಹಿತ ತನ್ನ ಸುರ ಸಾಮ್ರಾಜ್ಯವನ್ನು, ಬ್ರಹ್ಮಜ್ಞಾನಿಗಳಿಗೆ ದಾನ ನೀಡಿದರು. ಪಾಂಚಾಲದ ದೊರೆ ಬ್ರಹ್ಮದತ್ತನು ಅನೇಕ ಕೋಟಿ ರೂಪಾಯಿಗಳಿಂದ ತುಂಬಿದ ತನ್ನ ನಿಧಿಯನ್ನೇ ದಾನ ಮಾಡಿದನು. ಇನ್ನೂ ಅನೇಕಾನೇಕ ಶಿವಭಕ್ತರು ದಾನ ನೀಡಿ ರುದ್ರಲೋಕವನ್ನು ಹೊಂದಿದ್ದಾರೆ. ಸೂರ್ಯ ಚಂದ್ರರಿರುವವರೆಗೂ ಅವರ ಕೀರ್ತಿ ಸ್ಥಿರವಾಗಿದೆ. ಆದ್ದರಿಂದ ನೀನಾದರೂ ಮಹಾದೇವನ ಮನಸ್ಸನ್ನು ಮೆಚ್ಚಿಸಬೇಕೆಂದಿದ್ದರೆ ನಿನ್ನಲ್ಲಿ ಇದ್ದುದನ್ನೆಲ್ಲ ದಾನ ನೀಡು.'' ಸಾರಸ್ವತ ಮುನಿಯ ಈ ಉಪದೇಶ ಕೇಳಿ ಕಾತ್ಯಾಯನನು ಮೋಹಬಿಟ್ಟು ದಾನಕೊಟ್ಟು ಪುಣ್ಯಭಾಗಿಯಾದನು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಹದಿನೆಂಟನೇ ಅಧ್ಯಾಯ ಮುಗಿದುದು.**

# ಧರ್ಮವರ್ಮನ ಪ್ರಶ್ನೆ. ನಾರದರ ಉತ್ತರ. ಅಧ್ಯಾಯ -19

**ನಾರದ :** ವೀರವರೇಣ್ಯನಾದ ಕುಂತೀ ಕುಮಾರ! ನಾನು ಈ ರೀತಿ ಎಲ್ಲೆಲ್ಲಿ ಪವಿತ್ರ ತೀರ್ಥಕ್ಷೇತ್ರಗಳಿವೆಯೋ ಅಲ್ಲಿ ಹೋಗಿ ಅವುಗಳ ದರ್ಶನ ಮಾಡಿಕೊಂಡೆ. ತೀರ್ಥಗಳಲ್ಲಿ ಸ್ನಾನ ಮಾಡಿದೆ. ಹೀಗೆ ಭೂಪ್ರದಕ್ಷಿಣೆ ಮಾಡುತ್ತ ಭೃಗುಋಷಿಯ ಆಶ್ರಮಕ್ಕೆ ಬಂದೆ. ಆಶ್ರಮದ ಅಂಗಳದಲ್ಲಿಯೇ ನರ್ಮದಾ ನದಿ. ಆ ನದಿಯ ಸ್ಮರಣವೇ ಪುಣ್ಯಪ್ರದ. ಸರ್ವ ತೀರ್ಥಗಳ ಕಲ್ಯಾಣಕೇಂದ್ರ ಆ ನರ್ಮದೆ. ದರ್ಶನ ಮಾತ್ರದಿಂದಲೇ ಮಾನವರ ಪಾಪ ಪರಿಹಾರ. ಸ್ನಾನ ಮಾಡಿದರಂತೂ ಅನಂತ ಪುಣ್ಯ ಫಲ. ದೇಹದಲ್ಲಿ ಪಿಂಗಲಾ ಎಂಬ ನಾಡಿಯು ಶರೀರದ ಮಧ್ಯಭಾಗದಲ್ಲಿದ್ದಂತೆಯೇ ಬ್ರಹ್ಮಾಂಡ ರೂಪ ಬೃಹತ್ ದೇಹದ, ಮಧ್ಯ ಸ್ಥಾನದಲ್ಲಿ ನರ್ಮದಾ ನದಿ ಇದೆ ಎಂದು ಹಿರಿಯರ ಹೇಳಿಕೆ. ಈ ನರ್ಮದೆಯ ತೀರ್ಥಗಳಲ್ಲೆಲ್ಲ ಸರ್ವಶ್ರೇಷ್ಠ ತೀರ್ಥವೆಂದರೆ ಶುಕ್ರತೀರ್ಥ. ಬ್ರಹ್ಮಹತ್ಯಾ ಪಾಪವನ್ನೂ ಕೂಡ ಕಳೆಯುವ ಶಕ್ತಿ ಈ ತೀರ್ಥ ಜಲಕ್ಕೆ. ನರ್ಮದೆಯ ಉತ್ತರ ತೀರದಲ್ಲಿ ಶುಕ್ಲ ತೀರ್ಥದ ಸಮೀಪದಲ್ಲಿಯೇ ಭೃಗು ಋಷಿಗಳ ಆಶ್ರಮ ಮಂಡಲವಿದೆ. ಅಲ್ಲಿ ಮೂರು ವೇದ, ಆರು ಶಾಸ್ತ್ರಗಳಲ್ಲಿ ಪಂಡಿತರಾದ ಮುನಿಮಹರ್ಷಿಗಳು ಇದ್ದುದರಿಂದ ಆ ಆಶ್ರಮದ ಶೋಭೆ ಇನ್ನೂ ಅತ್ಯಧಿಕ. ಆ ಆಶ್ರಮದ ವಾತಾವರಣವು ವೇದ ಘೋಷಗಳಿಂದ ಸರ್ವದಾ ಮುಖರಿತ. ಮಹರ್ಷಿ ಶ್ರೇಷ್ಠರಾದ ಭೃಗು ಋಷಿಗಳು ಇದ್ದ ಆ ಆಶ್ರಮಕ್ಕೆ ನಾನು ಹೋದೆನು. ನನ್ನನ್ನು ಕಂಡು ಆ ಮುನಿಗಳೂ, ಉಳಿದ ಮಹರ್ಷಿಗಳೂ ಎದ್ದು ನನಗೆ ಸ್ವಾಗತ ನೀಡಿದರು. ಅರ್ಘ್ಯಪಾದ್ಯಾಗಳಿಂದ ಪೂಜೆಮಾಡಿದರು. ಅನಂತರ ಭೃಗುಋಷಿಗಳು ನನ್ನನ್ನು ಕುರಿತು 'ಮುನೀಶ್ವರರೇ ತಾವು ಎಲ್ಲಿಂದ ಬಂದಿರಿ? ಮತ್ತು ಎಲ್ಲಿಗೆ ಹೋಗುತ್ತೀರಿ?' ಎಂದು ಕೇಳಿದರು.

**ನಾರದ :** ಮಹರ್ಷಿಗಳೇ, ನಾನು ಭೂಮಿದಾನವನ್ನು ಮಾಡಬೇಕೆಂದು ನಿರ್ಧರಿಸಿದ್ದೇನೆ. ಉತ್ತಮವಾದ ಭೂಭಾಗವನ್ನು ಹುಡಕಲಿಕ್ಕಾಗಿ ಸಮುದ್ರ ಪರ್ಯಂತವಾದ ಸಂಪೂರ್ಣ ಪೃಥ್ವೀಮಂಡಲದ ತುಂಬ ಸಂಚರಿಸಿ ಬಂದೆನು. ದಾನ ಮಾಡಲಿಕ್ಕಾಗಿ ಪರಿಶುದ್ಧ ಮತ್ತು ಪರಮ ಪವಿತ್ರವಾದ, ತೀರ್ಥದಿಂದ ಯುಕ್ತ ಹಾಗೂ ರಮಣೀಯವಾದ ಭೂಭಾಗವು ಬೇಕಾಗಿದೆ. ತಮಗೆ ಗೊತ್ತಿದ್ದರೆ ಹೇಳಿರಿ.

**ಭೃಗು :** ದೇವರ್ಷಿಯೇ, ನಾನೂ ಕೂಡ ಹಿಂದೆ ಕೆಲವು ಜ್ಞಾನಿಗಳಿಗೆ ನೆಲೆಸಲು ಯೋಗ್ಯವಾದ ಭೂಮಿಯನ್ನು ಶೋಧಿಸಲಿಕ್ಕೆಂದು ಚತುಃಸಾಗರ ಪರ್ಯಂತವಾದ ಭೂಮಂಡಲದ ತುಂಬ ಪರಿಭ್ರಮಣಗೈದೆ. ಆಗ ನನ್ನ ದೃಷ್ಟಿಗೆ ಮಹೀ ಎಂಬ ನದಿಯ ದಂಡೆಯ ಮೇಲೆ ಒಂದು ಪುಣ್ಯಭೂಮಿಯು ಗೋಚರಿಸಿತು. ಪರಮ ಪವಿತ್ರವಾದ ಈ ನದಿಯು ಸರ್ವತೀರ್ಥಮಯವಾಗಿದೆ. ಪಾವನಿಯಾದಷ್ಟೇ ಕಲ್ಯಾಣಕಾರಿಯೂ ಆಗಿದೆ. ಈ ನದಿಯು ಸಮುದ್ರಕ್ಕೆ ಕೂಡುವದು. ಈ ಮಹೀ ಸಮುದ್ರ ಸಂಗಮ ಸ್ಥಾನದಲ್ಲಿ ಸ್ತಂಭ ಎಂಬ ಒಂದು ತೀರ್ಥವಿದೆ. ಅಲ್ಲಿ ಬಂದು ಸ್ನಾನ ಮಾಡಿದವರಿಗೆ ಸರ್ವ ಪಾಪಗಳಿಂದಲೂ ಮುಕ್ತಿ. ಅವರಿಗೆ ಯಮನ ಭಯವಂತೂ ಇಲ್ಲವೇ ಇಲ್ಲ.''
ಭೃಗುಋಷಿಗಳ ಈ ಮಾತನ್ನು ಕೇಳಿ ನನಗೆ (ನಾರದರಿಗೆ) ಆ ತೀರ್ಥದರ್ಶನ

ಮಾಡಬೇಕೆಂಬ ಕುತೂಹಲ ಉಂಟಾಯಿತು. ನಾವಿಬ್ಬರೂ ಕೂಡಿ ಆ ಮಹೀ ಎಂಬ ನದೀತೀರಕ್ಕೆ ಹೋದೆವು. ಆ ತರಂಗಿಣೀ ಆ ತಟಾಕದ ಪರಿಸರ ಪ್ರದೇಶವನ್ನು ಕಂಡು ನನಗೆ ಪರಮಾನಂದವಾಯಿತು. ಅಂಥ ಸ್ಥಾನವನ್ನು ತೋರಿದ್ದಕ್ಕಾಗಿ ಭೃಗುಋಷಿಗಳಿಗೆ ಅಭಿನಂದನೆಯನ್ನು ಸಲ್ಲಿಸಿ ಆ ಭೃಗುಋಷಿಗಳನ್ನು ಬೀಳ್ಕೊಟ್ಟೆ.

ಮುಂದೆ ಆ ಸ್ಥಾನವನ್ನು ಉತ್ತಮಗೊಳಿಸಿ ದಾನಕ್ಕೆ ಯೋಗ್ಯವಾಗುವಂತೆ ಹೇಗೆ ಮಾಡುವದು? ಎಂಬ ವಿಚಾರ ನನ್ನ ತಲೆಯಲ್ಲಿ ತುಂಬಿತು. ಆ ಭೂಮಿಯು ಧರ್ಮವರ್ಮ ಎಂಬ ರಾಜನ ಅಧೀನವಾಗಿದ್ದಿತು. ನಾನು ಹೋಗಿ ಕೇಳಿದರೆ ಆ ರಾಜನು ನನಗೆ ಆ ಭೂಮಿಯನ್ನು ಖಂಡಿತವಾಗಿಯೂ ಕೊಡುವನು. ಆದರೆ ರಾಜರಿಂದ ತೆಗೆದುಕೊಂಡ ದ್ರವ್ಯವು ಅಷ್ಟು ಪರಿಶುದ್ಧವಲ್ಲ. ದ್ರವ್ಯವು ಶುಕ್ಲ, ಶಬಲ, ಕೃಷ್ಣ ಎಂದು ಮೂರು ವಿಧವಾಗಿದೆ. ಇವುಗಳಲ್ಲಿ ಶುಕ್ಲ ದ್ರವ್ಯವು ಉತ್ತಮ. ಶಬಲ ದ್ರವ್ಯವು ಮಧ್ಯಮ. ಕೃಷ್ಣ ದ್ರವ್ಯವು ಅಧಮ. ವೇದ ವೇದಾಂತ ಶಾಸ್ತ್ರಗಳನ್ನು ಶಿಷ್ಯರಿಗೆ ಅಧ್ಯಾಪನ ಮಾಡಿಸಿದ ಬಳಿಕ ಅವರು ಗುರುದಕ್ಷಿಣಾ ರೂಪವಾಗಿ ನೀಡಿದ ದ್ರವ್ಯವು ಶುಕ್ಲದ್ರವ್ಯ ಅರ್ಥಾತ್ ಉತ್ತಮ ದ್ರವ್ಯ ಎನಿಸುತ್ತದೆ. ವ್ಯಾಪಾರ, ಕೃಷಿಗಳಿಂದ ಬಂದ ಮತ್ತು ಕನ್ಯೆಯರು ಅಡಿಗೆಯವರು ಕೊಟ್ಟ ಧನವು ಮತ್ತು ಯಾಚನೆಮಾಡಿ ಬಾಯ್ತೆಗೆದು ಬೇಡಿ ಪಡೆದ ಧನವು ಶಬಲ ದ್ರವ್ಯ ಅಥವಾ ಮಧ್ಯಮ ದ್ರವ್ಯ. ಜೂಜಾಟ, ಕಳವು, ಕೊಲೆ, ವಂಚನೆ, ಪ್ರಾಣಾಂತಿಕ ಸಾಹಸ ಮುಂತಾದ ದುರ್ವ್ಯಾಪಾರಗಳಿಂದ ಗಳಿಸಿದ ಹಣವು ಕೃಷ್ಣ ದ್ರವ್ಯ ಅಥವಾ ಕನಿಷ್ಠ ದ್ರವ್ಯ. ಸದಾಚಾರಿಯಾದ ಮಾನವನು ಸತ್ಪಾತ್ರದಲ್ಲಿ ಶ್ರದ್ಧೆಯಿಂದ ತಾನು ಪಾಠಪ್ರವಚನಾದಿಗಳಿಂದ ಗಳಿಸಿದ ಶುಕ್ಲದ್ರವ್ಯವನ್ನು ದಾನಮಾಡಿದರೆ, ಅವನು ದೇವತಾ ಯೋನಿಯಲ್ಲಿ ಜನಿಸಿ ಅದರ ಸುಖೋಪಭೋಗಗಳನ್ನು ಪಡೆಯುವನು. ರಾಜಸ ಸ್ವಭಾವದಿಂದ ಶಬಲ ದ್ರವ್ಯವನ್ನು ಭಿಕ್ಷುಕರಿಗೂ ಯಾಚಕರಿಗೂ ದಾನ ನೀಡಿದವನು ಮನುಷ್ಯ ಯೋನಿಯಲ್ಲಿ ಹುಟ್ಟಿ ಅದರ ಫಲೋಪಭೋಗವನ್ನು ಉಣ್ಣುವನು. ತಮೋಗುಣದಿಂದ ಯುಕ್ತನಾಗಿ ಅಧಮವಾದ ಕೃಷ್ಣಧನವನ್ನು ದಾನ ನೀಡಿದವನು ಪಶುಪಕ್ಷಿಗಳ ತಿರ್ಯಗ್ ಯೋನಿಯಲ್ಲಿ ಜನಿಸಿ ಅದರ ಫಲೋಪಭೋಗಗಳನ್ನು ಉಣ್ಣುವನು.

ಈ ದೃಷ್ಟಿಯಲ್ಲಿ ವಿಚಾರಿಸಿದರೆ, ನಾನು ಈಗ ಭೃಗುಮಹರ್ಷಿಗಳೂ ನನಗೆ ತೋರಿದ ಈ ಭೂಭಾಗವನ್ನು ಧರ್ಮವರ್ಮ ರಾಜನ ಬಳಿಗೆ ಹೋಗಿ ಯಾಚನೆ ಮಾಡಿ ಪಡೆದರೆ ಅದು ಶಬಲದ್ರವ್ಯ ಅಥವಾ ರಾಜಸ ದ್ರವ್ಯವಾಗುವದು. ನಾನು ಈ ವರೆಗೂ ಅಪರಿಗ್ರಹ ವೃತ್ತಿಯಿಂದ ಇದ್ದು ಯಾರಿಗೂ ಎಂದೂ ಯಾಚನೆ ಮಾಡಿಲ್ಲ. ಅದರಲ್ಲಿಯೂ ರಾಜರಿಂದ ಪ್ರತಿಗ್ರಹ ಮಾಡಿದರೆ, ನನ್ನ ವ್ರತಭಂಗವಾಗುವದು. ರಾಜಪ್ರತಿಗ್ರಹವು ಅರ್ಥಾತ್ ರಾಜರಿಂದ ದಾನಸ್ವೀಕರಿಸುವದು ಕಾಣಲಿಕ್ಕೆ ಜೇನುತುಪ್ಪದಂತೆ ತೋರಿದರೂ ಪರಿಣಾಮದಲ್ಲಿ ವಿಷ ಸಮಾನವೇ ಆಗಿರುತ್ತದೆ. ಆದರೆ ಈಗ ಆ ಭೂಮಿಯೇನೋ ನನಗೆ ದಾನಕೊಡಲು ಬೇಕಾಗಿದೆ, ಆದರೆ ರಾಜನ ಬಳಿಗೆ ಹೋಗಿ ಯಾಚನೆ ಮಾಡುವದು ಮಾತ್ರ ಬೇಡವಾಗಿದೆ. ಇದಕ್ಕೆ ಈಗ ಏನು

ಉಪಾಯ ! ಹೀಗೆ ನಾನು ಯೋಚಿಸುತ್ತ ಕುಳಿತಾಗಲೇ ಅಲ್ಲಿಗೆ ಒಂದು ಋಷಿಗಳ ಗುಂಪೇ ಬಂದಿತು. ಮಹೀನದಿ ಹಾಗೂ ಮಹಾಸಾಗರಗಳ ಸಂಗಮ ಕ್ಷೇತ್ರದಲ್ಲಿ ಸ್ನಾನ ಮಾಡುವ ಉದ್ದೇಶದಿಂದ ಆ ಋಷಿವೃಂದವು ಅಲ್ಲಿಗೆ ಆಗಮಿಸಿತ್ತು. ಅವರೆಲ್ಲರೂ ನನ್ನನ್ನು ನೋಡಿ ನಾನಿದ್ದಲ್ಲಿಗೆ ಬಂದರು. ನಾನು ಅವರನ್ನು ಪ್ರಶ್ನಿಸಿದೆ. ''ಮಹಾತ್ಮರೇ ! ತಾವು ಎಲ್ಲಿಂದ ಬಂದಿರಿ ?'' ಆಗ ಅವರೆಲ್ಲರೂ ನನಗೆ ವಂದನೆ ಮಾಡಿ ನುಡಿದರು

**ಋಷಿಗಳು** : ''ನಾರದರೆ ! ನಾವಿರುವುದು ಸೌರಾಷ್ಟ್ರ ದೇಶದಲ್ಲಿ. ಅಲ್ಲಿಯ ಅರಸು ರಾಜಾ ಧರ್ಮವರ್ಮ. ಆ ರಾಜರ್ಷಿಯು ದಾನ ಧರ್ಮದ ತತ್ವವನ್ನು ಅರಿಯಬೇಕೆಂದು ಬಹುಕಾಲ ತಪಸ್ಸು ಮಾಡಿದನು. ಆಗ ಆಕಾಶವಾಣಿಯಾಯಿತು. ಆ ಅಶರೀರವಾಣಿಯಿಂದ ಕೇಳಿಬಂದದ್ದು ಒಂದು ಶ್ಲೋಕ ಮಾತ್ರ.

**ದ್ವಿಹೇತು ಷಡಧಿಷ್ಠಾನಂ ಷಡಂಗಂ ಚ ದ್ವಿ ಪಾಕಯುತ್ ।**
**ಚತುಷ್ಪ್ರಕಾರಂ ತ್ರಿವಿಧಂ ತ್ರಿನಾಶಂ ದಾನಮುಚ್ಯತೇ ॥**

ದಾನಕ್ಕೆ ಎರಡು ಕಾರಣಗಳು, ಆರು ಅಧಿಷ್ಠಾನ, ಆರು ಅಂಗಗಳು, ಎರಡು ಪರಿಣಾಮ, ನಾಲ್ಕು ಪ್ರಕಾರ, ಮೂರು ಬಗೆ, ಮೂರು ನಾಶ, ಇಷ್ಟು ಪರಿಕರಗಳಿದ್ದದ್ದಕ್ಕೆ ದಾನವೆನ್ನುವರು. ಈ ಒಂದು ಶ್ಲೋಕವನ್ನು ಹೇಳಿ ಆಕಾಶವಾಣಿ ಮೌನವಾಯಿತು. ಇದರ ಅರ್ಥವೇ ತಿಳಿಯಲಿಲ್ಲ ಆ ಧರ್ಮವರ್ಮ ರಾಜನಿಗೆ. ಅವನ ಆಸ್ಥಾನ ಪಂಡಿತರಿಗೂ ಸರಿಯಾಗಿ ಹೊಳೆಯಲಿಲ್ಲ ಪದ್ಯದ ಗೂಡಾರ್ಥ. ಕೂಡಲೇ ಎಲ್ಲ ಕಡೆಗೂ ಡಂಗುರ ಹೊಡೆಸಿದ ಆ ಮಹಾರಾಜ.

''ಈ ಪದ್ಯವು ನನ್ನ ತಪಸ್ಸಿನ ಫಲವಾಗಿ ಆಕಾಶವಾಣಿಯಿಂದ ಹೇಳಲ್ಪಟ್ಟಿದೆ, ಈ ಶ್ಲೋಕದ ರಹಸ್ಯಾರ್ಥವನ್ನು ಅರಿತು, ಸರಿಯಾಗಿ ನನಗೆ ಬಂದು ವಿವರಿಸಿದವರಿಗೆ ಏಳು ಲಕ್ಷ ಹಸುಗಳನ್ನು ಮತ್ತು ಏಳು ಲಕ್ಷ ಬಂಗಾರದ ನಾಣ್ಯಗಳನ್ನು. ಏಳು ಗ್ರಾಮಗಳ ದತ್ತಿಯನ್ನು ಕೊಡುತ್ತೇನೆ.'' ಧರ್ಮವರ್ಮ ರಾಜನ ಈ ಘೋಷಣೆಯನ್ನು ಕೇಳಿ ಸಹಸ್ರಾರು ಜನ ಪಂಡಿತೋತ್ತಮರು ಮುಕುರಿದರು ಅವನ ಅರಮನೆಗೆ. ಎಲ್ಲರೂ ಒಂದೊಂದು ಬಗೆಯಾಗಿ ಈ ನಭೋವಾಣಿಯ ಪದ್ಯಕ್ಕೆ ಅರ್ಥಹಚ್ಚಿ ಹೇಳಿದರು. ಆದರೆ ಸ್ವಯಂ ಶಾಸ್ತ್ರ ಸಾಹಿತ್ಯಗಳಲ್ಲಿ ತಜ್ಞಾಭಿಜ್ಞನಾದ ಆ ಧರ್ಮವರ್ಮ ರಾಜನಿಗೆ ಈ ಪಂಡಿತಮಂಡಲಿ ಹೇಳಿದ ಒಂದು ಅರ್ಥವೂ ಸರಿಯೆನಿಸಲಿಲ್ಲ. ನಾವೂ ಕೂಡ ವೇದ ವೇದಾಂತ ಸಾಹಿತ್ಯ ಮೀಮಾಂಸಾದಿಗಳಲ್ಲಿ ಪ್ರಕಾಂಡ ಪಂಡಿತರೇ. ನಮಗೆ ತೋರಿದಂತೆ ಆ ಮಹಾರಾಜನಿಗೆ ಆ ಪದ್ಯಾರ್ಥವನ್ನು ವಿವರಿಸಿದೆವು. ಅದು ಆ ಮಹಾರಾಜನಿಗೆ ಹಿಡಿಸಲಿಲ್ಲ. ಅಲ್ಲಿಂದ ನಿರಾಶನಾಗಿ ನಾವು ಈಗ ತೀರ್ಥಯಾತ್ರೆಗೆ ಹೊರಟಿದ್ದೇವೆ.'' ಎಂದು ಈ ಋಷಿಗಳು ಹೇಳಿದರು. ಆ ಎಲ್ಲ ವಿದ್ವದ್ವರೇಣ್ಯರ ಮಾತನ್ನು ಕೇಳಿ ನನಗೂ ಆಶ್ಚರ್ಯವಾಯಿತು. ಅದರ ಜೊತೆಗೇ ಉದಿಸಿತು ನನ್ನ ಹೃದಯಾಲವಾಲದಲ್ಲಿ ಆಶಾಂಕುರ. ಪ್ರಸನ್ನ ಮನಸ್ಸಿನಿಂದ ನಾನು ಬೀಳ್ಕೊಟ್ಟೆ ಆ ದ್ವಿಜಪುಂಗವರನ್ನು. ನನ್ನ ಮನದಲ್ಲಿ ವಿಚಾರಿಸಿದೆ.

''ಇದೊಂದು ನನಗೆ ಸುವರ್ಣ ಸಂಧಿ. ನನ್ನ ಸಮಸ್ಯೆಗಳಿಗೆ ಇದೊಂದು ಸೂಕ್ತ ಪರಿಹಾರ. ಈ ಆಕಾಶವಾಣಿಯ ಪದ್ಯಕ್ಕೆ ರಾಜಸಮ್ಮತನಾದ ಒಂದು ಸಮಂಜಸ ಅರ್ಥವನ್ನು ಕಂಡುಹಿಡಿದು ರಾಜನಿಗೆ ಹೇಳಿದರೆ, ನನಗೆ ರಾಜನಿಂದ ಒಳ್ಳೆಯ ಗೌರವ, ಮಾನ, ಧನ, ಎಲ್ಲವೂ ದೊರೆಯುವದು. ಇದಕ್ಕಾಗಿ ನಾನು ಯಾಚನೆ ಮಾಡುವ ಕಾರಣವಿಲ್ಲ. ನನ್ನ ಅಯಾಚಿತ ವೃತ್ತಿಗೆ ಲೋಪವಿಲ್ಲ. ಅಪರಿಗ್ರಹ ವ್ರತಕ್ಕೆ ಬಾಧಕವಿಲ್ಲ. ನಾನು ಯಾರಿಂದಲೂ ಬೇಡಿ ಪ್ರತಿಗ್ರಹವನ್ನು ಕೇಳಿ ಸ್ವೀಕರಿಸಿದಂತಾಗುವುದಿಲ್ಲ. ಧರ್ಮಸಂಕಟದಲ್ಲಿ ಬಿದ್ದ ರಾಜನಿಗೆ ಆ ದಿವ್ಯವಾಣಿಯ ಅರ್ಥವನ್ನು ತಿಳಿಸಿ ಹೇಳಿ ಅವನಿಂದ ಈ ಪಾರಿತೋಷಿಕ ದಕ್ಷಿಣಾರೂಪವಾಗಿ ಪಡೆದ ಹಣ ಶುಕ್ಲ ದ್ರವ್ಯ ಎನಿಸುವದು. ಅದನ್ನೇ ನಾನು ಸತ್ಪಾತ್ರದಲ್ಲಿ ಮುಂದೆ ದಾನ ಮಾಡಿದರೆ, ಆ ದಾನವೂ ಸಾತ್ವಿಕ ದಾನ, ಶುಕ್ಲದಾನ ಆಗುವದು. ಮತ್ತು ಈ ಆಕಾಶವಾಣಿ ಪದ್ಯದ ಅರ್ಥವು ಕೂಡ ನನಗೆ ಚೆನ್ನಾಗಿ ಗೊತ್ತು. ಇದರ ರಹಸ್ಯಾರ್ಥವನ್ನು ನಾನು ರಾಜನಿಗೆ ತಿಳಿಸಿ ಹೇಳಿದರೆ. ಅವನಿಗೂ ಸಮಾಧಾನ. ನಮಗೂ ಸಂತೋಷ.'' ಹೀಗೆ ಆಲೋಚನೆ ಮಾಡಿ ಆ ಮಹೀಸಾಗರ ಸಂಗಮ ತೀರ್ಥಕ್ಕೆ ನಾನು ಅನೇಕ ಪ್ರಣಾಮಗಳನ್ನು ಸಲ್ಲಿಸಿದೆ. ಅಲ್ಲಿಯ ಸ್ನಾನದ ಮಹಿಮೆಯಿಂದಲೇ ನನಗೆ ಇಂಥ ಸುಸಂಧಿ ದೊರಕಿತ್ತು. ಕೂಡಲೇ ನಾನು ಓರ್ವ ವೃದ್ಧ ಬ್ರಾಹ್ಮಣನ ವೇಷ ಧರಿಸಿದೆ. ನೇರವಾಗಿ ನಡೆದೆ ಧರ್ಮವರ್ಮ ರಾಜನ ಬಳಿಗೆ. ಅವನಿಗೆ ಧೈರ್ಯದಿಂದ ಹೇಳಿದೆ -

''ರಾಜೇಂದ್ರ ! ನಿಮಗೆಲ್ಲ ಗೂಢ ರಹಸ್ಯವಾಗಿ ಪರಿಣಮಿಸಿದ ಆ ಆಕಾಶ ವಾಣಿಯ ಕೂಟ ಶ್ಲೋಕದ ಗೂಢಾರ್ಥವನ್ನು ನಾನು ಚೆನ್ನಾಗಿ ವಿವರಿಸುತ್ತೇನೆ ಕೇಳು. ಮತ್ತು ನೀನು ಡಂಗುರ ಹೊಡೆಸಿದ ದಾನ ಘೋಷಣೆಯನ್ನು ಸತ್ಯವನ್ನಾಗಿ ಮಾಡು.

**ಧರ್ಮವರ್ಮ :** ''ಬ್ರಹ್ಮನ್ ! ಆ ನಭೋವಾಣಿಯ ಗೂಢಾರ್ಥದ ರಹಸ್ಯ ಭೇದನ ಮಾಡುತ್ತೇನೆಂದು ಬಂದ ವಿದ್ವಾಂಸರು ಅಸಂಖ್ಯ. ಆದರೆ ಆ ಪದ್ಯದ ವಾಸ್ತವಿಕ ಅರ್ಥವನ್ನು ಒಬ್ಬರೂ ಹೇಳಲಿಲ್ಲ. ನಿಮಗೆ ಆತ್ಮವಿಶ್ವಾಸವಿದ್ದರೆ ನೀವೂ ಪ್ರಯತ್ನಿಸಬಹುದು. ನೀವು ನಿಜವಾಗಿಯೂ ಆ ಶ್ಲೋಕಾರ್ಥವನ್ನು ಹೇಳಿದರೆ, ನಾನು ಘೋಷಿಸಿದಂತೆ ಏಳು ಲಕ್ಷ ಗೋಗಣ, ಏಳು ಲಕ್ಷ ಸುವರ್ಣ ವರಾಹ, ಏಳು ಗ್ರಾಮದಾನ ಇಷ್ಟನ್ನು ತಪ್ಪದೇ ಕೊಡುತ್ತೇನೆ. ಇದರಲ್ಲಿ ಸಂದೇಹವೇ ಇಲ್ಲ. ಆದರೆ, ನೀವು ಹೇಳಿದ ಅರ್ಥವು ಸರಿಯಿಲ್ಲದಿದ್ದರೆ ಮಾತ್ರ ನೀವು ಬರಿಗೈಯಿಂದ ಮರಳಬೇಕಾಗುವದು ನಿಮ್ಮ ಪರ್ಣಕುಟೀರಕ್ಕೆ.

**ನಾರದ :** ಕುಂತೀಪುತ್ರ ! ಮಹಾರಾಜನ ಈ ನುಡಿ ನನ್ನ ಬುದ್ಧಿಮತ್ತೆಗೇ ಒಂದು ಸವಾಲನ್ನು ಎಸೆದಂತಾಗಿತ್ತು. ನಾನು ಉತ್ಸಾಹದುಂಬಿ ಹೇಳಿದೆ.

**''ದ್ವಿಹೇತು ಷಡಧಿಷ್ಠಾನಂ ಷಡಂಗಂ ಚ ದ್ವಿಪಾಕಯುಕ್ ।**
**ಚತುಷ್ಪ್ರಕಾರಂ ತ್ರಿವಿಧಂ ತ್ರಿನಾಶಂ ದಾನಮುಚ್ಯತೇ ॥**

ಇದೇ ಅಲ್ಲವೆ ಆ ನಿನ್ನ ಆಕಾಶವಾಣಿ ಪದ್ಯ ! ಇದೀಗ ನಾನು ವಿವರಿಸುತ್ತೇನೆ ಇದರ ಅರ್ಥವನ್ನು. ಅದು ಯಥಾರ್ಥವೋ ಅಯಥಾರ್ಥವೋ ಎಂಬುದನ್ನು ನೀನೇ ವಿಚಾರಿಸು.

ದಾನವು 'ದ್ವಿಹೇತು'- ಎರಡು ಹೇತುಗಳು ಉಳ್ಳದ್ದಾಗಿದೆ. ಕೊಟ್ಟ ದಾನವು ಅಲ್ಪವಾಗಿರುವದಾಗಲೀ ಅಥವಾ ಅಧಿಕವಾಗಿರುವದಾಗಲೀ ದಾನಿಯ ಅಭ್ಯುದಯಕ್ಕೆ ಕಾರಣವಾಗಿರುವುದಿಲ್ಲ. ಆದರೆ ಶ್ರದ್ಧಾ ಮತ್ತು ಶಕ್ತಿ ಇವು ಎರಡು ಮಾತ್ರ ದಾನದ ವೃದ್ಧಿಕ್ಷಯಕ್ಕೆ ಕಾರಣವಾಗುತ್ತದೆ. ಶ್ರದ್ಧೆಯೇ ದಾನದಲ್ಲಿ ಮುಖ್ಯ ಶ್ರದ್ಧೆಯಿಲ್ಲದೇ ನೀಡಿದ ದಾನವು ಎಂದೂ ಸಫಲವಾಗುವುದಿಲ್ಲ. ಆದುದರಿಂದ ಶ್ರದ್ಧಾವಂತನಾದ ಮನುಷ್ಯನು ನ್ಯಾಯಮಾರ್ಗದಿಂದ ಸಂಪಾದಿಸಿದ ಧನವನ್ನುಅಲ್ಪವಾದರೂ ಚಿಂತೆಯಿಲ್ಲ. ಸತ್ಪಾತ್ರದಲ್ಲಿ ದಾನ ಮಾಡಿದರೆ ಅದರಿಂದ ಸಿದ್ಧಿಪಡೆಯುತ್ತಾನೆ. ಶಿವನೂ ಅಂಥವನ ಮೇಲೆ ಪ್ರಸನ್ನನಾಗುತ್ತಾನೆ.

ತಸ್ಮಾಚ್ಛ್ರದ್ಧಾವತಾ ಪಾತ್ರೇ ದತ್ತಂ ನ್ಯಾಯಾರ್ಜಿತಂ ಹಿ ಯತ್
ತೇನೈವ ಭಗವಾನ್ ರುದ್ರಃ ಸ್ವಲ್ಪಕೇನಾಪಿ ತುಷ್ಯತಿ ॥

ಆದುದರಿಂದ ದಾನದ ಪೂರ್ಣ ಫಲವು ಬರಬೇಕಾದರೆ, ಅತ್ಯವಶ್ಯವಾದ ಎರಡು ಕಾರಣಗಳಲ್ಲಿ ಶ್ರದ್ಧೆಯು ಪ್ರಥಮ ಕಾರಣ. ಎರಡನೇ ಕಾರಣವೆಂದರೆ ಶಕ್ತಿ. ಮನುಷ್ಯನು ತನ್ನ ಕುಟುಂಬ ಪೋಷಣೆ ಮಾಡಿ ಮಿಕ್ಕಿ ಉಳಿದ ಹಣವನ್ನು ದಾನ ಮಾಡಬೇಕು. ತನ್ನ ಶಕ್ತಿಮೀರಿ ದಾನ ಮಾಡಬಾರದು. ತನ್ನ ಶಕ್ತ್ಯಾನುಸಾರ ಮಾಡಿದ ದಾನವು ಜೇನುತುಪ್ಪಕ್ಕೆ ಸಮಾನ. ತನ್ನ ಯೋಗ್ಯತೆ ಮೀರಿ ಮಾಡಿದ ದಾನವು ವಿಷ ಸಮಾನ. ಆದರಿಂದ ಪಾಪವೂ ಬರುವದು. ಇದೇ ಅಭಿಪ್ರಾಯವನ್ನು ಹಿರಿಯರು ಹೀಗೆ ಹೇಳಿದ್ದಾರೆ.

"ಕುಟುಂಬ ಭುಕ್ತ ಭರಣಾದ್ದೇಯಂ ಯದತಿರಿಚ್ಯತೇ ।
ಮದ್ವಾಸ್ವಾದೋ ವಿಷಂ ಪಶ್ಚಾದ್ದಾತುರ್ಧರ್ಮೋऽನ್ಯಥಾ ಭವೇತ್ ॥

ಶಕ್ತೇ ಪರಜನೇ ದಾತಾ ಸ್ವಜನೇ ದುಃಖ ಜೀವಿನಿ ।
ಮದ್ಯಪಾನ ವಿಷಾದಃ ಸ ಧರ್ಮಾಣಾಂ ಪ್ರತಿರೂಪಕಃ ॥

ತನ್ನವರು ಬಡತನದ ದುಃಖದಿಂದ ಬಳಲುತ್ತಿರುವಾಗ ಸಿರಿವಂತರಾದ ಹೆರವರಿಗೆ ದಾನ ಮಾಡುವದು ಮದ್ಯಪಾನಕ್ಕೆ ಸಮಾನ. ಧರ್ಮಕ್ಕೆ ವಿರುದ್ಧ.

ತಂದೆ ತಾಯಿಗಳ ಶ್ರಾದ್ಧಾದಿ ಕರ್ಮಗಳನ್ನು ಕೂಡ ಆತ್ಮೀಯರು ಬಡತನದಿಂದ ಬಳಲುವಾಗ ವೈಭವದಿಂದ ಮಾಡಬಾರದು ಎಂದು ಶಾಸ್ತ್ರದ ಆದೇಶವಿದೆ.

ಭೃತ್ಯಾನಾಮುಪರೋಧೇನ ಯಃ ಕರೋತ್ಯೌರ್ಧ್ವದೈಹಿಕಮ್ ।
ತದ್ಭವತ್ಯಸುಖೋದರ್ಕಂ ಜೀವತೋऽಸ್ಯ ಮೃತಸ್ಯ ಚ ॥

ತಾನು ಪೋಷಣ ಮಾಡಬೇಕಾದ ಭೃತ್ಯ ಹಾಗೂ ಪರಿವಾರದವರಿಗೆ ತೊಂದರೆ ಕೊಟ್ಟು ಅವರಿಗೆ ಕೊಡಬೇಕಾದದ್ದನ್ನು ಕೊಡದೆ ಮರಣ ಹೊಂದಿದವರ ಅಂತ್ಯೇಷ್ಟಿ ಶ್ರಾದ್ಧ ಮೊದಲಾದವುಗಳನ್ನು ಮಾಡಿದರೆ, ಅದು ಮರಣ ಹೊಂದಿದವನಿಗೂ ಬದುಕಿ ಇದ್ದವನಿಗೂ ಕಲ್ಯಾಣಕಾರಕವಾಗುವದಿಲ್ಲ.

**ಸಾಮಾನ್ಯಂ ಯಾಚಿತಂ ನ್ಯಾಸಮಾಧಿರ್ದಾನಂ ಚ ತದ್ಧನಂ ।**
**ಅನ್ವಾಹಿತಂ ಚ ನಿಕ್ಷಿಪ್ತಂ ಸರ್ವಸ್ವಂ ಚಾನ್ವಯೇ ಸತಿ ॥**

**ಆಪತ್ಸ್ವಪಿ ನ ದೇಯಾನಿ ನವ ವಸ್ತೂನಿ ಪಂಡಿತೈಃ ।**
**ಯೋ ದದಾತಿ ಸ ಮೂಢಾತ್ಮಾ ಪ್ರಾಯಶ್ಚಿತ್ತೀ ಭವೇನ್ನರಃ ॥**

ಮಾನವರು ಈ ಒಂಭತ್ತು ವಿಧವಾದ ವಸ್ತುಗಳನ್ನು ದಾನಮಾಡಬಾರದು. ದಾನಕೊಡಲು ಅಯೋಗ್ಯವಾದ ಆ ನವಪದಾರ್ಥಗಳು ಸಾಮಾನ್ಯ. ಯಾಚಿತ, ನ್ಯಾಸ, ಆಧಿ, ದಾನ, ದಾನಧನ, ಅನ್ವಾಹಿತ, ನಿಕ್ಷಿಪ್ತ, ಸರ್ವಸ್ವ ಈ ಒಂಭತ್ತು ವಿಧವಾದ ಪದಾರ್ಥಗಳನ್ನು ದಾನ ಕೊಡಬಾರದು.

1) ಅತ್ಯಂತ ತುಚ್ಛ ಮತ್ತು ಎಲ್ಲರ ಅಧಿಕಾರಕ್ಕೆ ಸೇರಿದ ವಸ್ತುವಿಗೆ ಸಾಮಾನ್ಯ ಎನ್ನುವರು.
2) ಎರಡನೆಯವರನ್ನು ಬೇಡಿ ತಂದ ವಸ್ತು ಯಾಚಿತ.
3) ಅಡುವಾಗಿ ತಂದಿಟ್ಟ ವಸ್ತು ನ್ಯಾಸ.
4) ಒಂದು ಕರಾರಿನ ಮೇಲೆ ತಂದಿಟ್ಟ ವಸ್ತು ಆಧಿ.
5) ತನ್ನ ಸ್ವತ್ತನ್ನು ಇಟ್ಟುಕೊಳ್ಳದೆ ನೀಡಿದ ವಸ್ತು ದಾನ.
6) ಅದು ದಾನವಾಗಿ ಬಂದಬಳಿಕ ದಾನ ಪಡೆದವನಲ್ಲಿ ಇದ್ದ ಅದೇ ಹಣಕ್ಕೆ ದಾನ ಧನ ಎನ್ನುವರು.
7) ಅಡುವಿಟ್ಟದ್ದನ್ನು ಮತ್ತೆ ಪುನಃ ಬೇರೊಬ್ಬರಲ್ಲಿ ಅದನ್ನು ಅಡುವಿಟ್ಟರೆ ಅನ್ವಾಹಿತ.
8) ಕೇವಲ ವಿಶ್ವಾಸದಿಂದ ಒಬ್ಬರಲ್ಲಿ ಇಟ್ಟುಹೋದ ವಸ್ತು ನಿಕ್ಷೇಪ.
9) ತಮ್ಮ ಮನೆತನದ ಆಸ್ತಿ ಆದರೂ ಅದನ್ನು ಸಂಪೂರ್ಣವಾಗಿ ಬೇರೊಬ್ಬರಿಗೆ ಕೊಟ್ಟರೆ, ಸಾನ್ವಯ ಸರ್ವಸ್ವ ದಾನ , ಎನ್ನುವರು.

ಹೀಗೆ ಈ ಒಂಭತ್ತು ವಿಧವಾದ ಪದಾರ್ಥಗಳನ್ನು ಎಂಥ ಆಪತ್ಕಾಲದಲ್ಲಿಯೂ ದಾನ ಕೊಡಬಾರದು. ದಾನ ಕೊಟ್ಟವನು ಮೂರ್ಖನಷ್ಟೇ ಅಲ್ಲದೆ ಈ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಇದನ್ನೆಲ್ಲ ನೋಡಿಕೊಂಡು ತನ್ನ ಯೋಗ್ಯತೆಗೆ ಅನುಗುಣವಾಗಿ ನಿರ್ದಿಷ್ಟ ವಸ್ತುಗಳನ್ನು ದಾನ ನೀಡುವ ಪ್ರಕಾರಕ್ಕೆ ಶಕ್ತಿ ಎನ್ನುವರು. ಹೀಗೆ ಶ್ರದ್ಧೆ ಶಕ್ತಿ ಇವು ಎರಡು ದಾನದ ಸಫಲತೆಗೆ ಕಾರಣವಾದುದರಿಂದ ದಾನವು 'ದ್ವಿಹೇತು' ಎಂದು ಹೇಳಲ್ಪಡುತ್ತದೆ. ಆ ಆಕಾಶವಾಣಿ ಪದ್ಯದಲ್ಲಿಯ ಮೊದಲಿನ ವಿಶೇಷಣವಾದ ದ್ವಿಹೇತು ಎಂಬ ಶಬ್ದದ ಅರ್ಥವನ್ನು ನಾನು ನಿನಗೆ ತಿಳಿಸಿದೆ.

ಇನ್ನು ಆ ಪದ್ಯದಲ್ಲಿಯ 'ಷಡಧಿಷ್ಠಾನಂ' ಎಂಬ ಎರಡನೆಯ ವಿಶೇಷಣದ ಅರ್ಥ ವಿಶೇಷವನ್ನು ವಿವರಿಸುತ್ತೇನೆ. ಆಲಿಸು ಚಿತ್ತವಿಟ್ಟು.

**ಅಧಿಷ್ಠಾನಾನಿ ವಕ್ಷ್ಯಾಮಿ ಷಡೇವ ಶೃಣು ತಾನಿ ಚ ।**
**ಧರ್ಮ ಮರ್ಥಂ ಚ ಕಾಮಂ ಚ ವ್ರೀಡಾಹರ್ಷ ಭಯಾನಿ ಚ ॥**
**ಅಧಿಷ್ಠಾನಾನಿ ದಾನಾನಾಂ ಷಡೇತಾನಿ ಪ್ರಚಕ್ಷತೆ ।**

ಧರ್ಮ, ಅರ್ಥ, ಕಾಮ, ಲಜ್ಜೆ, ಭಯ, ಹರ್ಷ ಇವು ಆರು ದಾನದ ಅಧಿಷ್ಠಾನಗಳು ಎಂದು ಕರೆಯಲ್ಪಡುತ್ತವೆ.

**ಪಾತ್ರೇಭ್ಯೋ ದೀಯತೆ ನಿತ್ಯಮನಪೇಕ್ಷ್ಯ ಪ್ರಯೋಜನಮ್ ।**
**ಕೇವಲಂ ಧರ್ಮಬುದ್ಧ್ಯಾ ಯದ್ಧರ್ಮದಾನಂ ತದುಚ್ಯತೇ ॥**

ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಯಾವ ಲೌಕಿಕ ಪ್ರಯೋಜನವು ಇಲ್ಲದೆ, ಕೇವಲ ಧರ್ಮಬುದ್ಧಿಯಿಂದ ಸತ್ಪಾತ್ರದಲ್ಲಿ ನೀಡುವ ದಾನವು ಧರ್ಮದಾನ ಎನಿಸುತ್ತದೆ.

**ಪ್ರಯೋಜನಮವೇಕ್ಷ್ಯೈವ ಪ್ರಸಂಗಾದ್ಯ ತ್ಪ್ರದೀಯತೆ ।**
**ತದರ್ಥದಾನಮಿತ್ಯಾಹುರೈಹಿಕಂ ಫಲಹೇತುಕಂ ॥**

ಮನಸ್ಸಿನಲ್ಲಿ ಯಾವುದಾದರೂ ಒಂದು ಫಲ ಪ್ರಯೋಜನ ಅಥವಾ ಉದ್ದೇಶವನ್ನು ಇಟ್ಟುಕೊಂಡು ಅಂಥ ಸಂದರ್ಭ ಬಂದಾಗ ಮಾತ್ರ ಕೊಡುವ ದಾನವು ಎರಡನೆಯ 'ಅರ್ಥದಾನ' ಎಂದು ಹೇಳಲ್ಪಡುತ್ತದೆ. ಈ ಅರ್ಥದಾನವು ಇದೇ ಲೋಕದಲ್ಲಿಯೇ ಅವರವರಿಗೆ ಇಷ್ಟವಾದ ಫಲವನ್ನು ಇದೇ ಜನ್ಮದಲ್ಲಿ ಯಥಾವಕಾಶ ತಂದು ಕೊಡುವುದು.

**ಸ್ತ್ರೀ ಪಾನ ಮೃಗಯಾಕ್ಷಾಣಾಂ ಪ್ರಸಂಗಾದ್ಯತ್ಪ್ರದೀಯತೆ ॥**
**ಅನರ್ಹೇಷು ಸುಯತ್ನೇನ ಕಾಮದಾನಂ ತದುಚ್ಯತೆ ॥**

ಸ್ತ್ರೀ ಸಮಾಗಮ, ಮದ್ಯಪಾನ, ಬೇಟೆ, ಜೂಜಾಟ ಮುಂತಾದ ಪ್ರಸಂಗಗಳಲ್ಲಿ ಅನರ್ಹರಿಗೆ ಮಹಾಪ್ರಯತ್ನದಿಂದ ಕೊಡಮಾಡಿದ ದಾನವು ಕಾಮದಾನ ಎಂದು ಕರೆಯಲ್ಪಡುತ್ತದೆ.

**ಸಂಸದಿ ವ್ರೀಡಯಾಽಶ್ರುತ್ಯ ಅರ್ಥಾರ್ಥಿಭ್ಯಃ ಪ್ರಯಾಚಿತಃ ।**
**ಪ್ರದೀಯತೆ ತು ತದ್ದಾನಂ ವ್ರೀಡಾದಾನಮಿತಿ ಶ್ರುತಮ್ ॥**

ತುಂಬಿದ ಸಭೆಯಲ್ಲಿ ಬೇರೊಬ್ಬರು ಕೊಟ್ಟದ್ದನ್ನು ನೋಡಿ ಲಜ್ಜೆಯಿಂದ ಅಥವಾ ಸ್ಪರ್ಧೆಯಿಂದ ಪ್ರತಿಷ್ಠೆಗಾಗಿ ತಾನೂ ಕೊಡುತ್ತೇನೆಂದು ಪ್ರತಿಜ್ಞೆಮಾಡಿ ನೀಡಿದ ದಾನವು ಲಜ್ಜಾದಾನ ಎನಿಸುವದು.

**ದೃಷ್ಟ್ವಾ ಪ್ರಿಯಾಣಿ ಶ್ರುತ್ವಾ ವಾ ಹರ್ಷೇಣ ಯತ್ಪ್ರದೀಯತೆ ।**
**ಹರ್ಷದಾನ ಮಿತಿ ಪ್ರಾಹುರ್ದಾನಂ ತದ್ಧರ್ಮಚಿಂತಕಾಃ ।**

ತನಗೆ ಅತ್ಯಂತ ಇಷ್ಟವಾದ ಅಥವಾ ಪ್ರಿಯವಾದ ಕಾರ್ಯವನ್ನು ಮಾಡಿದ್ದನ್ನು ನೋಡಿ ಇಲ್ಲವೆ ಸಂತೋಷದ ಸುದ್ದಿಯನ್ನು ಕೇಳಿ ಆದ ಹರ್ಷೋದ್ರೇಕದಿಂದ ಕೊಡುವ ದಾನಕ್ಕೆ ಧರ್ಮೋಪದೇಶಕರು ಹರ್ಷದಾನ ಎಂದು ಕರೆಯುತ್ತಾರೆ.

**ಆಕ್ರೋಶಾನರ್ಥಹಿಂಸಾನಾಂ ಪ್ರತೀಕಾರಾಯ ಯದ್ಭವೇತ್ ॥**
**ದೀಯತೇಽ ನುಪಕರ್ತೃಭ್ಯೋ ಭಯದಾನಂ ತದುಚ್ಯತೇ ॥**

ನಿಂದೆ ಅನರ್ಥ ಮತ್ತು ಹಿಂಸೆಗಳ ನಿವಾರಣೆಗಾಗಿ ತನಗೆ ಎಂದೂ ಉಪಕಾರ ಮಾಡದ ವ್ಯಕ್ತಿಗಳಿಗೆ ಅನಿವಾರ್ಯವಾಗಿ ಕೊಡಲೇಬೇಕಾಗಿ ಬಂದು ಕೊಟ್ಟ ದಾನವು ಭಯದಾನ ಎಂದು ಕರೆಯಲ್ಪಡುತ್ತದೆ.

ಇವೇ ಆರು ದಾನದ 'ಷಡಧಿಷ್ಠಾನ' ಎಂದರೆ ಆರು ಅಧಿಷ್ಠಾನಗಳು ಆಗಿರುತ್ತವೆ. ಇನ್ನು ಈ ದಾನದ ಆರು ಅಂಗಗಳನ್ನು ಹೇಳುತ್ತೇನೆ. ಅದರಿಂದ ಆಕಾಶವಾಣಿಯ ಶ್ಲೋಕದಲ್ಲಿ 'ಷಡಂಗಂ' ಎಂಬ ಮೂರನೆಯ ವಿಷಯದ ಯಥಾರ್ಥ ಅರ್ಥವು ನಿನಗೆ ಪ್ರತೀತವಾಗಲು ಸಾಕು.

**ದಾತಾ ಪ್ರತಿಗ್ರಹೀತಾ ಚ ಶುದ್ಧಿರ್ದೇಯಂ ಚ ಧರ್ಮಯುಕ್ ।**
**ದೇಶಕಾಲೌ ಚ ದಾನಾನಾಮಂಗಾನ್ಯೇತಾನಿ ಷಡ್ ವಿದುಃ ॥**

ದಾತಾ ಎಂದರೆ ದಾನ ಕೊಡುವವ. ದಾನ ತೆಗೆದುಕೊಳ್ಳುವವ, ಶುದ್ಧಿ, ದೇಯವಸ್ತು, ದೇಶ, ಕಾಲ ಇವು ಆರು ದಾನದ ಅಂಗಗಳೆಂದು ಪರಿಗಣಿತವಾಗಿವೆ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಹತ್ತೊಂಭತ್ತನೇ ಅಧ್ಯಾಯ ಮುಗಿದುದು**

## ದಾನ ಕೊಡುವವನ ಅರ್ಥಾತ್ 'ದಾತಾ'ನ ಲಕ್ಷಣ — ಅಧ್ಯಾಯ -20

**ಅಪರೋಗೀ ಚ ಧರ್ಮಾತ್ಮಾ ದಿತ್ಸುರವ್ಯಸನಃ ಶುಚಿಃ ।**
**ಅನಿಂದ್ಯಾಜೀವಕರ್ಮಾ ಚ ಷಡ್ಭಿರ್ದಾತಾ ಪ್ರಶಸ್ಯತೆ ॥**

ದಾನ ನೀಡುವವನು ರೋಗಿಷ್ಠನಿರಬಾರದು. ಅವನಲ್ಲಿ ಧರ್ಮ ಬುದ್ಧಿಯಿರಬೇಕು. ಸ್ವಯಂ ಪ್ರೇರಣೆಯಿಂದಲೇ ಸಂತೋಷದಿಂದ ಸ್ವೇಚ್ಛೆಯಿಂದ ದಾನವನ್ನು ಕೊಡಬೇಕು. ಅವನು ವ್ಯಸನಾಧೀನನಿರಬಾರದು. ಅವನು ಶುಚಿರ್ಭೂತನಾಗಿರಬೇಕು. ಹತ್ತು ಜನರು ತೆಗಳುವ ನಿಂದ್ಯ ನೀಚ ಧರ್ಮಕೃತ್ಯಗಳನ್ನು ಮಾಡಿ ಜೀವನ ಮಾಡುತ್ತಿಯರಬಾರದು, ಈ ಆರು ಲಕ್ಷಣಗಳುಳ್ಳ ದಾನಿಯು ಶ್ರೇಷ್ಠ ದಾತಾ ಎಂದು ಹೊಗಳಲ್ಪಡುತ್ತಾನೆ. ಇವನು ಉತ್ತಮ ದಾತಾ. ಇದಕ್ಕೆ ವಿಪರೀತವಾಗಿ, ಅಧಮ ದಾತೃಗಳು ಆರು ಬಗೆಯಾಗಿದ್ದಾರೆ.

**ಅನೃಜುಶ್ಚಾಶ್ರದ್ಧಧಾನೋ ದುಷ್ಟಾತ್ಮಾ ವ್ಯಸನೀ ಚ ಯಃ ।**
**ಅಸತ್ಯಸಂಧೋ ನಿದ್ರಾಲುರ್ದಾತಾಽಯಂ ತಾಮಸೋಽಧಮಃ ॥**

ಕಪಟಿಯು, ಶ್ರದ್ಧೆಯಿಲ್ಲದವನು, ದುಷ್ಟಚೇತನನು, ವ್ಯಸನಾಕ್ರಾಂತನು, ಸುಳ್ಳು ಆಣೆ ಇಟ್ಟುಕೊಳ್ಳುವವನು ಬಹಳ ಮಲಗುವವನು ತಾಮಸ ದಾತಾ ಅಥವಾ ಅಧಮ ದಾತಾ ಎಂದು ತಿಳಿಯಲ್ಪಡುತ್ತಾನೆ. ಇನ್ನು ದಾನದ ಷಡಂಗಗಳಲ್ಲಿ ಎರಡನೆಯ ಅಂಗವಾದ ಪ್ರತಿಗೃಹೀತಾ' ದಾನ ಪಡೆದುಕೊಳ್ಳುವವನ ಲಕ್ಷಣವನ್ನು ಹೇಳುತ್ತೇನೆ.

**ತ್ರಿಶುಕ್ಲಃ ಶುಕ್ಲ ವೃತ್ತಿಶ್ಚ ಘೃಣಾಲುಃ ಸಂಯತೇಂದ್ರಿಯಃ**
**ವಿಮುಕ್ತೋ ಯೋನಿದೋಷೇಭ್ಯೋ ಬ್ರಾಹ್ಮಣಃ ಪಾತ್ರಮುಚ್ಯತೆ ॥**

ದಾನ ಕೊಳ್ಳುವವನು 'ತ್ರಿ ಶುಕ್ಲ' ಆಗಿರಬೇಕು ಎಂದರೆ, ಕುಲ, ವಿದ್ಯೆ, ಆಚಾರ ಇವು ಮೂರು ನಿರ್ದೋಷವಾಗಿ ಉಜ್ವಲವಾಗಿ ಇರಬೇಕು. ಅವರಿಗೆ 'ತ್ರಿಶುಕ್ಲ'

ಎನ್ನುವರು. ಮತ್ತು ಶುಕ್ಲವೃತ್ತಿಯವನು ಆಗಿರಬೇಕು ಎಂದರೆ ಅವನು ಗಳಿಸುವ ಹಣ ಅನ್ಯಾಯದ್ದು ಅಧರ್ಮದ್ದು ಆಗಿರಬಾರದು. ಸಾತ್ವಿಕ ವೃತ್ತಿಯಿಂದ ಬದುಕುತ್ತಿರಬೇಕು. ಘೃಣಾಳು 'ದಯಾಳು' ಆಗಿರಬೇಕು. ಸಂಯತೇಂದ್ರಿಯ ಎಂದರೆ ಜಿತೇಂದ್ರಿಯನೂ ಆಗಿರಬೇಕು. ಅವನ ತಾಯಿತಂದೆಗಳಲ್ಲಿ ವ್ಯಭಿಚಾರಾದಿ ದೋಷಗಳು ಇರಬಾರದು. ಇಂಥ ಜ್ಞಾನಿಯು ಸತ್ಪಾತ್ರ ಅಥವಾ ಉತ್ತಮ 'ಪ್ರತಿಗ್ರಹೀತಾ' ಎನಿಸುತ್ತಾನೆ. ದಾನದ ಮೂರನೇ ಅಂಗವಾದ ಶುದ್ಧಿಯ ಸ್ವರೂಪವನ್ನು ಪ್ರಾಜ್ಞರು ಹೀಗೆ ಬಣ್ಣಿಸಿದ್ದಾರೆ -

**ಸೌಮುಖ್ಯಮಭಿಸಂಪ್ರೀತಿರರ್ಥಿನಾಂ ದರ್ಶನೇ ಸದಾ ।**
**ಸತ್ಕೃತಿಶ್ಚಾನಸೂಯಾ ಚ ದಾನೇ ಶುದ್ಧಿರಿತಿ ಸ್ಮೃತಾ ॥**

ಯಾಚಕರನ್ನು ಕಂಡಕೂಡಲೇ ಅವರನ್ನು ಪ್ರಸನ್ನ ಮುಖದಿಂದ ಸ್ವಾಗತಿಸುವದು ಪ್ರೀತಿಯಿಂದ ಅವರನ್ನು ಸತ್ಕರಿಸುವದು, ಅವರಲ್ಲಿ ತಪ್ಪನ್ನು ಹುಡುಕದಿರುವದು, ಅವರ ಬಗೆಗೆ ಅಸೂಯೆಯನ್ನು ತಾಳದಿರುವದು, ದಾನದ ಮೂರನೇ ಅಂಗವಾದ 'ಶುದ್ಧಿ' ಶಬ್ದದ ತಾತ್ಪರ್ಯ .

**ಅಪರಾಬಾಧಮಕ್ಲೇಶಂ ಸ್ವಯತ್ನೇನಾರ್ಜಿತಂ ಧನಮ್ ।**
**ಸ್ವಲ್ಪಂ ವಾ ವಿಪುಲಂ ವಾಪಿ ದೇಯಮಿತ್ಯಭಿಧೀಯತೇ ॥**

ಇನ್ನೊಬ್ಬರನ್ನು ಪೀಡಿಸಿ ನೋಯಿಸದೆ, ಅತೀ ಪ್ರಯಾಸಮಾಡಿಕೊಳ್ಳದೇ ಸ್ವಪ್ರಯತ್ನದಿಂದಲೇ ಗಳಿಸಿದ ಧನವು ಅಲ್ಪವೆ ಇರಲಿ, ವಿಪುಲವೇ ಇರಲಿ, 'ದೇಯವಸ್ತು' ಎನಿಸುತ್ತದೆ.

**ಯದ್ಯಚ್ಚ ದುರ್ಲಭಂ ದ್ರವ್ಯಂ ದೇಶೇ ಕಾಲೇಽಪಿ ವಾ ಪುನಃ**
**ದಾನಾರ್ಹೌ ದೇಶ ಕಾಲೌ ತೌ ಸ್ಯಾತಾಂ ಶ್ರೇಷ್ಠೌ ನ ಚಾನ್ಯಥಾ ।**

ಯಾವ ದೇಶ ಮತ್ತು ಕಾಲಗಳಲ್ಲಿ ಯಾವ ಪದಾರ್ಥವು ಸುಲಭವಾಗಿ ಸಿಕ್ಕುವುದಿಲ್ಲವೋ ಅಂಥ ಅಗತ್ಯ ಪದಾರ್ಥಗಳನ್ನು ಪ್ರಯತ್ನದಿಂದ ದೊರಕಿಸಿ ದಾನ ನೀಡಲಿಕ್ಕೆ ಅದೇ ದೇಶ ಕಾಲಗಳು, ಯೋಗ್ಯ ದೇಶ, ಯೋಗ್ಯ ಕಾಲ, ಎನಿಸುತ್ತವೆ. ಹೀಗೆ ಆಕಾಶವಾಣಿಯ ಪದ್ಯದಲ್ಲಿ ಮೂರನೆಯ ವಿಶೇಷಣವಾದ ಷಡಂಗ'ದ ಬಗ್ಗೆ ವಿವರಿಸಿದಂತಾಯಿತು.

ಇನ್ನು 'ದ್ವಿಪಾಕಯುಕ್' ಎಂಬ ನಾಲ್ಕನೇ ವಿಶೇಷಣದ ಭಾವವನ್ನು ತಿಳಿಸುತ್ತೇನೆ.

**ದ್ವೌ ಪಾಕೌ ದಾನಜೌ ಪ್ರಾಹುಃ ಪರತ್ರಾರ್ಥ ಮಿಹೋಚ್ಯತೇ ।**
**ಸದ್ಭ್ಯೋ ಯದ್ದೀಯತೇ ಕಿಂಚಿತ್ತತ್ಪರತ್ರೋಪ ಭುಜ್ಯತೇ ॥**

**ಅಸತ್ಸು ದೀಯತೇ ಯತ್ತು ತದ್ದಾನಮಿಹ ಭುಜ್ಯತೆ ।**
**ದ್ವೌ ಪಾಕಾವಿತಿ ನಿರ್ದಿಷ್ಟೌ ಪ್ರಕಾರಾಂಶ್ಚತುರಃ ಶೃಣು ॥**

ದಾನಕ್ಕೆ ಎರಡು ವಿಧವಾದ ಫಲ ಅಥವಾ ಪರಿಣಾಮ ಉಂಟೆಂದು ದೊಡ್ಡವರು ಹೇಳುವರು. ಸತ್ಪುರುಷರಿಗೆ ದಾನ ಕೊಟ್ಟರೆ ಅದರ ಫಲವನ್ನು ಪರಲೋಕದಲ್ಲಿ

ಉಪಭೋಗಿಸಬೇಕಾಗುವದು. ದುರ್ಜನರಿಗೆ ಕೊಟ್ಟ ದಾನದ ಫಲವನ್ನು ಇಲ್ಲಿಯೇ ಅನುಭವಿಸಲು ಬರುವುದು, ಹೀಗೆ ದಾನವು ಎರಡು ಬಗೆಯಾದ ಪರಿಣಾಮ ಉಳ್ಳದ್ದಾದುದರಿಂದ 'ದ್ವಿಪಾಕಯುಕ್ ' ಆಗಿದೆ. ಇದು ಆಕಾಶವಾಣಿಯ ಪದ್ಯದಲ್ಲಿ ನಾಲ್ಕನೇ ವಿಶೇಷಣವಾದ 'ದ್ವಿಪಾಕಯುಕ್ ' ಎಂಬ ಶಬ್ದದ ಅರ್ಥವಿವರಣೆ.

ಇನ್ನು ಅದರಲ್ಲಿಯ 'ಚುತಷ್ಪ್ರಕಾರಂ' ಎಂಬ ಶಬ್ದದ ವ್ಯಾಖ್ಯಾನವನ್ನು ಕೇಳು, ದಾನವು ಧುವ, ತ್ರಿಕ, ಕಾಮ್ಯ, ನೈಮಿತ್ತಿಕ, ಎಂದು ನಾಲ್ಕು ಬಗೆಯಾಗಿದೆಯೆಂದು ಬಲ್ಲವರು ಹೇಳುತ್ತಾರೆ.

**ಧ್ರುವಮಾಹಸ್ತ್ರಿಕಂ ಕಾಮ್ಯಂ ನೈಮಿತ್ತಿಕಮಿತಿ ಕ್ರಮಾತ್ ।**
**ವೈದಿಕೋ ದಾನಮಾರ್ಗೋಽಯಂ ಚತುರ್ಧಾ ವರ್ಣ್ಯತೇ ದ್ವಿಜೈಃ ॥**

ವೇದೋಕ್ತವಾದ ದಾನಪದ್ಧತಿಯಲ್ಲಿ ವೇದಜ್ಞರಾದ ಬ್ರಾಹ್ಮಣರು ಧ್ರುವ, ತ್ರಿಕ, ಕಾಮ್ಯ ಮತ್ತು ನೈಮಿತ್ತಿಕ ಎಂದು ನಾಲ್ಕು ವಿಧವಾಗಿ ದಾನವನ್ನು ಬಣ್ಣಿಸುತ್ತಾರೆ. ಅವುಗಳಲ್ಲಿ ಧ್ರುವ ಎಂಬ ಪ್ರಥಮ ದಾನದ ಪ್ರಕಾರವನ್ನೂ 'ತ್ರಿಕ' ಎಂಬ ಎರಡನೇ ದಾನದ ಪ್ರಕಾರವನ್ನೂ ಕೇಳು.

**"ಕೂಪಾರಾಮತಡಾಗಾದಿ ಸರ್ವಕಾಮಫಲಂ ಧ್ರುವಮ್ ।**
**ತದಾಹುಃ ಸ್ತ್ರಿಕಮಿತ್ಯೇವ ದೀಯತೆ ಯದ್ದಿನೇ ದಿನೇ ।**

ಬಾವಿ ತೋಡಿಸುವದು, ಉಪವನಗಳನ್ನು ಬೆಳೆಸುವದು, ಕೆರೆಕುಂಟೆಗಳನ್ನು ನಿರ್ಮಿಸುವದು ಮುಂತಾದ ಸರ್ವಜಾತಿ ಜನಾಂಗದ ಜನರಿಗೆ ಉಪಕಾರಕವಾದ ದಾನ ಧ್ರುವ ದಾನ ಎನಿಸುತ್ತದೆ. ಪ್ರತಿದಿನವೂ ಉಪಯೋಗವಾಗಲಿ ಎಂದು ದಿನೇ ದಿನೇ ಕೊಡಲ್ಪಡುವ ನಿತ್ಯ ದಾನಕ್ಕೆ 'ತ್ರಿಕ' ಎನ್ನುತ್ತಾರೆ.

**ಅಪತ್ಯವಿಜಯೈಶ್ವರ್ಯ ಸ್ತ್ರೀಬಲಾರ್ಥೆ ಚ ದೀಯತೆ ।**
**ಇಚ್ಛಾಸಂಸ್ಥಂ ಚ ಯದ್ದಾನಂ ಕಾಮ್ಯಮಿತ್ಯಭಿಧೀಯತೆ ॥**

ಮಡದಿ, ಮಕ್ಕಳು, ವಿಜಯ, ಐಶ್ವರ್ಯ, ಬಲ ಮುಂತಾದವುಗಳಿಗಾಗಿ ಮತ್ತು ತನ್ನ ಇಚ್ಛಾ ಪೂರ್ತಿಗಾಗಿ ಕೊಡಲ್ಪಡುವ ದಾನ ಕಾಮ್ಯದಾನ ಎನಿಸಲ್ಪಡುತ್ತದೆ. ನಾಲ್ಕನೇಯದಾದ ನೈಮಿತ್ತಿಕ ದಾನವು ಕೂಡ ಮತ್ತೆ ಮೂರು ವಿಧವಾಗಿದೆ.

**ಕಾಲಾಪೇಕ್ಷಂ ಕ್ರಿಯಾಪೇಕ್ಷಂ ಗುಣಾಪೇಕ್ಷಮಿತಿ ಸ್ಮೃತಮ್ ।**
**ತ್ರಿಧಾ ನೈಮಿತ್ತಿಕಂ ಪ್ರೋಕ್ತಂ ಸದಾ ಹೋಮವಿವರ್ಜಿತಂ ॥**

ಕಾಲಾಪೇಕ್ಷ, ಕ್ರಿಯಾಪೇಕ್ಷ, ಗುಣಾಪೇಕ್ಷ ಎಂದು ಮೂರು ವಿಧವಾದ ಈ ನೈಮಿತ್ತಿಕ ದಾನದಲ್ಲಿ ಹೋಮಹವನಾದಿಗಳು ಇರುವದಿಲ್ಲ. ಗ್ರಹಣ, ಸಂಕ್ರಮಣ, ಪರ್ವಕಾಲ, ಜನ್ಮತಿಥಿ ವಿವಾಹ, ಉಪನಯನ ಮುಂತಾದ ವಿಶೇಷ ಕಾಲಗಳಲ್ಲಿ ನೀಡತಕ್ಕ ದಾನವು ಕಾಲಾಪೇಕ್ಷ. ಶ್ರಾದ್ಧ ,ವಿವಾಹ, ಉಪನಯನ, ಪುತ್ರೋತ್ಸವ ಮುಂತಾದ ಸಮಾರಂಭಗಳಲ್ಲಿ ಮಾಡಬೇಕಾದ ಕಾರ್ಯಕಲಾಪಗಳ ಉದ್ದೇಶದಿಂದ ಕೊಡಬೇಕಾದ ದಾನವು ಕ್ರಿಯಾಪೇಕ್ಷ ಎನಿಸುತ್ತದೆ. ವಿದ್ಯಾಧ್ಯಯನ, ಸಂಸ್ಕಾರ, ದೇವತಾರಾಧನೆ, ಆತಿಥ್ಯ, ಪರೋಪಕಾರ, ಮುಂತಾದ ಪುಣ್ಯಕಾರ್ಯಗಳಿಗಾಗಿ

ದ್ರವ್ಯಗಳನ್ನು ಪ್ರತ್ಯೇಕ ತೆಗೆದಿಟ್ಟು ನೀಡುವ ನೈಮಿತ್ತಿಕ ದಾನಕ್ಕೆ ಗುಣಾಪೇಕ್ಷ ನೈಮಿತ್ತಿಕ ದಾನ ಎನ್ನುವರು. ಹೀಗೆ ಆಕಾಶವಾಣಿಯ ಪದ್ಯದಲ್ಲಿಯ 'ಚತುಷ್ಪ್ರಕಾರಮ್' ಎಂಬ ವಿಶೇಷಣದ ಅರ್ಥವಿವರಣೆಯನ್ನು ಮಾಡಿದ್ದಾಯಿತು.

ಇದರ ನಂತರ 'ತ್ರಿವಿಧಂ' ಎಂಬ ಪದವು ಇರುತ್ತದೆ, ಅದರ ತಾತ್ಪರ್ಯವನ್ನು ಹೇಳುತ್ತೇನೆ. ಉತ್ತಮ,ಮಧ್ಯಮ, ಅಧಮ ಎಂದು ದಾನ ಮೂರು ವಿಧವಾಗಿದೆ.

**ಅಷ್ಟೋತ್ತಮಾನಿ ಚತ್ವಾರಿ ಮಧ್ಯಮಾನಿ ವಿಧಾನತಃ ।**
**ಕನಿಷ್ಠಾನಿ ಚ ಶೇಷಾಣಿ ತ್ರಿವಿಧಾತ್ಮಮಿದಂ ವಿದುಃ ॥**

ಉತ್ತಮ ದಾನಗಳು ಎಂಟು ಬಗೆಯಾಗಿವೆ. ಮಧ್ಯಮ ದಾನಗಳು ನಾಲ್ಕು ತೆರನಾಗಿರುತ್ತವೆ. ಉಳಿದೆಲ್ಲ ದಾನಗಳೂ ಕನಿಷ್ಠವಾಗಿರುತ್ತವೆ.

**ಗೃಹ ಪ್ರಾಸಾದ-ವಿದ್ಯಾ-ಭೂ ಗೋ-ಕೂಪ-ಪ್ರಾಣ-ಹಾಟಕಮ್ ।**
**ಏತಾನ್ಯುತ್ತಮದಾನಾನಿ ಉತ್ತಮಾನ್ಯನ್ನದಾನತಃ ॥**

ಮನೆ, ಗುಡಿ, ವಿದ್ಯೆ, ಭೂಮಿ, (ಹೊಲ), ಹಸು, ಬಾವಿ, ಪ್ರಾಣ, ಸುವರ್ಣ ಮುಂತಾದವುಗಳ ದಾನವು ಉಳಿದೆಲ್ಲ ದಾನಕ್ಕಿಂತ ಶ್ರೇಷ್ಠದಾನವೆಂದು ಕರೆಸಿಕೊಳ್ಳಲ್ಪಡುತ್ತದೆ.

**ಅನ್ನಾರಾಮೌ ಚ ವಾಸಾಂಸಿ ಹಯಪ್ರಭೃತಿವಾಹನಮ್ ।**
**ದಾನಾನಿ ಮಧ್ಯಮಾನೀತಿ ಮಧ್ಯಮ ದ್ರವ್ಯ ದಾನತಃ ॥**

ಅನ್ನ, ತೋಟ, ವಸ್ತ್ರ, ಕುದುರೆ ಮುಂತಾದ ವಾಹನಗಳೇ ಮೊದಲಾದ ಸರ್ವ ಸಾಮಾನ್ಯ ದ್ರವ್ಯಗಳ ದಾನವು ಮಧ್ಯಮದಾನ ಎನಿಸುತ್ತದೆ. ಇದರಂತೆ ಕೆಲವು ದಾನಗಳೂ ಕನಿಷ್ಠ ದಾನ ಎನಿಸುತ್ತವೆ.

**ಉಪಾನಚ್ಛತ್ರ ಪಾತ್ರಾದಿದಧಿಮಧ್ವಾಸನಾನಿ ಚ**
**ದೀಪಕಾಷ್ಠೋಪಲಾದೀನಿ ಚರಮಾನ್ಯಾಹುರುತ್ತಮಾಃ**

ಪಾದರಕ್ಷೆ, ಕೊಡೆ, ಪಾತ್ರೆ, ಮೊಸರು, ಜೇನುತುಪ್ಪ, ದೀಪ, ಆಸನ, ಕಲ್ಲು, ಕಟ್ಟಿಗೆ ಮುಂತಾದ ವಸ್ತುಗಳ ದಾನವು ಕನಿಷ್ಠದಾನ ಎನಿಸುವದು. ಇನ್ನು ಕೊನೆಯದಾದ ತ್ರಿನಾಶ ಎಂಬ ವಿಶೇಷಣದ ಅರ್ಥವನ್ನು ವಿವರಿಸುತ್ತೇನೆ.

**ಯದ್ದತ್ವಾ ತಪ್ಯತೇ ಪಶ್ಚಾತ್ ಪಾತ್ರೇಭ್ಯೋಽ ಪಾತ್ರ ಏವ ಚ ।**
**ಅಶ್ರದ್ಧಯಾ ಚ ಯದ್ದಾನಂ ದಾನನಾಶಾಸ್ತ್ರಯೋ ಮತಾಃ ॥**

ಸತ್ಪಾತ್ರದಲ್ಲಿ ದಾನಕೊಟ್ಟು ನಂತರ ಹಳಹಳಿಸುವದು ಎಂದರೆ ಪಶ್ಚಾತ್ತಾಪ ಪಡುವದು ಹಾಗೂ ಅಯೋಗ್ಯ ಪಾತ್ರದಲ್ಲಿ ಉತ್ಸಾಹದಿಂದ ದಾನನೀಡುವದು ಮತ್ತು ಶ್ರದ್ಧೆ ಆದರ ಇಲ್ಲದೆ ದಾನ ನೀಡುವದು ಇವು ಪಶ್ಚಾತ್ತಾಪ, ಅಪಾತ್ರತೆ , ಹಾಗೂ ಅಶ್ರದ್ಧೆ, ಎಂದು ಮೂರು ದಾನನಾಶ ಎನಿಸುತ್ತವೆ.

**"ಯದ್ದತ್ವಾ ತಪ್ಯತೇ ಪಶ್ಚಾದಾಸುರಂ ತದ್ ವೃಥಾ ಮತಮ್ ।**
**ಅಶ್ರದ್ಧಯಾ ಯದ್ದದಾತಿ ರಾಕ್ಷಸಂ ಸ್ಯಾದ್ ವೃಥೈವ ತತ್ ।**

ದಾನವನ್ನು ಕೊಟ್ಟ ಬಳಿಕ ಪಶ್ಚಾತ್ತಾಪ ಪಟ್ಟರೆ ಆ ದಾನವು ವ್ಯರ್ಥ ಮತ್ತು ಅದು ಅಸುರದಾನ ಎನಿಸುತ್ತದೆ. ಶ್ರದ್ಧೆ ಇಲ್ಲದೇ ಕೊಡಲ್ಪಡುವ ದಾನವೂ ಕೂಡ

ವ್ಯರ್ಥವಾಗುವದಲ್ಲದೇ ಅದು ರಾಕ್ಷಸದಾನ ಎಂದು ಕರೆಯಲ್ಪಡುತ್ತದೆ. ಬಿರುನುಡಿಗಳಿಂದ ಬೈದು, ಧಿಕ್ಕರಿಸಿ ಕೊಟ್ಟ ದಾನವು ಅಥವಾ ದಾನ ಕೊಟ್ಟ ಬಳಿಕ ಧಿಕ್ಕರಿಸಿದರೆ ಅದು ಪೈಶಾಚದಾನ ಎನಿಸುವದು. ಈ ಮೂರು ದಾನಗಳಿಗೂ ಫಲವಿಲ್ಲ. ಹೀಗೆ ದಾನ ನಾಶವು ಮೂರು ವಿಧವಾಗಿದೆ.

**ನಾರದ :** ಮಹಾರಾಜನೇ, ಆಕಾಶವಾಣಿಯ ದ್ವಿಹೇತು ಮುಂತಾದ ವಿಶೇಷಣದ ಅರ್ಥವಿಶೇಷವನ್ನು ವಿವರಿಸಿದ್ದೇನೆ ಕೇಳಿದಿಯಷ್ಟೇ !

**ದ್ವಿಹೇತು ಷಡಧಿಷ್ಠಾನಂ ಷಡಂತಂ ಚ ದ್ವಿ ಪಾಕಯುಕ್ ।**
**ಚತುಷ್ಪ್ರಕಾರಂ ತ್ರಿವಿಧಂ ತ್ರಿನಾಶಂ ದಾನಮುಚ್ಯತೆ ॥**

ಈ ಪದ್ಯದಲ್ಲಿ ಇರುವ ದ್ವಿಹೇತು ಮೊದಲಾದ ಏಳು ವಿಶೇಷಣಗಳ ಅರ್ಥವನ್ನು, ಅವುಗಳಲ್ಲಿ ಅಂತರ್ಗರ್ಭಿತವಾದ ತತ್ವರಹಸ್ಯದೊಂದಿಗೆ ನಿನಗೆ ನಾನು ವಿವರಿಸಿ ಹೇಳಿದ್ದೇನೆ.'' ನಾರದರ ಈ ರೀತಿಯ ನಭೋವಾಣಿಯ ಶ್ಲೋಕಾರ್ಥದ ಸಮಂಜಸವಾದ ವ್ಯಾಖ್ಯಾನ ನಿರೂಪಣೆಯನ್ನು ಕೇಳಿ ಪರಮಾನಂದವಾಯಿತು ಆ ಧರ್ಮವರ್ಮದೊರೆಗೆ. ಆ ದೇವಮುನಿಯನ್ನು ಕುರಿತು ಅವನು ಸಂತಸದಿಂದ ನುಡಿದ.

**ಧರ್ಮವರ್ಮ : ಅದ್ಯ ಮೇ ಸಫಲಂ ಜನ್ಮ ಲಬ್ಧಂ ಮೇ ತಪಸಃ ಫಲಮ್ ।**
**ಅದ್ಯ ವೈ ಕೃತಕೃತ್ಯೋಽಸ್ಮಿ ಕೃತಃ ಕೀರ್ತಿಮತಾಂ ವರಃ ॥**

ಪೂಜ್ಯರೇ ! ಇಂದು ನನ್ನ ಜನ್ಮವು ಸಾರ್ಥಕ. ನನ್ನ ತಪಸ್ಸು ಇಂದು ಸಫಲ. ಇಂದು ನಾನು ಕೃತಕೃತ್ಯ. ನಿಮ್ಮ ಈ ಪದ್ಯಾರ್ಥದ ಯಥಾರ್ಥ ನಿರೂಪಣೆಯಿಂದ ನಾನು ಇಂದು ಕೀರ್ತಿವಂತರಲ್ಲಿ ಅಗ್ರಗಣ್ಯನಾದೆ.

**ಪಠಿತ್ವಾ ಸಕಲಂ ಜನ್ಮ ದುರಾಚಾರಸ್ಯ ತದ್ ವೃಥಾ ।**
**ಬಹುಕ್ಲೇಶಾಚ್ಚ ಲಬ್ಧಾ ಸ್ತ್ರೀ ಸಾ ವೃಥಾ ಪ್ರಿಯವಾದಿನೀ ॥**

ಅಧ್ಯಯನವನ್ನು ಮಾಡಿ ಪಂಡಿತನಾಗಿಯೂ ಸದಾಚಾರವಿಲ್ಲದಿದ್ದರೆ ಆ ಮಾನವನ ಜನ್ಮವೂ ವ್ಯರ್ಥ, ಬಹುಪ್ರಯತ್ನದಿಂದ ಮದುವೆ ಮಾಡಿಕೊಂಡು ಮನೆಗೆ ತಂದ ಹೆಣ್ಣು ಬಿರುನುಡಿಗಳನ್ನು ಆಡತೊಡಗಿದರೆ ಆ ಮದುವೆಯೂ ವ್ಯರ್ಥ. ಮಡದಿಯೂ ವ್ಯರ್ಥ.

**ಕ್ಲೇಶೇನ ಕೃತ್ವಾ ಕೂಪಂ ವಾ ಸ ಚ ಕ್ಷಾರೋದಕೋ ವೃಥಾ ।**
**ಬಹುಕ್ಲೇಶಾರ್ಜಿತಂ ನೀತ್ವಾ ವಿನಾ ಧರ್ಮಂ ವೃಥಾ ಜನುಃ ॥**

ಕಷ್ಟಪಟ್ಟು ತೋಡಿದ ಬಾವಿಯ ನೀರು ಉಪ್ಪಾದರೆ ಆ ಬಾವಿ ತೆಗೆಸಿದ್ದೇ ವ್ಯರ್ಥ. ಬಹಳ ಕಾಯಕ್ಲೇಶದಿಂದ, ಜನ್ಮಾಂತರದಲ್ಲಿ ತಪಸ್ಸು ಮಾಡಿ ಪಡೆದ ಈ ಮಾನವ ಜನ್ಮದಲ್ಲಿ ಧರ್ಮಾಚರಣವನ್ನು ಮಾಡದಿದ್ದರೆ ಅವನ ಜನ್ಮವೇ ವ್ಯರ್ಥ ಎಂದು ತಿಳಿಯಬೇಕು. ಇದರಂತೆ ನಾನು ಈ ಜನ್ಮದಲ್ಲಿ ಇಂದಿನವರೆಗೆ ಮಾಡಿದ ತಪೋನುಷ್ಠಾನವೆಲ್ಲವೂ ವ್ಯರ್ಥವಾಗುತ್ತಿತ್ತು. ಈಗ ತಾವು ಈ ಆಕಾಶವಾಣಿ ಪದ್ಯದ ರಹಸ್ಯಾರ್ಥವನ್ನು ನನಗೆ ವಿವರಿಸಿ ಹೇಳಿದ್ದನ್ನು ತಿಳಿದು ನನ್ನ ತಪಸ್ಸು ಸಫಲವಾಯಿತು.

ನನ್ನ ಜನ್ಮವು ಕೂಡ ಸಾರ್ಥಕವಾಯಿತು. ನಿಮಗೆ ನನ್ನ ಸಾಷ್ಟಾಂಗ ಪ್ರಣಾಮ. ತಮ್ಮಂಥ ಎಲ್ಲ ಬ್ರಹ್ಮಜ್ಞಾನಿಗಳಿಗೂ ಪುನಃ ಪುನಃ ನನ್ನ ವಂದನೆಗಳು. ಪೂರ್ವಕಾಲದಲ್ಲಿ ವಿಷ್ಣು ಸನಕಾದಿ ಮುನಿಗಳಿಗೆ ಹೇಳಿದ್ದನಂತೆ. ''ಬ್ರಹ್ಮಜ್ಞಾನಿಗಳಿಗೆ ಸಂತೋಷವಾಗುವಂತೆ ಭೋಜನಕ್ಕೆ ಹಾಕಿದರೆ ನನಗೆ ಆಗುವಷ್ಟು ತೃಪ್ತಿಯು ಯಜ್ಞದಲ್ಲಿ ತುಪ್ಪ ಸುರಿಯುವದರಿಂದ ನನಗೆ ಆಗುವದಿಲ್ಲ'' ಎಂದು. ಅಂಥ ಯೋಗ್ಯರಾದ ಬ್ರಹ್ಮಜ್ಞಾನಿಗಳಿಗೆ ನಾನು ಎಂದಾದರೂ ಏನಾದರೂ ಅಪ್ರಿಯವನ್ನು ಮಾಡಿದ್ದರೆ ಅದೆಲ್ಲವನ್ನು ತಾವು ದಯವಿಟ್ಟು ಕ್ಷಮಿಸಬೇಕು.

ಮಹರ್ಷಿಗಳೇ ! ತಾವು ಯಾರು ? ತಾವು ಸಾಧಾರಣ ವ್ಯಕ್ತಿಯಲ್ಲ. ದೇವವಾಣಿಯ ಗುಹ್ಯಾರ್ಥವನ್ನೇ ಪ್ರಕಾಶಪಡಿಸಿದ ತಮ್ಮ ದಿವ್ಯಜ್ಞಾನದಿಂದ ನನಗೆ ಪರಮೋಪಕಾರವಾಯಿತು. ತಮ್ಮ ಚರಣಗಳ ಮೇಲೆ ನನ್ನ ಶಿರವಿಟ್ಟು ಬೇಡಿಕೊಳ್ಳುತ್ತೇನೆ. ದಯೆದೋರಿ ನನಗೆ ನಿಮ್ಮ ಪರಿಚಯವನ್ನು ಮಾಡಿಕೊಡಬೇಕು.

**ನಾರದ :** ಧರ್ಮವರ್ಮನ ಈ ಬಿನ್ನಹವನ್ನು ಕೇಳಿ ನಾನು ನನ್ನ ಪರಿಚಯವನ್ನು ಅವನಿಗೆ ಈ ಪ್ರಕಾರ ಮಾಡಿಕೊಟ್ಟೆ. '' ಧರ್ಮಾತ್ಮನಾದ ದೊರೆಯೇ! ನಾನು ನಾರದ. ದೇವರ್ಷಿ. ಭೂಮಿಯ ಅಪೇಕ್ಷೆಯಿಂದ ನಾನು ಇಲ್ಲಿಗೆ ಬಂದಿದ್ದೇನೆ. ನೀನು ನಿನ್ನ ಪ್ರತಿಜ್ಞಾನುಸಾರವಾಗಿ ಆಕಾಶವಾಣಿಯ ಗೂಢವಾದ ಶ್ಲೋಕಾರ್ಥವನ್ನು ವಿವರಿಸಿದ. ನನಗೆ ಹಣವನ್ನು ಹಸುವನ್ನು ಹಾಗೂ ಭೂಮಿಯನ್ನು ಅರ್ಪಣ ಮಾಡು. ಮಹಾರಾಜನೇ ! ಯದ್ಯಪಿ ಈ ಭೂಮಿ ಹಾಗೂ ಧನ ಎಲ್ಲವೂ ದೇವತೆಗಳದೇ ಇರುತ್ತದೆ. ಆದರೂ ಯಾವ ಕಾಲದಲ್ಲಿ ಯಾವ ದೇಶಕ್ಕೆ ಯಾವನು ರಾಜನಿರುವನೋ ಆ ಕಾಲದಲ್ಲಿ ಅವನಿಂದಲೇ ಬೇಡಿ ಪಡೆಯಬೇಕು. ಆದ್ದರಿಂದ ದ್ರವ್ಯಸಿದ್ಧಿಯ ದೃಷ್ಟಿಯಿಂದ ನಾನು ನಿನ್ನಿಂದ ಸ್ವಲ್ಪ ಭೂಮಿಯನ್ನು ಪಡೆಯಲು ಅಪೇಕ್ಷಿಸುತ್ತೇನೆ.

**ರಾಜ :** ಪೂಜ್ಯರೇ ! ತಾವು ಸಾಕ್ಷಾತ್ ನಾರದಮಹರ್ಷಿಗಳೇ ಆಗಿದ್ದರೆ ನಾನು ಧನ್ಯ ಧನ್ಯ. ನಮ್ಮ ಕುಲವೇ ಪಾವನ. ತಮ್ಮಂಥ ದೇವರ್ಷಿಗಳು ಬಂದು ಆಕಾಶವಾಣಿಯ ಶ್ಲೋಕಾರ್ಥವನ್ನು ವಿವರಿಸಿ ನನ್ನ ತಪಸ್ಸನ್ನು, ಕುಲವನ್ನು , ಜೀವನವನ್ನು ಪಾವನ ಮಾಡಿ ಉದ್ಧಾರಗೈದಿರುವಿರಿ. ತಮಗೆ ಕೇವಲ ನಾನು ಪ್ರತಿಜ್ಞೆ ಮಾಡಿದ ಹಣ ಅಥವಾ ಸ್ವಲ್ಪ ಭೂಮಿ ಮಾತ್ರವಲ್ಲ. ನನ್ನ ಸಕಲ ಸಾಮ್ರಾಜ್ಯವನ್ನೇ ತಮ್ಮ ಅಡಿದಾವರೆಗಳಲ್ಲಿ ಅರ್ಪಿಸಲು ಸಿದ್ಧ ಈ ಧರ್ಮವರ್ಮ.

**ನಾರದ :** ಅರ್ಜುನ, ಧರ್ಮವರ್ಮನ ಈ ಉದಾರ ವಚನವನ್ನು ಕೇಳಿ ನಾನು ಅವನಿಗೆ ಹೇಳಿದೆ - ''ರಾಜರ್ಷಿಯೇ, ಈ ದ್ರವ್ಯವೆಲ್ಲವೂ ನಿನ್ನಲ್ಲಿಯೇ ಇರಲಿ. ನನಗೆ ಬೇಕು ಎನಿಸಿದಾಗ ನಿನ್ನಿಂದ ಪಡೆದುಕೊಳ್ಳುತ್ತೇನೆ.'' ಹೀಗೆ ಹೇಳಿ ನಾನು ರೈವತಕ ಪರ್ವತಕ್ಕೆ ನಡೆದೆ. ಬಹುರಮಣೀಯ ಆ ರೈವತಕದ ಶೈಲಶ್ರೇಣಿ. ಅಲ್ಲಿ ಕುಳಿತು ಘೋರ ತಪವನ್ನು ಆಚರಿಸಿ ದೇವರನ್ನು ಕಂಡವರು ಎಷ್ಟೋ ! ಸಿದ್ಧಿ ಪಡೆದವರೆಷ್ಟೋ! ಆ ರೈವತಕ ಗಿರಿಯ ರಮ್ಯವಾದ ಶೃಂಗಾಂಗಣದಲ್ಲಿ ಒಂದು ಬಂಡೆಗಲ್ಲ ಮೇಲೆ

ನಾನು ಕುಳಿತುಕೊಂಡೆ. ಮಲಯ ಮಾರುತದ ಮಂದ ಸ್ಪಂದನವು ಸುಗಂಧವನ್ನು ತೀಡುತ್ತಿತ್ತು. ಆ ತಂಗಾಳಿಯ ಹಿತ ಸ್ಪರ್ಶದಿಂದ ಪುಳಕಿತವಾಯಿತು ನನ್ನ ದೇಹ. ನನ್ನ ಮನಸ್ಸಿನಲ್ಲಿ ಹೊಸ ವಿಚಾರ ಮೂಡಿತು. ನಾನು ಹೀಗೆ ಯೋಚಿಸಿದೆ - ''ನನಗೆ ಬೇಕಾದ ಸ್ಥಾನವನ್ನೇನೋ ನಾನು ಪಡೆದದ್ದಾಯಿತು. ನನ್ನ ಅಪೇಕ್ಷೆಯಂತೆ ಅತ್ಯಂತ ದುರ್ಲಭವಾದ ಭೂಭಾಗವು ದಾನಕೊಡಲಿಕ್ಕಾಗಿ ನನಗೆ ಈಗ ದೊರಕಿದೆ. ನನ್ನ ಅಪರಿಗ್ರಹ ವ್ರತಕ್ಕೆ ಇದರಿಂದ ಯಾವ ಲೋಪವೂ ಇಲ್ಲ. ಆದರೆ ಇಂಥ ಈ ಪರಿಶುದ್ಧವಾದ ದಾನವನ್ನು ನಾನು ಯಾರಿಗೆ ಕೊಡಬೇಕು? ಇಂಥ ಉತ್ತಮ ದಾನವನ್ನು ಸ್ವೀಕರಿಸಲು ಒಳ್ಳೆಯ ಸತ್ಪಾತ್ರವನ್ನು ನಾನೀಗ ಹುಡುಕಬೇಕು. ಬ್ರಾಹ್ಮಣರಲ್ಲಿಯೂ ಕೂಡ ಒಳ್ಳೆಯ ದಾನಕ್ಕೆ ಅರ್ಹರಾದ ವ್ಯಕ್ತಿಯನ್ನು ಬಹು ಪ್ರಯತ್ನದಿಂದ ಹುಡುಕಬೇಕಾಗುವದು. ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವರೆಲ್ಲರೂ ಉತ್ತಮರಾಗಿ ಇರುವುದಿಲ್ಲ. ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದರೂ ಒಳ್ಳೆಯ ಆಚರಣೆ ಇಲ್ಲದಿದ್ದರೆ ಅವನು ಅಪಾತ್ರನೇ ಸರಿ. ಚುಕ್ಕಾಣಿ ಇಲ್ಲದ ನಾವಿನಂತೆ ಆಚಾರವಿಲ್ಲದ ಬ್ರಾಹ್ಮಣ ಸಂಸಾರ ಸಾಗರದಲ್ಲಿ ತಾನೇ ಮುಳುಗುವಾಗ ಬೇರೊಬ್ಬರನ್ನು ಹೇಗೆ ಉದ್ಧಾರ ಮಾಡುವನು ?

ಶಾಸ್ತ್ರಗಳ ಅಧ್ಯಯನ ಅಧ್ಯಾಪನಗಳಿಂದ ದಿವ್ಯ ಜ್ಞಾನವನ್ನು ಸಂಪಾದಿಸದಿರುವ ಬ್ರಾಹ್ಮಣನು ಹುಲ್ಲುಕಡ್ಡಿಯ ಬೆಂಕಿಯಂತೆ ತೇಜೋಹೀನನಿರುತ್ತಾನೆ. ಜ್ಞಾನದ ಬೆಳಕಿಲ್ಲದೆ ನಿಸ್ತೇಜ ಬ್ರಾಹ್ಮಣನಿಗೆ ಕೊಟ್ಟ ದಾನವು ಬೂದಿಯಲ್ಲಿ ಹಾಕಿದ ಆಹುತಿಯಂತೆ ವ್ಯರ್ಥವೇ ಸರಿ. ಮರುಭೂಮಿಯಲ್ಲಿ ಬಿತ್ತಿದ ಬೀಜದಂತೆ ಅಪಾತ್ರದಲ್ಲಿ ನೀಡಿದ ದಾನವು ನಿಷ್ಫಲವಾಗುವದು. ವಿದ್ಯೆಯಿಲ್ಲದ ಬ್ರಾಹ್ಮಣನು ತೆಗೆದುಕೊಂಡ ದಾನವು ಅವನ ಅಂತಃಸತ್ವದ ನಾಶಕ್ಕೆ ಕಾರಣವಾಗುತ್ತದೆ. ಜ್ಞಾನಶೂನ್ಯನು ತೆಗೆದುಕೊಂಡ ಗೋದಾನವು ಅವನ ಭೋಗಗಳನ್ನೂ, ಬಂಗಾರವು ಅವನ ಶರೀರವನ್ನೂ, ಕುದುರೆಯು ಕಣ್ಣನ್ನೂ, ವಸ್ತ್ರವು ಸ್ತ್ರೀ ಸುಖವನ್ನೂ, ತುಪ್ಪವು ಅವನ ತೇಜಸ್ಸನ್ನೂ, ಎಣ್ಣೆಯು ಅವನ ಸಂತಾನವನ್ನೂ ನಾಶ ಮಾಡುತ್ತವೆ. ಆದುದರಿಂದ ವಿದ್ಯೆಯಿಲ್ಲದ ಬ್ರಾಹ್ಮಣನು ದಾನ ತೆಗೆದುಕೊಂಡರೆ ಆಳ ಕೆಸರಿನಲ್ಲಿ ಸಿಕ್ಕಿ ಹಾಕಿಕೊಂಡ ಹಸುವಿನಂತೆ ಕಷ್ಟಪಡಬೇಕಾಗುವದು. ಆದ್ದರಿಂದ ಇಂಥ ಮೂರ್ಖರು, ವಿದ್ಯೆಯಿಲ್ಲದವರು, ಆಚರಣರಹಿತರು, ತಿಳುವಳಿಕೆ ಇಲ್ಲದೇ ದಾನವನ್ನು ಸ್ವೀಕರಿಸಲು ಮುಂದೆ ಬಂದರೂ ಅವರಿಗೆ ದಾನ ನೀಡಬಾರದು. ಮೇಲೆ ಮೂರ್ಖನಂತಿದ್ದರೂ ಅಂತರಂಗದಲ್ಲಿ ತಪಸ್ಸಾಧನೆಗೈದ ಮಹಾ ಪುರುಷರಿಗೆ ದಾನನೀಡಬೇಕು. ಸದ್ದುಗದ್ದಲವಿಲ್ಲದೇ ಸ್ವಾಧ್ಯಾಯ ಪಾಠಪ್ರವಚನವನ್ನು ಮಾಡುವ ಶಾಂತಮನಸ್ಸಿನ ಸತ್ಪುರುಷರಿಗೆ ಕೊಟ್ಟ ದಾನವು ಸಾರ್ಥಕವಾಗುವದು. ಕಾಶೀ, ಪ್ರಯಾಗ, ಮುಂತಾದ ದಿವ್ಯಕ್ಷೇತ್ರಗಳಲ್ಲಿ, ಉತ್ತಮ ಕಾಲದಲ್ಲಿ, ಜ್ಞಾನ, ಕರ್ಮ, ವೈರಾಗ್ಯವುಳ್ಳ ಯೋಗ್ಯ ಬ್ರಾಹ್ಮಣರೂಪ ಸತ್ಪಾತ್ರದಲ್ಲಿ ಶ್ರದ್ಧೆಯಿಂದ ನೀಡಿದ ದಾನವೇ ಪರಿಪೂರ್ಣ ದಾನ ಎನಿಸುವದು.

ಕೇವಲ ಜ್ಞಾನ ಅಥವಾ ತಪಸ್ಸಿನಿಂದ ಮಾನವನು ದಾನಕ್ಕೆ ಸತ್ಪಾತ್ರ ಎನಿಸುವದಿಲ್ಲ. ಸದಾಚಾರವಿದ್ದರೆ ಮಾತ್ರ ಸತ್ಪಾತ್ರ ಎನಿಸುವನು. ಸದಾಚಾರ, ಒಳ್ಳೆಯ ಜ್ಞಾನ ಹಾಗೂ ತಪಸ್ಸು ಮೂರು ಕೂಡಿದರೆ ಮಾತ್ರ ಸತ್ಪಾತ್ರವಾಗುವದು. ಇಂಥ ಸತ್ಪಾತ್ರವನ್ನು ನಾನು ಈಗ ಹುಡುಕಿ ತೆಗೆಯಬೇಕು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತನೇ ಅಧ್ಯಾಯ ಮುಗಿದುದು.**

## ನಾರದರ ಹನ್ನೆರಡು ಪ್ರಶ್ನೆ

ಅಧ್ಯಾಯ -21

**ನಾರದ :** ಅರ್ಜುನನೇ, ನನ್ನ ದಾನಕ್ಕೆ ಯೋಗ್ಯವಾದ ಸತ್ಪಾತ್ರವನ್ನು ಹುಡುಕುವ ಉದ್ದೇಶದಿಂದ ನಾನು ಭೂಮಂಡಲವನ್ನೆಲ್ಲ ಸುತ್ತಾಡಿ ದೇಶ ದೇಶಗಳನ್ನೆಲ್ಲ ಸಂಚರಿಸಿದೆ. ಒಳ್ಳೆ ಜ್ಞಾನ, ಶಾಸ್ತ್ರ ಶುದ್ಧ ಸದಾಚಾರ ಎಂಬ ಎರಡು ಕಣ್ಣುಳ್ಳ ಸದಾಚಾರಿ ಬ್ರಾಹ್ಮಣನ್ನು ನಾನು ಹುಡುಕಬೇಕಾಗಿತ್ತು. ನಾನು ಹೋದಲ್ಲೆಲ್ಲ ಇಂಥ ಯೋಗ್ಯ ಪಾತ್ರವನ್ನು ಕಂಡುಹಿಡಿಯಲಿಕ್ಕಾಗಿ ಬ್ರಾಹ್ಮಣ ಪರೀಕ್ಷೆಯನ್ನೇ ನಡೆಸಬೇಕಾಗುತ್ತಿತ್ತು. ಈ ಯೋಗ್ಯತಾ ಪರೀಕ್ಷೆಗಾಗಿ ನಾನು ಒಂದು ಪ್ರಶ್ನೆ ಪತ್ರಿಕೆಯನ್ನೇ ತಯಾರಿಸಿದೆ. ಈ ಪ್ರಶ್ನಾವಳಿಗಳಿಗೆ ಉತ್ತರ ಕೊಟ್ಟವರಿಗೆ ಮಾತ್ರ ದಾನವನ್ನು ಕೊಡಬೇಕು ಎಂದು ಸಂಕಲ್ಪಿಸಿ ಪ್ರತಿಯೊಂದು ಮುನಿಮಹರ್ಷಿಗಳಿರುವ ಆಶ್ರಮಗಳಿಗೆ ನಾನು ಹೋದೆನು. ಅಲ್ಲಿ ನನ್ನ ಈ ಶ್ಲೋಕ ಬದ್ಧವಾದ ಪ್ರಶ್ನಾವಳಿಗಳನ್ನು ಹೇಳುತ್ತಿದ್ದೆ.

**ಮಾತೃಕಾಃ ಕೋ ವಿಜಾನಾತಿ ಕತಿಧಾ ಕೀದೃಶಾಕ್ಷರಾಃ ।**
**ಪಂಚ ಪಂಚಾದ್ಭುತಂ ಗೇಹಂ ಕೋ ವಿಜಾನಾತಿ ವಾ ದ್ವಿಜಃ ॥**

**ಬಹುರೂಪಾಂ ಸ್ತ್ರಿಯಂ ಕರ್ತುಮೇಕರೂಪಾಂ ಚ ವೇತ್ತಿ ಕಃ ।**
**ಕೋ ವಾ ಚಿತ್ರಕಥಂ ಬಂಧಂ ವೇತ್ತಿ ಸಂಸಾರ ಗೋಚರಃ ॥**

**ಕೋ ವಾರ್ಣವಮಹಾಗ್ರಾಹಂ ವೇತ್ತಿ ವಿದ್ಯಾಪರಾಯಣಃ ।**
**ಕೊ ವಾಽ ಷ್ಟವಿಧಂ ಬ್ರಾಹ್ಮಣಂ ವೇತ್ತಿ ಬ್ರಾಹ್ಮಣಸತ್ತಮಃ ॥**

**ಯುಗಾನಾಂ ಚ ಚತುರ್ಣಾಂ ವಾ ಕೋ ಮೂಲ ದಿವಸಾನ್ ವದೇತ್,।**
**ಚತುರ್ದಶಮನೂನಾಂ ವಾ ಮೂಲವಾರಂ ಚ ವೇತ್ತಿ ಕಃ ॥**

**ಕಸ್ಮಿಂಶ್ಚೈವ ದಿನೇ ಪ್ರಾಪ ಪೂರ್ವಂ ವಾ ಭಾಸ್ಕರೋ ರಥಮ್,।**
**ಉದ್ವೇಜಯತಿ ಭೂತಾನಿ ಕೃಷ್ಣಾಹಿರಿವ ವೇತ್ತಿ ಕಃ ॥**

**ಕೋ ನ್ವಸ್ಮಿನ್ ಘೋರ ಸಂಸಾರೇ ದಕ್ಷದಕ್ಷತಮೋ ಭವೇತ್ ।**
**ಪಂಥಾನಾವಪಿ ದ್ವೌ ಕಶ್ಚಿದ್ವೇತ್ತಿ ವಕ್ತಿ ಚ ಬ್ರಾಹ್ಮಣಃ ॥**

**ಇತಿ ಮೇ ದ್ವಾದಶ ಪ್ರಶ್ನಾನ್ ಯೇ ವಿದುರ್ಬ್ರಾಹ್ಮಣೋತ್ತಮಾಃ ।**
**ತೇ ಮೇ ಪೂಜ್ಯತಮಾಸ್ತೇಷಾಮಹಮಾರಾಧಕಶ್ಚಿರಮ್ ॥**

ಪ್ರಶ್ನೆ 1 - ಮಾತೃಕೆಗಳನ್ನು ವಿಶೇಷರೂಪದಿಂದ ತಿಳಿದವರು ಯಾರು? ಆ ಮಾತೃಕೆಗಳು ಎಷ್ಟು ಪ್ರಕಾರದ್ದಿವೆ? ಎಷ್ಟು ಅಕ್ಷರವುಳ್ಳದ್ದಿವೆ !

ಪ್ರಶ್ನೆ 2 - ಯಾವ ದ್ವಿಜನು ಐವತ್ತು ವಸ್ತುಗಳಿಂದ ನಿರ್ಮಿತವಾದ ಮನೆಯನ್ನು ಚೆನ್ನಾಗಿ ತಿಳಿದಿದ್ದಾನೆ?

ಪ್ರಶ್ನೆ 3 - ಅನೇಕ ರೂಪವುಳ್ಳ ಸ್ತ್ರೀಯನ್ನು ಏಕರೂಪಳನ್ನಾಗಿ ಮಾರ್ಪಡಿಸುವ ಕಲೆ ಯಾವನಿಗೆ ಅವಗತವಾಗಿದೆ ?

ಪ್ರಶ್ನೆ 4 - ಈ ಸಂಸಾರದಲ್ಲಿ ಯಾವ ಮಾನವನು ವಿಚಿತ್ರ ಕಥೆಯುಳ್ಳ ವಾಕ್ಯ ರಚನೆಯನ್ನು ಹೆಣೆಯುವಲ್ಲಿ ಬಲ್ಲಿದನಾಗಿದ್ದಾನೆ?

ಪ್ರಶ್ನೆ 5 - ಸ್ವಾಧ್ಯಾಯ ಶೀಲನಾದ ಯಾವ ಬ್ರಾಹ್ಮಣನು ಸಮುದ್ರದಲ್ಲಿರುವ ದೊಡ್ಡ ಮೊಸಳೆಯನ್ನು ತಿಳಿದಿದ್ದಾನೆ ?

ಪ್ರಶ್ನೆ 6 - ಬ್ರಾಹ್ಮಣತ್ವದ ಎಂಟು ಬಗೆಗಳನ್ನು ಅರಿತ ಶ್ರೇಷ್ಠ ಬ್ರಾಹ್ಮಣನು ಯಾರು?

ಪ್ರಶ್ನೆ 7 - ನಾಲ್ಕೂ ಯುಗಗಳ ಮೂಲ ದಿನಗಳನ್ನು ತಿಳಿದು ಹೇಳುವ ಶಕ್ತಿ ಯಾರಿಗಿದೆ ?

ಪ್ರಶ್ನೆ 8 - ಹದಿನಾಲ್ಕು ಮನುಗಳ ಮೊದಲನೆಯ ದಿನದ ಜ್ಞಾನವು ಯಾವನಿಗಿದೆ?

ಪ್ರಶ್ನೆ 9 - ಸೂರ್ಯನಾರಾಯಣನು ತನ್ನ ರಥವನ್ನು ಆರೋಹಣ ಮಾಡಿದ ಮೊಟ್ಟ ಮೊದಲನೆಯ ದಿನ ಯಾವುದು?

ಪ್ರಶ್ನೆ 10 - ಕೃಷ್ಣ ಸರ್ಪಗಳಂತೆ ಎಲ್ಲ ಪ್ರಾಣಿಗಳನ್ನು ಭ್ರಾಂತಿ ಉದ್ವೇಗಗಳಲ್ಲಿ ಹಾಕುವವರು ಯಾರು ?

ಪ್ರಶ್ನೆ 11 - ಈ ಭಯಂಕರ ಸಂಸಾರದಲ್ಲಿ ಎಲ್ಲ ದಕ್ಷ ಮಾನವರಿಗಿಂತ ಅತ್ಯಂತ ದಕ್ಷತಮ ವ್ಯಕ್ತಿಯೆಂದು ಯಾವನು ಮನ್ನಿಸಲ್ಪಟ್ಟಿದ್ದಾನೆ ?

ಪ್ರಶ್ನೆ 12 - ಯಾವ ಬ್ರಾಹ್ಮಣನು ಎರಡೂ ಮಾರ್ಗಗಳನ್ನು ತಿಳಿದಿದ್ದಾನೆ ಹಾಗೂ ಹೇಳಲು ಸಮರ್ಥನಿದ್ದಾನೆ ?

ಈ ನನ್ನ ಹನ್ನೆರಡು ಪ್ರಶ್ನೆ ಮಾಲಿಕೆಗೆ ಸರಿಯಾಗಿ ಉತ್ತರ ಕೊಡುವ ಜ್ಞಾನಿಗಳು ನನಗೆ ಪೂಜ್ಯರು. ನಾನು ಚಿರಕಾಲದವರೆಗೆ ಅವರ ಸೇವಕನಾಗಿರುತ್ತೇನೆ.

**ಅರ್ಜುನ** ! ಈ ಪ್ರಶ್ನೆ ಪಟ್ಟಿಯನ್ನು ಕೈಯಲ್ಲಿ ಹಿಡಿದುಕೊಂಡು ಮುಖದಿಂದ ಪದ್ಯಗಳನ್ನು ಹಾಡಿನ ರೀತಿಯಲ್ಲಿ ಹೇಳುತ್ತ ನಾನು ಇಡೀ ಭೂಮಂಡಲವನ್ನೆಲ್ಲ ಸುತ್ತಿದೆನು. ನನಗೆ ಭೆಟ್ಟಿಯಾದ ಬ್ರಾಹ್ಮಣರಿಗೆಲ್ಲರಿಗೂ ಈ ಪ್ರಶ್ನೆಪತ್ರಿಕೆಯನ್ನು ತೋರಿಸಿದೆ. ಅದನ್ನು ಕೇಳಿದವರೆಲ್ಲರೂ ಕೈ ಮುಗಿದು ''ಪುಣ್ಯಾತ್ಮ ! ನಿಮ್ಮ ಈ ಪ್ರಶ್ನೆಗಳು ಕಠಿಣವಾಗಿವೆ. ನಮಗಂತೂ ಇವುಗಳಿಗೆ ಯಾವ ಉತ್ತರವೂ ತೋರುವುದಿಲ್ಲ.

ನಿಮಗೆ ನಮಸ್ಕಾರ.'' ಎಂದು ಹೇಳಿ ನನ್ನಿಂದ ದೂರ ಸರಿಯುತ್ತಿದ್ದರು. ಸಮಗ್ರ ಭೂಮಂಡಲವನ್ನೆಲ್ಲ ನಾನು ಪ್ರದಕ್ಷಿಣೆ ಮಾಡಿದೆ. ಉತ್ತರ ಹೇಳುವ ಧೀರ ನನಗೆ ಎಲ್ಲಿಯೂ ದೊರಕಲಿಲ್ಲ. ಮರಳಿ ನಾನು ಹಿಮಾಲಯ ಶಿಖರ ದೇಶದ ಒಂದು ಶಿಲೆಯ ಮೇಲೆ ಕುಳಿತುಕೊಂಡೆ ವಿಚಾರಿಸಿದೆ. ''ಯಾರಿಂದಲೂ ಸರಿಯಾದ ಉತ್ತರ ಬರಲಿಲ್ಲ. ಈಗ ನಾನು ಏನು ಮಾಡಲಿ? ಈಗ ನಾನು ಈ ವರೆಗೆ ಹೋಗದಿರುವ ಒಂದೇ ಒಂದು ಊರು ಎಂದರೆ ಕಲಾಪ ಗ್ರಾಮ. ಅಲ್ಲಿ ಮೂರ್ತಿಮಂತ ತಪೋಧರ್ಮದಂತಿರುವ ಬ್ರಾಹ್ಮಣರ ಒಂದು ದೊಡ್ಡ ಗುಂಪೇ ಇದೆಯಂತೆ. ಸರ್ವವೇದವೇದಾಂತ ಶಾಸ್ತ್ರಗಳಲ್ಲಿ ಪರಿಣಿತಪ್ರಜ್ಞರಾದ ಎಂಬತ್ತು ಸಾವಿರ ಬ್ರಾಹ್ಮಣರು ಆ ಕಲಾಪ ಗ್ರಾಮದಲ್ಲಿ ಇರುವರು ಎಂದು ಕೇಳಿದ್ದೇನೆ. ಅಲ್ಲಿಗೆ ಹೋಗಿ ಕೊನೆಯದಾಗಿ ಪ್ರಯತ್ನ ಮಾಡಿಬಿಡುತ್ತೇನೆ.'' ಹೀಗೆ ಮನದಲ್ಲಿ ನಿರ್ಧರಿಸಿದೆ. ಆಕಾಶಮಾರ್ಗದಿಂದ ನಾನು ಆ ಕಲಾಪಗ್ರಾಮಕ್ಕೆ ಹೋಗಿ ತಲುಪಿದೆ. ಪುಣ್ಯಸ್ಥಳದಲ್ಲಿ ನಿರ್ಮಿಸಿದ ಆ ಗ್ರಾಮವು ನೂರು ಯೋಜನೆಗಳವರೆಗೆ ಬಿತ್ತರಗೊಂಡಿತ್ತು. ಬಗೆ ಬಗೆಯ ಹೆಮ್ಮರಗಳು ಅಲ್ಲಿಯ ನೆಲದ ತುಂಬ ತಮ್ಮ ನೆರಳನ್ನು ಹಾಸಿದ್ದವು. ಅಗ್ನಿಹೋತ್ರದ ಹೋಮಕುಂಡದಿಂದ ಹೊರಟ ಧೂಮಸ್ತೋಮದಿಂದ ದಿಜ್ ಮಂಡಲವೆಲ್ಲ ಪವಿತ್ರಿತ. ಪುನಃ ಹೊಸ ಸೃಷ್ಟಿ ಆರಂಭಕಾಲದಲ್ಲಿ ವಂಶಾಭಿವೃದ್ಧಿಗಾಗಿ ಸೂರ್ಯವಂಶ, ಚಂದ್ರವಂಶ, ಬ್ರಾಹ್ಮಣವಂಶದ ಬೀಜಗಳನ್ನು ಅಲ್ಲಿ ಸುರಕ್ಷಿತವಾಗಿ ಕಾಯ್ದಿರಿಸಲಾಗಿತ್ತು. ನಾನು ಅಲ್ಲಿಗೆ ಹೋಗಿ ದ್ವಿಜರ ಆಶ್ರಮದಲ್ಲಿ ಪ್ರವೇಶ ಮಾಡಿದೆ. ಅಲ್ಲಿರುವ ತೇಜಸ್ವಿಗಳಾದ ತಪಸ್ವೀ ಬ್ರಾಹ್ಮಣರ ಜೊತೆಗೆ ಅನೇಕ ವಿಷಯಗಳ ಬಗ್ಗೆ ಮಾತನಾಡಿದೆ. ಮತ್ತು ಅಲ್ಲಿ ನಿಂತು ಕೈ ಎತ್ತಿ ಘೋಷಣೆ ಮಾಡಿದೆ. ನನ್ನ ಹನ್ನೆರಡು ಪ್ರಶ್ನೆಗಳನ್ನು ಅವರ ಮುಂದೆ ಇಟ್ಟು ಉತ್ತರವೀಯಬೇಕೆಂದು ಕೇಳಿಕೊಂಡೆ. ಪುಂಖಾನುಪುಂಖವಾದ ನನ್ನ ಆ ಪ್ರಶ್ನಾವಳಿಗಳನ್ನು ಕೇಳಿ ಆ ವಿದ್ವಾನ್ ಬ್ರಾಹ್ಮಣರು ನಾ ಮುಂದೆ ತಾ ಮುಂದೆ ಎಂದು ಉತ್ತರ ಹೇಳಲು ಉತ್ಸಾಹದಿಂದ ಮೇಲಾಟ ನಡೆಸಿದರು. ಅವರಿಗೆ ನನ್ನ ಪ್ರಶ್ನೆಗಳೆಂದರೆ ಒಂದು ಆಟವಾಗಿತ್ತು. ಅವರು ನಗುತ್ತ ನನ್ನ ಕಡೆ ತಿರುಗಿ - 'ಮುನಿವರ, ನೀವು ಮಾಡಿದ ಈ ಹನ್ನೆರಡೂ ಪ್ರಶ್ನೆಗಳು ಹುಡು ಗಾಟಿಕೆಯವಾಗಿವೆ. ಇಂಥ ಚಿಕ್ಕ ಪುಟ್ಟ ಪ್ರಶ್ನೆಗಳಿಗೆ ಉತ್ತರ ಕೊಡಲು ನಮ್ಮಂಥ ವಿದ್ವಾಂಸರು ಏಕೆ ? ಈ ಆಶ್ರಮದಲ್ಲಿ ಎಲ್ಲರಿಗಿಂತ ಚಿಕ್ಕ ವಯಸ್ಸಿನ, ಜ್ಞಾನ ಶೂನ್ಯನೆಂದು ತಿಳಿದ ಬಾಲಕ ಯಾವನಾದರೂ ನಿಮ್ಮ ಈ ಎಲ್ಲ ಪ್ರಶ್ನೆಗಳಿಗೂ ಸಮಂಜಸವಾದ ಉತ್ತರ ನೀಡಬಲ್ಲ. ನೀವು ಇಲ್ಲಿ ಬೇಕಾದ ಚಿಕ್ಕ ಬಾಲಕನನ್ನು ಕರೆದು ಕೇಳಬಹುದು.'' ಎಂದು ಹೇಳಿದರು.

ಅಲ್ಲಿಯ ಜನರ ಮಾತನ್ನು ಕೇಳಿ ನನಗೆ ಅತೀವ ಆಶ್ಚರ್ಯವಾಯಿತು. ಅಲ್ಲಿ ಇದ್ದವರಲ್ಲಿಯೇ ಅತ್ಯಂತ ಚಿಕ್ಕವನಾದ ಓರ್ವ, ಅಬೋಧ, ಮುಗ್ಧನಂತಿದ್ದ ಬಾಲಕನನ್ನು ಕರೆದು ಕೇಳಿದೆ - ''ಮಗು, ಈ ನನ್ನ ಪ್ರಶ್ನೆಗಳಿಗೆ ಉತ್ತರ ಕೊಡು.'' ಆ ಬ್ರಾಹ್ಮಣ ಬಾಲಕನ ಹೆಸರು ಸುತನು. ಆ ಕೂಸೇ ನನ್ನ ಪ್ರಶ್ನೆಗಳಿಗೆಲ್ಲ ಧೈರ್ಯದಿಂದ, ನಮ್ರ ತನದಿಂದ ಉತ್ತರವೀಯುತ್ತ ಹೇಳಿತು.

'ಓಂಕಾರಃ ಪ್ರಥಮಸ್ತಸ್ಯ ಚತುರ್ದಶ ಸ್ವರಾಸ್ತಥಾ
ವರ್ಣಾಶ್ಚೈವ ತ್ರಯಸ್ತ್ರಿಂಶದನುಸ್ವಾರಾಸ್ತಥೈವ ಚ ।
ವಿಸರ್ಜನೀಯಶ್ಚ ಪರೋ ಜಿಹ್ವಾಮೂಲೀಯ ಏವ ಚ
ಉಪಧ್ಮಾನೀಯ ಏವಾಪಿ ದ್ವಿಪಂಚಾಶದಮೀ ಸ್ಮೃತಾಃ ॥

ಮಾತೃಕೆಗಳಲ್ಲಿ ಐವತ್ತೆರಡು ಅಕ್ಷರಗಳು ಇರುತ್ತವೆ. ಅವುಗಳಲ್ಲಿ ಮೊದಲನೇ ಅಕ್ಷರವೇ ಓಂಕಾರ. ಇದಲ್ಲದೆ ಹದಿನಾಲ್ಕು ಸ್ವರ, ಮೂವತ್ತಮೂರು ವ್ಯಂಜನ, ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ, ಎಲ್ಲ ಸೇರಿ ೫೨ ಮಾತೃಕೆಗಳು ಎಂದು ತಿಳಿಯಲ್ಪಡುತ್ತವೆ. ದ್ವಿಜವರನೇ ! ಈಗ ನಾನು ನಿನಗೆ ಅಕ್ಷರಗಳ ಸಂಖ್ಯೆಯನ್ನು ಹೇಳಿದೆನು. ಈಗ ಇವುಗಳ ಅರ್ಥವನ್ನು ಹೇಳುತ್ತೇನೆ ಕೇಳು. ಅದಕ್ಕಿಂತ ಮೊದಲು ನಿನಗೆ ಪ್ರಾಚೀನ ಇತಿಹಾಸವನ್ನು ತಿಳಿಸುತ್ತೇನೆ.

ಬಹಳ ಹಿಂದಿನ ಕಾಲದ ಘಟನೆ. ಮಿಥಿಲಾನಗರದಲ್ಲಿ ಕೌಥುಮ ಎಂಬ ಒಬ್ಬ ಬ್ರಾಹ್ಮಣ. ಅವನು ಆ ಕಾಲದಲ್ಲಿ ಭೂಮಂಡಲದಲ್ಲಿ ಪ್ರಚಲಿತವಿದ್ದ ಎಲ್ಲ ವಿದ್ಯೆಗಳನ್ನೂ ಓದಿ ತಿಳಿದುಕೊಂಡಿದ್ದ. ಅವನು ಮೂವತ್ತೊಂದು ಸಾವಿರ ವರ್ಷಗಳವರೆಗೆ ಕೇವಲ ಅಧ್ಯಯನದಲ್ಲಿಯೇ ತನ್ನ ಜೀವನವನ್ನು ವ್ಯಯಿಸಿದ. ಒಂದು ಕ್ಷಣವನ್ನೂ ವ್ಯರ್ಥ ಕಳೆಯುತ್ತಿರಲಿಲ್ಲ ಆ ಜ್ಞಾನ ಪಿಪಾಸು ಬ್ರಾಹ್ಮಣ. ಹೀಗೆ ಜ್ಞಾತವ್ಯ ವಿಷಯಗಳೆಲ್ಲವನ್ನೂ ತಿಳಿದು, ಮತ್ತು ಅಧ್ಯೇತವ್ಯ ವಿದ್ಯೆಗಳನ್ನೆಲ್ಲ ಚೆನ್ನಾಗಿ ಅಧ್ಯಯನ ಮಾಡಿ ಪ್ರಚಂಡ ಪಾಂಡಿತ್ಯವನ್ನು ಸಂಪಾದಿಸಿದ, ಅನಂತರ ಗ್ರಹ ಸ್ಥಾಶ್ರತಮಿಯಾದ ಆ ಜ್ಞಾನಲಾಲಸಿ. ಅವನಿಗೆ ಒಬ್ಬ ಮಗ ಹುಟ್ಟಿದ, ಅವನು ಕಲ್ಲಿನಂತೆ ಜಡಬುದ್ಧಿಯವನಾಗಿದ್ದ. ಅವನು ಕೇವಲ ಮಾತೃಕೆಗಳನ್ನು ಮಾತ್ರ ಕಲಿತ. ಈ ೫೨ ಅಕ್ಷರಗಳ ಹೊರತು ಅವನಿಗೆ ಯಾವುದೂ ನೆನಪಿರುತ್ತಿರಲಿಲ್ಲ. ಮಗನ ಈ ಜಾಡ್ಯವನ್ನು ಕಂಡು ದೊಡ್ಡ ಚಿಂತೆ ಆ ಜ್ಞಾನಿ ತಂದೆಗೆ. ಅತ್ಯಂತ ಖಿನ್ನನಾಗಿ ಅವನು ತನ್ನ ಮಗನನ್ನು ಪ್ರೀತಿಯಿಂದ ಮೈದಡವಿ ಹೇಳುತ್ತಿದ್ದ - ''ಮಗು ಓದು, ಏನನ್ನಾದರೂ ಕಲಿ. ನಿನಗೆ ಬೇಕಾದ ಸಿಹಿ ತಿಂಡಿ ಮಿಠಾಯಿಗಳನ್ನು ನಾನು ಕೊಡುವೆನು. ನೀನು ಓದದೇ ಇದ್ದರೆ ನಿನಗಾಗಿ ತಂದ ಈ ಮಿಠಾಯಿಗಳನ್ನೆಲ್ಲ ಬೇರೆಯವರಿಗೆ ಕೊಟ್ಟು ಬಿಡುತ್ತೇನೆ ಮತ್ತು ನಿನ್ನ ಕಿವಿಯನ್ನೇ ಕಿತ್ತಿ ಬಿಡುತ್ತೇನೆ .'' ಜ್ಞಾನಲೋಭಿಯಾದ ತಂದೆಯ ಈ ಬಿರುನುಡಿಗಳನ್ನು ಆಲಿಸಿ ಆ ಜಡನಂತಿರುವ ಮಗನು ಉತ್ತರಿಸಿದನು - ''ತಂದೆಯೇ ! ಅಧ್ಯಯನ ಇರುವದು ಮಿಠಾಯಿಗಳ ಸಲುವಾಗಿಯೆ? ನಾಲಿಗೆಯ ಚಪಲವನ್ನು ತೀರಿಸಿಕೊಳ್ಳುವುದಷ್ಟೇ ಅಧ್ಯಯನದ ಪ್ರಯೋಜನವೆ? ಅಧ್ಯಯನ ಎಂದರೆ ಏನು ಎಂದು ತಿಳಿಯದೇ ತಮ್ಮಂಥ ಜ್ಞಾನಿಗಳಿಗೆ ! ಈ ಲೋಕದಲ್ಲಿ ಸಂಸಾರದಲ್ಲಿ ಬಿದ್ದು ಗೋಳಿಡುವ ಮಾನವರನ್ನು ಉದ್ಧರಿಸಿ, ಸಂಸಾರವನ್ನು ದಾಟಿಸಿ ಪಾರುಮಾಡಿ ಆನಂದಪೂರ್ಣವಾದ ಪರಲೋಕಕ್ಕೆ ಕರೆದೊಯ್ಯುವದೇ ಅಧ್ಯಯನ.

**ಕೌಥುಮ** : ವತ್ಸ ! ಇಂಥ ಮುದ್ದಾದ ಮಾತುಗಳನ್ನು ಹೇಳುವ ನಿನ್ನ ಆಯುಷ್ಯವು ವರ್ಧಿಸಲಿ. ನೀನು ಬಹುಕಾಲ ಬಾಳು. ನೀನು ಇದೀಗ ಎಷ್ಟು ಸಮಂಜಸವಾಗಿ

ಯುಕ್ತಿಯುಕ್ತವಾಗಿ ಮಾತನಾಡಿದೆಯಲ್ಲ ! ಇಷ್ಟೆಲ್ಲ ಒಳ್ಳೆ ಬುದ್ಧಿವಂತನಂತೆ ಮಾತನಾಡುವ ನೀನು ಅಧ್ಯಯನವನ್ನು ಏಕೆ ಮಾಡುವುದಿಲ್ಲ?

**ಬಾಲಕ** : ತಾತ, ತಿಳಿಯಬೇಕಾದುದನ್ನೆಲ್ಲ ನಾನು ಈ ಮಾತೃಕೆಗಳಿಂದಲೇ ತಿಳಿದುಬಿಟ್ಟಿದ್ದೇನೆ. ಉಳಿದುವೆಲ್ಲವೂ ಅನಾವಶ್ಯಕ. ಅನಾವಶ್ಯಕವಾದುದನ್ನು ಒದರಿ ಓದಿ, ಕಂಠಶೋಷ ಏಕೆ ಮಾಡಿಕೊಳ್ಳಬೇಕು ?

**ಕೌಥುಮ** : ಭಲಾ, ವತ್ಸಾ ! ನೀನು ಎಂಥ ವಿಚಿತ್ರ ಮಾತುಗಳನ್ನು ಇಂದು ಆಡುತ್ತಿರುವೆಯಲ್ಲ ! ಈ ಮಾತೃಕೆಗಳಲ್ಲಿ ನೀನು ಜ್ಞಾತವ್ಯವಾದ ಅರ್ಥವನ್ನೆಲ್ಲ ಹೇಗೆ ತಿಳಿದುಕೊಂಡೆ ? ಈ ಮಾತೃಕೆಗಳಿಂದ ಅರಿಯಬೇಕಾದುದೆಲ್ಲವನ್ನು ಅರಿತುಕೊಳ್ಳುವ ಬಗೆ ಯಾವುದು? ಹೇಳು. ಮಗೂ ! ಹೇಳು ! ಅದೇಕೋ ನನಗಿಂದು ಈ ನಿನ್ನ ಮುದ್ದು ಮುದ್ದಾದ ಮಾತುಗಳನ್ನು ಮತ್ತೆ ಮತ್ತೆ ಕೇಳಬೇಕೆನಿಸುತ್ತದೆ.

**ಬಾಲಕ** : ತಾತ ! ನೀವು ಮೂವತ್ತೊಂದು ಸಾವಿರ ವರ್ಷಗಳವರೆಗೆ ನಾನಾ ಬಗೆಯ ಶಾಸ್ತ್ರ, ತರ್ಕ, ವೇದ, ವೇದಾಂತಗಳ ಅಧ್ಯಯನವನ್ನು ಮಾಡಿದ್ದೀರಲ್ಲವೇ ! ಅದೆಲ್ಲವೂ ಕೇವಲ ಭ್ರಮದ ಸಾಧನವನ್ನು ಸಂಪಾದಿಸಿದಂತಾಗಿದೆ. ಶಾಸ್ತ್ರಗಳಲ್ಲಿ ಇದೂ ಧರ್ಮ, ಅದೂ ಧರ್ಮ ಎಂದು ಹೇಳಿ ಧರ್ಮ ವ್ಯಾಖ್ಯೆಗಳಿಂದ ಓದುಗನ ಚಿತ್ತವು ಭ್ರಾಂತಿಷ್ಟವಾಗಿ ಹೋಗುತ್ತದೆ. ನೀವೆಲ್ಲರೂ ಶಾಸ್ತ್ರೋಪದೇಶವನ್ನು ಬರೀ ಓದುತ್ತೀರಿ. ಅದರ ವಾಸ್ತವಿಕ ಅರ್ಥವನ್ನು ತಿಳಿಯಲು ಪ್ರಯತ್ನಿಸುವದೇ ಇಲ್ಲ. ವೇದ ಶಾಸ್ತ್ರಗಳ ಅರ್ಥವನ್ನು ತಿಳಿಯದೇ ಬರೀ ಗಿಳಿಪಾಠ ಮಾಡುವವರು ಎರಡು ಕಾಲಿನ ಪಶು. ಆದ್ದರಿಂದ ಈಗ ನಾನು ಚಿತ್ತಭ್ರಾಂತಿಯನ್ನು ನಾಶ ಮಾಡುವ ಸಾರಾರ್ಥವನ್ನು ಹೇಳುತ್ತೇನೆ ಕೇಳಿರಿ.

**ಅಕಾರಃ ಕಥಿತೋ ಬ್ರಹ್ಮಾ ಉಕಾರೋ ವಿಷ್ಣುರುಚ್ಯತೇ**
**ಮಕಾರಶ್ಚ ಸ್ಮೃತೋ ರುದ್ರಸ್ತ್ರಯಶ್ಚೈತೇ ಗುಣಾಃ ಸ್ಮೃತಾಃ**
**ಅರ್ಧಮಾತ್ರಾ ಚ ಯಾ ಮೂರ್ಧ್ನಿ ಪರಮಃ ಸ ಸದಾಶಿವಃ**

ಓಂಕಾರದಲ್ಲಿ ಮಾತೃಕೆಗಳಲ್ಲಿ ಮೊದಲನೇ ಅಕ್ಷರವಾದ ಅಕಾರ, ಉಕಾರ, ಮಕಾರಗಳು ಹೀಗೆ ಮೂರು ಅಕ್ಷರಗಳೂ ಮೇಲೆ ಅರ್ಧಮಾತ್ರೆಯೂ ಇರುತ್ತವೆ. ಅಕಾರವೇ ಬ್ರಹ್ಮ. ವಿಷ್ಣು ಉಕಾರ. ಮಕಾರವೆಂದರೆ ರುದ್ರ. ಈ ಅಕ್ಷರದ ಮೇಲಿನ ಅನುಸ್ವಾರ ರೂಪವಾದ ಅರ್ಧಮಾತ್ರೆಯೆ ಸದಾಶಿವ. ಇದೇ ಈ ಓಂಕಾರದ ಮಹಿಮೆ. ಈ ಓಂಕಾರದ ಮಹಿಮೆಯನ್ನು ಹತ್ತುಸಾವಿರ ವರ್ಷಗಳವರೆಗೆ ಕೋಟಿ, ಕೋಟಿ, ಗ್ರಂಥಗಳಿಂದ ಹೇಳಿದರೂ ಪೂರ್ಣವಾಗಿ ಬಣ್ಣಿಸಲು ಸಾಧ್ಯವಿಲ್ಲ.

ಈ ಅಕಾರದಿಂದ ಮೊದಲಾಗಿ ಅ, ಆ, ಇ, ಈ, ಉ, ಊ, ಋ, ೠ, ಲ, ಲ್ಯ, ಎ, ಐ, ಓ, ಔ ಇವು ಹದಿನಾಲ್ಕು ಅಕ್ಷರಗಳು ಸ್ವರ ಎಂದು ಕರೆಯಲ್ಪಡುತ್ತವೆ, ಹದಿನಾಲ್ಕು ಮನ್ವಂತರ ಅಧಿಪತಿಗಳಾದ ಮನುಗಳ ಸ್ವರೂಪವಾಗಿವೆ ಈ ಚತುರ್ದಶಾಕ್ಷರಗಳು. ಆ ಹದಿನಾಲ್ಕು ಮನುಗಳ ಹೆಸರುಗಳು ಇಂತಿವೆ. ಸ್ವಾಯಂಭುವ, ಸ್ವಾರೋಚಿಷ, ಔತ್ತಮ, ರೈವತ,

ತಾಮಸ, ಚಾಕ್ಷುಷ ಇವು ಆರು ಹಿಂದೆ ಆದ ಮನ್ವಂತರಗಳು. ವೈವಸ್ವತ - ಈಗ ನಡೆಯುವ ಕಾಲ. ''ವೈವಸ್ವತ ಮನ್ವಂತರ. ಎಂದು ಹೆಸರು. ಇದು ಏಳನೆಯ ಮನ್ವಂತರ. ಇದರ ಅಧಿಪತಿಯಾದ ಸೂರ್ಯಪುತ್ರ ವೈವಸ್ವತ ಮನು ಏಳನೆಯವನು, ಇದರ ಮುಂದಿನ ಮನು ಮಹಾರಾಜನಾದ ಎಂಟನೆಯ ಮನುವಿನ ಹೆಸರು ಸಾವರ್ಣಿ. ಒಂಬತ್ತನೆಯ ಮನ್ವಂತರದ ಅಧಿಪತಿ ಬ್ರಹ್ಮಸಾವರ್ಣಿ. ಹತ್ತನೆಯ ಮನು ರುದ್ರಸಾವರ್ಣಿ. ದಕ್ಷ ಸಾವರ್ಣಿ ಹನ್ನೊಂದನೆಯ ಮನು. ಹನ್ನೆರಡನೆಯ ಮನ್ವಂತರದ ಒಡೆಯ ಧರ್ಮ ಸಾವರ್ಣಿ. ಹದಿಮೂರನೆಯವ ರೌಚ್ಯ. ಹದಿನಾಲ್ಕನೆಯ ಮನ್ವಂತರ ಅಧೀಶ್ವರ ಭೌತ್ಯಮನು. ಈ ಹದಿನಾಲ್ಕೂ ಮನುಮಹರ್ಷಿಗಳ ಮೈಬಣ್ಣವನ್ನೂ ಕೂಡ ಹೇಳುತ್ತೇನೆ ಕೇಳು.

ಮೊದಲನೆ ಸ್ವಾಯಂಭುವ ಮನು ಶ್ವೇತವರ್ಣದವ. ಎರಡನೆ ಮನುವಿನ ಮೈಬಣ್ಣ ಪಾಂಡುರ ಎಂದರೆ ಬಿಳಿ. ಮೂರನೆಯ ಔತ್ತಮ ಮನುವಿನ ದೇಹ ಕಾಂತಿ ಲೋಹಿತ (ತುಸು ಕೆಂಬಣ್ಣದ್ದು). ನಾಲ್ಕನೆ ರೈವತ ಮನುವಿನ ಕಾಯಕಾಂತಿ ಶುದ್ಧ ತಾಮ್ರದಂತೆ ಕಡು ಕೆಂಪು. ಐದನೆಯ ತಾಮಸ ಮನುವಿನ ದೇಹವರ್ಣ ಪೀತ. (ಹಳದಿ). ಆರನೆಯ ಚಾಕ್ಷುಷ ಮನುವಿನ ಕಾಯಕಾಂತಿ ಕಪಿಲ. ಏಳನೆಯ ಮನು ವೈವಸ್ವತನ ದೇಹ ಕೃಷ್ಣ ವರ್ಣ. (ಕಪ್ಪು) ಎಂಟನೆಯ ಮನುವಾದ ಸಾವರ್ಣಿಯ ಶರೀರ ಶ್ಯಾಮಸುಂದರ, ಒಂಬತ್ತನೆಯ ಬ್ರಹ್ಮಸಾವರ್ಣಿ ಮೈ ಬಣ್ಣ ಧೂಮ್ರ. ಹತ್ತನೆಯ ರುದ್ರಸಾವರ್ಣಿಯ ದೇಹವರ್ಣ ಪಿಂಗಲ. ಹನ್ನೊಂದನೆಯ ದಕ್ಷಸಾವರ್ಣಿ ಶರೀರವು ಕೆಂಪು. ಹನ್ನೆರಡನೆಯ ಧರ್ಮಸಾವರ್ಣಿಯ ದೇಹವು ತ್ರಿವರ್ಣ. ಮೂರು ಬಗೆಯ ಬಣ್ಣವುಳ್ಳದ್ದು, ಹದಿಮೂರನೆಯ ರೌಚ್ಯಮನುವಿನ ದೇಹವು ಬಹುವರ್ಣ. ಹದಿನಾಲ್ಕನೆಯ ಭೌತ್ಯಮನುವಿನ ದೇಹವು ಕಪಿಶ. ಇವು ಕ್ರಮವಾಗಿ ಹದಿನಾಲ್ಕು ಮನುಗಳ ದೇಹದ ಬಣ್ಣಗಳಾಗಿರುತ್ತವೆ.

ತಂದೆಯೇ ! ವೈವಸ್ವತ ಮನು 'ಋ'ಕಾರ ಸ್ವರೂಪನಾಗಿದ್ದಾನೆ. ಅವನ ಬಣ್ಣ ಕಪ್ಪು. ಮೊದಲೇ ಹೇಳಿದೆ. 'ಕ' ದಿಂದ ಆರಂಭಿಸಿಕೊಂಡು 'ಹ'ದವರೆಗೆ ಮೂವತ್ತುಮೂರು ವರ್ಣಾಭಿಮಾನಿ ದೇವತೆಗಳಿರುತ್ತಾರೆ. ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಇವು ಹನ್ನೆರಡು ಅಕ್ಷರಗಳು ಆದಿತ್ಯಸ್ವರೂಪ ಎಂದು ತಿಳಿಯಲ್ಪಟ್ಟಿವೆ.

''ಧಾತಾ ಮಿತ್ರಾರ್ಯಮಾ ಶಕ್ರೋ ವರುಣಶ್ಚಾಂಶುರೇವ ಚ ।
ಭಗೋ ವಿವಸ್ವಾನ್ ಪೂಷಾ ಚ ಸವಿತಾ ದಶಮಸ್ತಥಾ ॥

ಏಕದಶಸ್ತಥಾ ತ್ವಷ್ಟಾ ವಿಷ್ಣುರ್ದ್ವಾದಶ ಉಚ್ಯತೇ ।
ಜಘನ್ಯಜ ಸ್ಸ ಸರ್ವೇಷಾಮಾದಿತ್ಯಾನಾಂ ಗುಣಾಧಿಕಃ ॥

ಧಾತಾ, ಮಿತ್ರ, ಆರ್ಯಮ, ಶಕ್ರ, ವರುಣ, ಅಂಶು, ಭಗ, ವಿವಸ್ವಾನ್, ಪೂಷಾ, ತ್ವಷ್ಟಾ, ಮತ್ತು ವಿಷ್ಣು - ಇವು ಹನ್ನೆರಡು ಆದಿತ್ಯರುಗಳು. ಇವುಗಳಲ್ಲಿ ವಿಷ್ಣು ಎಲ್ಲರಿಗಿಂತ ವಯಸ್ಸಿನಿಂದ ಸಣ್ಣವನಾದರೂ ಸರ್ವಗುಣದಲ್ಲಿ ಸರ್ವಶ್ರೇಷ್ಠನಾಗಿದ್ದಾನೆ. ಮುಂದಿನ 'ಡ' ದಿಂದ ಆರಂಭಿಸಿಕೊಂಡು 'ಬ' ದವರೆಗೆ ಎಂದರೆ ಡ, ಢ, ಣ, ತ, ಥ, ದ, ಧ, ಪ, ಫ, ಬ ಈ ಹನ್ನೊಂದು ಅಕ್ಷರಗಳು ಏಕಾದಶ ರುದ್ರರು.

**ಕಪಾಲೀ ಪಿಂಗಲೋ ಭೀಮೋ ವಿರೂಪಾಕ್ಷೋ ವಿಲೋಹಿತಃ ।**
**ಅಜಕಃ ಶಾಸನಃ ಶಾಸ್ತಾ ಶಂಭುಶ್ಚಂಡೋ ಭವಸ್ತಥಾ ॥**

ಕಪಾಲಿ, ಪಿಂಗಲ, ಭೀಮ, ವಿರೂಪಾಕ್ಷ, ವಿಲೋಹಿತ, ಅಜಕ, ಶಾಸನ, ಶಾಸ್ತಾ, ಶಂಭು, ಚಂಡ, ಭವ, ಇವರೇ 'ಡ' ಕಾರದಿಂದ 'ಬ' ಕಾರದವರೆಗಿನ ಹನ್ನೊಂದು ಅಕ್ಷರಸ್ವರೂಪರಾದ ಏಕಾದಶ ರುದ್ರರು. ಮುಂದಿನ 'ಭ' ದಿಂದ 'ಷ'ದವರೆಗೆ ಭ,ಮ,ಯ,ರ,ಲ,ವ,ಶ,ಷ ಎಂಟು ಅಕ್ಷರಗಳು ವಸುಸ್ವರೂಪಗಳಾಗಿವೆ.

**ಧ್ರುವೋ ಘೋರಶ್ಚ ಸೋಮಶ್ಚ ಆಪಶ್ಚೈವ ನಲೋಽನಿಲಃ ।**
**ಪ್ರತ್ಯೂಷಶ್ಚ ಪ್ರಭಾಸಶ್ಚ ಅಷ್ಟೌ ತೇ ವಸವಃ ಸ್ಮೃತಾಃ ॥**

ಧ್ರುವ, ಘೋರ, ಸೋಮ, ಆಪ, ನಲ, ಅನಿಲ, ಪ್ರತ್ಯೂಷ, ಪ್ರಭಾಸ ಎಂದು ಆ ಎಂಟು ವಸುಗಳ ಹೆಸರು. ಕೊನೆಯ 'ಸ' ಮತ್ತು 'ಹ' ಇವು ಎರಡು ಅಶ್ವಿನೀ ಕುಮಾರರು. ಹೀಗೆ ಒಟ್ಟು ಮೂವತ್ಮೂರು ದೇವತೆಗಳು 'ಕ' ಕಾರದಿಂದ 'ಹ' ಕಾರದವರೆಗಿನ 33 ವರ್ಣಮಾಲೆಯ ಸ್ವರೂಪರಾಗಿದ್ದಾರೆ. ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ ಈ ನಾಲ್ಕು ಅಕ್ಷರಗಳು ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ ಎಂಬ ನಾಲ್ಕು ವಿಧ ಜೀವರಾಶಿಯ ಸಂಕೇತರೂಪವಾಗಿವೆ.

ತಾತ ! ಇದರ ಹಿನ್ನೆಲೆ ತತ್ವಾರ್ಥವನ್ನು ಕೇಳು. ಯಾವ ಮಾನವನು ಈ ಐವತ್ತೆರಡು ವರ್ಣರೂಪಿಗಳಾದ ದೇವತೆಗಳನ್ನು ಆಶ್ರಯಿಸಿ ಇವರ ಪ್ರೇರಣೆಯಿಂದ ಶಾಸ್ತ್ರೋಕ್ತವಾದ ವಿಹಿತ ಧರ್ಮಕರ್ಮಾನುಷ್ಠಾನವನ್ನು ಮಾಡಿ ಅರ್ಧಮಾತ್ರಾ ಸ್ವರೂಪನಾದ ಸದಾಶಿವನನ್ನು ಧ್ಯಾನೈಕಲೀನ ಮಾನಸನಾಗಿ, ಉಪಾಸನೆ ಮಾಡುವನೋ ಅವನೇ ಬ್ರಹ್ಮಜ್ಞಾನಿ ಎನಿಸುವನು. ಕೊನೆಗೆ ಹೇಳಿದ ನಾಲ್ಕು ವಿಧವಾದ ಜೀವರಲ್ಲಿ ಯಾವನಾದರೂ ತ್ರಿಕರಣ ಶುದ್ಧಿಪೂರ್ವಕವಾಗಿ ಈ ಅಕ್ಷರತತ್ವವನ್ನು ತಿಳಿದು ದೇವಧ್ಯಾನವನ್ನು ಮಾಡಿದರೆ ಅವನಿಗೆ ಮುಕ್ತಿ ದೊರಕುವದು. ಯಾವ ಶಾಸ್ತ್ರದಲ್ಲಿ ಈ ವರ್ಣಾಭಿಮಾನಿ ದೇವತೆಗಳಿಗಿಂತ, ಅವರೆಲ್ಲರಿಂದ ಉಪಾಸ್ಯನಾದ ಶಿವನೇ ಪರದೇವತೆ, ಸರ್ವಶಾಸ್ತ್ರ ಪ್ರತಿಪಾದ್ಯ ಎಂದು ಮನ್ನಿಸಲ್ಪಡುವದಿಲ್ಲವೋ ಅಂಥ ಶಾಸ್ತ್ರವು ಸ್ವಯಂ ಬ್ರಹ್ಮದೇವರೇ ಹೇಳಿದ್ದರೂ ಮಾನ್ಯವೂ ಅಲ್ಲ, ಪ್ರಮಾಣವೂ ಅಲ್ಲ.

ವೇದವೇದಾಂತಗಳಲ್ಲೆಲ್ಲ ಸರ್ವಶಬ್ದ, ಸರ್ವವರ್ಣ, ಸರ್ವವಾಕ್ಯಗಳಿಂದ ಪ್ರತಿಪಾದಿತವಾದದ್ದು ಇದೇ ಪರಬ್ರಹ್ಮ ತತ್ವ. ವಾಗಿಂದ್ರಿಯದ ಮೇಲೆ ನಿಯಂತ್ರಣ ವಿಲ್ಲದ ಮಾನವರ ಅಜ್ಞಾನ, ವ್ಯಾಮೋಹ ಎಷ್ಟಿದೆ ನೋಡಿರಿ. ಈ ಐವತ್ತೆರಡು ಮಾತೃಕೆಗಳನ್ನು ಎಲ್ಲರೂ ಪಠಿಸುತ್ತಾರೆ. ಇವೇ ಅಕ್ಷರಗಳಿಂದ ತಮ್ಮ ಎಲ್ಲ ಜೀವಿತ ವ್ಯವಹಾರಗಳನ್ನು ಮಾಡುತ್ತಾರೆ. ಆದರೆ ಆ ವರ್ಣಮಾಲೆಯ ಹಿನ್ನೆಲೆಯಲ್ಲಿರುವ ದೇವತಾ ತತ್ವವನ್ನೇ ಮರೆಯುತ್ತಾರೆ. ಆ ಎಲ್ಲ ದೇವತೆಗಳಿಗೂ ದೇವನಾದ ಆ ಮಹಾದೇವನನ್ನಂತೂ ನೆನೆಯುವದೇ ಇಲ್ಲ.

**ಸುತನು :** ಚಿಕ್ಕ ಬಾಲನ ಈ ಅರ್ಥಗರ್ಭಿತ ,ಮಾತುಗಳನ್ನು ಕೇಳಿ ತಂದೆ ಕೌಥುಮನಿಗೆ ಆಶ್ಚರ್ಯವೋ ಆಶ್ಚರ್ಯ. ಇನ್ನೂ ಅನೇಕ ಪ್ರಶ್ನೆಗಳನ್ನು ಉತ್ಸಾಹದಿಂದ ಆ ಮಗನಿಗೆ ಕೌಥಮನು ಕೇಳಿದ. ತಂದೆಯ ಅವೆಲ್ಲ ಪ್ರಶ್ನೆಗಳಿಗೂ ಒಳ್ಳೆ ಜಾಣ್ಮೆಯ ಉತ್ತರ ನೀಡಿತು ಆ ಎಳೆಕಂದ. ಅದರಂತೆ ನಾನು ಕೂಡ ನಿಮಗೆ ಮಾತೃಕಾ ಸಂಬಂಧಿಯಾದ ನಿಮ್ಮ ಮೊದಲನೆ ಪ್ರಶ್ನೆಗೆ ಈವರೆಗೆ ಉತ್ತರ ಹೇಳಿದ್ದಾಯಿತು.

## ಪ್ರಶ್ನೆ - 2

**ಇಪ್ಪತ್ತೈದು ವಸ್ತುಗಳಿಂದ ನಿರ್ಮಿತ ಮನೆ -**

**ಪಂಚಭೂತಾನಿ ಪಂಚೈವ ಕರ್ಮಜ್ಞಾನೇಂದ್ರಿಯಾಣಿ ಚ ।**
**ಪಂಚ ಪಂಚಾಪಿ ವಿಷಯಾ ಮನೋಬುದ್ಧ್ಯಹಮೇನ ಚ ॥**
**ಪ್ರಕೃತಿಃ ಪುರುಷಶ್ಚೈವ ಪಂಚವಿಶಃ ಸದಾಶಿವಃ ।**
**ಪಂಚಪಂಚಭಿರೇತೈಸ್ತು ನಿಷ್ಪನ್ನಂ ಗೃಹಮುಚ್ಯತೇ ॥**
**ದೇಹಮೇತದಿದಂ ವೇದ ತತ್ವತೋ ಯಾತ್ಯಸೌ ಶಿವಮ್ । (ಐದು)**

ಪಂಚಮಹಾಭೂತಗಳು, ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು, ಪಂಚವಿಷಯಗಳು ಎಂದರೆ ಪಂಚಭೂತತನ್ಮಾತ್ರೆಗಳು, ಮತ್ತು ಪಂಚತತ್ವಗಳು ಒಟ್ಟು ಇಪ್ಪತ್ತೈದು ತತ್ವಗಳು. ಪಂಚಭೂತಗಳೆಂದರೆ, ಪೃಥ್ವಿ, ಜಲ, ವಾಯು ಮತ್ತು ಆಕಾಶ ಇವು ಐದು ಮಹಾಭೂತಗಳು ಎನಿಸುತ್ತವೆ. ಮಾತು, ಕೈ, ಕಾಲು, ಗುದ, ಲಿಂಗ ಇವು ಐದು ಕರ್ಮೇಂದ್ರಿಯಗಳು, ಕಿವಿ, ಕಣ್ಣು, ನಾಲಿಗೆ, ಮೂಗು, ಚರ್ಮ ಇವು ಐದು ಜ್ಞಾನೇಂದ್ರಿಯಗಳು. ಶಬ್ದ, ರೂಪ, ರಸ, ಗಂಧ, ಸ್ಪರ್ಶ ಇವು ಐದು ಭೂತತನ್ಮಾತ್ರೆಗಳು. ಎಂದರೆ ಕ್ರಮವಾಗಿ ಆಕಾಶಾದಿ ಪಂಚಮಹಾ ಭೂತಗಳ ಗುಣಗಳು. ಇವು ಇಪ್ಪತ್ತು ತತ್ವಗಳು, ಮನಸ್ಸು, ಬುದ್ಧಿ, ಅಹಂಕಾರ, ಪ್ರಕೃತಿ, ಪುರುಷ, ಇವು ಐದು ತತ್ವಗಳು ಕೂಡಿ ಇಪ್ಪತ್ತೈದು ವಸ್ತುಗಳು ಇರುತ್ತವೆ. ಇಪ್ಪತ್ತೈದನೇ ತತ್ವವೇ ಸದಾಶಿವ ಸ್ವರೂಪವಾದುದು. ಈ ಇಪ್ಪತ್ತೈದು ವಸ್ತು ಅಥವಾ ತತ್ವಗಳಿಂದ ನಿರ್ಮಿತವಾದ ಮನೆಯೆಂದರೆ ಮಾನವನ ಶರೀರ. ಪ್ರಾಣಿಗಳ ಶರೀರದ ನಿರ್ಮಾಣದ ಹಿನ್ನೆಲೆಯಲ್ಲಿರುವ ಈ ತಾತ್ವಿಕ ಅರ್ಥವನ್ನು ಬಲ್ಲವನ್ನು ಶಿವನನ್ನು ಹೊಂದುತ್ತಾನೆ.

## ಪ್ರಶ್ನೆ - 3

ಅನೇಕ ರೂಪವುಳ್ಳ ಸ್ತ್ರೀಯನ್ನು ಏಕರೂಪಿಯನ್ನಾಗಿ ಮಾಡುವ ಕಲೆ ಯಾರಿಗೆ ಗೊತ್ತು ?

**ಇದಕ್ಕೆ ಉತ್ತರ** - ವೇದಾಂತ ಶಾಸ್ತ್ರ ಬಲ್ಲವರು ಅನೇಕ ರೂಪವುಳ್ಳ ಸ್ತ್ರೀ ಎಂದರೆ ಮಾನವನ ಬುದ್ಧಿ ಎಂದು ಹೇಳುತ್ತಾರೆ. ಬಗೆ ಬಗೆಯ ವಿಷಯ ಅಥವಾ ಪದಾರ್ಥಗಳನ್ನು ಬಯಸಿ ಸೇವಿಸುವದರಿಂದ ಆ ಬುದ್ಧಿರೂಪ ಸ್ತ್ರೀಯು ನಾನಾ ವಿಧ ರೂಪವುಳ್ಳವಳಾಗುತ್ತಾಳೆ.

**ಬಹುರೂಪಾಂ ಸ್ತ್ರಿಯಂ ಪ್ರಾಹುರ್ಬುದ್ಧಿಂ ವೇದಾಂತವಾದಿನಃ ।**
**ಸಾ ಹಿ ನಾನಾರ್ಥಭಜನಾನ್ನಾನಾರೂಪಂ ಪ್ರಪದ್ಯತೇ ॥**

**ಧರ್ಮಸ್ಯೈಕಸ್ಯ ಸಂಯೋಗಾದ್ಬಹುಧಾಪ್ಯೇಕಿಕೈವ ಸಾ ।**
**ಇತಿ ಯೋ ವೇದ ತತ್ತ್ವಾರ್ಥಂ ನಾಸೌ ನರಕಮಾಪ್ನುಯಾತ್ ॥**

ವೇದಾಂತವಾದಿಗಳ ಅಭಿಪ್ರಾಯದಂತೆ ಬಹುರೂಪಿಣಿಯಾದ ಬುದ್ಧಿಯೆಂಬ ನಾರಿಯನ್ನು ಧರ್ಮನಿಷ್ಠಳನ್ನಾಗಿ ಮಾಡಿದರೆ, ಅವಳು ಅಧ್ಯಾತ್ಮ ಮಾರ್ಗದಲ್ಲಿ ನಡೆದು ಏಕವಿಧವಾದ ಧರ್ಮಾನುಸಾರಿಣಿಯಾಗಿ ಭಗವದ್ಭಕ್ತಿಯಿಂದ ವಿವಿಧ ವಿಷಯಗಳ ವಾಸನೆಯನ್ನೆಲ್ಲ ತೊರೆದು ಭಗವನ್ನಿಷ್ಠತೆ ಅಥವಾ ಶಿವಭಕ್ತಿ ಎಂಬ ಒಂದೇ ರೂಪವುಳ್ಳವಳಾಗುವಳು. ನಾನಾ ರೂಪಿಣಿಯಾದ ಆ ಬುದ್ಧಿಯನ್ನು ಧರ್ಮದೊಂದಿಗೆ ಸಂಯೋಜನೆಯನ್ನು ಮಾಡುವ ಜ್ಞಾನಿಯೇ ಬಹುರೂಪಿಣಿಯಾದ ಈ ನಾರಿಯನ್ನು ಏಕ ರೂಪಿಣಿಯನ್ನಾಗಿ ಮಾರ್ಪಡಿಸುವ ಕುಶಲ ಕಲೆಯಲ್ಲಿ ಪಳಗಿದ ಪ್ರಾಜ್ಞ. ಇಂಥ ವಿರಕ್ತನಾದ ಭಗವದ್ಭಕ್ತನಿಗೆ ಮಾತ್ರ ಬಹುರೂಪಿಣಿಯನ್ನು ಏಕರೂಪಿಣಿಯನ್ನಾಗಿ ಮಾಡುವ ಕಲೆ ಚೆನ್ನಾಗಿ ಗೊತ್ತು.

## ಪ್ರಶ್ನೆ - 4

ಈ ಸಂಸಾರದಲ್ಲಿರುವ ಯಾವ ಮನುಷ್ಯನು ವಿಚಿತ್ರ ಕಥೆಯುಳ್ಳ ವಾಕ್ಯರಚನೆಯ ಬಂಧವನ್ನು ತಿಳಿಯಬಲ್ಲವನಾಗಿದ್ದಾನೆ ?

**ಈ ಪ್ರಶ್ನೆಯ ಉತ್ತರ :**

**ಮುನಿಭಿರ್ಯಚ್ಚ ನ ಪ್ರೋಕ್ತಂ ಯನ್ನ ಮನ್ಯೇತ ದೇವತಾಮ್**
**ವಚನಂ ತದ್ ಬುಧಾಃ ಪ್ರಾಹುರ್ಬಂಧಂ ಚಿತ್ರಕಥಂ ಕ್ಷಿತಿ ।**
**ಯಚ್ಚ ಕಾಮಾನ್ವಿತಂ ವಾಕ್ಯಂ ॥**

ಮಹಾಮಹಾ ಮುನಿ ಮನೀಷಿಗಳು ಯಾವದನ್ನು ಹೇಳಲಿಲ್ಲವೋ ಮತ್ತು ದೇವನ ಅಸ್ತಿತ್ವ ಅಥವಾ ಹಿರಿಮೆಯನ್ನು ಯಾವದು ಬಣ್ಣಿಸುವದಿಲ್ಲವೋ ಅಂಥ ವಚನ ರಚನೆಗಳೆಲ್ಲವೂ ಕಾವ್ಯವೇ ಇರಲಿ ಸಿದ್ಧಾಂತವೇ ಇರಲಿ, ಕಾಮ ಪ್ರೇಮದಿಂದ ಯುಕ್ತವಾದ ಪ್ರಬಂಧವೇ ಇರಲಿ, ಸರಸಾಲಾಪವೇ ಇರಲಿ, ಅದೆಲ್ಲವೂ ಒಂದು ಚಿತ್ರಕಥೆ. ವಾಸ್ತವ ತತ್ವವಾಗಲೀ ಸಿದ್ಧಾಂತವಾಗಲೀ ಗ್ರಂಥವಾಗಲೀ ಅಲ್ಲ. ಅದು ಕೇಳಲಿಕ್ಕೂ ಹೇಳಲಿಕ್ಕೂ ಯೋಗ್ಯವೂ ಅಲ್ಲ. ಅದನ್ನು ಸಾಮಾನ್ಯ ಮಾನವರು ತ್ಯಜಿಸಲಾರರು. ಅವರಿಗೆಲ್ಲ ಅದು ಒಂದು ಬಂಧರೂಪವಾಗಿಯೇ ಪರಿಣಮಿಸುವದು. ದೇವರನ್ನು ಮನ್ನಿಸದ, ಮುನಿಗಳಿಗೆ ಸಮ್ಮತವಾಗದ ವಾಚೋ ವಿಲಾಸವೆಲ್ಲವೂ ಬಂಧಕವಾದ ಒಂದು ಚಿತ್ರಕಥೆ ಎಂದು ವಾಸ್ತವಿಕವಾಗಿ ಈ ಸಂಸಾರದಲ್ಲಿ ತಿಳಿದವನೆಂದರೆ ಜ್ಞಾನಿ ಮನುಷ್ಯ ನೊಬ್ಬನೆ.

## ಪ್ರಶ್ನೆ - 5

ಸಾಗರದಲ್ಲಿ ಮುಳುಗಿದ ದೊಡ್ಡ ಮೊಸಳೆಯನ್ನು ಬಲ್ಲ ಬುದ್ಧಿವಂತನು ಯಾರು?
**ಇದಕ್ಕೆ ಉತ್ತರ :**

**"ಪಂಚಮಂ ಚಾದ್ಯತಃ ಶೃಣು"**

**ಏಕೋ ಲೋಭೋ ಮಹಾನ್ ಗ್ರಾಹೋ ಲೋಭಾತ್ಪಾಪಂ ಪ್ರವರ್ತತೇ ॥**

ಈ ಸಂಸಾರವೆಂದರೆ ದೊಡ್ಡ ಸಾಗರವಿದ್ದಂತೆ. ಇದರಲ್ಲಿರುವ ದೊಡ್ಡ ಮೊಸಳೆಯೆಂದರೆ ಲೋಭ. ಈ ಲೋಭದಿಂದಲೇ ಮಾನವನು ಎಲ್ಲ ಪಾಪ ಕರ್ಮಗಳಲ್ಲಿ ಪ್ರವೃತ್ತನಾಗುತ್ತಾನೆ.

**ಲೋಭಾತ್ ಕ್ರೋಧಃ ಪ್ರಭವತಿ ಲೋಭಾತ್ ಕಾಮಃ ಪ್ರವರ್ತತೇ**
**ಲೋಭಾನ್ಮೋಹಶ್ಚ ಮಾಯಾ ಚ ಮಾನಃ ಸ್ತಂಭಃ ಪರೇಪ್ಸುತಾ ॥**

ಲೋಭದಿಂದ ಸಿಟ್ಟು ಹುಟ್ಟುತ್ತದೆ, ಕಾಮವೂ ಕೂಡ ಜನಿಸುವದು ಲೋಭದಿಂದಲೇ. ಲೋಭದಿಂದಲೇ ಮೋಹ, ಮಾಯೆ, ಅಭಿಮಾನ, ಪರದ್ರವ್ಯದ ಆಸೆ, ಗರ್ವ ಮುಂತಾದ ದುರ್ಗುಣಗಳು ಜನಿಸುತ್ತವೆ.

**ಅವಿದ್ಯಾ ಪ್ರಜ್ಞತಾ ಚೈವ ಸರ್ವಂ ಲೋಭಾತ್ ಪ್ರವರ್ತತೇ ।**
**ಹರಣಂ ಪರವಿತ್ತಾನಾಂ ಪರದಾರಾಭಿಮರ್ಶನಮ್ ॥**

ಅಜ್ಞಾನ, ಅವಿವೇಕ, ಪರದ್ರವ್ಯದ ಅಪಹಾರ, ಪರಸ್ತ್ರೀ ಸಹವಾಸ ಎಲ್ಲವೂ ಉಂಟಾಗುವುದು ಲೋಭದಿಂದಲೇ

**ದಂಭೋ ದ್ರೋಹಶ್ಚ ನಿಂದಾ ಚ ಪೈಶುನಂ ಮತ್ಸರ ಸ್ತಥಾ ।**
**ಭವಂತ್ಯೇತಾನಿ ಸರ್ವಾಣಿ ಲುಬ್ಧಾನಾಮಕೃತಾತ್ಮನಾಮ್ ॥**

ಲುಬ್ಧರಾದವರೇ ದಂಭದಿಂದ ಕೂಡಿಕೊಂಡು ದರಿದ್ರರಿಗೂ ಸಿರಿವಂತರಿಗೂ ದ್ರೋಹವನ್ನು ಎಸಗುತ್ತಾರೆ. ಹಣ ಕೇಳಿದವರನ್ನು ನಿಂದಿಸುತ್ತಾರೆ. ಮತ್ತೊಬ್ಬರು ಸಿರಿವಂತರಾದರೆ, ಅವರ ಮೇಲೆ ಮತ್ಸರ. ಅವರ ಮೇಲೆ ಚಾಡಿ ಹೇಳುವದು ಮುಂತಾದ ದೌರ್ಜನ್ಯವನ್ನು ಲೋಭಿ ಮಾಡುತ್ತಾನೆ. ಎಲ್ಲ ದೋಷ ದುರ್ಗುಣಗಳಿಗೆ ಲೋಭವೇ ಮೂಲ.

**ಸುಮಹಾಂತ್ಯಪಿ ಶಾಸ್ತ್ರಾಣಿ ಧಾರಯಂತಿ ಬಹುಶ್ರುತಾಃ ।**
**ಛೇತ್ತಾರಃ ಸಂಶಯಾನಾಂ ಚ ಲೋಭಗ್ರಸ್ತಾ ವ್ರಜಂತ್ಯಧಃ ॥**

ಎಲ್ಲ ಶಾಸ್ತ್ರಗಳನ್ನು ಓದಿ ಮಹಾಪಂಡಿತರೆನ್ನಿಸಿದರೂ, ಪರರ ಸಂಶಯಗಳನ್ನೆಲ್ಲ ಪರಿಹರಿಸಿ ಸಿದ್ಧಾಂತ ತತ್ವವನ್ನು ಮಂಡಿಸುವವರೂ, ಬಹುಶ್ರುತರಾದ ಮಹಾ ಮಹಾ ವಿದ್ವಾಂಸರೂ ಕೂಡ ಲೋಭಾಕ್ರಾಂತರಾಗುವರು. ಆದುದರಿಂದಲೇ ಅಧಃಪಾತವನ್ನೂ ಹೊಂದುವರು.

**ಧರ್ಮಾವಂತಸಕಾಃ ಕ್ಷುದ್ರಾ ಮುಷ್ಣಂತಿ ಧ್ವಜಿನೋ ಜಗತ್ ।**
**ಏತೇಽ ತಿಪಾಪಿನಃ ಸಂತಿ ನಿತ್ಯಂ ಲೋಭಸಮನ್ವಿತಾಃ ॥**

ಪರಮಲೋಭಿಗಳು ಧರ್ಮವನ್ನು ತಮ್ಮ ಕಾರ್ಯ ಸಾಧನೆಗಾಗಿ ತಮಗೊಂದು ಅಲಂಕಾರದಂತೆ ಮಾಡಿಕೊಂಡಿರುತ್ತಾರೆ. ಧರ್ಮದ ಕುರುಹುಗಳಾದ ಯತಿವೇಷ,

ಭಸ್ಮಧಾರಣೆ, ಊರ್ಧ್ವಪುಂಡ್ರಧಾರಣೆ, ಲಿಂಗಧಾರಣೆ, ನಾಮಧಾರಣೆ, ಮುಂತಾದವು ಗಳನ್ನು ಕೂಡ ತೋರಿಕೆಗೆ ಮಾಡಿರುತ್ತಾರೆ. ವಾಸ್ತವಿಕವಾಗಿ ಈ ಪಾಪಿಗಳ ಉದ್ದೇಶವು ಮೂಢ ಜನರನ್ನು ಮೋಸ ಮಾಡಿ ಧನವನ್ನು ಗಳಿಸುವದೇ ಆಗಿರುತ್ತದೆ. ಇವರು ಯಾವಾಗಲೂ ಲೋಭಯುಕ್ತರೇ .

**ಲೋಭಕ್ರೋಧಪ್ರಸಕ್ತಾಶ್ಚ ಶಿಷ್ಟಾಚಾರ ಬಹಿಷ್ಕೃತಾಃ ।**
**ಅಂತಃಕ್ಷುರಾ ವಾಙ್ಮಧುರಾಃ ಕೂಪಶ್ಛನ್ನಾಸ್ತೃಣೈರಿವ ॥**

ಲೋಭ ಮತ್ತು ಕೋಪದಿಂದ ತುಂಬಿದವರಿಗೆ ಯಾವ ಶಿಷ್ಟಾಚಾರ ಸದಾಚಾರ ಗಳೂ ಇರುವುದಿಲ್ಲ. ಅವರು ಎಲ್ಲವನ್ನೂ ತೋರಿಕೆಗಾಗಿಯೇ ಮಾಡುತ್ತಿರುವರು. ಮೇಲೆ ಮೇಲೆ ಸವಿಮಾತುಗಳನ್ನು ಆಡುವರು. ಹೃದಯದಲ್ಲಿ ಮಾತ್ರ ಹಾಲಾಹಾಲ. ಮೇಲೆ ಎಳೆಹುಲ್ಲು ಹೊದಿಸಿದ ಹಾಳುಬಾವಿಯಂತೆ ಪ್ರಾಣಾಂತಕರಾಗಿರುತ್ತಾರೆ ಈ ಲೋಭಿಗಳು ಮನಸ್ಸಿನಲ್ಲಿ ಚೂರಿ. ಮಾತಿನಲ್ಲಿ ಜೇನು.

**ಜನಕೋ ಯುವನಾಶ್ವಶ್ಚ ವೃಷಾದರ್ಭಿಃ ಪ್ರಸೇನಜಿತ್ ।**
**ಲೋಭಕ್ಷಯಾದ್ದಿವಂ ಪ್ರಾಪ್ತಸ್ತಥೈವಾನ್ಯೇ ಜನಾಧಿಪಾಃ ॥**

ಜನಕರಾಜ, ಯುವನಾಶ್ವ, ವೃಷಾದರ್ಭಿ, ಪ್ರಸೇನಜಿತ, ಮುಂತಾದ ಮಹನೀಯ ರಾಜರೆಲ್ಲರೂ ಸ್ವರ್ಗಾದಿಲೋಕಗಳನ್ನು ಹೊಂದಿದ್ದು ಲೋಭರೂಪ ದುರ್ಗುಣವನ್ನು ಸಂಪೂರ್ಣವಾಗಿ ಬಿಟ್ಟದ್ದರಿಂದಲೇ. ಇದರಂತೆ ಈ ವರೆಗೆ ಸ್ವರ್ಗಾದಿ ಪುಣ್ಯಲೋಕಗಳಿಗೆ ಲೋಭವನ್ನು ಪೂರ್ತಿ ತ್ಯಜಿಸಿದವರೇ ಹೋಗಿದ್ದಾರೆ. ಒಬ್ಬ ಲೋಭಿಯೂ ಇಂದಿನವರೆಗೆ ಸ್ವರ್ಗವನ್ನು ಕಂಡಿಲ್ಲ. ಮೋಕ್ಷಕ್ಕೂ ಹೋಗಿಲ್ಲ.

**ತಸ್ಮಾತ್ತ್ಯಜಂತಿ ಯೇ ಲೋಭಂ ತೇಽ ತಿಕ್ರಾಮಂತಿ ಸಾಗರಮ್ ।**
**ಸಂಸಾರಾಖ್ಯಮತೋಽ ನ್ಯೇ ಯೇ ಗ್ರಾಹಗ್ರಸ್ತಾ ನ ಸಂಶಯಃ ॥**

ಆದುದರಿಂದ ಯಾರು ಲೋಭವನ್ನು ಬಿಟ್ಟುಬಿಡುವರೋ ಅವರೇ ಈ ಸಂಸಾರ ಸಾಗರವನ್ನು ದಾಟುತ್ತಾರೆ. ಉಳಿದವರು ಲೋಭವೆಂಬ ಮೊಸಳೆಯಿಂದ ಹಿಡಿಯಲ್ಪಟ್ಟ ವರಾಗಿ ಇಲ್ಲಿಯೇ ದುಃಖಪಡುತ್ತಾರೆ.

## ಪ್ರಶ್ನೆ - 6

**ಎಂಟು ವಿಧರಾದ ಬ್ರಾಹ್ಮಣರನ್ನು ತಿಳಿದ ಶ್ರೇಷ್ಠ ಬ್ರಹ್ಮಜ್ಞಾನಿ ಯಾರು ?**

ಈ ಪ್ರಶ್ನೆಯ ಉತ್ತರ .

**ಅಥ ಬ್ರಾಹ್ಮಣ ಭೇದಾಂಸ್ತ್ವ ಮಷ್ಟೌ ವಿಪ್ರಾs ವಧಾರಯ ।**
**ಮಾತ್ರಶ್ಚ ಬ್ರಾಹ್ಮಣಶ್ಚೈವ ಶ್ರೋತ್ರಿಯಶ್ಚ ತತಃ ಪರಮ್ ।**
**ಅನೂಚಾನಸ್ತಥಾ ಭ್ರೂಣೋ ಋಷಿಕಲ್ಪೋ ಋಷಿರ್ಮುನಿಃ ॥**

ಇನ್ನು ಬ್ರಾಹ್ಮಣರಲ್ಲಿಯ ಎಂಟು ಭೇದಗಳನ್ನು ಹೇಳುತ್ತೇನೆ ಕೇಳು. ಮಾತ್ರ, ಬ್ರಾಹ್ಮಣ, ಶ್ರೋತ್ರಿಯಾ, ಅನೂಚಾನ, ಭ್ರೂಣ, ಋಷಿಕಲ್ಪ, ಋಷಿ, ಮುನಿ ಎಂದು ಬ್ರಾಹ್ಮಣರಲ್ಲಿ ಎಂಟು ಪ್ರಕಾರಗಳು ಇರುತ್ತವೆ. ಇವರಲ್ಲಿ ವಿದ್ಯೆ ಮತ್ತು

ಸದಾಚಾರಗಳಿಂದ ಮೊದ ಮೊದಲಿನವರಿಗಿಂತ ಮುಂದಿನವರು ಶ್ರೇಷ್ಠ ಎಂದು ವೇದವಚನ.

**ಇತ್ಯೇತೇಽಷ್ಟ ಸಮುದ್ದಿಷ್ಟಾ ಬ್ರಾಹ್ಮಣಾಃ ಪ್ರಥಮಂ ಶ್ರುತೌ ।**
**ತೇಷಾಂ ಪರಃ ಪರಃ ಶ್ರೇಷ್ಠೋ ವಿದ್ಯಾವೃತ್ತ ವಿಶೇಷತಃ ॥**

ಇವರಲ್ಲಿಯೂ ಶ್ರೇಷ್ಠತ್ವ ಕನಿಷ್ಠತ್ವ ನಿರ್ಣಯ ಮಾಡುವದು ಅವರವರ ಜ್ಞಾನ ಮತ್ತು ಆಚರಣೆಗಳಿಂದ ಮಾತ್ರ. ವಿದ್ಯೆ ಮತ್ತು ಸದಾಚಾರಗಳು ವಿಶೇಷಾಕಾರದಿಂದ ಹೆಚ್ಚು ಹೆಚ್ಚು ಇರುವವರು ಅವು ಕಡಿಮೆ ಇರುವವರಿಗಿಂತ ಶ್ರೇಷ್ಠ. ಶ್ರೇಷ್ಠತರ, ಶ್ರೇಷ್ಠತಮರು ಆಗುತ್ತಾ ಹೋಗುತ್ತಾರೆ.

**ಬ್ರಾಹ್ಮಣಾನಾಂ ಕುಲೇ ಜಾತೋ ಜಾತಿಮಾತ್ರೋ ಯದಾ ಭವೇತ್ ।**
**ಅನುಪೇತಃ ಕ್ರಿಯಾಹೀನೋ ಮಾತ್ರ ಇತ್ಯಭಿಧೀಯತೆ ॥**

ಹೆಸರಿಗೆ ಮಾತ್ರ ಬ್ರಾಹ್ಮಣಕುಲದಲ್ಲಿ ಹುಟ್ಟಿದರೂ ಜಾತಕರ್ಮ, ಚೌಲ, ಉಪನಯನ, ಮುಂತಾದ ಬ್ರಾಹ್ಮಣೋಚಿತವಾದ ಸಂಸ್ಕಾರವು ಯಾವುದೂ ಆಗಿರದಿದ್ದರೆ ಅವನು 'ಮಾತ್ರ' ಎನಿಸಿಕೊಳ್ಳುತ್ತಾನೆ. ಚೌಲ ಉಪನಯನಾದಿ ಆಗಿದ್ದರೂ ಸಂಧ್ಯಾ ವಂದನೆ, ದೇವಪೂಜೆ ಮುಂತಾದ ಬ್ರಾಹ್ಮಣಕರ್ಮಗಳನ್ನು ಪೂರ್ತಿ ಬಿಟ್ಟವನು ಕೂಡ 'ಮಾತ್ರ' ಎಂದೇ ಕರೆಯಲ್ಪಡುತ್ತಾನೆ. ಹೆಸರಿಗೆ ಮಾತ್ರ ಇವ ಬ್ರಾಹ್ಮಣ.

**ಏಕೋದ್ದೇಶ ಮತಿಕ್ರಮ್ಯ ವೇದಸ್ಯಾಚಾರವಾನ್ನಜುಃ**
**ಸ ಬ್ರಾಹ್ಮಣ ಇತಿ ಪ್ರೋಕ್ತೋ ನಿಭೃತಃ ಸತ್ಯವಾಗ್ಘ್ರಣೀ ॥**

ಯಾವುದೇ ಒಂದು ಸ್ವಾರ್ಥದ ಉದ್ದೇಶವಿಲ್ಲದೇ ವೇದೋಕ್ತವಾದ ಕರ್ಮಾಚರಣೆಯನ್ನು ಮಾಡುತ್ತ ಸದಾಚಾರ ಸಂಪನ್ನನಾಗಿ ಇರುವ ಸರಳ ಸ್ವಭಾವದ ವ್ಯಕ್ತಿಯು ಬ್ರಾಹ್ಮಣ. ಈ ಬ್ರಾಹ್ಮಣನಾದವನಿಗೆ ಸದಾಚಾರವು ಕಡ್ಡಾಯವಾಗಿದ್ದಂತೆ ದಯೆ, ಹಾಗೂ ಸತ್ಯವಚನ, ಸರಳತೆಗಳು ಅತ್ಯಾವಶ್ಯಕವಾದ ಗುಣಗಳಾಗಿವೆ.

**"ಏಕಾಂ ಶಾಖಾಂ ಸಕಲ್ಪಾಂ ಚ ಷಡ್‌ಭಿರಂಗೈರಧೀತ್ಯ ಚ ॥**
**ಷಟ್ ಕರ್ಮನಿರತೋ ವಿಪ್ರಃ ಶ್ರೋತ್ರಿಯೋ ನಾಮ ಧರ್ಮವಿತ್ ॥**

ಧರ್ಮವನ್ನು ತಿಳಿದು, ವೇದದ ಯಾವುದಾದರೂ ಒಂದು ತನ್ನ ಶಾಖೆಯನ್ನು, ಶಿಕ್ಷಾ, ಕಲ್ಪ, ನಿರುಕ್ತ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ, ಎಂಬ ಆರು ಅಂಗ ಸಹಿತವಾಗಿ ಅಧ್ಯಯನ ಮಾಡಿ, ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ, ಎಂಬ ಬ್ರಾಹ್ಮಣೋಚಿತವಾದ ಷಟ್ಕರ್ಮಗಳ ಆಚರಣದಲ್ಲಿಯೇ ಯಾವನು ಆಸಕ್ತನಾಗಿರುವನೋ ಅವನಿಗೆ ಶ್ರೋತ್ರಿಯ ಬ್ರಾಹ್ಮಣ ಎನ್ನುವರು.

**ವೇದ ವೇದಾಂಗ ತತ್ವಜ್ಞಃ ಶುದ್ಧಾತ್ಮಾ ಪಾಪವರ್ಜಿತಃ ।**
**ಶ್ರೇಷ್ಠಃ ಶ್ರೋತ್ರಿಯವಾನ್ ಪ್ರಾಜ್ಞಃ ಸೋಽನೂಚಾನ ಇತಿ ಸ್ಮೃತಃ ॥**

ವೇದ ಮತ್ತು ಆರು ವೇದಾಂಗಗಳ ತತ್ವರಹಸ್ಯವನ್ನು ಚೆನ್ನಾಗಿ ಓದಿ ತಿಳಿದುಕೊಂಡು ಯಾವುದೇ ಪಾಪ ಕರ್ಮವನ್ನು ಮಾಡದೇ ಶುದ್ಧ ಮನಸ್ಕನಾಗಿ

ಶ್ರೋತ್ರಿಯ ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳುವ ಜ್ಞಾನ ದಾನಮಾಡುವ ವಿದ್ವಾಂಸನು 'ಅನೂಚಾನ' ಎಂದು ಹೇಳಲ್ಪಡುತ್ತಾನೆ.

**ಅನೂಚಾನಗುಣೋಪೇತೋ ಯಜ್ಞಸ್ವಾಧ್ಯಾಯ ಯಂತ್ರಿತಃ ॥**
**ಭ್ರೂಣ ಇತ್ಯುಚ್ಯತೇ ಶಿಷ್ಟೈಃ ಶೇಷಭೋಜೀ ಜಿತೇಂದ್ರಿಯಃ ॥**

ಹಿಂದೆ ಹೇಳಿದ ಅನೂಚಾನ ಬ್ರಾಹ್ಮಣನ ಎಲ್ಲ ಗುಣಗಳೂ ಇದ್ದು ಯಾವಾಗಲೂ ಯಜ್ಞ ಸ್ವಾಧ್ಯಾಯ ಇವು ಎರಡು ಕಾರ್ಯಗಳಲ್ಲಿ ಯಾವಾಗಲೂ ಆಸಕ್ತನಾಗಿ ಯಜ್ಞದ ಅನ್ನಶೇಷವನ್ನು ಉಣ್ಣುತ್ತ ಇಂದ್ರಿಯಗಳನ್ನೆಲ್ಲ ತನ್ನ ಮನಸ್ಸಿನ ಹತೋಟಿಯಲ್ಲಿಟ್ಟುಕೊಂಡ ಜ್ಞಾನಿ ಶ್ರೇಷ್ಠನಿಗೆ ಭ್ರೂಣ ಎನ್ನುವರು.

**ವೈದಿಕಂ ಲೌಕಿಕಂ ಚೈವ ಸರ್ವಜ್ಞಾನಮವಾಪ್ಯ ಯಃ ॥**
**ಆಶ್ರಮಸ್ಥೋ ವಶೀ ನಿತ್ಯಮೃಷಿಕಲ್ಪ ಇತಿ ಸ್ಮೃತಃ ॥**

ಸಂಪೂರ್ಣವಾದ 'ವೇದವೇದಾಂಗವೇದಾಂತಾದಿ ವಿವಿಧ ವೈದಿಕ ವಿದ್ಯೆಗಳನ್ನೆಲ್ಲ'' ಚೆನ್ನಾಗಿ ಓದಿಕೊಂಡು ತಿಳಿದುಕೊಳ್ಳುವದಲ್ಲದೆ ಲೌಕಿಕ ಜ್ಞಾನವನ್ನೂ ಪರ್ಯಾಪ್ತವಾಗಿ ಸಂಪಾದಿಸಿ, ಜಿತೇಂದ್ರಿಯನಾಗಿ ಮನೆಮಾರುಗಳನ್ನು ತೊರೆದು ಅರಣ್ಯದ ಆಶ್ರಮದಲ್ಲಿ ಯಾವಾಗಲೂ ಇರುವವನು ಋಷಿಕಲ್ಪ.

**ಊರ್ಧ್ವರೇತಾ ಭವತ್ಯಗ್ರೇ ನಿಯತಾಶೀ ನ ಸಂಶಯೀ ।**
**ಶಾಪಾನುಗ್ರಹಯೋಃ ಶಕ್ತಃ ಸತ್ಯಸಂಧೋ ಭವೇದೃಷಿಃ ॥**

ನೈಷ್ಠಿಕ ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತ ಮಿತಾಹಾರನಾಗಿ, ಯಾವ ವಿಷಯದಲ್ಲಿಯೂ ಸಂದೇಹವಿಲ್ಲದಂತೆ ನಿಶ್ಚಯಾತ್ಮಕವಾದ ದಿವ್ಯ ಜ್ಞಾನವನ್ನು ಸಂಪಾದಿಸಿ, ಶಾಪಾನುಗ್ರಹ ಸಮರ್ಥನಾದ ಸತ್ಯಸಂಧ ಬ್ರಾಹ್ಮಣನು 'ಋಷಿ' ಎಂದು ಕರೆಯಲ್ಪಡುತ್ತಾನೆ. ಆಹಾರ ಮಿತ, ಮಾತು ಪರಿಮಿತ, ನೈಷ್ಠಿಕ ಬ್ರಹ್ಮಚರ್ಯ, ಶಾಪಾನುಗ್ರಹಶಕ್ತಿ, ಸತ್ಯಸಂಧತೆ, ಮುಂತಾದವುಗಳು 'ಋಷಿ' ಎಂದು ಹೇಳಿಸಿಕೊಳ್ಳುವವರಲ್ಲಿ ಇರಬೇಕಾದ ಮುಖ್ಯ ಗುಣಗಳಾಗಿವೆ.

**ನಿವೃತ್ತಃ ಸರ್ವತತ್ವಜ್ಞಃ ಕಾಮಕ್ರೋಧ ವಿವರ್ಜಿತಃ ।**
**ಧ್ಯಾನಸ್ಥೋ ನಿಷ್ಕ್ರಿಯೋ ದಾಂತಸ್ತುಲ್ಯ ಮೃತ್ಕಾಂಚನೋ ಮುನಿಃ ॥**

ಸಂಸಾರದಿಂದ ನಿವೃತ್ತನಾಗಿ, ನಿಜವಾದ ಪರತತ್ವವನ್ನು ಚೆನ್ನಾಗಿ ಅರಿತು, ಕಾಮ ಕ್ರೋಧಗಳನ್ನು ಸಂಪೂರ್ಣ ವರ್ಜಿಸಿ, ಭಗವಂತನ ಧ್ಯಾನಯೋಗದಲ್ಲಿಯೇ ಏಕನಿಷ್ಠನಾಗಿ, ಉಳಿದ ಲೌಕಿಕ ವ್ಯಾಪಾರವೆಲ್ಲವನ್ನೂ ಬಿಟ್ಟು ಜಿತೇಂದ್ರಿಯನಾಗಿ, ಮಣ್ಣು ಚಿನ್ನ ಎರಡನ್ನೂ ಸಮಾನ ದೃಷ್ಟಿಯಿಂದ ನೋಡುವ ಬ್ರಾಹ್ಮಣನಿಗೆ ಮುನಿ ಎನ್ನುವರು.

**ಏವಮನ್ವಯವಿದ್ಯಾಭ್ಯಾಂ ವೃತ್ತೇನ ಚ ಸಮುಚ್ಛ್ರಿತಾಃ ॥**
**ತ್ರಿ ಶುಕ್ಲಾ ನಾಮ ವಿಪ್ರೇಂದ್ರಾಃ ಪೂಜ್ಯಂತೇ ಸವನಾದಿಷು ॥**

ಹೀಗೆ ಒಳ್ಳೆಯದಾದ ವಂಶ, ವಿದ್ಯಾ, ವೃತ್ತ ಎಂದರೆ ಸದಾಚಾರ ಇವುಗಳಿಂದ ಶ್ರೇಷ್ಠರೆನಿಸಿಕೊಂಡ ಬ್ರಾಹ್ಮಣರಿಗೆ 'ತ್ರಿಶುಕ್ಲ' ಎಂದು ಕರೆಯುತ್ತಾರೆ. ಒಳ್ಳೆಯ ವಂಶ,

ಅಧ್ಯಾತ್ಮವಿದ್ಯೆಯಲ್ಲಿ ಪಾಂಡಿತ್ಯ, ಅದರಂತೆ ಸದಾಚಾರ ಇವು ಮೂರು ನಿರ್ದುಷ್ಟವಾಗಿ ಅತ್ಯುತ್ತಮವಾಗಿದ್ದರೆ ಅಂಥ ಬ್ರಾಹ್ಮಣರನ್ನು ತ್ರಿಶುಕ್ಲರು ಎಂದು ಕರೆಯಬೇಕು. ಇವು ಮೂರು ಪರಿಶುದ್ಧವಾಗಿರುವ ಬ್ರಾಹ್ಮಣರನ್ನು ಮಾತ್ರ ಯಜ್ಞಯಾಗಾದಿಕಾರ್ಯಗಳಲ್ಲಿ ಪೂಜಿಸಬೇಕು. ಈಗ ನಿಮಗೆ ಎಂಟು ವಿಧವಾದ ಬ್ರಾಹ್ಮಣತ್ವದ ಪ್ರಕಾರಗಳನ್ನು ನಾನು ತಿಳಿಸಿ ಹೇಳಿದೆ.

## ಪ್ರಶ್ನೆ - 7

ನಾಲ್ಕು ಯುಗಗಳ ಮೂಲ ದಿನಗಳು ಯಾವವು ಎನ್ನುವದನ್ನು ತಿಳಿಸಿ ಕೊಡುವ ಪಂಡಿತನು ಯಾರು ?

**ಉತ್ತರ :-** ಈಗ ಕೃತಯುಗ, ತ್ರೇತಾಯುಗ, ದ್ವಾಪರಯುಗ ಹಾಗೂ ಕಲಿಯುಗ ಈ ನಾಲ್ಕೂ ಯುಗಗಳು ಯಾವ ತಿಥಿಯಂದು ಆರಂಭವಾದವು ಎನ್ನುವುದನ್ನು ಹೇಳುತ್ತೇನೆ.

**ನವಮೀ ಕಾರ್ತಿಕೇ ಶುಕ್ಲಾ ಕೃತಾದಿಃ ಪರಿಕೀರ್ತಿತಾ**
**ವೈಶಾಖಸ್ಯ ತೃತೀಯಾ ಯಾ ಶುಕ್ಲಾ ತ್ರೇತಾದಿರುಚ್ಯತೇ ॥**

**ಮಾಘೇ ಪಂಚದಶೀ ಕೃಷ್ಣಾ ದ್ವಾಪರಾದಿಃ ಸ್ಮೃತಾ ಬುಧೈಃ**
**ತ್ರಯೋದಶೀ ನಭಸ್ಯೇ ಚ ಕೃಷ್ಣಾ ಸಾದಿಃ ಕಲೇಃ ಸ್ಮೃತಾಃ ॥**

ಸತ್ಯಯುಗದ ಆರಂಭದ ಮೂಲದಿನವು ಕಾರ್ತಿಕಮಾಸದ ಶುಕ್ಲ ಪಕ್ಷ ನವಮೀ ತಿಥಿಯಾಗಿದೆ. ಅಂದಿನಿಂದಲೇ ಸತ್ಯಯುಗದ ಆರಂಭ. ತ್ರೇತಾಯುಗದ ಆರಂಭವು ವೈಶಾಖ ಶುಕ್ಲ ತದಿಗೆದಿನದಂದು ಆಯಿತು. ಅದೇ ತ್ರೇತಾಯುಗದ ಆರಂಭದ ಮೂಲ ದಿನ ಮಾಘ ಕೃಷ್ಣಪಕ್ಷ ಅಮಾವಾಸ್ಯೆಯಂದು ದ್ವಾಪರಯುಗದ ಆರಂಭ ಎಂದು ಪಂಡಿತರು ಹೇಳುತ್ತಾರೆ. ಭಾದ್ರಪದ ಕೃಷ್ಣಪಕ್ಷ ತ್ರಯೋದಶಿ ದಿನ ಕಲಿಯುಗವು ಪ್ರಾರಂಭವಾಯಿತು. ಇವು ನಾಲ್ಕು ಯುಗಾದಿ ದಿನಗಳೆಂದು ಕರೆಯಲ್ಪಡುತ್ತವೆ.

**ಏತಾಶ್ಚತಸ್ರಸ್ತಿಥಯೋ ಯುಗಾದ್ಯಾ ದತ್ತಂ ಹುತಂ ಚಾಕ್ಷಯಮಾಸು ವಿದ್ಯಾತ್ ।**
**ಯುಗೇ ಯುಗೇ ವರ್ಷಶತೇನ ದಾನಂ ಯುಗಾದಿ ಕಾಲೇ ದಿವಸೇನ ತತ್ಫಲಮ್॥**

ಇವು ನಾಲ್ಕು ಯುಗಗಳ ಆದಿಗಳಾಗಿದ್ದು, ಈ ಯುಗ ಮೂಲ ದಿನಗಳಲ್ಲಿ ಕೊಟ್ಟ ದಾನವು, ಮಾಡಿದ ಹೋಮವು, ನೀಡಿದ ಆಹುತಿಯು, ಆಚರಿಸಿದ ಪುಣ್ಯಕರ್ಮವು ಅಕ್ಷಯ ಪುಣ್ಯಫಲಕ್ಕೆ ಕಾರಣವಾಗುವವು. ಪ್ರತಿಯೊಂದು ಯುಗದಲ್ಲಿ ನೂರು ವರ್ಷ ದಾನ ಧರ್ಮ ಮಾಡುವುದರಿಂದ ಬರುವ ಫಲವು ಈ ಯುಗಾದಿಯ ನಾಲ್ಕು ದಿನಗಳಲ್ಲಿ ಮಾಡುವುದರಿಂದ ಪ್ರಾಪ್ತವಾಗುವವು.

## ಪ್ರಶ್ನೆ - 8

ಹದಿನಾಲ್ಕು ಮನ್ವಂತರಗಳ ಮೂಲ ದಿನಗಳನ್ನು ಯಾರು ತಿಳಿದಿದ್ದಾರೆ ?

ಉತ್ತರ :-

ಆಶ್ವಯುಕ್ ಶುಕ್ಲ ನವಮೀ ದ್ವಾದಶೀ ಕಾರ್ತಿಕೇ ತಥಾ ।
ತೃತೀಯಾ ಚೈತ್ರಮಾಸಸ್ಯ ತಥಾ ಭಾದ್ರಪದಸ್ಯ ಚ ॥

ಫಾಲ್ಗುಣಸ್ಯ ತ್ವಮಾವಾಸ್ಯಾ ಪೌಷಸ್ಯೈಕಾದಶೀ ತಥಾ ।
ಆಷಾಢಸ್ಯಾಪಿ ದಶಮೀ ಮಾಘಮಾಸಸ್ಯ ಸಪ್ತಮೀ ॥

ಶ್ರಾವಣಸ್ಯಾಷ್ಟಮೀ ಕೃಷ್ಣಾ ತಥಾಷಾಢೀ ಚ ಪೂರ್ಣಿಮಾ ।
ಕಾರ್ತಿಕೇ ಫಾಲ್ಗುನೀ ಚೈತ್ರೀ ಜ್ಯೇಷ್ಠ ಪಂಚದಶೀ ಸಿತಾ ॥
ಮನ್ವಂತರಾದಯಶ್ಚೈತಾ ದತ್ತಸ್ಯಾಕ್ಷಯಕಾರಿಕಾಃ ॥

ಮೊದಲನೆ ಸ್ವಾಯಂಭುವ ಮನ್ವಂತರದ ಪ್ರಾರಂಭದ ದಿನ ಆಶ್ವಿನ ಮಾಸದ ಶುಕ್ಲಪಕ್ಷದ ನವಮೀ ತಿಥಿ. ಎರಡನೇ ಸ್ವಾರೋಚಿಷ ಮನ್ವಂತರದ ಮೊದಲ ದಿನ ಕಾರ್ತೀಕ ಶುದ್ಧ ದ್ವಾದಶೀ. ಮೂರನೆಯ ಔತ್ತಮ ಮನ್ವಂತರದ ಪ್ರಥಮ ದಿನ ಚೈತ್ರ ಶುಕ್ಲ ತದಿಗಿ. ನಾಲ್ಕನೆಯ ರೇವತ ಮನ್ವಂತರದ ಆದಿ ದಿನ ಭಾದ್ರಪದ ಶುಕ್ಲ ತೃತೀಯಾ ತಿಥಿ. ಫಾಲ್ಗುಣದ ಅಮಾವಾಸ್ಯೆ ದಿನದಂದು ಐದನೇಯ ತಾಮಸ ಮನ್ವಂತರದ ಪ್ರಾರಂಭ. ಪುಷ್ಯ ಶುಕ್ಲ ಏಕಾದಶಿ ಚಾಕ್ಷುಷ ಮನ್ವಂತರದ ಮೂಲ ಮೊದಲ ದಿನ. ಈಗ ಪ್ರಚಲಿತವಿದ್ದ ಏಳನೆಯ ವೈವಸ್ವತ ಮನ್ವಂತರವು ಪ್ರಾರಂಭವಾದುದು ಆಷಾಢ ಶುದ್ಧ ದಶಮಿ ದಿನದಂದು. ಮುಂದಿನ ಎಂಟನೆಯ ಸಾವರ್ಣಿ ಮನ್ವಂತರವು ಮಾಘ ಮಾಸದ ಶುಕ್ಲಪಕ್ಷದ ಸಪ್ತಮಿ ದಿನದಿಂದ ಸುರುವಾಗುವದು. ಅದರ ಮುಂದಿನ ಒಂಬತ್ತನೆಯ ಮನ್ವಂತರವಾದ ಬ್ರಹ್ಮಸಾವರ್ಣಿ ಎಂಬ ಯುಗಮಾನ ಪ್ರಾರಂಭವು ಶ್ರಾವಣ ಮಾಸದ ಕೃಷ್ಣಪಕ್ಷದ ಅಷ್ಟಮಿಯ ದಿನದಂದು ಆಗುವದು.

ಆಷಾಢ ಹುಣ್ಣಿಮೆಯಿಂದ ರುದ್ರಸಾವರ್ಣಿ ಎಂಬ ಹತ್ತನೆಯ ಮನ್ವಂತರದ ಪ್ರಾರಂಭ. ಕಾರ್ತೀಕ ಶುಕ್ಲಪಕ್ಷ ಪೂರ್ಣಿಮಾ ತಿಥಿಯಂದು ಹನ್ನೊಂದನೆಯ ದಕ್ಷ ಸಾವರ್ಣಿ ಮನ್ವಂತರವು ಸುರುವಾಗುವದು. ಹನ್ನೆರಡನೆಯ ಮನ್ವಂತರವೇ ಧರ್ಮಸಾವರ್ಣಿ. ಅದು ಪ್ರಾರಂಭವಾಗುವದು ಫಾಲ್ಗುಣ ಪೂರ್ಣಿಮೆಯ ದಿನದಂದು. ರೌಚ್ಯ ಎಂಬ ಹದಿಮೂರನೆಯ ಮನ್ವಂತರವು ಚೈತ್ರ ಶುಕ್ಲ ಪೂರ್ಣಿಮೆಯಿಂದ ಮೊದಲಾಗುವದು. ಕೊನೆಯದಾದ ಭೌತ್ಯ ಮನ್ವಂತರವು ಜ್ಯೇಷ್ಠ ಹುಣ್ಣಿಮೆಯಿಂದಲೇ ಪ್ರಾರಂಭಿಸಲ್ಪಡುವದು. ಈ ಹದಿನಾಲ್ಕು ತಿಥಿಗಳು ಹದಿನಾಲ್ಕು ಮನ್ವಂತರದ ಮೂಲ ತಿಥಿಗಳಾಗಿವೆ. ಈ ಶುಭ ತಿಥಿಗಳಂದು ನೀಡಿದ ದಾನ ಅಕ್ಷಯ. ಮಾಡಿದ ಪುಣ್ಯ ಅನಂತ. ಇದು ಎಂಟನೆಯ ಪ್ರಶ್ನೆಯ ಉತ್ತರವಾಯಿತು.

## ಪ್ರಶ್ನೆ - 9

ಸೂರ್ಯದೇವನು ಮೊಟ್ಟ ಮೊದಲು ರಥಾರೂಢನಾದುದು ಎಂದು?

ಈ ಪ್ರಶ್ನೆಗೆ ಇಂತಿದೆ ಉತ್ತರ :

ಭಗವಾನ್ ಸೂರ್ಯನಾರಾಯಣನು ಮಾಘಶುದ್ಧ ಸಪ್ತಮಿ ದಿನದಂದು ತನ್ನ ರಥವನ್ನು ಏರಿದನು. ಆದುದರಿಂದಲೇ ಆ ತಿಥಿಯನ್ನು ಬಲ್ಲಿದರಾದ ಬ್ರಾಹ್ಮಣರು 'ರಥಸಪ್ತಮಿ' ಎಂದು ಕರೆಯುತ್ತಾರೆ.

**ತಸ್ಯಾಂ ತಿಥೌ ರಥಂ ಪೂರ್ವಂ ಪ್ರಾಪ ದೇವೋ ದಿವಾಕರಃ ।**
**ಸ ತಿಥಿಃ ಕಥಿತೋ ವಿಪ್ರೈರ್ಮಾಘೇ ಯಾ ರಥಸಪ್ತಮೀ ।**

**ತಸ್ಯಾಂ ದತ್ತಂ ತಥೇಷ್ಟಂ ಯತ್ ಸರ್ವಮೇವಾಕ್ಷಯಂ ಮತಮ್ ।**
**ಸರ್ವದಾರಿದ್ರ್ಯ ಶಮನಂ ಭಾಸ್ಕರ ಪ್ರೀತಯೇ ಮತಮ್ ॥**

ಸೂರ್ಯ ಭಗವಂತನು ರಥಾರೋಹಣ ಮಾಡಿದ ರಥಸಪ್ತಮೀ ದಿನದಂದು ಕೊಟ್ಟ ದಾನವು, ನೀಡಿದ ಆಹುತಿಯು, ನೆರವೇರಿಸಿದ ಯಜ್ಞಯಾಗಗಳು ಹಾಗೂ ಆಚರಿಸಿದ ಪುಣ್ಯ ಕರ್ಮಗಳು ಅಕ್ಷಯ ಪುಣ್ಯಪ್ರದಾಯಕ. ಹುಟ್ಟಿನೊಂದಿಗೆ ಬಂದ ಮಾನವನ ದಟ್ಟ ದಾರಿದ್ರ್ಯವನ್ನು ಕಳೆದುಕೊಳ್ಳಲು ರಥಸಪ್ತಮಿಯ ದಿನ ದಾನ ಪುಣ್ಯ ಕರ್ಮಗಳು ಒಳ್ಳೆಯ ಉಪಾಯ ಎನಿಸಿವೆ. ಅಲ್ಲದೇ ಭಾಸ್ಕರನ ವಿಶೇಷ ಪ್ರೀತಿಗೆ ಆ ದಿನದ ದಾನ ಕಾರಣವಾಗುತ್ತದೆ.

## ಪ್ರಶ್ನೆ - 10

ಕರಿನಾಗರ ಹಾವಿನಂತೆ ಎಲ್ಲ ಪ್ರಾಣಿಗಳನ್ನು ಉದ್ವಿಗ್ನರನ್ನಾಗಿ ಮಾಡುವವರು ಯಾರು? ಇದನ್ನು ತಿಳಿದವರಾದರೂ ಯಾರು ?

ಈ ಪ್ರಶ್ನೆಗೆ ಉತ್ತರ :

**ನಿತ್ಯೋದ್ವೇಜಕಮಾಹುರ್ಯಂ ಬುಧಾಸ್ತಂ ಶ್ರುಣು ತತ್ವತಃ ।**
**ಯಶ್ಚ ಯಾಚನಕೋ ನಿತ್ಯಂ ನ ಸ ಸ್ವರ್ಗಸ್ಯ ಭಾಜನಂ ॥**

**ಉದ್ವೇಜಯತಿ ಭೂತಾನಿ ಯಥಾ ಚೋರಸ್ತಥೈವ ಸಃ ।**
**ನರಕಂ ಯಾತಿ ಪಾಪಾತ್ಮಾ ನಿತ್ಯೋದ್ವೇಗಕರಸ್ತು ಸೌ ॥**

ಎಲ್ಲ ಮಾನವರನ್ನೂ ಯಾವಾಗಲೂ ಉದ್ವಿಗ್ನರನ್ನಾಗಿ ಮಾಡುವವನೆಂದರೆ ಯಾಚಕ. ಇವರಲ್ಲದೆ ಧನಿಕರಾಗಿದ್ದರೂ ಕೆಲವರು ಹಲವಾರು ರೀತಿಯಿಂದ ಬೇಡಿ ಕಾಡಿ ಹೆರವರಿಂದಲೆ ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವವರಿರುವರು. ಇಂಥವರು ಯಾಚಕರಲ್ಲದಿದ್ದರೂ ಜನರನ್ನು ದೋಚಿ ಚೋರರಂತೆ ಜನರಿಗೆ ಉದ್ವೇಗವನ್ನು ಉಂಟುಮಾಡುವರು. ಇಂಥ ಪಾಪಿಗಳು ನಿಶ್ಚಿತವಾಗಿ ನರಕಕ್ಕೆ ಹೋಗುವರು. ಇದರ ಮರ್ಮವನ್ನು ಅರಿತವರು ಇಂಥ ಭೀಕರ ಭಿಕ್ಷುಕರನ್ನು ಗುರುತಿಸುವರು.

## ಪ್ರಶ್ನೆ - 11

ಈ ಸಂಸಾರದಲ್ಲಿ ದಕ್ಷರಲ್ಲಿಯೆ ಅತ್ಯಂತ ದಕ್ಷರೆನಿಸಿದವರ್ಯಾರು ।

**ಇಹೋಪಪತ್ತಿರ್ಮಮ ಕೇನ ಕರ್ಮಣಾ**
**ಕ್ವ ಚ ಪ್ರಯಾತವ್ಯಮಿತೋ ಭವೇನ್ಮಯಾ ॥**
**ವಿಚಾರ್ಯ ಚೈವಂ ಪ್ರತಿಕಾರಕಾರೀ**
**ಬುಧೈಃ ಸ ಚೋಕ್ತೋ ದ್ವಿಜ ದಕ್ಷ ದಕ್ಷಃ ॥**
**ಮಾಸೈರಷ್ಟಭಿರಹ್ನಾ ಚ ಪೂರ್ವೇಣ ವಯಸಾಽ ಯುಷಾ ।**
**ತತ್ಕರ್ಮ ಪುರುಷಃ ಕುರ್ಯಾದ್ ಯೇನಾಂತೇ ಸುಖಮೇಧತೇ ॥**

ಯಾವ ಕರ್ಮವನ್ನು ಮಾಡಿದರೆ ನಾನು ಹುಟ್ಟಿದ್ದು ಸಾರ್ಥಕವಾದೀತು? ಸತ್ತಬಳಿಕ ನಾನು ಈ ಲೋಕದಿಂದ ಮುಂದೆ ಹೋಗುವದಾದರೂ ಎಲ್ಲಿಗೆ? ನನ್ನ ಜೀವನದ ಗುರಿಗವ್ಯು ಯಾವುದು ಎಂಬುದನ್ನು ಮನುಷ್ಯನು ಮೊದಲು ವಿಚಾರಿಸಬೇಕು. ತನ್ನ ಮುಂದಿನ ಜನ್ಮಾಂತರದ ಜೀವನವು ಸುಖಮಯವಾಗಲಿಕ್ಕೆ ತಕ್ಕ ಉಪಾಯವನ್ನು ಈಗಲೇ ಕೈಕೊಂಡು ಸರಿಯಾಗಿ ಸಾಧನ ಮಾಡಿಕೊಳ್ಳಬೇಕು. ಹೀಗೆ ಜನ್ಮಾಂತರದ ಸುಖಕ್ಕಾಗಿ ಈಗಲೇ ಇದೇ ಜನ್ಮದಲ್ಲಿಯೇ ಮುಂಜಾಗ್ರತೆಯನ್ನು ವಹಿಸಿ, ಭಾವಿ ದುಃಖಗಳ ಪರಂಪರೆಯನ್ನು ನಿವಾರಣ ಮಾಡಿಕೊಳ್ಳುವವನೇ ದಕ್ಷಾತಿದಕ್ಷ ಅರ್ಥಾತ್ ದಕ್ಷ ದಕ್ಷ ಎನಿಸಲ್ಪಡುತ್ತಾನೆ.

ಮನುಷ್ಯನು ಒಂದು ವರ್ಷದ ಎಂಟು ತಿಂಗಳು ದುಡಿದು ಮಳೆಗಾಲದ ನಾಲ್ಕು ತಿಂಗಳ ಅತಿವೃಷ್ಟಿಯ ಪ್ರದೇಶದಲ್ಲಿ ಅಥವಾ ಅತಿ ಚಳಿಯ ಹಿಮ ಪ್ರದೇಶದಲ್ಲಿ ಅಥವಾ ಅತಿ ಬಿಸಿಲಿನ ಬೇಗೆಯಿಂದ ಕುದಿಯುವ ರಾಷ್ಟ್ರಗಳಲ್ಲಿ ಸಹಿಸಲು ಅಶಕ್ಯವಾದ ಆ ನಾಲ್ಕು ತಿಂಗಳು ಸುಖವಾಗಿ ಮನೆಯಲ್ಲಿಯೇ ಕುಳಿತು ತಿಂದು ಉಂಡು ನಿಶ್ಚಿಂತನಾಗಿ ಇರುವಂತೆ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು.

ಒಂದು ದಿನ ಇಪ್ಪತ್ತು ನಾಲ್ಕು ಗಂಟೆಗಳಲ್ಲಿ ಆರುಗಂಟೆ ದುಡಿಮೆ ಗೈದು ದಿವಸದ ಉಳಿದ ಭಾಗದಲ್ಲಿ ಊಟ, ಪಾಟ, ಆಟ, ನೋಟ, ಸುಖ, ನಿದ್ರೆ, ವಿನೋದ ಗೋಷ್ಠಿಯಲ್ಲಿ ಆನಂದದಿಂದ ಕಾಲ ಕಳೆಯಲಿಕ್ಕೆ ಬರುವಂತೆ ಏರ್ಪಾಡನ್ನು ಮಾಡಿಕೊಳ್ಳಬೇಕು. ಇದರಂತೆ ಬುದ್ಧಿವಂತನಾದ ಮನುಷ್ಯನು ತನ್ನ ಆಯುಷ್ಯದ ಪೂರ್ವಭಾಗದಲ್ಲಿ ಇಪ್ಪತ್ತೈದು ವರ್ಷಗಳ ಅವಧಿಯಲ್ಲಿಯೇ ಮುಂದಿನ ಎಪ್ಪತ್ತೈದು ವರುಷದ ಜೀವನವೆಲ್ಲವೂ ನಿಶ್ಚಿಂತೆಯಾಗಿ ಶಾಂತಿ ಸಂತಸಗಳಿಂದ ಬಾಳಿ ಬದುಕಲು ಬರುವಂತೆ ವಿದ್ಯೆ, ಉದ್ಯೋಗ, ವ್ಯವಸಾಯ ಮುಂತಾದವುಗಳನ್ನು ಕೈಕೊಳ್ಳಬೇಕು. ಇಂಥ ಮಾನವನು ದಕ್ಷರಲ್ಲಿ ದಕ್ಷ ಎನಿಸುವನು.

## ಪ್ರಶ್ನೆ - 12

ಎರಡು ದಾರಿಗಳನ್ನು ಬಲ್ಲ ಬ್ರಾಹ್ಮಣನು ಯಾರು?

**ಅರ್ಚಿಷಾ ಯಾತಿ ಮೋಕ್ಷಂ ಚ ಧೂಮೇನಾವರ್ತತೇ ಪುನಃ ।**
**ಯಜ್ಞೈರಾಸಾಧ್ಯತೇ ಧೂಮೋ ನೈಷ್ಕರ್ಮ್ಯೇಣಾರ್ಚಿರಿಷ್ಯತೇ ॥**
**ಏತಯೋರಪರೋ ಮಾರ್ಗಃ ಪಾಖಂಡ ಇತಿ ಕಥ್ಯತೇ ।**
**ಯೋ ದೇವಾನ್ ಮನ್ಯತೇ ನೈವ ಧರ್ಮಾಂಶ್ಚ ಮನುಸಂಚಿತಾನ್ ॥**
**ನ ತೌ ಸ ಯಾತಿ ಪಂಥಾನೌ ತತ್ವಾರ್ಥೋಽಯಂ ನಿರೂಪಿತಃ ॥**

ಮಾನವರಿಗೆ ಸದ್ಗತಿಯನ್ನು ಹೊಂದಲಿಕ್ಕೆ ಎರಡು ಮಾರ್ಗಗಳು. ಅರ್ಚಿರಾದಿ ಮಾರ್ಗ. ಧೂಮ ಮಾರ್ಗ ಎಂದು. ಅರ್ಚಿರಾದಿ ಮಾರ್ಗದಿಂದ ಮೋಕ್ಷವನ್ನೂ ಧೂಮಾದಿಮಾರ್ಗದಿಂದ ಸ್ವರ್ಗವನ್ನೂ ಪಡೆಯಬಹುದು. ಯಜ್ಞಯಾಗ ಮುಂತಾದ ಸಕಾಮವಾದ ಸಾಧನಗಳಿಂದ ಧೂಮ ಮಾರ್ಗವನ್ನು ಅನುಸರಿಸಿ ನಡೆದರೆ ಸತ್ತ ಬಳಿಕ ಸ್ವರ್ಗರೂಪ ಫಲ ದೊರೆಯುವದು. ಆದರೆ ಅದು ಅಶಾಶ್ವತ. ಪುಣ್ಯ ಸವೆದ ಕೂಡಲೇ ತಳ್ಳಿ ಕೆಳಗೆ ಬೀಳಿಸಿ ಬಿಡುವರು ಆ ಸ್ವರ್ಗದಿಂದ. ಆದರೆ ನಿಷ್ಕಾಮಕರ್ಮದ ದಿವ್ಯಜ್ಞಾನ ಮಾರ್ಗವನ್ನು ಅನುಸರಿಸಿ ದೇವರನ್ನು ಭಕ್ತಿ ಧ್ಯಾನಗಳಿಂದ ಆರಾಧಿಸಿದರೆ ಮೋಕ್ಷ ರೂಪ ಫಲವು ದೊರೆಯುವದು. ಇವೆರಡನ್ನೂ ಬಿಟ್ಟು ಮೂರನೆಯ ಸ್ವೈರಾಚಾರ ಸ್ವಚ್ಛಂದ ವಿಚಾರದ ಉಚ್ಛೃಂಖಲ ಮಾರ್ಗ ಒಂದಿದೆ. ಅದಕ್ಕೆ ಪಾಖಂಡ ಮಾರ್ಗ ಎನ್ನುವರು. ಅವರು ದೇವ, ಮುನಿ, ಮನು ಮುಂತಾದ ಮಹನೀಯರೂ ಶ್ರುತಿಸ್ಮೃತಿ ಪುರಾಣಾದಿ ಪ್ರಮಾಣ ಗ್ರಂಥಗಳೂ ಹೇಳಿದ್ದನ್ನು ಮನ್ನಿಸದೆ ಮನಬಂದಂತೆ ನಡೆದು ನುಡಿದು ಪಾಪದ ದಾರಿ ಹಿಡಿದು ನರಕಕ್ಕೆ ಹೋಗುವರು.

ವಿಪ್ರೋತ್ತಮರೇ ! ಈ ರೀತಿಯಿಂದ ನಾನು ನಿಮ್ಮ ಹನ್ನೆರಡೂ ಪ್ರಶ್ನೆಗಳಿಗೆ ನನ್ನ ಬುದ್ಧಿಗೆ ತಿಳಿದಂತೆ ಸಮಾಧಾನ ಹೇಳಿದ್ದೇನೆ. ನನ್ನ ಉತ್ತರ ಸರಿಯೇ ತಪ್ಪೇ? ಇದರ ನಿರ್ಣಯ ತಮಗೆ ಸೇರಿದ್ದು. ಇನ್ನು ತಾವು ಯಾರು ಏನು ಎಂಬುದನ್ನು ನನಗೆ ತಿಳಿಸಿರಿ.

**ನಾರದ :** ನಾನು ಕೇಳಿದ ಪ್ರಶ್ನೆಗಳಿಗೆ ಆ ಬಾಲಕ ನೀಡಿದ ಸಮಾಧಾನವನ್ನು ಕೇಳಿ ನನ್ನ ಮೈತುಂಬ ರೋಮಾಂಚನ ಉಂಟಾಯಿತು. ನಾನಾಗ ನನ್ನ ಸ್ವರೂಪವನ್ನು ಪರಿಚಯಿಸಿಕೊಂಡೆ. ಅಲ್ಲದೆ, ಆ ಬ್ರಾಹ್ಮಣರಲ್ಲಿ ನನಗಾದ ಆನಂದವನ್ನು ಹೀಗೆ ತೋಡಿಕೊಂಡೆ - ''ನನ್ನ ಅಪ್ಪ ಚತುರ್ಮುಖ ಕೃತ್ಯಕೃತ್ಯ. ಯಾಕೆಂದರೆ ಆತನ ಸೃಷ್ಟಿಯ ಒಬ್ಬ ಬಾಲಕನಾದರೂ ನಿಮ್ಮಂತೆ ಜ್ಞಾನಿಶ್ರೇಷ್ಠನಾಗಿದ್ದಾನೆ. ನಿಮ್ಮಂತಹ ಪುಣ್ಯಶಾಲಿಗಳೂ, ನಿರುಪದ್ರವಿಗಳೂ ಆದ ಮಹಾತ್ಮರ ದರ್ಶನ ಪಡೆದ ನನ್ನ ಜನ್ಮ ಇಂದು ಸಫಲವಾದಂತೆ'' ನನ್ನ ಈ ಮಾತನ್ನು ಕೇಳಿದಾಕ್ಷಣ ಶಾತಾತಪನೇ ಮೊದಲಾದ ಆ ಬ್ರಾಹ್ಮಣರು ಕೂಡಲೇ ಎದ್ದುನಿಂತರು. ಅರ್ಘ್ಯ ಪಾದ್ಯಾದಿ ಪೂಜಾಸಾಮಗ್ರಿಗಳೊಂದಿಗೆ ಸ್ವಾಗತಿಸಲು ಸನ್ನದ್ಧರಾದರು. ಆ ಬಳಿಕ ಸಜ್ಜನರ ಮಾತಿನ ಶೈಲಿಯನ್ನು ಅವಲಂಬಿಸಿ ಹೀಗೆಂದರು ಆ ವಿಪ್ರೋತ್ತಮರು -

''ನಿಮ್ಮಂತಹ ದೇವರ್ಷಿಗಳು ನಮ್ಮಲ್ಲಿಗೆ ದಯಮಾಡಿಸಿರೆಂದ ಮೇಲೆ ನಾವು ಧನ್ಯರಾಗಿದ್ದೇವೆ. ಮಹರ್ಷಿಗಳೇ, ಎಲ್ಲಿಂದ ಬಂದಿರಿ? ಮತ್ತೆಲ್ಲಿಗೆ ಸಾಗ ಬೇಕೆಂದಿರುವಿರಿ? ಈ ನಮ್ಮ ಆಶ್ರಮಕ್ಕೆ ಆಗಮಿಸಿದ ಉದ್ದೇಶವಾದರೂ ಏನು?

ಅದನ್ನು ನಮ್ಮಲ್ಲಿ ನಿವೇದಿಸಿಕೊಳ್ಳಬೇಕು.''

**ನಾರದ :** ಮಹೀಸಾಗರ ಸಂಗಮವೆಂಬ ಮಹಾತೀರ್ಥವಿದೆ. ಅಲ್ಲಿ ಬ್ರಾಹ್ಮಣರಿಗೆ ಉತ್ತಮ ಸ್ಥಳವನ್ನು ದಾನಮಾಡಬೇಕೆಂದು ಚತುರ್ಮುಖನ ಅಪ್ಪಣೆಯಾಗಿದೆ. ಅದನ್ನು ನಡೆಸಲು ಬಯಸುವ ನನಗೆ ನಿನ್ನ ಅನುಜ್ಞೆ ಬೇಕಾಗಿದೆ.'' ನಾನು ಈ ರೀತಿ ನುಡಿಯಲು ಶಾತಾತಪನು ಉಳಿದೆಲ್ಲ ಬ್ರಾಹ್ಮಣರೆಡೆಗೆ ದೃಷ್ಟಿ ಹಾಯಿಸಿ ಹೀಗೆ ನುಡಿಯಲು

ಪ್ರಾರಂಭಿಸಿದ-''ನಾರದರೇ, ಭಾರತವರ್ಷ ದೇವತೆಗಳಿಗೂ ದುರ್ಲಭವಾದುದೆನ್ನುವುದು ಅಪ್ಪಟ ಸತ್ಯ ವಿಧಾನ. ಅಂತಹ ಭಾರತ ವರ್ಷದಲ್ಲೂ ಮಹೀಸಾಗರ ಸಂಗಮದ ಶ್ರೇಷ್ಠತೆಯ ಬಗೆಗೆ ಏನು ಹೇಳಲಾದೀತು ! ಆ ಮಹೀಸಾಗರ ಸಂಗಮದಲ್ಲಿ ಒಮ್ಮೆ ಮಿಂದನೆಂದರೆ ಮಾನವ ಸಕಲ ತೀರ್ಥಗಳಲ್ಲಿ ಮಿಂದಫಲವನ್ನೂ ಹೊಂದುತ್ತಾನೆ ತಾನೇ! ಹೀಗಿದ್ದರೂ ನಿಮ್ಮ ನಿರ್ಧಾರದಲ್ಲಿ ನಾವು ಭಯಪಡುವ ಒಂದು ದೋಷವಿದೆ. ಅದೇನೆಂದರೆ, ಅಲ್ಲಿ ತುಂಬ ಕ್ರೂರ ಹಾಗೂ ದುಸ್ಸಾಹಸಮಯವಾದ ಕರ್ಮ ನಡೆಸುವ ಕಳ್ಳರಿದ್ದಾರೆ. ಅವರು ನಮ್ಮಂತಹ ತಪಸ್ವಿಗಳ ಸಂಪತ್ತನ್ನು ಸೂರೆಗೊಳ್ಳುತ್ತಾರೆ. ಆ ಸಂಪತ್ತು ಮತ್ತಾವುದೂ ಅಲ್ಲ; ಸ್ವರ್ಶಾಕ್ಷರಗಳ ಗುಂಪಿನಲ್ಲಿ ಹದಿನಾರನೆಯ ಹಾಗೂ ಇಪ್ಪತ್ತೊಂದನೆಯ ಅಕ್ಷರಗಳನ್ನು ಜೋಡಿಸಿದಾಗ ಉಂಟಾಗುವ ಪದದಿಂದ ವಾಚ್ಯವಾದುದು. ಅಂತಹ ಸಂಪತ್ತನ್ನು ಕಳೆದುಕೊಂಡೆವೆಂದರೆ ನಮ್ಮ ಜನ್ಮವೇ ವ್ಯರ್ಥವಾದಂತೆ. ಆ ಕಳ್ಳರ ವಶಕ್ಕೆ ಬೀಳಬಾರದೆಂಬುದಷ್ಟೇ ನಮ್ಮ ಅಭಿಲಾಷೆ.''

**ಅರ್ಜುನ :** ಜ್ಞಾನಿಗಳೇ ! ಯಾರವರು ಕಳ್ಳರು ? ಅವರು ಅಪಹರಿಸುವ ಸಂಪತ್ತಾದರೂ ಯಾವುದು ?

**ನಾರದ :** ಕುಂತೀನಂದನ, 'ಕಾಮ ' ಮತ್ತು 'ಕ್ರೋಧ ' ಮೊದಲಾದ ದೋಷಗಳೇ ಕಳ್ಳರು. ತಪಸ್ಸೇ ಆ ಕಳ್ಳರು ಕದಿಯುವ ಸಂಪತ್ತು. ಅದರ ಕಳ್ಳತನವಾದೀತೆಂಬ ಭಯದಿಂದಲೇ ಆ ಬ್ರಾಹ್ಮಣರು ಹಾಗೆ ನುಡಿದರು.'' ಆಗ ಹಾರೀತಮುನಿ ಹೀಗೆ ನುಡಿದನು - ''ಮಹೀಸಾಗರ ಸಂಗಮದಲ್ಲಿ ಸ್ವರ್ಗ ಹಾಗೂ ಮೋಕ್ಷಗಳು ಕೈಗೆಟಕುವಷ್ಟು ಸುಲಭ ಸಾಧ್ಯವಾಗಿರುತ್ತವೆ. ಅಂತಹ ತೀರ್ಥವನ್ನು ಯಾವನು ತಾನೇ ತ್ಯಜಿಸಿಯಾನು ? ತ್ಯಜಿಸಿದಲ್ಲಿ ಆತನನ್ನು ಮೂಢ ಬುದ್ಧಿಯವನೆನ್ನಬೇಕಷ್ಟೇ ! ನಮ್ಮ ಹೃದಯದಲ್ಲಿ ಪಾರ್ವತೀಪತಿಯ ವಾಸಿಸುತ್ತಿರುತ್ತಾನೆ. ಆತ ಗಾಢವಾದ ರಕ್ಷಣೆಯನ್ನು ನಮಗಿತ್ತಿದ್ದಾನೆ. ಆತನ ನಿವಾಸವಾದ ನಮ್ಮ ಹೃದಯದಲ್ಲಿ ಆ ಕಳ್ಳರಾದರೂ ಏನು ತಾನೇ ಮಾಡಬಲ್ಲರು ? ನಾರದರೆ, ನಿಮ್ಮ ಹೇಳಿಕೆಯಂತೆ ನಾವೂ ಅಲ್ಲಿಗೆ ಹೊರಡುವೆವು. ನನ್ನ ಪರಿವಾರವಾದರೂ ಇಪ್ಪತ್ತಾರು ಸಾವಿರ ಬ್ರಾಹ್ಮಣರನ್ನೊಳಗೊಂಡಿದೆ. ಆ ಬ್ರಾಹ್ಮಣರಲ್ಲಿ ಪ್ರತಿಯೊಬ್ಬರೂ ಅಧ್ಯಯನ ಅಧ್ಯಾಪನಾದಿ ಷಟ್ಕರ್ಮ ತತ್ಪರರು. ಬಾಹ್ಯ ಶುದ್ಧಿಯನ್ನೂ ಆಂತರಿಕ ಶುದ್ಧಿಯನ್ನೂ ಪಡೆದುಕೊಂಡವರು. ಲೋಭ ಹಾಗೂ ಅಹಂಕಾರದಿಂದ ದೂರವಾದವರು. ಅವರೆಲ್ಲರಿಂದೊಡಗೂಡಿ ನಾನಲ್ಲಿಗೆ ಬರಬಲ್ಲೆ. ಇದು ನನ್ನ ನಿಷ್ಕೃಷ್ಟ ನಿರ್ಣಯ .''

ಹಾರೀತನು ಈ ರೀತಿ ಹೇಳಲು, ನಾನು ಆ ಬ್ರಾಹ್ಮಣರನ್ನೆಲ್ಲ ನನ್ನ ದಂಡದ ಮೇಲೆರಿಸಿದೆ. ತುಂಬ ಸಂತಸದಿಂದ ಗಗನ ಮಾರ್ಗವಾಗಿ ಹೊರಟೆ. ನೂರು ಯೋಜನದ ಹಿಮದ ಮಾರ್ಗ ಅದರ ಮಧ್ಯದಲ್ಲಿದೆ. ಆ ಮಾರ್ಗವನ್ನು ದಾಟಿದ ನಾನು ಆ ಬ್ರಾಹ್ಮಣರ ಜೊತೆಗೆ ಕೇದಾರ ಕ್ಷೇತ್ರವನ್ನು ತಲುಪಿದೆ. ಆ ಹಿಮದ ಪ್ರದೇಶವನ್ನು ಆಕಾಶ ಮಾರ್ಗದ ಮೂಲಕವಾಗಲೀ, ಗುಹಾಮಾರ್ಗದ ಮುಖಾಂತರವಾಗಲೀ, ಕಾರ್ತಿಕೇಯನ ಪ್ರಸಾದದಿಂದಾಗಲೀ ದಾಟಬಹುದೇ ವಿನಹ ಬೇರೆ ಉಪಾಯವಿರಲಾರದು.

**ಅರ್ಜುನ :** ''ನಾರದರೇ ! ಕಲಾಪಗ್ರಾಮ ಎಲ್ಲಿದೆ? ಅದಕ್ಕೆ ಗುಹಾ ಮಾರ್ಗವಾಗಿ ಹೋಗುವ ಬಗೆ ಹೇಗೆ ? ಸ್ವಾಮಿ ಕಾರ್ತಿಕೇಯನ ಕೃಪಾ ಪ್ರಸಾದವನ್ನು ಹೇಗೆ ಪಡೆಯಬಹುದು? ಇತ್ಯಾದಿ ಎಲ್ಲ ವಿಚಾರಗಳ ಬಗ್ಗೆ ನನಗೆ ತಿಳಿಸಿರಿ.

**ನಾರದ :-** ಕೇದಾರ ಕ್ಷೇತ್ರದಿಂದ ಮುಂದೆ ನೂರು ಯೋಜನೆಗಳವರೆಗೆ ಹಿಮಾವೃತ ಪ್ರದೇಶವಿದೆ. ಅದರಾಚೆಗೆ ಕಲಾಪ-ಗ್ರಾಮವಿದೆ, ಅದು ನೂರು ಯೋಜನ ವಿಶಾಲವಾಗಿದೆ. ಅದರಾಚೆಗಿರುವ ಸಮುದ್ರ ಬಾಲೂಕಾ ಎಂದೆನಿಸಿದೆ. ಅದರ ವಿಸ್ತಾರವೂ ನೂರು ಯೋಜನೆಗಳಷ್ಟು. ಅದರ ನಂತರ ನೂರು ಯೋಜನ ವಿಸ್ತಾರದ ಪ್ರದೇಶವೊಂದಿದೆ. ಅದನ್ನು ಭೂಸ್ವರ್ಗವೆನ್ನುತ್ತಾರೆ. ಅಲ್ಲಿಂದಲೇ ಗುಹೆಯ ಮಾರ್ಗವಾಗಿ ಹೋಗಲು ಸಾಧ್ಯ. ಹೇಗೆ ಸಾಧ್ಯವೆನ್ನುವುದನ್ನೂ ಕೇಳು. ದಕ್ಷಿಣದಿಕ್ಕಿನಲ್ಲಿ ಕಾರ್ತಿಕೇಯ ಭಗವಂತನಿದ್ದಾನೆ. ಆತನನ್ನು ಆರಾಧಿಸಬೇಕು. ಆರಾಧಿಸುವಾಗ ನಿರಾಹಾರಿಯಾಗಿರಬೇಕು. ಇದರಿಂದ ಸಂತುಷ್ಟನಾದ ಕಾರ್ತಿಕೇಯ ಸ್ವಾಮಿ ಎಂದು ಆರಾಧಕನನ್ನು ನಿಷ್ಕಲ್ಮಷನನ್ನಾಗಿಸುವನೋ ಅಂದೇ ಸ್ವಪ್ನದಲ್ಲಿ ಕಾಣಿಸಿಕೊಳ್ಳುವನು. 'ನೀನು ಬಯಸುವ ಪ್ರದೇಶಕ್ಕೆ ಯಾತ್ರೆ ಮಾಡು' ಎಂದು ಆದೇಶಿಸುವನು.

ಕಾರ್ತಿಕೇಯ ಸ್ವಾಮಿಯ ಸ್ಥಾನದ ಪಶ್ಚಿಮದಿಕ್ಕಿನಲ್ಲಿ ಒಂದು ದೊಡ್ಡ ಗುಹೆ ಇದೆ. ಅದು ಏಳುನೂರು ಯೋಜನ ದೂರದವರೆಗೆ ಹಬ್ಬಿದೆ. ಕಾರ್ತಿಕೇಯನ ಆಜ್ಞೆಯಾಯಿತೆಂದರೆ ಆ ಗುಹೆಯನ್ನು ಪ್ರವೇಶಿಸಿ ಮುಂದುವರಿಯಬೇಕು. ಅದರ ಮಧ್ಯೆ ಮರಕತಮಣಿಯ ಒಂದು ಶಿವಲಿಂಗವಿದೆ. ಸೂರ್ಯನಿಗೆ ಸಮಾನವಾದ ಪ್ರಕಾಶ ಅದರದು. ಆ ಶಿವಲಿಂಗದ ಮುಂದೆ ಅತ್ಯಂತ ನಿರ್ಮಲವಾದ ಬಂಗಾರಬಣ್ಣದ ಮಣ್ಣು ಸಿಗುತ್ತದೆ. ಅಲ್ಲಿ ಶಿವಲಿಂಗಕ್ಕೆ ನಮಿಸಬೇಕು. ಮತ್ತೆ ಆ ಹಳದಿಬಣ್ಣದ ಮಣ್ಣನ್ನು ಕೈಯಲ್ಲಿ ಹಿಡಿದು ಸ್ತಂಭತೀರ್ಥಕ್ಕೆ ಬರಬೇಕು. ಅಲ್ಲಿಯಾದರು ಅರ್ಧ ರಾತ್ರಿಯ ತನಕ ಕುಮಾರಸ್ವಾಮಿಯ ಹಾಗೂ ವರಾಹದೇವರ ಆರಾಧನೆಯನ್ನು ನಡೆಸಬೇಕು. ಅರ್ಧ ರಾತ್ರಿಯಾಗುತ್ತಲೇ ಬಾವಿಯಿಂದ ನೀರೆತ್ತಬೇಕು. ಆ ನೀರು ಮತ್ತು ಮಣ್ಣನ್ನು ಕೂಡಿಸಿ ಎರಡು ಕಣ್ಣುಗಳಿಗೂ ಕಾಡಿಗೆಯನ್ನು ತಯಾರಿಸಬೇಕು. ಜೊತೆಗೇನೇ ಇಡೀ ದೇಹಕ್ಕ ಆ ನೀರು ಮತ್ತು ಮಣ್ಣನ್ನು ಲೇಪಿಸಿಕೊಳ್ಳಬೇಕು.

ಆ ಅಂಜನದ ಪ್ರಭಾವದಿಂದ ಎಂಟು ಹೆಜ್ಜೆಗಳನ್ನಿಡುತ್ತಲೇ ಒಂದು ಸುಂದರವಾದ ಬಿಲ ತೋರುತ್ತದೆ. ಆ ಬಿಲದ ನಡುವೆ ಯಾತ್ರೆ ನಡೆಸಬೇಕು. ಅಲ್ಲಿ ಕಾರೀಷವೆಂಬ ಹೆಸರಿನ ಭಯಂಕರ ಹುಳಗಳಿರುವವು. ಆದರೆ ಅಂಗಲೇಪದ ಪ್ರಯುಕ್ತ ಸಾಧಕನಿಗೆ ಏನನ್ನೂ ಮಾಡಲಾರವು ಅವು. ಆ ಬಿಲದ ಮಧ್ಯೆ ಸಿದ್ಧಪುರುಷರಿರುತ್ತಾರೆ. ಅವರು ಸೂರ್ಯಸಮಾನ ತೇಜಸ್ವಿಗಳು. ಅವರ ದರ್ಶನ ಮಾಡುತ್ತ ಮುಂದುವರಿದ ಸಾಧಕನಿಗೆ ಅತ್ಯುತ್ತಮವಾದ ಕಲಾಪ - ಗ್ರಾಮ ಸಿಗುತ್ತದೆ. ಅಲ್ಲಿಯ ಮಾನವರ ಆಯುಷ್ಯ ನಾಲ್ಕು ಸಾವಿರ ವರ್ಷಕ್ಕೆ ಏರುತ್ತದೆ. ಅಲ್ಲೆಲ್ಲ ಮಂದಿ ಫಲಾಹಾರಿಗಳೇ.

ಈ ರೀತಿಯಾಗಿ ಬಿಲದಿಂದ ಕಲಾಪ-ಗ್ರಾಮಕ್ಕೆ ತೆರಳಲು ಬೇಕಾದ ವಿಧಿ ನಿಯಮಗಳನ್ನು ತಿಳಿಸಿದ್ದಾಯಿತು. ಮುಂದೆ ಅಲ್ಲೇನು ಸಂಭವಿಸುತ್ತದೆಂಬುದನ್ನು ಹೇಳುವೆ ಕೇಳು. ತಪಃ ಪ್ರಭಾವದಿಂದ ಅತ್ಯಂತ ಸೂಕ್ಷ್ಮವಾದ ರೂಪವನ್ನು ಹೊತ್ತ ಆ ಬ್ರಾಹ್ಮಣರನ್ನು ನನ್ನ ದಂಡದ ಮೇಲ್ಭಾಗದಲ್ಲಿಟ್ಟು ನಾನು ಮಹೀಸಾಗರ ಸಂಗಮ

ತೀರ್ಥಕ್ಕೆ ಬಂದೆ. ಅಲ್ಲಿ ಪವಿತ್ರವಾದ ಜಲಾಶಯದ ದಡದಲ್ಲಿ ಅವರನ್ನಿಳಿಸಿ ಸ್ವತಂತ್ರರನ್ನಾಗಿಸಿದೆ. ಅಲ್ಲದೆ ನನ್ನ ದೋಷಗಳನ್ನು ಪೂರ್ಣ ಸುಟ್ಟುಕೊಳ್ಳುವುದಕ್ಕಾಗಿ ಕಾಡ್ಗಿಚ್ಚಿನಂತೆ ಪ್ರಭಾವಕಾರಿಯಾದ ಆ ಮಹೀಸಾಗರ ಸಂಗಮ ತೀರ್ಥದಲ್ಲಿ ಆ ಬ್ರಾಹ್ಮಣ ಶ್ರೇಷ್ಠರ ಜೊತೆಗೆ ಮಿಂದೆ.

ಸಂಗಮದ ಸಮೀಪದಲ್ಲಿ ಕೂತು ನಾವೆಲ್ಲ ದೇವತೆಗಳಿಗೂ ಪಿತೃಗಳಿಗೂ ತರ್ಪಣವಿತ್ತೆವು. ಗಾಯತ್ರೀ ಮಂತ್ರವನ್ನು ಜಪಿಸಿದೆವು. ಸೂರ್ಯನೆಡೆಗೆ ನೋಡುತ್ತ ಹೃದಯದಲ್ಲಿ ಶ್ರೀವಿಷ್ಣುಭಗವಂತನನ್ನು ಧ್ಯಾನಿಸಿದೆವು. ಆ ಸನ್ನಿವೇಶದಲ್ಲಿ ಇಂದ್ರಾದಿದೇವತೆಗಳೂ, ಸೂರ್ಯಾದಿ ಸಂಪೂರ್ಣ ಗ್ರಹಗಳೂ, ಲೋಕಪಾಲರೂ, ಎಂಟು ಜಾತಿಯ ದೇವತೆಗಳೂ, ಅಪ್ಸರೆ ಗಂಧರ್ವ ಸಮೂಹವೂ ಅಲ್ಲಿಗೆ ಬಂದು ಸೇರಿಕೊಂಡರು. ಆ ಬಳಿಕ ಮುನಿಶ್ರೇಷ್ಠರಾದ ಕಪಿಲರೂ ಅಲ್ಲಿಗೆ ಬಂದರು. ಅವರು ನಾರದರಲ್ಲಿ ಈ ರೀತಿಯಾಗಿ ಕೇಳಿಕೊಂಡರು - 'ದೇವರ್ಷಿಗಳೇ, ನನಗೆ ಎಂಟುಸಾವಿರ ಬ್ರಾಹ್ಮಣರನ್ನು ನೀಡಿರಿ. ಕಲಾಪಗ್ರಾಮ ನಿವಾಸಿಗಳಾದ ಆ ಬ್ರಾಹ್ಮಣರಿಗೆ ನಾನು ಭೂದಾನ ಕೊಡಬೇಕಾಗಿದೆ. ಇದಕ್ಕೆ ಬೇಕಾದ ವ್ಯವಸ್ಥೆಯನ್ನು ತಾವು ಮಾಡಬೇಕು.''

ಆಗ ನಾನು (ನಾರದರು) ಅವರಿಗೆ ಪ್ರತಿಜ್ಞಾಪೂರ್ವಕವಾಗಿ ಹೇಳಿದೆನು - ''ಮುನಿಶ್ರೇಷ್ಠರೇ ! ಹಾಗೆಯೇ ಆಗಲಿ. ನೀವಾದರೂ ಇಲ್ಲಿ ಉತ್ತಮವಾದ ಕಪಿಲಸ್ಥಾನವನ್ನು ನಿರ್ಮಿಸಿರಿ.'' ಶ್ರಾದ್ಧ ನಡೆಯುತ್ತಿರುವಾಗ ಅಥವಾ ಶ್ರಾದ್ಧೋಪಯುಕ್ತ ಕಾಲ ಸನ್ನಿಹಿತವಾದಾಗ ಯಾರ ಆಶ್ರಮಕ್ಕೆ ಬಂದ ಅತಿಥಿ ಹಾಗೆಯೇ ಹಿಂತಿರುಗುವನೋ ಅಂತಹನ ಎಲ್ಲ ಸತ್ಕರ್ಮಗಳೂ ನಿರರ್ಥಕವೆನಿಸುವವು. ಯಾರು ಅತಿಥಿಗೆ ಸ್ವಾಗತ ಸತ್ಕಾರಾದಿ ಪೂಜೆಯನ್ನು ಸಲ್ಲಿಸಲಾರನೋ ಅಂತಹನರನು ರೌರವನರಕಕ್ಕೆ ತೆರಳುತ್ತಾನೆ. ಯಾರು ಅತಿಥಿಗಳನ್ನು ಪೂಜಿಸುತ್ತಾರೋ ಆ ದೇವತೆಗಳೂ ಅಂತಹವರನ್ನು ಗೌರವಿಸುತ್ತಾರೆ.

ಶ್ರಾದ್ಧೇ ವಾ ಪ್ರಾಪ್ತಕಾಲೇ ವಾ ಹ್ಯತಿಥಿರ್ವಿಮುಖೀಭವೇತ್ ।
ಯಸ್ಯಾಶ್ರಮ ಮುಪಾಯಾತಸ್ತಸ್ಯ ಸರ್ವಂ ಹಿ ನಿಷ್ಫಲಮ್ ॥

ಸ ಗಚ್ಛೇದ್ರೌರವಾಂಲ್ಲೋಕಾನ್ ಯೋಽ ತಿಥಿಂ ನಾಭಿಪೂಜಯೇತ್ ।
ಅತಿಥಿಃ ಪೂಜಿತೋ ಯೇನ ಸ ದೇವೈರಪಿ ಪೂಜ್ಯತೇ ॥

(ಸ್ಕಂ.ಮಾ.ಕುಮಾ. 4-57-58)

ಈ ರೀತಿ ಇರುವುದರಿಂದಾಗಿ ಆ ತೀರ್ಥದಲ್ಲಿ ದಾನ ಮತ್ತು ಯಜ್ಞದ ಮುಖಾಂತರ ಕಪಿಲ ಮುನಿಗೆ ಭೋಜನ ಮಾಡಿಸಿದೆ. ಆ ಬಳಿಕ ನಾನು ಪಾದ ಪ್ರಕ್ಷಾಲನ ಮಾಡುವುದಕ್ಕಾಗಿ ಹಾರೀತ ಮುನಿಯನ್ನು ಕರೆದೆ. ಮತ್ತು ನಾನು ಬ್ರಾಹ್ಮಣರಿಗೆ ಹೀಗೆ ತಿಳಿಸಿದೆ.



ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತೊಂದನೇ ಅಧ್ಯಾಯ ಮುಗಿದುದು.

# ಚಿರಕಾರಿಯ ಕತೆ

ಅಧ್ಯಾಯ -22

''ಹಿಂದಿನ ಕಾಲದ ಮಾತು. ಆಂಗಿರಸ ಮಹರ್ಷಿಗಳ ಕುಲದಲ್ಲಿ ಒಬ್ಬ ಪ್ರಸಿದ್ಧ ಬ್ರಾಹ್ಮಣನಿದ್ದ. ಅವನು ಶ್ರೇಷ್ಠ ವಿದ್ವಾಂಸನಾಗಿದ್ದ. ಆದರೆ ಪ್ರತಿಯೊಂದು ಕಾರ್ಯವನ್ನೂ ಬಹಳ ವಿಳಂಬವಾಗಿ ನಿರ್ವಹಿಸುತ್ತಿದ್ದ. ಮಹರ್ಷಿ ಗೌತಮರು ಅವನ ತಂದೆಯಾಗಿದ್ದರು. ಅವನು ಚಿರಕಾರಿ. ಎಲ್ಲ ಕಾರ್ಯವನ್ನೂ ಬಹಳಷ್ಟು ವಿಚಾರ ನಡೆಸಿ, ತುಂಬ ತಡವಾದನಂತರವೇ ಪ್ರಾರಂಭಿಸುತ್ತಿದ್ದನು. ಅವನ ಮುಖಾಂತರ ನಡೆದ ಕಾರ್ಯಗಳೆಲ್ಲ ತಡವಾಗಿಯೇ ಸಿದ್ಧಿಸುತ್ತಿದ್ದುದರಿಂದ ಜನಸಾಮಾನ್ಯರಿಂದ ಅವನು 'ಚಿರಕಾರಿ' (ವಿಳಂಬವಾಗಿ ಮಾಡುವವನು) ಎಂದೇ ಕರೆಯಲ್ಪಡುತ್ತಿದ್ದನು.

ಒಮ್ಮೆ ಚಿರಕಾರಿಯ ತಾಯಿಯಿಂದ ಯಾವುದೋ ಒಂದು ಅಪರಾಧ ನಡೆಯಿತು. ಅದರಿಂದಾಗಿ ಚಿರಕಾರಿಯ ತಂದೆ ಕುಪಿತರಾದರು. ದೂರಾಲೋಚನೆ ಮಾಡದ ಅವರು ತನ್ನ ಉಳಿದ ಮಕ್ಕಳನ್ನು ಬಿಟ್ಟು ಚಿರಕಾರಿಗೆ ಆದೇಶಿಸುತ್ತಾರೆ ; ''ನೀನು ನಿನ್ನ ತಾಯಿಯನ್ನು ಕೊಂದು ಹಾಕು.'' ಚಿರಕಾರಿ ತುಂಬ ತಡಮಾಡಿ ಉತ್ತರಿಸಿದನು. - 'ಆಗಲಿ, ಹಾಗೆಯೇ ಮಾಡುವೆ.' ಆದರೆ ಅವನಾದರೂ ಸ್ವಭಾವತಃ 'ಚಿರಕಾರಿ' ಯಾಗಿದ್ದನಲ್ಲವೇ? ಅಂದ ಮೇಲೆ ಈ ವಿಚಾರದ ಬಗ್ಗೆ ತುಂಬ ಅವಧಿಯವರೆಗೆ ವಿಚಾರ ನಡೆಸುತ್ತಲೇ ಇದ್ದ. ''ನಾನು ತಂದೆಯ ಈ ಅಪ್ಪಣೆಯನ್ನು ಹೇಗೆ ಪಾಲಿಸಲಿ? ನನ್ನ ತಾಯಿಯನ್ನು ಹೇಗೆ ಕೊಲ್ಲಲಿ? ತಂದೆಯ ಆಜ್ಞಾಪಾಲನಾ ರೂಪವಾದ ಧರ್ಮಕ್ಕಾಗಿ, ಮಾತೃಹತ್ಯಾರೂಪವಾದ ಅಧರ್ಮದಲ್ಲಿ ಹೇಗೆ ಮುಳುಗಲಿ ! ನಿಜ, ತಂದೆಯ ಆಜ್ಞಾಪಾಲನೆ ಮಿಕ್ಕೆಲ್ಲ ಧರ್ಮಗಳಿಗಿಂತಲೂ ಉತ್ತಮವಾದುದು. ಆದರೆ ಅಂತೆಯೆ ತಾಯಿಯ ರಕ್ಷಣೆಯೂ ನನ್ನ ಧರ್ಮ ತಾನೇ!

ಪುತ್ರತ್ವವು ನಿಜವಾಗಿಯೂ ಪರಾಧೀನವಾದದ್ದು. ಮಗನಾದವನು ತಂದೆ ತಾಯಿಗಳಿಬ್ಬರಿಗೆ ಅಧೀನನಾಗಿರುತ್ತಾನೆ. ಸ್ತ್ರೀಯರನ್ನು, ಅವರಲ್ಲೂ ತಾಯಿಯೆನಿಸಿರುವವರನ್ನು ಕೊಂದ ಯಾರು ತಾನೇ ಸುಖಿಯಾಗಿದ್ದಾರು !

ಇದೇ ರೀತಿಯಾಗಿ ತಂದೆಯನ್ನು ತಿರಸ್ಕರಿಸಿದ ಯಾರು ತಾನೇ ಪ್ರತಿಷ್ಠೆಗೆ ಪಾತ್ರನಾದಾನು! ಮಗನಾದವನಿಗೆ ತಂದೆಯನ್ನು ತಿರಸ್ಕರಿಸದಿರುವುದು ಉಚಿತವಾದುದು. ಅಂತೆಯೇ ತಾಯಿಯ ರಕ್ಷಣೆಯೂ ಉಚಿತವಾದುದು. ಶರೀರವೇ ಮೊದಲಾದ ದಾನಾರ್ಹ ವಸ್ತುಗಳನ್ನೆಲ್ಲ ತಂದೆ ಕೊಡುವವನು. ಆದ್ದರಿಂದ ತಂದೆಯ ಆಜ್ಞೆಯನ್ನು ಪಾಲಿಸಲೇಬೇಕು. ತಂದೆಯ ಆಜ್ಞೆಯನ್ನು ಪೂರೈಸುವ ಮಗನ ಜನ್ಮಾರ್ಜಿತ ಪಾತಕಗಳೆಲ್ಲ ತೊಳೆದು ಹೋಗುವವು.

**ಪಿತಾ ಸ್ವರ್ಗಃ ಪಿತಾ ಧರ್ಮಃ ಪಿತಾ ಹಿ ಪರಮಂ ತಪಃ ।**
**ಪಿತರಿ ಪ್ರೀತಿಮಾಪನ್ನೇ ಸರ್ವಾಃ ಪ್ರೀಣಂತಿ ದೇವತಾಃ ॥**
**(ಸ್ಕಂ.ಮಾ.ಕುಮಾ 4-89-90)**

ತಂದೆಯೆ ಸ್ವರ್ಗ, ತಂದೆಯೇ ಧರ್ಮ, ಶ್ರೇಷ್ಠ ತಪಸ್ಸೂ ತಂದೆಯೇ. ತಂದೆ ಪ್ರಸನ್ನನಾದನೆಂದರೆ ದೇವತೆಗಳೆಲ್ಲರೂ ಪ್ರಸನ್ನರಾಗುವರು.

ತಂದೆ ಪ್ರೀತನಾದನೆಂದರೆ, ಪುತ್ರನ ಪಾಪಗಳಿಗೆಲ್ಲ ಪ್ರಾಯಶ್ಚಿತ್ತ ದೊರಕಿದಂತೆ. ಆತ ಎಲ್ಲ ವಿಧದ ಬಂಧನಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಪುತ್ರನಿಗಾಗಿ ಎಷ್ಟೇ ತೊಂದರೆಗಳನ್ನನುಭವಿಸಿದರೂ, ತಂದೆಯಂದಿರು ಮಕ್ಕಳ ಬಗ್ಗೆ ಪ್ರೇಮವನ್ನು, ಬಿಡಲಾರರು. ಪುತ್ರನಾಗಿ ವಿಚಾರಿಸುತ್ತಿರುವ ನನ್ನ ದೃಷ್ಟಿಯಲ್ಲಿ, ಇದು ತಂದೆ ಯಾದವನಿಗೆ ಸಲ್ಲಬೇಕಾದ ಗೌರವ. ದೊಡ್ಡ ಸ್ಥಾನ ಆತನದು. ಇನ್ನು ಮೇಲೆ ತಾಯಿಯ ಬಗ್ಗೆ ವಿಚಾರಿಸುವೆ. ನಾನು ಈ ಮಾನವ ಜನ್ಮದಲ್ಲಿ ಪಂಚ ಭೌತಿಕ ದೇಹವನ್ನು ಪಡೆಯಲು ತಾಯಿ ತಾನೇ ಕಾರಣಳಾದವಳು! ತಾಯಿಯನ್ನು ಕಳಕೊಂಡವನು ಅನಾಥ. ಮಕ್ಕಳು, ಮೊಮ್ಮಕ್ಕಳಿಂದ ಕೂಡಿದ ಮನುಷ್ಯ ನೂರು ವರ್ಷಕ್ಕಿಂತ ಹೆಚ್ಚು ವಯಸ್ಸಿನವನಾದರೂ, ತನ್ನ ತಾಯಿಯ ಆಸರೆಯಲ್ಲಿ ಬದುಕುವವನಾಗಿದ್ದರೆ, ಆತ ಎರಡು ವರ್ಷದ ಮುಗ್ಧ ,ಮಗುವಿನಂತೆ ನಡೆದುಕೊಳ್ಳುತ್ತಾನೆ. ಪುತ್ರ ಬೇಕಾದಷ್ಟು ಸಮರ್ಥನಾಗಿರಲಿ, ಅಸಮರ್ಥನಾಗಿರಲಿ, ಪುಷ್ಟನಾಗಿರಲಿ, ದುರ್ಬಲನಾಗಿರಲಿ - ತಾಯಿಯಾದವಳು ಆತನನ್ನು ಕ್ರಮಪ್ರಕಾರ ಪಾಲಿಸುತ್ತಾಳೆ.

**ನಾಸ್ತಿ ಮಾತ್ರಾ ಸಮಂ ತೀರ್ಥಂ ನಾಸ್ತಿ ಮಾತ್ರಾ ಸಮಾ ಗತಿಃ ।**
**ನಾಸ್ತಿ ಮಾತ್ರಾ ಸಮಂ ತ್ರಾಣಂ ನಾಸ್ತಿ ಮಾತ್ರಾ ಸಮಾ ಪ್ರಪಾ ।**

**(ಸ್ಕಂ.ಮಾ.ಕುಮಾ 4-99)**

ತಾಯಿಗೆ ಸಮಾನವಾದ ತೀರ್ಥ ಮತ್ತೊಂದಿಲ್ಲ. ತಾಯಿಗೆ ಸದೃಶವಾದ ಆಶ್ರಯ ಇನ್ನೊಂದಿಲ್ಲ. ತಾಯಿಗೆ ಸಮನಾದ ರಕ್ಷಕ ಬೇರೊಬ್ಬನಿಲ್ಲ. ತಾಯಿಯಂತಹ ಅರವಟ್ಟಿಗೆ ಬೇರೆ ಇಲ್ಲ.

**ಕುಕ್ಷೌ ಸಂಧಾರಣಾದ್ಧಾತ್ರೀ ಜನನಾಜ್ಜನನೀ ತಥಾ ।**
**ಅಂಗಾನಾಂ ವರ್ಧನಾದಂಬಾ ವೀರಸೂತ್ವೇನ ವೀರಸೂಃ ॥**
**ಶಿಶೋಃ ಶುಶ್ರೂಷಣಾಚ್ಛಕ್ತಿರ್ಮಾತಾ ಸ್ಯಾನ್ಮಾನನಾಚ್ಚ ಸಾ ।**

**(ಸ್ಕಂ.ಮಾ.ಕುಮಾ. 4-101)**

ತಾಯಿ ಮಗನನ್ನು ತನ್ನ ಗರ್ಭದಲ್ಲಿ ಧರಿಸಿರುತ್ತಾಳಾದುದರಿಂದ 'ಧಾತ್ರೀ' ಎಂದೆನಿಸುತ್ತಾಳೆ. ಮಗನನ್ನು ಹಡೆಯುವ ಕಾರಣ 'ಜನನೀ' ಎಂದೆನಿಸಿರುವಳು. ಮಕ್ಕಳ ಅಂಗಗಳನ್ನು ಬೆಳೆಸುವ ಪ್ರಯುಕ್ತ 'ಅಂಬಾ' ಎಂದೂ, ವೀರನಾದ ಮಗನನ್ನು ಹಡೆಯುವದರಿಂದ 'ವೀರಸೂ' ಎಂದೂ, ಶಿಶುವಿನ ಶುಶ್ರೂಷಣೆ ಮಾಡುವುದರಿಂದ 'ಶಕ್ತಿ' ಎಂದೂ, ಯಾವಾಗಲೂ ಸಮ್ಮಾನಿಸುವುದರಿಂದ 'ಮಾತಾ' ಎಂದೂ ಕರೆಯಲ್ಪಡುತ್ತಾಳೆ.

ಮುನಿಜನರು ತಂದೆಯನ್ನು ದೇವತೆಗೆ ಸಮಾನನೆಂದು ಬಗೆಯುತ್ತಾರೆ. ಆದರೆ ಮನುಷ್ಯರಾಗಲೀ ದೇವತೆಗಳಾಗಲೀ ತಾಯಿಯ ತೂಕಕ್ಕೆ ಸರಿಯಾಗಲಾರರು. ಆಕೆಯ ಬಗ್ಗೆ ಸರಿಯಾಗಿ ನಡೆದುಕೊಳ್ಳಲಾರರು. ಗುರುವಾದರೂ ಪತಿತನಾದನೆಂದರೆ, ತ್ಯಜಿಸಲರ್ಹನಾಗುವನು. ಆದರೆ ತಾಯಿಯಾದವಳು ಯಾವುದೇ ಕಾರಣಕ್ಕಾದರೂ ತ್ಯಾಜ್ಯಳಾಗಲಾರಳು. ಕೌಶೀಕೀ ನದೀ ತೀರದಲ್ಲಿ ಬಲಿರಾಜ ಸ್ತ್ರೀಯರಿಂದ ಸುತ್ತುವರಿದಿದ್ದ. ನಮ್ಮ ತಾಯಿ ಆತನನ್ನು ತುಂಬಾ ಹೊತ್ತಿನವರೆಗೆ ನೋಡುತ್ತ ನಿಂತಿದ್ದಳು. ಇಷ್ಟು ಮಾತ್ರವನ್ನು ಅಪರಾಧವೆಂದು ಪರಿಗಣಿಸಿದ ನಮ್ಮ ತಂದೆ, ತಾಯಿಯನ್ನು ಕೊಲ್ಲಲು ನನಗೆ ಆದೇಶಿಸಿರುತ್ತಾನೆ.''

'ಚಿರಕಾರಿ'ಯಾದ ಪ್ರಯುಕ್ತ ಆ ಬ್ರಾಹ್ಮಣ ತುಂಬ ಹೊತ್ತಿನ ತನಕ ಇಷ್ಟೆಲ್ಲ ವಿಚಾರಗಳ ಬಗೆಗೆ ಚಿಂತಿಸಿದನು. ಆದರೂ ಚಿಂತೆ ಕೊನೆಗೊಳ್ಳಲಿಲ್ಲ. ಇದೇ ಹೊತ್ತಿಗೆ ಗೌತಮರಿಗೆ ದುಃಖವೇ ದುಃಖ. ಪತಿವ್ರತೆಯಾದ ತಮ್ಮ ಪತ್ನಿಯನ್ನು ಕೊಲ್ಲಲು ಮಗನಿಗೆ ಹೇಳಿರುವೆನಲ್ಲವೆ ! ಪಾಪಸಮುದ್ರದಲ್ಲಿ ಮುಳುಗಿದಂತಾಯಿತಲ್ಲವೆ? ಎಂಬುದಾಗಿ ಅವನ ಚಿಂತೆ. ಆದರೆ ತಕ್ಷಣ ಯೋಚಿಸಿದರು - ಆ ದುಷ್ಕೃತ್ಯ ಎಸಗುವುದಕ್ಕೆ ನಿಯಮಿತನಾದವನು 'ಚಿರಕಾರಿ'. ಆತ ತನ್ನ ಪ್ರತಿಯೊಂದು ಕಾರ್ಯದಲ್ಲೂ ವಿಳಂಬವನ್ನೂ ತಂದುಕೊಳ್ಳುವುದರಿಂದಲೇ 'ಚಿರಕಾರಿ' ಎಂದೆನಿಸಿದವನು. ಪ್ರಕೃತ ಕಾರ್ಯದಲ್ಲೂ ಆತ ವಿಳಂಬವನ್ನು ಅಳವಡಿಸಿಕೊಂಡಿದ್ದಲ್ಲಿ! ಪಾಪದಿಂದ ಪಾರಾದಂತೆ. ತಪಸ್ಸನ್ನು ಕಾಪಾಡಿಕೊಂಡಂತೆ !

ಗೌತಮರು ಹೀಗೆಲ್ಲ ಚಿಂತಿಸುತ್ತ 'ಚಿರಕಾರಿ'ಯಲ್ಲಿಗೆ ನಡೆದರು. ಚಿರಕಾರಿಯಾದರೂ ತನ್ನ ತಾಯಿಯ ಸಮೀಪ ಸಾಗಿದ. ತನ್ನೆಡೆಗೆ ಬಂದ ಅಪ್ಪನನ್ನು ಕಂಡು ಚಿರಕಾರಿಗೆ ದಿಕ್ಕೇ ತೋಚದಂತಾಯ್ತು. ತಾನಿನ್ನೂ ತಂದೆಯ ಆದೇಶವನ್ನು ನಡೆಸಿಲ್ಲ ! ತನ್ನ ಕೈಯಲ್ಲಿದ್ದ ಕತ್ತಿಯನ್ನು ದೂರಕ್ಕೆಸೆದವನೇ, ತಂದೆಯ ಪಾದಕ್ಕೆರಗಿದ. ಗೌತಮರಿಗಾದರೂ ತಮ್ಮ ಪತ್ನಿ ಇನ್ನೂ ಜೀವಂತವಾಗಿರುವುದನ್ನು ಕಂಡು ಎಲ್ಲೆ ಮೀರಿದ ಆನಂದ. 'ಚಿರಕಾರಿ' ತನ್ನನ್ನು ಇರಿಯಲು ಕತ್ತಿಯನ್ನು ಮೇಲಕ್ಕೆತ್ತಿ ತಯಾರಾಗಿದ್ದ. ಎಂಬುದು ಚಿರಕಾರಿಯ ತಾಯಿ ಅರಿಯದೆ, ತನ್ನ ಮಗ ಚಿರಕಾರಿ ಕತ್ತಿಯನ್ನು ಮೇಲೆಕ್ಕೆತ್ತಬೇಕೆಂಬ ತನ್ನ ಚಾಪಲ್ಯವನ್ನು ತಂದೆಗೆ ಭಯಪಟ್ಟು ಮುಚ್ಚಿಡುತ್ತಿರಹುದೆಂದು ಊಹಿಸಿಕೊಳ್ಳುವಷ್ಟು ಮುಗ್ಧೆ ಆಕೆ ! ಆನಂದ ತುಂದಿಲರಾದ ಗೌತಮರಿಗೆ ತಮ್ಮ ಮಗನ ನೆತ್ತಿಯನ್ನು ಮೂಸಿದಷ್ಟೂ ತೃಪ್ತಿಯಿಲ್ಲ ! ಭುಜಗಳನ್ನು ಅದುಮಿದಷ್ಟು ಸಮಾಧಾನವಿಲ್ಲ. ಹೀಗೆ ಮಾತಿಗೆ ಮೀರಿದ ಆನಂದವನ್ನು ಚೇಷ್ಟೆಗಳಿಂದ ವ್ಯಕ್ತಪಡಿಸಿ, ಮಾತಿನ ಮೂಲಕ ಹೃತ್ಪೂರ್ವಕ ಹರಸುತ್ತಾರೆ - ''ಮಗನೇ, ಚಿರಂಜೀವಿಯಾಗು ! ನಿನ್ನ ಬದುಕು ಕಲ್ಯಾಣಮಯವಾಗಲಿ ! ನಿನ್ನ ವಿಳಂಬದ ಪ್ರವೃತ್ತಿ ತಾನೇ ನನ್ನನ್ನು ಅಪಾರವಾದ ಪಾಪದ ಸಾಗರದಿಂದಲೂ, ದುಃಖದ ಮಡುವಿನಿಂದಲೂ ಕಾಪಾಡಿದ್ದು.'' ಹೀಗೆ ತನ್ನ ಪುತ್ರನ 'ವಿಳಂಬ ಪ್ರವೃತ್ತಿಯ' ಲಾಭ ಪಡೆದು ಗೌತಮ ತನ್ನ ಅನುಭವ ಸಿದ್ಧ ಸತ್ಯವನ್ನು ಹೀಗೆ ಸಾರುತ್ತಾರೆ -

ಚಿರೇಣ ಮಂತ್ರಂ ಸಂಧೀಯಾಚ್ಚಿರೇಣ ಚ ಕೃತಂ ತ್ಯಜೇತ್ ।
ಚಿರೇಣ ವಿಹಿತಂ ಮಿತ್ರಂ ಚಿರಂ ಧಾರಣ ಮರ್ಹತಿ ॥
ರಾಗೇ ದರ್ಪೇ ಚ ಮಾನೇ ಚ ದ್ರೋಹೇ ಪಾಪೇಚ ಕರ್ಮಣಿ ।
ಅಪ್ರಿಯೇ ಚೈವ ಕರ್ತುವ್ಯೇ ಚಿರಕಾರೀ ಪ್ರಶಸ್ಯತೇ ।
ಬಂಧೂನಾಂ ಸುಹೃದಾಂ ಚೈವ ಭೃತ್ಯಾನಾಂ ಸ್ತ್ರೀಜನಸ್ಯ ಚ ।
ಅವ್ಯಕ್ತೇಷ್ವ ಪರಾಧೇಷು ಚಿರಕಾರೀ ಪ್ರಶಸ್ಯತೇ
ಚಿರಂ ಧರ್ಮಾನ್ನಿಷೇವೇತ ಕುರ್ಯಾಚ್ಚಾನ್ವೇಷಣಂ ಚಿರಮ್ ।
ಚಿರಮನ್ವಾಸ್ಯ ವಿದುಷಶ್ಚಿರಮಿಷ್ಟಾನುಪಾಸ್ಯ ಚ ।
ಚಿರಂ ವಿನೀಯ ಚಾತ್ಮಾನಂ ಚಿರಂ ಯಾತ್ಯನವಜ್ಞತಾಮ್ ।
ಬ್ರುವತಶ್ಚ ಪರಸ್ಯಾಪಿ ವಾಕ್ಯಂ ಧರ್ಮಾನುಸಂಹಿತಮ್ ।
ಚಿರಂ ಪೃಚ್ಛೇಚ್ಛೃಣುಯಾಚ್ಚಿರಂ ನ ಪರಿಭೂಯತೇ ।

(ಸ್ಕಂ.ಮಾ.ಕುಮಾ. 4-125)

'ಬಹಳಷ್ಟು ಕಾಲ ಯೋಚಿಸಿಯೇ ಸಂಧಾನ ಮಾಡಿಕೊಳ್ಳಬೇಕು. ಆ ಸಂಧಾನವನ್ನು ಕೆಡಿಸಬೇಕೆಂದಿದ್ದರೂ ಬಹಳಷ್ಟು ಕಾಲ ವಿಚಾರ ನಡೆಸಬೇಕು. ಒಬ್ಬನನ್ನು ಮಿತ್ರನನ್ನಾಗಿಸಿಕೊಳ್ಳಬೇಕೆಂದರೆ ಬಹಳಷ್ಟು ಕಾಲ ವಿಚಾರ ಮಾಡಬೇಕು. ಹಾಗೆ ಸಂಪಾದಿಸಿಕೊಂಡ ಮಿತ್ರನನ್ನು ತುಂಬಾ ಕಾಲ ಕಾಪಾಡಿಕೊಂಡಿರಬೇಕು. ಅನುರಾಗ, ಅಹಂಕಾರ, ಅಭಿಮಾನ, ದ್ರೋಹ, ಅಪ್ರಿಯ ಹಾಗೂ ಪಾಪ ಇವುಗಳಿಗೆ ಸಂಬಂಧಿಸಿದ ವ್ಯವಹಾರಗಳಲ್ಲೆಲ್ಲ ವಿಳಂಬವನ್ನು ತಂದುಕೊಂಡವನೇ ಯಶಸ್ವಿಯಾದಾನು. ಬಂಧುಗಳು, ಸ್ನೇಹಿತರು, ಸೇವಕರು ಮತ್ತು ಸ್ತ್ರೀಯರು - ಇವರ ಅಸ್ಪಷ್ಟ ಅಪರಾಧಗಳಲ್ಲಿ ವಿಳಂಬವಾಗಿ ನ್ಯಾಯಾನ್ಯಾಯವನ್ನು ವಿವೇಚಿಸುವವನೇ ಪ್ರಶಂಸಾರ್ಹ. ಧರ್ಮ ಸೇವನೆ ಬಹಳಷ್ಟು ಕಾಲ ನಡೆಯಬೇಕಾದದ್ದು, ದೀರ್ಘಕಾಲದ ಶೋಧನೆ ಪ್ರಶಂಸನೀಯ. ವಿದ್ವಾಂಸರನ್ನು ದೀರ್ಘಕಾಲ ಸಂಪರ್ಕಿಸಬೇಕು, ಇಷ್ಟರಾದ ಜನರನ್ನಾಗಲೀ, ದೇವತೆಗಳನ್ನಾಗಲೀ ಚಿರಕಾಲ ಸೇವಿಸಬೇಕು. ತಾನಾದರೂ ಚಿರಕಾಲ ವಿನೀತನಾಗಿರಬೇಕು. ಮತ್ತೊಬ್ಬರಲ್ಲಿ ವಿಚಾರ ವಿನಿಯಮ ನಡೆಸುವಾಗ, ಅವರ ಅಭಿಪ್ರಾಯಗಳನ್ನು ಕೇಳುವಾಗ - ಆದಷ್ಟು ಚಿರಕಾಲ ಪ್ರವೃತ್ತನಾಗಬೇಕು. ಹೀಗೆ ತನ್ನೆಲ್ಲ ವ್ಯವಹಾರಗಳಲ್ಲಿ ಚಿರಕಾಲವನ್ನು ತಂದುಕೊಳ್ಳುವವನು ಯಾವುದೇ ರೀತಿಯಾದ ಪರಿಭವಕ್ಕೆ ತುತ್ತಾಗಲಾರ. ಹೀಗೆ ಕೆಲವು ವ್ಯವಹಾರಗಳಲ್ಲಿ ವಿಳಂಬ ಪ್ರವೃತ್ತಿ ಹಾನಿಕಾರಿಯೂ ಆಗಬಲ್ಲವು, ಆ ವ್ಯವಹಾರಗಳಾದರೂ -

ಧರ್ಮೇ ಶತ್ರೌ ಶಸ್ತ್ರಹಸ್ತೇ ಪಾತ್ರೇ ಚ ನಿಕಟ ಸ್ಥಿತೇ ।
ಭಯೇ ಚ ಸಾಧುಪೂಜಾಯಾಂ ಚಿರಕಾರೀ ನ ಶಸ್ಯತೇ ॥

(ಸ್ಕಂ.ಮಾ.ಕುಮಾ 4-126)

ಧರ್ಮವನ್ನು ಆಚರಿಸುವಾಗ 'ಇಂದು ನಾಳೆ' ಎಂದು ತಡಮಾಡಬಾರದು. ಶತ್ರು ಶಸ್ತ್ರ ಎತ್ತಿ ಯುದ್ಧ ಸನ್ನದ್ಧನಾದಾಗ ವಿಳಂಬವು ಸ್ವಲ್ಪವೂ ಒಳ್ಳೆಯದಲ್ಲ.

ಸತ್ಪಾತ್ರವು ಬಂದಾಗ ದಾನ ನೀಡಲು ಒಂದು ಕ್ಷಣವೂ ವಿಳಂಬ ಮಾಡಕೂಡದು. ಆಪತ್ಕಾಲ ಬಂದರೆ ಅದರ ನಿವಾರಣೆಗೆ ತಡಮಾಡಬಾರದು. ಸಜ್ಜನರನ್ನು ಪೂಜಿಸುವಲ್ಲಿ ವಿಳಂಬ ಮಾಡಬಾರದು.'' ಹೀಗೆ ಹೇಳಿ ಗೌತಮನು ಮಡದಿ ಮಕ್ಕಳೊಂದಿಗೆ ಶಾಂತಿಯನ್ನು ಹೊಂದಿದನು. ಬಹುಕಾಲದವರೆಗೆ ತಪಸ್ಸು ಮಾಡಿದ ಆ ಮಹಾಮುನಿ. ದಿವ್ಯಲೋಕ ಸುಖ ಅವನ ಸೊತ್ತಾಯಿತು, ಈ ವಿಷಯವನ್ನು ನಾನು ಆ ಎಲ್ಲ ಬ್ರಾಹ್ಮಣರೆದುರು ಹೇಳಿದೆ. ಅನಂತರ ಧರ್ಮವರ್ಮ ದೊರೆ ಸಮೀಪದಲ್ಲಿದ್ದ ಹಾರೀತ ಮೊದಲಾದ ಮುನಿಗಳ ಚರಣಗಳನ್ನು ತೊಳೆದ. ಎಲ್ಲ ದೇವತೆಗಳನ್ನು ಸಾಕ್ಷಿಯಾಗಿ ಇರಿಸಿದ್ದೆ. ಸಂಕಲ್ಪ ಮಾಡಿದೆ. ಹಸು, ಹೇಮ, ಹಣ, ಮನೆ, ಸ್ತ್ರೀ ವಸ್ತ್ರ ಆಭರಣ ಮುಂತಾದವುಗಳನ್ನೆಲ್ಲ ಆ ಬ್ರಾಹ್ಮಣರಿಗೆ ದಾನ ಕೊಟ್ಟು ಕೈ ಮುಗಿದೆ. ಅನಂತರ ಆ ದೇವ ಸಮೂಹದಲ್ಲಿ ಶಚೀಪತಿಯು ತನ್ನೆರಡು ಕೈಗಳನ್ನು ಎತ್ತಿ ಹೇಳಿದ - ''ಸುರಸತ್ತಮರೇ, ಭಗವಾನ್ ಶಂಕರನ ಅರ್ಧ ದೇಹದಲ್ಲಿ ತನ್ನ ದೇಹದ ಅರ್ಧ ವಾಮ ಭಾಗವನ್ನು ಸ್ಥಾಪಿತಗೊಳಿಸಿದ ಗಿರಿಕನ್ಯೆ ಪಾರ್ವತಿ ಇರುವವರೆಗೂ, ನಾವು ಮೂವತ್ತು ಮೂರು ಕೋಟಿ ದೇವತೆಗಳೂ, ಈ ಮೂರು ಲೋಕ, ಗಣಪತಿ, ಸೂರ್ಯ, ಚಂದ್ರ, ನಕ್ಷತ್ರ ಇರುವವರೆಗೂ, ಈ ನಾರದ ಮುನಿ ಸ್ಥಾಪನೆಗೊಳಿಸಿದ ಈ ಸ್ಥಾನವು ಸಮೃದ್ಧಿಶಾಲಿಯಾಗಿ ಉಳಿಯುವುದು. ಈ ಸ್ಥಾನವನ್ನು ನಾಶಮಾಡಿದ ಮಾನವನಿಗೆ ಬ್ರಹ್ಮ ವಿಷ್ಣು ಮಹೇಶ ಈ ತ್ರಿಮೂರ್ತಿಗಳ ಶಾಪವೂ ತಟ್ಟುವುದು. ಬ್ರಾಹ್ಮಣ ಶಾಪವೂ ತಗಲದೆ ಇರಲಾರದು ಆ ಪಾಪಿಗೆ. ತೀರ್ಥಕ್ಷೇತ್ರಗಳಲ್ಲಿ ದೇವಸ್ವವನ್ನೂ ಬ್ರಹ್ಮಸ್ವವನ್ನೂ ಕದ್ದವನು, ಆ ಕಳುವನ್ನು ಅನುಮೋದಿಸಿದವನು ನರಕಗಳಲ್ಲಿ ಸಹಸ್ರಾರು ವರ್ಷಗಳ ವರೆಗೆ ನರಳುತ್ತ ದುಃಖಪಡುವನು.'' ಆಗ ಎಲ್ಲರೂ ಕೈ ಎತ್ತಿ ಇದು ಹಾಗೇ ಸರಿ. ಇದನ್ನು ನಾಶಮಾಡಿದವನು ನರಕ ಭಾಗಿಯಾಗುವನು' - ಎಂದು ಹೇಳಿದರು. ಹೀಗೆ ನಾನು ಸ್ಥಾಪಿಸಿದ ಅದೇ ತಾಣದಲ್ಲಿ ಕಪಿಲ ಮಹರ್ಷಿಯು ಕಾಪಿಲಸ್ಥಾನವನ್ನು ಸಂಸ್ಥಾಪಿಸಿದನು. ಅನಂತರ ಎಲ್ಲ ದೇವತೆಗಳೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

**ಅರ್ಜುನ :** ದೇವಮುನಿ ! ಮಹೀಸಾಗರ ಸಂಗಮದ ಅದ್ಭುತ ಮಹಿಮೆಯನ್ನು ತಾವು ಬಣ್ಣಿಸಿದಿರಿ. ಅದನ್ನು ಕೇಳಿ ನನಗೆ ಮಹದಾಶ್ಚರ್ಯ ಮಹಾನಂದ. ಈಗ ಹೇಳಿರಿ - ಈ ಮಹೀ ಎಂಬ ನದಿಯು ಪ್ರಕಟವಾದದ್ದು ಯಾವ ಯಜ್ಞದಲ್ಲಿ?,

**ನಾರದ :** ಪಾಂಡುಪುತ್ರ ! ಹಿಂದೆ ಬಹು ಪೂರ್ವ ಕಾಲದಲ್ಲಿ ಈ ಧರಾತಲದಲ್ಲಿ ಒಬ್ಬ ರಾಜ ಇದ್ದ. ಅವನ ಹೆಸರು ಇಂದ್ರದ್ಯುಮ್ನ. ಅವನು ಮಹಾ ದಾನಿಯೂ ಆಗಿದ್ದ ದಿವ್ಯಜ್ಞಾನಿಯೂ ಆಗಿದ್ದ. ಮಹಾಪುರುಷರನ್ನು ಸತ್ಕರಿಸುತ್ತಿದ್ದ. ಅವನ ಸಾಮರ್ಥ್ಯ ಅಸಾಧಾರಣ. ಭೂತಳದ ಪ್ರತಿಯೊಂದು ಹಳ್ಳಿನಗರಗಳಲ್ಲಿ ಅವನ ಧರ್ಮಾನುಷ್ಠಾನದ ಕುರುಹುಗಳು ಕಂಡುಬರುತ್ತಿದ್ದವು. ಸ್ವರ್ಣದಾನ, ಕನ್ಯಾದಾನ, ಗೋದಾನ, ಭೂದಾನ ಹೀಗೆ ಎಲ್ಲ ದಾನಗಳನ್ನೂ ಅವನು ಮುಕ್ತ ಹಸ್ತದಿಂದ

ನೀಡುತ್ತಲೇ ಇದ್ದ. ಏಕಾದಶೀ ವ್ರತದ ಅನುಷ್ಠಾನದಲ್ಲಿ ಒಳ್ಳೆಯ ದೀಕ್ಷೆ ಆ ರಾಜರ್ಷಿಗೆ. ದಶಮೀ ದಿನವೇ ಆನೆಯ ಮೇಲೆ ನಗಾರಿ ಏರಿಸಿ ಡಂಗುರ ಹೊಡೆಸುತ್ತಿದ್ದ - 'ನಾಳೆ ಏಕಾದಶೀ, ಯಾರೂ ಏನೂ ತಿನ್ನ ಕೂಡದು. ಎಲ್ಲರೂ ಉಪೋಷಣೆ ಹಾಗೂ ದೇವರ ಉಪಾಸನೆಗಳನ್ನು ಮಾಡಬೇಕು'' ಎಂದು. ಹೀಗೆ ಆ ಧರ್ಮಿಷ್ಠನಾದ ದೊರೆ ಮಾಡಿದ ಧರ್ಮಕಾರ್ಯಗಳಿಗೆ ಲೆಕ್ಕವಿಲ್ಲ. ಪುಣ್ಯಕರ್ಮಗಳಿಗೆ ಮಿತಿ ಇಲ್ಲ. ಮುಗಿಲಲ್ಲಿಯ ಚುಕ್ಕೆಗಳನ್ನೆಣಿಸಬಹುದು. ಸಾಗರ ತಡಿಯ ಹುಡಿ ಕಣಗಳನ್ನು ಲೆಕ್ಕಿಸಬಹುದು. ಆದರೆ ಈ ಇಂದ್ರದ್ಯುಮ್ನ ರಾಜರ್ಷಿಯು ಮಾಡಿದ ಸತ್ಕಾರ್ಯಗಳನ್ನು ಎಣಿಸುವುದು ಮಾತ್ರ ಯಾರಿಗೂ ಶಕ್ಯವಿಲ್ಲ. ಪುಣ್ಯರಾಶಿಯು ಸಂಚಿತವಾಗಿತ್ತು ಆ ರಾಜನಿಂದ ಈ ಮಾನವಜನ್ಮದಲ್ಲಿ. ಅವನು ಈ ಪಾಂಚಭೌತಿಕ ದೇಹವನ್ನು ವಾರ್ಧಕ್ಯದಲ್ಲಿ ತೊರೆದ. ಬ್ರಹ್ಮಲೋಕದಿಂದ ಬಂದಿತು ದಿವ್ಯ ವಿಮಾನ. ಸುರಸಮೂಹದಿಂದ ಸತ್ಕೃತನಾಗಿ ಸತ್ಯಲೋಕವನ್ನು ಸೇರಿದ ಆ ರಾಜಮಣಿ. ಅಲ್ಲಿ ದಿವ್ಯಭೋಗ ಸುಖ ಸಮೃದ್ಧಿ. ಹೀಗೆ ಕಲ್ಪಕಾಲ ಉರುಳಿದ ಬಳಿಕ ಒಂದು ದಿನ ವಾಣೀಪತಿ ಹೇಳಿದ ಆ ಭೂಪತಿಗೆ - ''ರಾಜನ್ ! ನೀನು ಮರಳಿ ಮಹೀತಲಕ್ಕೆ ಹೋಗು. '' ಚತುರಾನನ ಈ ನುಡಿಯೊಂದಿಗೆ ನೆಲಕ್ಕೆ ಇಳಿದಿದ್ದ ಆ ಇಂದ್ರದ್ಯುಮ್ನ. ಭೂತಲಕ್ಕೆ ಬಂದ ಬಳಿಕ ಆ ಇಂದ್ರದ್ಯುಮ್ನ ರಾಜನು ಮಾರ್ಕಂಡೇಯ ಮುನಿಗಳನ್ನು ಕಂಡ. ನಾಡೀಜಂಘನನ್ನು ನೋಡಿದ. ಪ್ರಾವಾರಕರ್ಣ ಎಂಬ ಗೂಗೆಯನ್ನು ಭೇಟಿಯಾದ. ಅವರೆದುರು ತನ್ನ ಪಾಡನ್ನು ತೋಡಿಕೊಂಡ ನೆಲಕ್ಕಿಳಿದ ಆ ನರೇಶ.

**ಇಂದ್ರದ್ಯುಮ್ನ :** ನಾನು ನನ್ನ ಪುಣ್ಯಬಲದಿಂದ ಸತ್ಯಲೋಕಕ್ಕೆ ಏರಿದ್ದೆ. ಕೆಲವು ದಿನ ಸುಖೋತ್ಕರ್ಷದಿಂದ ಅಲ್ಲಿ ವಾಸಿಸಿ, ಬೇಕಾದಷ್ಟು ಭೋಗಭಾಗ್ಯಗಳನ್ನು ಅನುಭವಿಸಿದೆ ಇದೇ ದೇಹದಿಂದ . ಆದರೆ ಏನಿದ್ದರೇನು? ಎಲ್ಲವೂ ಕ್ಷಣಿಕ. ಸ್ವಯಂ ಬ್ರಹ್ಮದೇವರೇ ನನ್ನನ್ನು ಅಲ್ಲಿಂದ ತಳ್ಳಿದರು ತಿರೆಯ ತಳಕ್ಕೆ. ಈ ಎಲ್ಲ ನನಗಾದ ಅಪಮಾನವನ್ನು ನಿಮ್ಮೆದುರು ಹೇಳಲಿಕ್ಕೂ ನನಗೆ ನಾಚಿಕೆ. ಮತ್ತೊಮ್ಮೆ ಅಲ್ಲಿ ಹೋಗಲಿಕ್ಕೂ ಅಂಜಿಕೆ. ಸತ್ಯಲೋಕದಲ್ಲಿಯೇ ಈ ಹಾಡು ಆದ ಬಳಿಕ ಸ್ವರ್ಗಾದಿಲೋಕಗಳ ಪಾಡೇನು ? ನನಗೆ ಮೇಲಿನ ಈ ಯಾವ ಲೋಕಗಳೂ ಬೇಡ. ಅವೆಲ್ಲವೂ ಭಂಗುರ. ಭಯಪ್ರದ. 'ವೈರಾಗ್ಯಮೇವಾಭಯಮ್' ಎಂದು ಜ್ಞಾನಿಗಳು ಹೇಳಿದ್ದು ಸುಳ್ಳಲ್ಲ. ಅಶಾಶ್ವತವಾದ ಈ ಸ್ವರ್ಗಾದಿಲೋಕಗಳಿಗಿಂತ ಶಾಶ್ವತವಾದ ಮೋಕ್ಷವನ್ನು ಹೊಂದುವುದೇ ಶ್ರೇಯಸ್ಕರ. ಅದಕ್ಕಾಗಿ ವಿರಕ್ತನಾಗಿ ಜ್ಞಾನವನ್ನು ಸಂಪಾದಿಸಬೇಕು. ಜ್ಞಾನದ ಮುಖಾಂತರ ಮುಕ್ತಿಯನ್ನೇ ಹೊಂದಬೇಕು. ಮುಕ್ತಿಯೊಂದನ್ನು ಬಿಟ್ಟು ಯಾವುದೇ ಮೇಲಿನ ಲೋಕಗಳಿಗೆ ಹೋದರೂ ತಪ್ಪಿದ್ದಲ್ಲ ಅಧಃಪಾತ, ಪ್ರಪಾತ, ನಿರ್ಭಯ ಸ್ಥಾನವೆಂದರೆ ಒಂದೇ ಒಂದು. ಅದೇ ಮೋಕ್ಷ. ಸಂಸಾರದಿಂದ ವಿಮೋಕ್ಷ. ಮಹನೀಯರೇ ! ನಾನು ಇಂದು ನಿಮ್ಮ ಮನೆಗೆ ಬಂದಿದ್ದೇನೆ. ನಿಮ್ಮ ಅತಿಥಿ. ಅತಿಥಿಯನ್ನು ತೃಪ್ತಿಪಡಿಸುವುದು ನಿಮ್ಮಂತಹವರ

ಕರ್ತವ್ಯ. ಅತಿಥಿ ಸತ್ಕಾರ ಮಾನವರ ಮುಖ್ಯ ಕರ್ತವ್ಯ. 'ಅತಿಥಿ ದೇವೋ ಭವ' ಉಪನಿಷತ್ತುಗಳ ಆದೇಶ. ಇದೇ ಹಿರಿಯರ ಉಪದೇಶ. ತಾವು ಅತಿಥಿಯಾದ ನನಗೆ ಯೋಗ್ಯ ಗುರುವನ್ನು ತೋರಿರಿ. ಗುರುವಿಲ್ಲದೆ ದೊರೆಯಲಾರದು ಆ ಮೋಕ್ಷಕ್ಕೆ ದಾರಿ. ಈ ಸಂಸಾರದ ಕಡಲಿನಿಂದ ಕಡೆಹಾಯಿಸುವ ಗುರುವನ್ನು ದಯವಿಟ್ಟು ನನಗೆ ತೋರಿಸಿರಿ.

**ಆಮೆ** : ಮಹಾರಾಜ, ನಾನು ವಯಸ್ಸಿನಿಂದ ಚಿಕ್ಕವ. ನನಗಿಂತ ದೀರ್ಘಾಯು ಒಬ್ಬ ಮಹರ್ಷಿ ಇರುತ್ತಾನೆ. ಅವನ ಹೆಸರು ಲೋಮಶ. ನಾನು ಆ ದೀರ್ಘಾಯು ಮಹರ್ಷಿಯನ್ನು ಕಂಡದ್ದು ಕಲಾಪಗ್ರಾಮದಲ್ಲಿ.

**ಇಂದ್ರದ್ಯುಮ್ನ** : ಹಾಗೋ ವಿಷಯ ! ದಯವಿಟ್ಟು ತಾವು ನನ್ನ ಜೊತೆಗೆ ಬನ್ನಿರಿ. ಇಬ್ಬರೂ ಕೂಡಿಯೇ ಹೋಗುವಾ ಆ ಪುಣ್ಯ ಪುರುಷರ ಬಳಿಗೆ. ದೊಡ್ಡವರ ಸಂಗವೆಂದರೆ ತೀರ್ಥಗಳಿಗಿಂತ ಪವಿತ್ರ ಎಂದು ಹಿರಿಯರ ಹೇಳಿಕೆ.

**ಪ್ರಾಹುಃ ಪೂತತಮಾಂ ತೀರ್ಥಾದಪಿ ಸತ್ಸಂಗತಿಂ ಬುಧಾಃ ।**

ಆದುದರಿಂದ ತೀರ್ಥಕ್ಕಿಂತ ಪವಿತ್ರರಾದ ಆ ಮಹಾಮುನಿಯೆಡೆಗೆ ಹೋಗೋಣ ಬನ್ನಿ.

**ನಾರದ** : ಅರ್ಜುನ ! ಅನಂತರ ಅವರೆಲ್ಲರೂ ಹೊರಟರು ಕಲಾಪಗ್ರಾಮಕ್ಕೆ. ಮಹಾಮುನಿ ಲೋಮಶರು ತಪಂಗೈಯುತ್ತಿದ್ದರು ಅಲ್ಲಿ ಪುಣ್ಯಧಾಮದಲ್ಲಿ. ಮನುಸ್ಸು ಅವರ ಅಧೀನ. ಇಂದ್ರಿಯಗಳು ಅವರ ವಶದಲ್ಲಿ. ಧರ್ಮಮಯ ಅವರ ಜೀವನ, ಪುಣ್ಯಮಯ ಶರೀರ, ತ್ರಿಕಾಲದಲ್ಲಿ ಸ್ನಾನ, ಸದಾ ಕಾಲ ಭಗವಂತನ ಧ್ಯಾನ. ಹೊಂಬಣ್ಣಕ್ಕೆ ತಿರುಗಿದ ಜಡೆಗಟ್ಟಿದ ಕೂದಲು, ತುಪ್ಪಹೊಯ್ದು ಅಗ್ನಿಯಂತೆ ಉದ್ದೀಪಿತ ದೇಹಕಾಂತಿ, ಕೈಯಲ್ಲಿ ರುದ್ರಾಕ್ಷಿಮಾಲೆ, ಮೈತ್ರಮಾರ್ಗದಲ್ಲಿ ಮುನ್ನಡೆದಿದ್ದರು ಆ ಮಹಾಮುನಿಗಳು.

**ಅಹಿಂಸಯನ್ ದುರುಕ್ತಾದ್ಯೈಃ ಪ್ರಾಣಿನೋ ಭೂಮಿಚಾರಿಣಃ ।**
**ಯಃ ಸಿದ್ಧಿಮೇತಿ ಜಪ್ಯೇನ ಸ ಮೈತ್ರೋ ಮುನಿರುಚ್ಯತೇ ॥**

ಭೂಮಿಯಲ್ಲಿರುವ ಯಾವ ಪ್ರಾಣಿಯನ್ನೂ ಬಿರುನುಡಿಗಳಿಂದ ಹಿಂಸಿಸದೆ ಜಪತಪಗಳಿಂದ ಸಿದ್ಧಿಪಡೆದ ಮುನಿಯು 'ಮೈತ್ರ' ಎಂದು ಕರೆಯಲ್ಪಡುತ್ತಾನೆ. ಸರ್ವ ಪ್ರಾಣಿಗಳ ವಿಷಯದಲ್ಲಿ ಮೈತ್ರೀಭಾವದಿಂದ ಇರುವುದೇ ಈ ಮೈತ್ರ ನಾಮಕವಾದ ಮುನಿವೃತ್ತಿಯ ಮುಖ್ಯಧರ್ಮ. ಇದೇ ಮಾರ್ಗದಲ್ಲಿ ಮುನ್ನಡೆದು ಪ್ರಸಿದ್ಧಿಗಳನ್ನು ಕಂಡ ಮಹಾಪುರುಷರಾಗಿದ್ದರು ಆ ಲೋಮಶ ಮುನಿಗಳು. ಇಂದ್ರದ್ಯುಮ್ನ ರಾಜನು ಅವನೊಡನೆ ಬಕ, ಗೂಗೆ, ಹದ್ದು, ಆಮೆ, ಮುಂತಾದವುಗಳೆಲ್ಲವೂ ಮಾರ್ಕಂಡೇಯ ಮುನಿಗಳೊಂದಿಗೆ ಕೂಡಿಕೊಂಡು ಕಲಾಪಗ್ರಾಮದಲ್ಲಿ ಅತ್ಯಂತ ಪುರಾತನ ತಪಪೋನಿಧಿಗಳಾದ ಮಹಾತ್ಮ ಲೋಮಶರ ದರ್ಶನವನ್ನು ತೆಗೆದುಕೊಂಡರು.

ದೀರ್ಘದಂಡ ನಮಸ್ಕಾರ ಹಾಕಿದರು ಅವರ ಅಡಿದಾವರೆಗಳಿಗೆ. ಬಂದವರಿಗೆಲ್ಲ ಆಸನ ನೀಡಿದರು ; ಸ್ವಾಗತ ಮಾಡಿದರು ಆ ತಪೋವೃದ್ಧರು. ಅದರಿಂದ ಎಲ್ಲರ ಮನಸ್ಸೂ ಸುಪ್ರಸನ್ನ. ಬಂದ ಅತಿಥಿಗಳ ಪ್ರತಿನಿಧಿಯಾಗಿ ಆ ಕಚ್ಛಪವು ಮಾತನಾಡಿತು.

**ಕಚ್ಛಪ :** ಪೂಜ್ಯರೇ, ಇವನು ಇಂದ್ರದ್ಯುಮ್ನ ಮಹಾರಾಜ. ಯಜ್ಞಯಾಗಮಾಡುವ ಭೂಲೋಕದ ಅರಸರಲ್ಲೇ ಶ್ರೇಷ್ಠ ಈ ದೊರೆ. ಬಹು ವರ್ಷಗಳ ಹಿಂದೆ ಅನೇಕ ಯಜ್ಞಯಾಗಗಳನ್ನು ನಡೆಸಿದ ಈ ಭೂಪತಿ. ಇವನ ಆ ಯಾಜ್ಞಿಕ ಕಾರ್ಯಕಲಾಪಗಳ ಕೀರ್ತಿ ಮೇದಿನೀ ಮಂಡಲದಲ್ಲಿ ಮಹಿತನಾಗಿ ಇರುವವರೆಗೂ ಇವನು ಸತ್ಯಲೋಕದಲ್ಲೇ ಇದ್ದ. ದೇವಭೋಗ್ಯವಾದ ಭೋಗಗಳನ್ನೆಲ್ಲ ಅನುಭವಿಸಿದ. ಶತಮಾನ ಶತಮಾನಗಳು ಉರುಳಿದವು. ಯುಗ ಯುಗಗಳು ಹೊರಳಿದವು. ಬ್ರಹ್ಮಲೋಕದ ಭೋಗಾನುಭೋಗಗಳನ್ನು ಉಣ್ಣುತ್ತ ಅನೇಕ ಸಹಸ್ರಮಾನಗಳ ಕಾಲಪರ್ಯಂತ ಈ ರಾಜರ್ಷಿಯು ಸತ್ಯಲೋಕದ ಸುಖವನ್ನೆಲ್ಲ ಸೂರೆಗೊಂಡ. ಕ್ರಮೇಣ ಕಾಲ ಕಳೆದಂತೆ ಕೀರ್ತಿ ಕುಂದಿತು. ಇವನ ಹೆಸರು ಜನರ ಹೃದಯ ಪಟಲದಿಂದ ಅಳಿಸಿತು. ಇವನ ನಾಮವು ಕಾಲಗರ್ಭದಲ್ಲಿ ವಿಸ್ಮೃತಿ ತೆರೆಯ ಹಿಂದೆ ಲೀನವಾಯಿತು. ಅನಂತರ ಇವನಿಗೆ ಬ್ರಹ್ಮಲೋಕದಿಂದ ಉಚ್ಚಾಟನೆ. ಸರ್ವ ಸುರಲೋಕಗಳಿಂದಲೂ ಉದ್ವಾಸನೆ, ಭೂಲೋಕಕ್ಕೆ ಪತನ. ಪುಣ್ಯವೆಲ್ಲ ಕರಗಿದ್ದರಿಂದ ಅವನಿಗೆ ಸ್ವರ್ಗಲೋಕದಲ್ಲಿ ಕೂಡ ಪ್ರವೇಶವಿಲ್ಲ.

ಈಗ ಈ ರಾಜರ್ಷಿಗೆ ವಿವೇಕೋದಯವಾಗಿದೆ. ಸ್ವರ್ಗಲೋಕ ಸತ್ಯಲೋಕಗಳ ಹೆಸರು ಹೇಳಿದರೆ ಅವನಿಗೆ ನಡುಗು. ಅವೆಲ್ಲವೂ ಕ್ಷಣಿಕ. ಅಶಾಶ್ವತ, ನೀರಿನ ಮೇಲಿನ ಗುಳ್ಳೆ, ಆದುದರಿಂದ ಅವನಿಗೆ ಈಗ ಸ್ವರ್ಗ ಬೇಡ. ಸತ್ಯಲೋಕವೂ ಅವನಿಗೆ ಅನಪೇಕ್ಷಿತ. ಪುನಃ ಪತನದ ಭೀತಿಯಿಲ್ಲದ ಮುಕ್ತಿ ಮಂದಿರವನ್ನೇ ಹೊಂದಬೇಕು ಎಂಬ ಅದಮ್ಯ ಆಕಾಂಕ್ಷೆ ಈ ಧರಣೀ ತಲದ ದೊರೆಗೆ, ಮೋಕ್ಷವನ್ನು ಬಿಟ್ಟು ಅವನು ಏನನ್ನೂ ಒಲ್ಲ. ಅವನೀಗ ತಮ್ಮ ಬಳಿಗೆ ಮೋಕ್ಷಾರ್ಥಿ. ಮುಕ್ತಿಯ ಭಿಕ್ಷಾರ್ಥಿ. ಅದಕ್ಕಾಗಿ ಈ ಋಷಿಕಲ್ಪನಾದ ರಾಜ ಶ್ರೇಷ್ಠನನ್ನು ತಮ್ಮ ಕಡೆಗೆ ನಾವು ಕರೆದುಕೊಂಡು ಬಂದಿದ್ದೇವೆ. ಇವನನ್ನು ತಾವು ತಮ್ಮ ಶಿಷ್ಯನೆಂದೇ ಬಗೆಯಬೇಕು. ಅವನ ಮನಸ್ಸಿನಲ್ಲಿ ಹಲವಾರು ಪ್ರಶ್ನೆಗಳಿವೆ. ಅವನ ಮಿದುಳನ್ನು ಕೊರೆಯುವ ವಿಚಾರಗಳೂ ಅಸಂಖ್ಯ. ಇವಕ್ಕೆಲ್ಲ ಉತ್ತರ ನೀಡಬೇಕು ಮಹಾಮಹಿಮರಾದ ತಾವು. ಪರೋಪಕಾರವೇ ಸಜ್ಜನರ ವ್ರತವಲ್ಲವೇ !

**ಲೋಮಶ :** ಪುರಾತನ ಕೂರ್ಮ ! ನೀನು ಹೇಳಿದ್ದೆಲ್ಲ ನಿಜವೇ ಸರಿ. ನಾನೇ ವಿಚಾರಿಸುತ್ತೇನೆ. ಈ ಅರಸನನ್ನು ''ರಾಜನೇ ! ನಿನ್ನ ಮನದಲ್ಲಿ ಕಾಡುತ್ತಿರುವ ಸಂದೇಹಗಳು ಯಾವುವು? ಸಂಕೋಚವಿಲ್ಲದೆ ಹೇಳು.

**ಇಂದ್ರದ್ಯುಮ್ನ :** ಪೂಜ್ಯರೇ ! ಮೊದಲು ನನಗೆ ನಮ್ಮ ಬಗ್ಗೆಯೇ ಸಂದೇಹ. ಇದು ಬಿಸಿಲು ದಿನ. ಬಾನಿನ ಅಂಗಳದಲ್ಲಿ ಬೆಂಕಿಯ ಬಣಿವೆಯಂತೆ

ಉರಿಯುತ್ತಲಿದ್ದಾನೆ ಆ ಭಾಸ್ಕರ. ಕಿಡಿ ಪುಡಿಗಳನ್ನು ಉದುರಿಸಿದಂತೆ ಎಲ್ಲ ಕಡೆಗೂ ಬಿಸಿಲಿನ ಬೇಗೆ. ಇಷ್ಟಾದರೂ ಒಂದು ಎಲೆ ಮನೆಯನ್ನಾದರೂ ತಾವು ಏಕೆ ನಿರ್ಮಿಸಿಕೊಂಡಿಲ್ಲ? ಕೈಯಲ್ಲಿ ಹಿಡಿ ಹುಲ್ಲನ್ನು ತಲೆಯ ಮೇಲೆ ಕೊಡೆಯಂತೆ ಹಿಡಿದು ನೆರಳು ಮಾಡಿಕೊಂಡಿರುವಿರಿ. ಇದು ಹೀಗೇಕೆ ?

**ಲೋಮಶ :** ಮಹೀಪಾಲ ! ಮಾನವನಾಗಿ ಹುಟ್ಟಿದ ಬಳಿಕ ಮರಣ ಬಿಟ್ಟಿದ್ದಲ್ಲ. ಈ ದೇಹ ಒಂದಿಲ್ಲ ಒಂದು ದಿನ ಬಿದ್ದು ಹೋಗುವದು. ಸಂಸಾರ ಅಸಾರ. ಬದುಕು ಭಂಗುರ. ಸಕಲವೂ ಚಂಚಲ. ಇಂದೋ ನಾಳೆಯೋ ಹಾಳಾಗಿ ಹೋಗುವ ಈ ಶರೀರಕ್ಕಾಗಿ ಮನೆ ಏಕೆ? ಜೀವಿತವೇ ನಶ್ವರವಾಗುವಾಗ ಯಾರಿಗಾಗಿ ಮನೆ? ಏತಕ್ಕಾಗಿ ನೆರಳು? ಮಾನವನ ಬಾಳು ಹೂವಿನ ಮೇಲಿನ ಮಂಜಿನ ಹನಿ. ಲಕ್ಷ್ಮಿಯು ಮಿಂಚಿನಂತೆ ಚಂಚಲ. ಯೌವನ ಮಧ್ಯಾಹ್ನದ ಬಿಸಿಲು. ಈ ಪ್ರಪಂಚದಲ್ಲಿ ನಮ್ಮ ಕಣ್ಣಿಗೆ ಕಾಣುವುದೆಲ್ಲವೂ ಅಸ್ಥಿರ. ಇರುವಷ್ಟು ದಿನ ಪುಣ್ಯ ಸಾಧನ, ದಾನಧರ್ಮಗಳನ್ನು ಮಾಡಿಕೊಳ್ಳುವುದೇ ವಿವೇಕಿಗಳ ಲಕ್ಷಣ. ಆದುದರಿಂದ ಯಾವ ಪದಾರ್ಥವನ್ನೂ ಸಂಗ್ರಹ ಮಾಡಿಡುವುದು ತಪ್ಪು. ಕೂಡಿಡುವುದು ಅಪರಾಧ.

**ಇಂದ್ರದ್ಯುಮ್ನ :** ಪರಮ ಪೂಜ್ಯರೇ ! ಮೂರು ಲೋಕಗಳಲ್ಲಿಯೇ ಚಿರಾಯುಷಿಗಳೆಂದರೆ ನೀವು. ಬಹು ದಿನ ಬದುಕಿದ್ದೀರಿ. ನಿಮ್ಮ ಸನಿಹಕ್ಕೂ ಸುಳಿಯಲು ಹೆದರುವದು ಆ ಸಾವು. ಮಾನವರಲ್ಲಿ ಮೃತ್ಯುಂಜಯರು ತಾವು. ಇದು ನಾನು ಹಿಂದೆ ಕೇಳಿದ ಈಗ ಕಣ್ಣಿಗೆ ಕಂಡ ಸತ್ಯಸಂಗತಿ. ತಾವು ಚಿರಂಜೀವಿಗಳೆಂದೇ ನಾನು ನಿಮ್ಮ ಕಡೆಗೆ ಬಂದಿದ್ದೇನೆ. ಕಲ್ಪಜೀವಿಗಳಾದ ತಾವು ಹೀಗೇಕೆ ನಿರಾಶೆಯ ನುಡಿಗಳನ್ನಾಡುವಿರಿ? ಕಾಲಾತೀತರಾಗಿ ನಿಂತುಕೊಂಡ ನಿಮಗೇಕೆ ಕ್ಷಣಿಕತೆಯ ಭಯ? ಭಂಗುರತೆಯ ಭೀತಿ?

**ಲೋಮಶ :** ಅರಸನೇ ! ಪ್ರತಿಯೊಂದು ಕಲ್ಪದಲ್ಲಿ ಒಂದೊಂದು ಕೂದಲು ಉದುರಿ ಬೀಳುವುದು ನನ್ನ ದೇಹದಿಂದ, ನನ್ನ ಮೈಮೇಲಿನ ರೋಮಗಳು ಎಲ್ಲವೂ ಎಂದು ಉದುರಿ ಬಿದ್ದು ಹೋಗುವವೋ ಅಂದೇ ನನಗೆ ಮೃತ್ಯು. ಇಕೋ ನೋಡು, ನನ್ನ ಎರಡು ಬೆರಳಿನಷ್ಟು ಭಾಗವು ರೋಮರಹಿತ. ಇದರಿಂದಲೇ ನನಗೆ ಹೆದರಿಕೆ ಮೃತ್ಯು ನನಗೆ ಕಡೆಗೆ ಮುಖಮಾಡಿದೆ ಎಂದು. ಅಂತೂ ಸಾವು ನನ್ನನ್ನು ಒಂದು ದಿನ ಕಬಳಿಸುವುದು ನಿಶ್ಚಿತ. ಅಂದ ಬಳಿಕ ನಾನು ಮನೆಯನ್ನೇಕೆ ಮಾಡಬೇಕು?

**ಇಂದ್ರದ್ಯುಮ್ನ :** ಮುನಿಗಳೇ ! ಈಗ ನಿಮ್ಮ ದೇಹದಿಂದ ಕಳಚಿ ಹೋದದ್ದು ಅತ್ಯಲ್ಪ ಕೇಶಗಳು ಮಾತ್ರ. ಉಳಿದ ತಮ್ಮ ದೇಹದ ಮೇಲಿರುವ ರೋಮರಾಶಿಗಳನ್ನು ನೋಡಿದರೆ ತಾವು ಚಿರಂಜೀವಿಗಳು, ಕಲ್ಪಕಲ್ಪಾಯುಗಳು. ನಮ್ಮ ದೃಷ್ಟಿಯಿಂದ ನಿಜವಾಗಿಯೂ ಮೃತ್ಯುಂಜಯರೇ. ತಮ್ಮ ಈ ದೀರ್ಘಾಯುಷ್ಯದ ಗುಟ್ಟು ಏನು? ಇದು ತಪದ ಫಲವೇ? ದಾನದ ಪರಿಣಾಮವೇ ? ಪುಣ್ಯಕರ್ಮಗಳ ಪರಿಪಾಕವೇ?

**ಲೋಮಶ :** ರಾಜನೇ ! ಕೇಳು. ನನ್ನ ಪೂರ್ವಜನ್ಮದ ಪ್ರಸಂಗವನ್ನು ಹೇಳುತ್ತೇನೆ ಜಿಜ್ಞಾಸುವಾದ ನಿನಗೆ. ಇದು ನನ್ನ ಕಥೆಯಲ್ಲ. ಶಿವ ಧರ್ಮದ ಮಹಿಮೆ. ಪುಣ್ಯದಾಯಕ, ಪಾಪನಾಶಕ, ಹಿಂದಿನ ಜನ್ಮದಲ್ಲಿ ನಾನು ಹುಟ್ಟಿದ್ದು ಶೂದ್ರನಾಗಿ. ಆ ಶೂದ್ರ ದಟ್ಟ ದರಿದ್ರ. ಹಸಿವೆಯಿಂದ ಕಂಗಾಲ. ಅನ್ನಕ್ಕೆ ಗತಿ ಇಲ್ಲ. ಆಸೆಗೆ ಮಿತಿ ಇಲ್ಲ. ಕ್ಷುಧಾಕ್ರಾಂತನಾಗಿ ಸುತ್ತಿದ್ದೇ ಸುತ್ತಿದ್ದು ಭೂಮಂಡಲವನ್ನೆಲ್ಲ. ಅದೊಂದು ಪುಣ್ಯದಿನ. ಮಧ್ಯಾಹ್ನ ಕಾಲ. ಬಿಸಿಲಿನ ಬೇಗೆಯಿಂದ ಬಸವಳಿದಿತ್ತು ನನ್ನ ದೇಹ. ಸ್ನಾನಕ್ಕಾಗಿ ನೀರಿಗೆ ಇಳಿದೆ. ನನ್ನ ಪುಣ್ಯದಿಂದ ಅಲ್ಲಿ ಒಂದು ಶಿವಲಿಂಗ. ಆ ಜಲಾಶಯದ ತರಂಗದ ಅಂತರಂಗದಲ್ಲಿ ಅದ್ಭುತ ಶಿವಲಿಂಗ. ಹಿರಿದಾದ ಆ ಶಿವಲಿಂಗದ ದರ್ಶನದಿಂದ ನನಗೇನೋ ಆನಂದ. ಅನಂತರ ನಾನು ಮತ್ತೆ ಅದೇ ಜಲಾಶಯದ ಆಚೆಯ ಬದಿಯಲ್ಲಿ ಸ್ನಾನ ಮಾಡಿದೆ. ಶುಚಿ ರುಚಿಯಾದ ಅಲ್ಲಿಯ ನೀರನ್ನು ಪಾನಮಾಡಿದೆ. ಅನಂತರ ಅದೇ ಜಲಾಶಯದ ತಡಿ ಎಡೆಯಲ್ಲಿ ಅರಳಿದ ಸುಂದರ ಹೊಂದಾವರೆ ಹೂಗಳನ್ನು ತಂದು ಪೂಜೆ ಮಾಡಿದೆ ಆ ಶಿವಲಿಂಗವನ್ನು, ಹಸಿವೆಯಿಂದ ನನ್ನ ಗಂಟಲು ಒಣಗಿಹೋಗಿತ್ತು. ಹೊಟ್ಟೆಯಲ್ಲಿ ಕ್ಷುಧೆಯ ಕ್ಷೋಭ. ಆದರೂ ಭಕ್ತಿಯಿಂದ ಪೂಜಿಸಿದೆ ಆ ಭಗವಂತನನ್ನು. ಆ ನೀಲಕಂಠನನ್ನು ನಮಸ್ಕರಿಸಿ ನಾನು ಮುಂದೆ ನಡೆದೆ. ಕರ್ಮಧರ್ಮಸಂಯೋಗದಿಂದ ದಾರಿಯಲ್ಲಿಯೇ ನನಗೆ ಮರಣ ಒದಗಿ ಬಂದಿತು.

ಎರಡನೇ ಜನ್ಮ, ನಾನೊಬ್ಬ ಬ್ರಾಹ್ಮಣ. ಸದಾಚಾರಿ ದ್ವಿಜನ ವಂಶದಲ್ಲಿ ನನ್ನ ಹುಟ್ಟು. ಆಶ್ಚರ್ಯದ ಮಾತೆಂದರೆ ಈ ಬ್ರಾಹ್ಮಣ ಯೋನಿಯಲ್ಲಿಯೇ ನನ್ನ ಪೂರ್ವ ಜನ್ಮದ ಸ್ಮೃತಿ ಜಾಗರೂಕ. ಹಿಂದಿನ ಜನ್ಮದ ಅಚ್ಚಳಿಯದ ನೆನಪು, ಅದರಿಂದ ನನ್ನಲ್ಲಿ ವಿವೇಕೋದಯ. 'ಈ ಮಾನವ ಜೀವಿತವೆಲ್ಲವೂ ಅಶಾಶ್ವತ - ಎಂಬ ಅರಿವು ನಿಚ್ಚಳ. 'ಇನ್ನಾದರೂ ನಾನು ಜಾಣನಾಗಬೇಕು. ಈ ಬಾಳಿನ ಗೋಳಿನಲ್ಲಿ ಬೀಳಬಾರದು. ಲಂಪಟನಾಗಬಾರದು. ನೀರಿನಲ್ಲಿ ತೇಲುವ ತಾವರೆ ಎಲೆಯಂತೆ ಇರಬೇಕು. ಎಂದು ಮನದಲ್ಲಿ ನಿಶ್ಚಯಮಾಡಿದೆ. ಮಾತಾಡಿದರೆ ಪ್ರೀತಿ, ಸ್ನೇಹ, ಮೋಹ, ಮಮತೆ, ಮಮಕಾರ, ಒಂದಕ್ಕೊಂದು ಬೆಳೆದು ಭೂತಾಕಾರವಾಗುವವು. ಆದುದರಿಂದ ಮಾತನ್ನು ಮೊಟಕುಗೊಳಿಸಿದೆ. ಆಗ ನಾನೊಬ್ಬ ಮೂಕ, ಮಂದ, ಮೂರ್ಖನಾಗಿ ನಟಿಸಿದೆ. ಕೈಲಾಸಪತಿಯ ಕರುಣೆಯ ಕೂಸಾಗಿ ಹುಟ್ಟಿದ ಮಗು ಮೂಕನಾದದ್ದನ್ನು ನೋಡಿ ದುಃಖಿತವಾಯಿತು ಆ ಭಕ್ತಜೀವ.

ಹರನ ಹರಕೆಯಿಂದ ಹುಟ್ಟಿದ ನನಗೆ ಅವರು ಇಟ್ಟ ಹೆಸರು ಈಶಾನ. ತನ್ನ ಕರುಳಿನ ಕುಡಿ ಮೂಕವಾದದ್ದನ್ನು ಕಂಡು ಆ ಹಡೆದ ಜೀವ ಬಹಳ ದುಃಖದಿಂದ ದೇವಬ್ರಾಹ್ಮಣರ ಆರಾಧನೆ ಮಾಡಿತು. ಅನೇಕ ಯಂತ್ರ, ಮಂತ್ರ, ದೇವತಾರಾಧನೆ, ಋಷಿಮುನಿಗಳ ಸೇವೆ ಎಲ್ಲವೂ ಆಯಿತು. ನಮ್ಮ ತಂದೆಯು ನನ್ನ ಮೂಕತನವನ್ನು

ಹೋಗಲಾಡಿಸಲು ಕೈಕೊಂಡ ಈ ಮಹಾ ಪ್ರಯತ್ನವನ್ನು ಕಂಡು ಒಳಗೊಳಗೆಯೇ ನಗು ನನಗೆ. ಕೆಲವು ಕಾಲ ಉರುಳಿತು. ನನಗೆ ಒಳ್ಳೆಯ ಯೌವನ. ರಾತ್ರಿಯಲ್ಲೆದ್ದು ಮನೆ ಬಿಟ್ಟು ಓಟ. ತಾವರೆ ಬನಕ್ಕೆ ಪ್ರಯಾಣ. ಕಮಲ ಕುಸುಮಗಳಿಂದ ಚಂದ್ರಚೂಡನ ರಾತ್ರಿಪೂಜೆ. ಭಕ್ತಿಯಿಂದ ಭವನಾಮ ಸ್ಮರಣ. ಪುನಃ ಮರಳಿ ಮನೆಗೆ, ಹಾಸಿಗೆ ಮೇಲೆ ಬೆಳಗಾಗುವಷ್ಟರಲ್ಲಿ ಮೊದಲಿನಂತೆ ಶಯನ. ಹೀಗೆ ತಂದೆ ತಾಯಿ ಬಂಧು ಬಳಗ ಯಾರಿಗೂ ಗೊತ್ತಾಗದಂತೆ ಗುಟ್ಟಾಗಿಯೇ ನಡೆದಿತ್ತು ನನ್ನ ನಿತ್ಯ ನಿರಂತರ ಶಿವಾರ್ಚನೆ. ಕೆಲವರ್ಷಗಳ ನಂತರದ ಸಮಾಚಾರ. ನಮ್ಮ ತಂದೆ ನನ್ನ ಚಿಂತೆಯಿಂದಲೇ ಕೊರಗಿದರು. ಚಿಂತಿಸಿ ಚಿಂತಿಸಿ ಸೊರಗಿದರು. ಕೊನೆಗೆ ಅದೇ ಚಿಂತೆಯಿಂದಲೇ ಹಾಸಿಗೆ ಹಿಡಿದರು. ಕೊನೆಗೆ ಮರಣಹೊಂದಿದರು. ನನ್ನ ಸಂಬಂಧಿಗಳೆಲ್ಲರೂ ಸ್ವಾರ್ಥಾಂಧರು. ಈ ಮೂಕನಿಂದ ಅವರಿಗೇನು ಪ್ರಯೋಜನ? ನನ್ನನ್ನು ಮನೆ ಬಿಟ್ಟು ಹೊರಹಾಕಿದರು. ನನಗೆ ಬೇಕಾದದ್ದು ಅದೇ. ನಾನೀಗ ಸ್ವತಂತ್ರ. ಉಂಡರೆ ಕೇಳುವವರಿಲ್ಲ. ಉಪವಾಸವಿದ್ದರೆ ಏಕೆ ಎನ್ನುವವರಿಲ್ಲ. ನನ್ನ ಚಿತ್ತ ಸದಾಶಿವನತ್ತ, ನನ್ನ ಹಂಬಲ ಹರಧ್ಯಾನದತ್ತ. ಊಟ ತಿಂಡಿ ಯಾವುದರ ಕಡೆಗೂ ನನಗೆ ಲಕ್ಷ್ಯವಿರಲಿಲ್ಲ. ತಾನಾಗಿ ದೊರೆತ ಅಲ್ಪ ಆಹಾರ ಸ್ವಲ್ಪ ನೀರು ಕುಡಿದು ಹಗಲಿರುಳೂ ಮಾಡುತ್ತಿದ್ದೆ ಹರನ ಉಪಾಸನೆಯನ್ನು. ನಿತ್ಯವೂ ಕಮಲ ಪುಷ್ಪಗಳಿಂದ ಭಗವಂತನ ಪೂಜೆಯನ್ನು ಭಕ್ತಿಯಿಂದ ತಪ್ಪದೆ ಆಚರಿಸುತ್ತಿದ್ದೆ. ಹೀಗೆ ಶತ ವರ್ಷಗಳ ವರೆಗೆ ಸಾಗಿತು ನನ್ನ ಈ ಪರಮೇಶ್ವರನ ಪದ್ಮಪುಷ್ಪಗಳ ಪೂಜೆ. ನೂರು ವರ್ಷಗಳ ನಂತರ ನನಗೆ ನೀಲಕಂಠ ಪ್ರತ್ಯಕ್ಷ. ಆ ಪರಶಿವನು ನನ್ನನ್ನು ಕುರಿತು ನುಡಿದ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತೆರಡನೇ ಅಧ್ಯಾಯ ಮುಗಿದುದು.**

## ಭಗವಾನ್ ಉವಾಚ

ಅಧ್ಯಾಯ -23

'ವತ್ಸ ! ಏಳು ನಾನು ಸುಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರ ಕೇಳು '' ನೂರು ಬಾರಿ ನಮಿಸಿದೆ ಆ ಭಗವಂತನ ಅಡಿದಾವರೆಗೆ. ಎಮೆ ಪಿಳುಕಿಸದೇ ನೋಡಿದೆ. ಕೈ ಜೋಡಿಸಿ ಕೇಳಿದೆ - ಭಗವನ್ ! ನಿನ್ನ ದರ್ಶನದಿಂದಲೇ ನಾನು ಧನ್ಯ. ನನಗೆ ಬೇರೆ ಯಾವ ವರವೂ ಬೇಡ. ನನಗೆ ಒಂದೇ ಅಪೇಕ್ಷೆ. ಮುಪ್ಪು ನನ್ನನ್ನು ಎಂದೂ ಅಪ್ಪಿ ಹಿಡಿಯಬಾರದು. ಸಾವು ನನ್ನ ಸನಿಹದಲ್ಲಿಯೂ ಸುಳಿಯಬಾರದು.''

**ಶಂಕರ :** ನಾಮ ರೂಪ ಧರಿಸಿದ ಯಾವ ಪ್ರಾಣಿಯೂ ಎಂದಿಗೂ ಮುಪ್ಪು ಸಾವುಗಳಿಂದ ಪಾರಾಗಲಾರ. ಹುಟ್ಟಿದವನು ಸಾಯಲೇ ಬೇಕು. ಪ್ರಪಂಚದಲ್ಲಿ ಯಾವ ಜೀವಿಯೂ ಅಜ ಆಗಲಾರ. ಮುಪ್ಪನ್ನು ತಪ್ಪಿಸಲಾರ. ಯಾವ ಪ್ರಾಣಿಯೂ ಅಮರ ಎನಿಸಲಾರ. ಅರ್ಥಾತ್ ಮೃತ್ಯುವನ್ನು ಮೀರಿ ನಿಲ್ಲಲಾರ.'' ಅತ್ಯಂತ ನಿರಾಶೆಯಾಯಿತು ಆ ನಾಗಭೂಷಣನ ನುಡಿಗಳನ್ನು ಕೇಳಿ ತಪಂಗೈಯುತ್ತಿದ್ದ ನನಗೆ. ನನ್ನ ಅಜರತೆ ಅಮರತೆಯ ಕನಸು ಎಂದೂ ನನಸಾಗಲಾರದು ಎಂಬ ಶಿವನ ಮಾತು 'ಸತ್ಯಂ' ಆಗಿತ್ತು. ಆದರೆ ಅದು ನನ್ನ ಪಾಲಿಗೆ 'ಶಿವಂ ಆಗಿರಲಿಲ್ಲ. 'ಸುಂದರಂ ' ಆಗುವ ಆಶೆ ಎಲ್ಲಿ ! ಶಿವನಿಗೂ ಕೇಳಿರಬೇಕು ನನ್ನ ನಿರಾಶೆಯ ನಿಟ್ಟುಸಿರು. ಹತಾಶನಾಗಿ ನಾನು ನುಡಿದೆ - ''ವೃಷಧ್ವಜ' ! ಹಾಗಾದರೆ ಇಷ್ಟನ್ನಾದರೂ ನನಗೆ ಒಂದು ವರವನ್ನು ದಯಪಾಲಿಸು. ಒಂದೊಂದು ಕಲ್ಪದ ಕೊನೆಗೆ ನನ್ನ ದೇಹದಿಂದ ಒಂದು ಕೇಶವು ಉದುರಿ ನಾಶವಾಗಬೇಕು. ಹೀಗೆ ಕಲ್ಪಕ್ಕೊಂದರಂತೆ ನನ್ನ ಮೈಯಲ್ಲಿಯ ರೋಮಗಳೆಲ್ಲವೂ ಉದುರಿ ಬಿದ್ದು ಹೋದ ನಂತರ ನನಗೆ ಬೇಕಾದರೆ ಮರಣ ಬರಲಿ. ಹೀಗೆ ನನಗೆ ಅನೇಕ ಕಲ್ಪಾಂತ ಕಾಲದ ಅನಂತರ ಮರಣ ಬಂದ ಬಳಿಕ ನಾನು ನಿನ್ನ ಗಣಂಗಳಲ್ಲಿ ಒಬ್ಬನಾಗಿ ಇರಬೇಕು.

'ತಥಾಸ್ತು' ಎಂದ ಗೌರೀ ಪತಿ ನನ್ನ ಬೇಡಿಕೆಗೆ. ಅವನ ಅನುಗ್ರಹದಿಂದಲೇ ದೊರೆತಿದೆ ನನಗೆ ಈ ದೀರ್ಘಾಯುಷ್ಯ. ಭಗವಂತನು ಅಂತರ್ಧಾನ ಹೊಂದಿದ ಬಳಿಕ ನಾನು ಪುನಃ ತಪೋನುಷ್ಠಾನಕ್ಕೆ ತೊಡಗಿದೆ. ವಿಮಲಕರವಾದ ಕಮಲ ಪುಷ್ಪಗಳಿಂದ ಧೂರ್ಜಟಿಯ ನಿತ್ಯ ಪೂಜೆಯೇ ನನ್ನ ವ್ರತ. ಶಿವನ ಸೇವೆಯೇ ನನ್ನ ತಪಸ್ಸು. ಶಿವಧ್ಯಾನವೇ ನನ್ನ ಜಪ. ಶಿವಪೂಜೆ ಮಾಡುವುದರಿಂದ ಬ್ರಹ್ಮಹತ್ಯಾದಿ ಮಹಾ ಮಹಾ ಪಾಪಗಳೆಲ್ಲವೂ ಲೋಪವಾಗಿ ಹೋಗುವವು. ಸಿದ್ಧಿ ಕರತಲಾಮಲಕ. ಇದಕ್ಕೆ ಸಂದೇಹವಿಲ್ಲ.

ಮಹಾರಾಜನೇ ! ನೀನು ಕೂಡ ಹೀಗೆ ಶಿವಧ್ಯಾನ, ಶಿವ ತಪೋನುಷ್ಠಾನ ಶಿವೋಪಾಸನೆಗಳನ್ನು ತಪ್ಪದೆ ಮಾಡು. ಇದರಿಂದ ನಿನಗೆ ತ್ರಿಕರಣ ಶುದ್ಧಿ ತಪಃ ಸಿದ್ಧಿ ಎರಡೂ ಆಗುವುದು.

ಈ ಶಿವನ ಪೂಜೆಯನ್ನು ಅಂತರ್ಯೋಗ ಬಹಿರ್ಯೋಗ ಎರಡು ರೀತಿಯಿಂದಲೂ ಮಾಡಬೇಕೆಂದು ಹಿರಿಯರು ಹೇಳಿದ್ದಾರೆ. ಇವೆರಡು ಯೋಗಗಳೂ

ಶಿವಯೋಗಗಳೆಂದೇ ಕರೆಯಲ್ಪಡುತ್ತವೆ. ಇವೆರಡರ ವಿಧಿವಿಧಾನಗಳನ್ನು ತಿಳಿದವನು ಸಾಕ್ಷಾತ್ ಪರಮೇಶ್ವರನೇ . ನೆಲ, ನೀರು, ಬೆಂಕಿ, ಗಾಳಿ, ಆಕಾಶ ಈ ಪಂಚಭೂತಗಳು ಶಿವನ ಪೂಜೆಯ ಉಪಕರಣಗಳೇ ಆಗಿವೆ ಎಂದು ತಿಳಿದು ಈ ಎಲ್ಲ ಮಹಾ ಭೂತಗಳಿಂದ ಉಂಟಾದ ವಸ್ತುಗಳೆಲ್ಲವನ್ನು ಶಿವಾರ್ಚನೆಗಾಗಿಯೇ ಉಪಯೋಗಿಸಿ ಕೊಂಡು, ಅವೆಲ್ಲ ವಸ್ತುಗಳನ್ನು ಶಿವನ ಚರಣಗಳಲ್ಲಿ ಸಮರ್ಪಿಸುವುದು ಬಾಹ್ಯಯೋಗ ಎನಿಸುವುದು. ಜ್ಞಾನೇಂದ್ರಿಯಗಳಿಂದ ಬಾಹ್ಯ ವಿಷಯಗಳಲ್ಲುಂಟಾಗುವ ಪ್ರವೃತ್ತಿಗಳನ್ನೆಲ್ಲ ತಡೆಹಿಡಿದು ಮನಸ್ಸನ್ನು ಕೂಡ ಬಹಿರ್ವಿಷಯಗಳಿಂದ ವಿಮುಖಗೊಳಿಸಿ ಶಿವನಲ್ಲಿಯೇ ಇರಿಸಿ ಅಂತರ್ಮುಖಿಯಾಗಿ ಸಂತತವೂ ಅಂತರಂಗದಲ್ಲಿ ಶಿವ ಚಿಂತನ ಗೈಯುವದು ಅಂತರ್ಯೋಗ ಎನಿಸುವದು. ಅವಿದ್ಯಾ, ಅಸ್ಮಿತಾ (ಚಿಜ್ಜಡ ಗ್ರಂಥಿ) ರಾಗ, ದ್ವೇಷ ಮತ್ತು ಅಭಿನಿವೇಶ ಮುಂತಾದ ಅವಿದ್ಯಕ ಪಂಚಕ್ಲೇಶಗಳಿಂದಲೂ ಮತ್ತು ಕರ್ಮಪ್ರವಾಹದ ಸುಖದುಃಖಗಳ ಪರಿಣಾಮಗಳಿಂದಲೂ, ವಿವಿಧ ವಾಸನಾವೇಶ ಗಳಿಂದಲೂ ಪೃಥಕ್ಕಾಗಿ, ಅತೀತನಾಗಿ, ಅಸ್ಪೃಷ್ಟನಾಗಿ, ನಿರ್ದುಷ್ಟನಾಗಿ ಇರುವ ಶಿವನನ್ನು ಆರಾಧಿಸುತ್ತ ಪ್ರಣವ ಮಂತ್ರ ಜಪಾನುಷ್ಠಾನ ತತ್ಪರನಾದ ಮಾನವನು ಮುಕ್ತಿಯನ್ನು ಹೊಂದುತ್ತಾನೆ. ಅವನ ಎಲ್ಲ ಪಾಪಗಳೂ ಸಮೂಲ ನಾಶ ಹೊಂದುತ್ತವೆ. ಇಂಥ ಶಿವಚಿಂತನೆಯು ಶಿವೈಕ್ಯ ನಿಷ್ಠೆಯಿಂದೊಡಗೂಡಿ ಭಕ್ತಿಭಾವ ಯುಕ್ತವಾಗಿ ಮಾನವರಿಗೆ ಬರುವದು ಬಹಳ ಅಪರೂಪ. ಪಾಪಿಗಳಿಗೆ ಶಿವನ ವಾರ್ತೆಯೇ ಎಂದಿಗೂ ದೊರಕಲಾರದು.

**ಪಾಪೋಪಹತಬುದ್ಧೀನಾಂ ಶಿವವಾರ್ತಾಪಿ ದುರ್ಲಭಾ ।**
**ದುರ್ಲಭಂ ಭಾರತೇ ಜನ್ಮ ದುರ್ಲಭಂ ಶಿವಪೂಜನಮ್ ॥**
**ದುರ್ಲಭಂ ಜಾಹ್ನವೀಸ್ನಾನಂ ಶಿವೇ ಭಕ್ತಿಃ ಸುದುರ್ಲಭಾ ।**
**ದುರ್ಲಭಂ ಬ್ರಾಹ್ಮಣೇ ದಾನಂ ದುರ್ಲಭಂ ವಹ್ನಿ ಪೂಜನಮ್ ॥**
**ಅಲ್ಪ ಪುಣ್ಯೈಶ್ಚ ದುಷ್ಪ್ರಾಪ್ಯಂ ಪುರುಷೋತ್ತಮ ಪೂಜನಮ್ ।**

ಪಾಪಿಷ್ಠರು ಶಿವನ ಸುದ್ದಿಗೇ ಬರುವುದಿಲ್ಲ. ಅವರ ಕಿವಿಗೆ ಬೀಳುವುದೂ ಇಲ್ಲ ಈ ಪುಣ್ಯಕರವಾದ ಶಿವವಾರ್ತೆ. ಭಾರತದಲ್ಲಿ ಹುಟ್ಟುವುದು ದುರ್ಲಭ. ಅದರಲ್ಲಿಯೂ ಶಿವಪೂಜೆ ದೊರಕುವುದು ಅತ್ಯಂತ ದುರ್ಲಭ. ಹುಟ್ಟಿದ ಮಾನವರಿಗೆ ಗಂಗಾಸ್ನಾನವು ಲಭಿಸುವುದು ದುರ್ಲಭ. ಅದಕ್ಕಿಂತ ದುರ್ಲಭ ಶಿವನಲ್ಲಿ ಭಕ್ತಿ. ದಾನ ಕೊಡಲು ಯೋಗ್ಯನಾದ ಬ್ರಾಹ್ಮಣ ಸತ್ಪಾತ್ರದೊರೆಯುವುದು ದುರ್ಲಭ. ಅದರಂತೆ ವಹ್ನಿಪೂಜೆ ಎಂದರೆ ವೈಶ್ವದೇವ, ಬಲಿಹರಣ, ಅಗ್ನಿಹೋತ್ರ, ಔಪಾಸನೆ, ಹೋಮ, ಹವನ ಮುಂತಾದ ವೇದೋಕ್ತ ಯಜ್ಞಯಾಗಗಳ ಮುಖಾಂತರ ಅಗ್ನ್ಯಂತರ್ಗತ ನಾರಾಯಣನ ಪೂಜೆಯು ಅತ್ಯಂತ ಅಪರೂಪ ಒಟ್ಟಾರೆ ಅಲ್ಪ ಪುಣ್ಯದಿಂದ ಪುರುಷೋತ್ತಮ ಪೂಜೆಯು ಅರ್ಥಾತ್'' ಅತೋಽಸ್ಮಿ ಲೋಕೆ ವೇದೇ ಚ ಪ್ರಥಿತಃ ಪುರುಷೋತ್ತಮಃ '' ಎಂಬ ಗೀತೋಕ್ತಿಯಂತೆ ಪುರುಷೋತ್ತಮನಾದ ಶ್ರೀ ಹರಿಯ ಪೂಜೆ ದೊರಕುವುದು ಅತ್ಯಂತ ದುರ್ಲಭ.

ಪೂರ್ವಕಾಲದಲ್ಲಿ ಮಹಾದೇವರ ಆರಾಧನೆಗೈದು ನಾನು ಹೇಗೆ ಚಿರಂಜೀವಿಯಾದೆ ಎಂಬ ಪ್ರಸಂಗವನ್ನು ನಾನು ನಿಮಗೆ ಈವರೆಗೆ ಹೇಳಿದೆ. ಶಿವಸ ಆರಾಧನೆ ಗೈಯ್ಯುವವರಿಗೆ ದೊರಕದಿರುವುದು ಯಾವುದಿದೆ ಈ ಮೂರು ಲೋಕಗಳಲ್ಲಿ?

**ನಾರದ :** ಲೋಮಶರ ವಿವೇಕದ ಮಾತು ಇಂದ್ರದ್ಯುಮ್ನನಿಗೆ ಹಿಡಿಸಿತು. 'ತಮ್ಮನ್ನು ಬಿಟ್ಟು ಬೇರಾರ ಬಳಿಗೂ ಹೋಗಲಾರೆ' ಎಂದ. ಶಿವರಾಧನೆಯ ದೀಕ್ಷೆಯನ್ನು ಬೇಡಿದ. ಬಕ, ಗಿಡುಗ, ಆಮೆ ಹಾಗೂ ಗೂಗೆಗಳ ವಿಚಾರವೂ ಅದೇ ಆಗಿತ್ತು. ಲೋಮಶನಾದರೂ ಶರಣಾಗತ ವತ್ಸಲ. ಆಸರೆ ಬೇಡಿದವರಿಗೆ 'ನಾಸ್ತಿ; ಎಂದವನಲ್ಲ. ಅಂತೆಯೇ ಇಂದ್ರದ್ಯುಮ್ನನೇ ಮೊದಲಾದ ಅವರಿಗೆಲ್ಲ ಶಿವದೀಕ್ಷೆಯಿತ್ತ, ಲಿಂಗಪೂಜೆಯನ್ನು ಉಪದೇಶಿಸಿದ. ಸಾಧು ಸಮಾಗಮ ಎಷ್ಟೊಂದು ಫಲಕಾರಿ ! ಅಲ್ಲದೆ ಅದರ ಫಲ ಶೀಘ್ರ ಲಭ್ಯ. ತೀರ್ಥಾದಿಗಳ ಸಮಾಗಮದಂತೆ ಫಲಿಸಲು ಹೆಚ್ಚು ಕಾಲ ಬೇಕಾಗಿಲ್ಲ.

**ತೀರ್ಥಾದಪ್ಯಧಿಕಃ ಸ್ಥಾನೇ ಸತಾಂ ಸಾಧು ಸಮಾಗಮಃ ।**
**ಪಚೇಲಿಮಫಲಃ ಸದ್ಯೋ ದುರಂತಕಲುಷಾಪಹಃ ॥**

**ಅಪೂರ್ವಃ ಕೋಽಪಿ ಸದ್ಗೋಷ್ಠೀ ಸಹಸ್ರಕಿರಣೋದಯಃ ।**
**ಯ ಏಕಾಂತತಯಾತ್ಯಂತ ಮಂತರ್ಗತ ತಮೋಪಹಃ ॥**

**ಸಾಧುಗೋಷ್ಠೀ ಸಮುದ್ಭೂತ ಸುಖಾಮೃತರಸೋರ್ಮಯಃ ।**
**ಸರ್ವೇ ವರಾಃ ಸುಧಾ ಶೀಧುಶರ್ಕರಾಮಧುಷಡ್ರಸಾಃ ॥**

ಸಾಧು ಸಂತರ ಸಮಾಗಮಕ್ಕೆ ತೀರ್ಥಕ್ಕಿಂತಲೂ ದೊಡ್ಡ ಸ್ಥಾನ ಸಲ್ಲಬೇಕು. ಬಹು ಬೇಗನೇ ದೊರಕುತ್ತದೆ ಅದರ ಪರಿಪಕ್ವ ಫಲ. ಕೊನೆಗಾಣದ ಪಾಪರಾಶಿಗೂ ಅದರಿಂದ ಕೊನೆ. ಸತ್ಸಂಗದ ಸೂರ್ಯ ಉದಯಿಸಿದನೆಂದರೆ - ಅಂತಃಕರಣದ ಮೂಲೆ ಮೂಲೆಗಳಲ್ಲಡಗಿದ ಅಜ್ಞಾನಕತ್ತಲೆಗೆಲ್ಲ ಮೋಕ್ಷ, ಸಾಧುಗಳನ್ನು ಭೆಟ್ಟಿಯಾದಾಗ ಮೇಲೇಳುವ ಆನಂದರಸತರಂಗಗಳು ಅಮೃತ, ದ್ರಾಕ್ಷೆ, ಸಕ್ಕರೆ ಜೇನುಗಳ ಸಿಹಿ ಸವಿಯನ್ನು ಮೀರಿರುತ್ತವೆ. ಮಾರ್ಕಂಡೇಯ ಮುನಿಯಿಂದೊಡಗೂಡಿದ ಇಂದ್ರದ್ಯುಮ್ನನೇ ಮೊದಲಾದ ಆ ಆರು ಮಿತ್ರರು ಸತ್ಸಂಗವನ್ನು ಪಡೆದದ್ದಾಯಿತು. ಅದರಿಂದ ಪ್ರಾರಂಭವಾಯಿತು ಅವರ ಶೈವ ಶಾಸ್ತ್ರೋದಿತ ಕರ್ಮಯೋಗ, ತಪಸ್ಸು, ಸ್ವಾಧ್ಯಾಯ ಹಾಗೂ ಈಶ್ವರ ಧ್ಯಾನ.

ತೀರ್ಥಯಾತ್ರೆಯಲ್ಲಿ ತೊಡಗಿದ್ದ ನಾನು ಒಮ್ಮೆ ಲೋಮಶರ ದರ್ಶನಕ್ಕೆಂದು ಅದೇ ಅವಧಿಯಲ್ಲಿ ಅಲ್ಲಿಗೆ ಭೆಟ್ಟಿ ಕೊಟ್ಟದ್ದೆ, ತೀರ್ಥಯಾತ್ರೆಯ ಮುಖ್ಯ ಗುರಿಯೇ ಅದು ತಾನೇ ! ಬರೇ ನೀರಲ್ಲಿ ಮುಳುಗಿ ಪ್ರತಿಮೆಯನ್ನು ಕಂಡು ಬರುವುದಕ್ಕಾಗಿ ತೀರ್ಥಯಾತ್ರೆ ವಿಹಿತವಾಗಿರುವುದಿಲ್ಲ. ತೀರ್ಥಕ್ಷೇತ್ರವೆಂದ ಮೇಲೆ ಅಲ್ಲಿ ಸಾಧು ಸಂತರು ಮುತ್ತಿರುತ್ತಾರೆ. ತೀರ್ಥ ಯಾತ್ರೆಗಾಗಿ ಹೋದ ಯಾತ್ರಿಕನಿಗೆ ಹೆಚ್ಚು ಮಂದಿ ಸಂತರ ಸಮಾಗಮದ ಸುಯೋಗ ದೊರಕುತ್ತದೆ. 'ತೀರ್ಥ' ಎಂದೆನಿಸುವುದೂ ಸಾಧುಗಳ ಸನ್ನಿಧಾನವಿದ್ದರೇನೇ.

**ಮುಖ್ಯ ಪುರುಷ ಯಾತ್ರಾ ಹಿ ತೀರ್ಥಯಾತ್ರಾನುಷಂಗತಃ ।**
**ಸದ್ಭಿಃ ಸಮಾಶ್ರಿತೋ ಭೂಮಿಭಾಗಸ್ತೀರ್ಥತಯೋಚ್ಯತೇ ॥**

ಕುಂತೀನಂದನ ! ಅಲ್ಲಿಯ ಅತಿಥಿ ಸತ್ಕಾರವನ್ನೆಲ್ಲ ಸ್ವೀಕರಿಸಿದ ನಾನು ಸ್ವಲ್ಪ ವಿಶ್ರಾಂತಿ ಪಡೆದುಕೊಂಡೆ . ಬಳಿಕ ನಾಡೀಜಂಘನೇ ಮೊದಲಾದ ಭಕ್ತರು ನನಗೆ ಪ್ರಣಮಿಸಿ ಈ ರೀತಿ ಪ್ರಶ್ನಿಸಿದರು - ''ಮುಕ್ತಿ ಸಾಧನೆಗೆ ಯೋಗ್ಯವೆನಿಸುವ ಸ್ಥಳವಾದರೂ ಯಾವುದು?''

**ನಾರದ** : ಮಹಾಸಂವರ್ತರು ತೀರ್ಥಕ್ಷೇತ್ರಗಳ ಬಗ್ಗೆ ಸಾಕಷ್ಟು ತಿಳಿದುಕೊಂಡವರು, ಅವರನ್ನು ವಿಚಾರಿಸಿದರೆ ಉತ್ತಮ ತೀರ್ಥಸ್ಥಳದ ವಿಳಾಸ ದೊರಕೀತು.

**ನಾಡೀಜಂಘ** : ಸಂವರ್ತರು ಎಲ್ಲಿ ತಪಗೈಯುತ್ತಿದ್ದಾರೆಂಬ ವಿಷಯದ ಅರಿವು ತಮಗಿದೆಯೇ ?

**ನಾರದ** : ಸಂವರ್ತ ಮುನಿಗಳು ಇರುವುದು ಕಾಶಿಯಲ್ಲಿ. ಗುಪ್ತವೇಷ ಧಾರಿಗಳಾಗಿ ಇರುವವರು ಅವರು. ಭಿಕ್ಷಾನ್ನದ ಭೋಜನ. ದಿನದ ಎರಡನೇ ಯಾಮದ ಕೊನೆಯ ಘಂಟೆ ಮತ್ತು ಮೂರನೇಯ ಯಾಮದ ಮೊದಲಿನ ಘಂಟೆ 'ಕುತಪ' ಕಾಲ ಎನಿಸಿದೆ. ಕುತಪ ಕಾಲ ಕಳೆದ ಬಳಿಕವೇ ಹೊರಡುವವರು ಅವರು. ಕೈಯಲ್ಲೇ ಭಿಕ್ಷೆ ಇಸಿದುಕೊಂಡು ಭೋಜನ ಮಾಡುವವರು. ಯಾವೊಂದು ಪದಾರ್ಥದ ಸಂಗ್ರಹವೂ ಅವರಲ್ಲಿಲ್ಲ. ಯಾವತ್ತೂ ಪರಬ್ರಹ್ಮನ ಧ್ಯಾನಾಸಕ್ತಿ. ಸಾಯಂಕಾಲ ಅವರ ವಾಸ್ತವ್ಯ ವನದಲ್ಲಿ. ಆದರೆ ಯಾವೊಬ್ಬನೂ ಅವರನ್ನು ಪರಿಚಯಿಸಲಾರ. ಅವರಂತೆ ವೇಷ-ಚಿಹ್ನಧಾರಿಗಳು ಅಲ್ಲಿ ಅನೇಕರು. ಅವರೆಲ್ಲರ ನಡುವೆ ಸಂವರ್ತ ಮುನಿಗಳನ್ನು ಬೇರ್ಪಡಿಸಿ, ಪರಿಚಯಿಸಿಕೊಳ್ಳಲು ಇರುವ ಲಕ್ಷಣ ಒಂದೇ ಒಂದು, ನಗರ ಮಧ್ಯೆ ಹಾಗು ಹೋಗುವ ಹೆದ್ದಾರಿಯೊಂದಿದೆ. ಹೆಣವೊಂದನ್ನು ಆ ಹೆದ್ದಾರಿಯ ಮಧ್ಯೆ ಇಡಬೇಕು. ಬೇರೆ ಯಾರಿಗೂ ಅದು ಕಾಣದಂತಿರಬೇಕು. ನೀವಾದರೂ ಆ ರಸ್ತೆಯ ಸ್ವಲ್ಪ ದೂರದಲ್ಲಿ ನಿಂತು ನಿರೀಕ್ಷಿಸುತ್ತಿರಬೇಕು. ಯಾರು ಆ ಪ್ರದೇಶಕ್ಕೆ ಸಮೀಪಿಸುತ್ತಲೇ ಹಿಂತಿರುಗುವರೋ ಅವರೇ ಸಂವರ್ತರು. ಯಾರು ಹೆಣವನ್ನು ಮುಳ್ಳಿನಂತೆ ದಾಟಿಕೊಂಡು ಹೋಗಲಾರರೋ ಸಂವರ್ತರು ಅವರೇ. ಹೀಗೆ ಸಂವರ್ತರನ್ನು ಗೊತ್ತು ಹಚ್ಚಿದಿರೆಂದರೆ - ವಿನೀತರಾಗಿ ಅವರಲ್ಲಿ ಶರಣಾಗತರಾಗಿರಿ. ನಿಮ್ಮ ಬಯಕೆಯನ್ನು ತೋಡಿಕೊಳ್ಳಿರಿ. ತನ್ನ ಪರಿಚಯ ಯಾರು ನೀಡಿದರೆಂದು ಅವರು ಕೇಳಿದರೆಂದರೆ ನನ್ನ ಹೆಸರನ್ನು ತಿಳಿಸಿ.''

ಹೀಗೆ ನನ್ನ ಸಲಹೆಯಂತೆಯೇ ನಡೆದುಕೊಂಡರವರು. ಹೆದ್ದಾರಿಯಲ್ಲಿ ಶವವನ್ನು ಕಂಡ ಸಂವರ್ತಕ ಮುನಿಗಳು ಕೂಡಲೆ ಹಿಂತಿರುಗಿದರು. ಇದರಿಂದ ಅವರನ್ನು ಗುರಿತಿಸಿದ ನಾಡೀಜಂಘಾದಿ ಭಕ್ತರು ಅವರನ್ನು ಹಿಂಬಾಲಿಸಿದರು, ಮಾರ್ಗದಲ್ಲಿ ಹೋಗುತ್ತಿರುವ ಸಂವರ್ತ ಮುನಿಗಳನ್ನು ಕರೆದು ಹೇಳಿದರು -

'ಒಂದು ಕ್ಷಣ ಕಾಲ ತಂಗಬೇಕು' ಆದರೆ ಅವರನ್ನೆಲ್ಲ ಧಿಕ್ಕರಿಸಿ ಮುನ್ನಡೆಯುತ್ತಲೇ ಇದ್ದರು ಸಂವರ್ತರು, 'ನೀವೇಕೆ ನನ್ನನ್ನು ಹಿಂಬಾಲಿಸುವಿರಿ? ಎಲ್ಲ ಹಿಂತಿರುಗಿ' ಎಂದು ಹೇಳುತ್ತಲೇ ಸಾಗಿದರು. ಓಡಿ ಓಡಿ ತುಂಬ ದೂರ ಸರಿದರು. ಕೊನೆಗೊಂದು ಕಡೆ ನಿಂತವರು ಪ್ರಶ್ನಿಸಿದರು :- 'ನನ್ನ ಪರಿಚಯವನ್ನು ನಿಮಗಿತ್ತವರು ಯಾರು?'' ಕಂಪಿಸುತ್ತಲೇ ಉತ್ತರಿಸಿದವರು - 'ನಾರದರು ನಮಗೆ ತಿಳಿಸಿದವರು'. ಸಂವರ್ತರು - ''ನನ್ನ ಮಾರ್ಗದಲ್ಲಿಟ್ಟ ಮುಳ್ಳನ್ನು ಮೊದಲು ತೆಗೆಯಿರಿ. ನಾನು ಭಿಕ್ಷೆಗಾಗಿ ಪುನಃ ಪಟ್ಟಣಕ್ಕೆ ತೆರಳಬೇಕಾಗಿದೆ. ನಿಮ್ಮ ಪ್ರಶ್ನೆಯನ್ನೂ ನನ್ನ ಮುಂದಿಡಿರಿ.''

**ಮಾರ್ಕಂಡೇಯಾದಿಗಳು :** ಮುನಿವರ್ಯರೇ, ತಾವೇ ನಮಗೆ ಶರಣು. ತಾವೇ ನಮಗೆ ಮುಕ್ತಿ ಮಾರ್ಗವನ್ನು ತೋರಿಸಬೇಕು. ತೀರ್ಥಗಳೆಲ್ಲದರ ಫಲ ನೀಡಬಲ್ಲ ತೀರ್ಥರಾಜ ಯಾವುದೆಂಬುದನ್ನು ಅರುಹಬೇಕು. ಅಲ್ಲಿಗೇ ತೆರಳಿ ತಂಗುವವರಿದ್ದೇವೆ ನಾವು.

**ಸಂವರ್ತರು :** ಮಹೀಸಾಗರ ಸಂಗಮವೇ ತೀರ್ಥಗಳಲ್ಲೆಲ್ಲ ಶ್ರೇಷ್ಠವಾದುದು. ಹಿಂದೆ ಪರಮಧಾರ್ಮಿಕನಾದ ರಾಜಶ್ರೇಷ್ಠ ಇಂದ್ರದ್ಯುಮ್ನ ಇಲ್ಲಿ ಯಜ್ಞಮಾಡಿದ್ದನು. ಆಗ ಇದರಿಂದಾಗಿ ಭೂಮಿಯೇ ಎರಡಂಗುಲ ಮೇಲೇರಿತು. ಆ ಯಜ್ಞಾಗ್ನಿಯಿಂದಾಗಿ ಕುದಿದ ಭೂಮಿಯಿಂದ ನೀರು ಸೋರಲು ಪ್ರಾರಂಭಿಸಿತು. ಒದ್ದೆ ಕಟ್ಟಿಗೆಯನ್ನು ಸುಟ್ಟಾಗ, ಅದರಿಂದ ನೀರು ಸೋರುವಂತೆ ಭೂಮಿಯಿಂದ ಸೋರಿದ ಆ ನೀರೇ ಮಹೀ ಎಂಬ ನದಿ. ಭೂಮಿಯ ಮೇಲಿನ ತೀರ್ಥಗಳೆಲ್ಲದರ ಸಾರ ಆ ಮಹೀ ನದಿಯ ಜಲದಲ್ಲಿದೆ. ಮಾಲವಾ' ದೇಶದಿಂದ, ಮಹೀ ನದಿಯ ಉತ್ಪತ್ತಿ. ದಕ್ಷಿಣ ಸಮುದ್ರಕ್ಕೆ ಹೋಗಿ ಸೇರುತ್ತದೆ. ಎಲ್ಲರಿಗೂ ಮಂಗಲಮಯವಾದ ಆ ನದಿ ಮೊದಲೇ ಸರ್ವ ತೀರ್ಥಮಯವಾದದ್ದು. ಸರಿತ್ಸ್ವಾಮಿ ಸಾಗರದ ಸಂಗಮದಿಂದ ಮತ್ತಷ್ಟು ಪಾವಿತ್ರ್ಯ ಅದಕ್ಕೆ ಬಂದಿದೆ. ಕಾಶಿ, ಕುರುಕ್ಷೇತ್ರ, ಗಂಗಾ, ನರ್ಮದಾ, ಮೊದಲಾದ ಭೂಮಿಯಲ್ಲಿರುವ ಇಪ್ಪತ್ತು ಸಾವಿರದ ಆರು ನೂರು ನದಿಗಳ ಸಾರವೂ ಅಡಗಿದೆ ಈ ಮಹೀನದಿಯಲ್ಲಿ. ಭೂತಲದ ತೀರ್ಥಗಳಲ್ಲೆಲ್ಲ ಮಿಂದು ಹೊಂದಬಹುದಾದ ಫಲವನ್ನೆಲ್ಲ ಈ ಮಹೀಸಾಗರ ಸಂಗಮಸ್ನಾನದಿಂದಲೇ ಪಡೆಯಬಹುದು, ಪುಣ್ಯಕ್ಷೇತ್ರವನ್ನು ಬಯಸುವ ನಿಮಗೆ ಅದು ಉಚಿತ ಪ್ರದೇಶ.

ಹಿಂದೆ ತುಂಬ ವರ್ಷಗಳವರೆಗೆ ನಾನೂ ಅಲ್ಲೇ ವಾಸವಾಗಿದ್ದೆ. ಯಾವಾಗ ನಾರದರೂ ನನ್ನ ಜೊತೆ ಇರಲು ಪ್ರಾರಂಭಿಸಿದರೋ, ಆಗ ಆ ಸ್ಥಳವನ್ನು ನಾನು ಬಿಡಬೇಕಾಗಿ ಬಂತು. ಇಲ್ಲಿಯ ಸುದ್ದಿಯನ್ನು ಅಲ್ಲಿಗೆ, ಅಲ್ಲಿಯದನ್ನು ಇಲ್ಲಿಗೆ ತಲುಪಿಸುವ ಸ್ವಭಾವ ನಾರದರದು. ಮರುತ್ತ ಅರಸ ನನ್ನ ಹುಡುಕಾಟದ ಯತ್ನ ನಡೆಸಿದ್ದಾನೆ. ನಾನು ಈ ಗುಪ್ತ ಸ್ಥಳದಲ್ಲಿ ಇರುತ್ತೇನೆ. ಈ ಸ್ಥಳ ಗೊತ್ತಿಲ್ಲ ಆ ಮರುತ್ತನಿಗೆ. ನನಗೆ ಈಗಲೂ ನಾರದನ ಭಯ ಇದ್ದೇ ಇದೆ. ನಾನಿದ್ದ ಸ್ಥಳವನ್ನು

ಹೇಗೋ ಪತ್ತೆ ಹಚ್ಚಿ ಮರುತ್ತನಿಗೆ ಎಲ್ಲಿ ತಿಳಿಸಿಬಿಡುವನೋ ಎಂದು ನಾನು ಸಾಧ್ಯವಾದಷ್ಟು ಗುಟ್ಟಾಗಿ ಇರಬೇಕೆಂಬುದೇ ನನ್ನ ಪ್ರಯತ್ನ. ಈ ಸ್ಥಳದಲ್ಲಿ ವಾಸಿಸುವವರೆಲ್ಲರೂ ಬರೀ ದಿಗಂಬರ ಸಾಧುಗಳು. ಅವರಲ್ಲಿಯೇ ಒಬ್ಬನಂತೆ ನಾನು ಈಗ ಆಗಿಬಿಟ್ಟಿರುವೆ. ದಿಗಂಬರ ಸಾಧುಗಳದೇ ವೇಷ, ಹುಟ್ಟಿದ ಮಹರ್ದೆಶೆಯಲ್ಲಿಯೇ ಗುಟ್ಟಾಗಿ ಆ ನಂಗಾ ಸಾಧುಗಳ ನಟ್ಟ ನಡುವೆಯೇ ನನ್ನ ವಾಸ. ಯಾವಾಗಲೂ ಅವಧೂತ ಚರ್ಯೆ. ದೇಹದ ಬಗ್ಗೆ ಅಸಡ್ಡೆ. ದೇವರ ಬಗ್ಗೆ ಸದಾ ಧ್ಯಾನ. ಈ ನಗ್ನ ಸಾಧುಗಳ ಮಧ್ಯದಲ್ಲಿ ಒಬ್ಬನಾಗಿರುವ ನನ್ನನ್ನು ಯಾರೂ ಗುರುತಿಸಲಾರರು ಎಂಬ ಭರವಸೆ.

ಇದಕ್ಕೆಲ್ಲ ಕಾರಣ ಆ ಮರುತ್ತ ಮಹಾರಾಜ. ಮರುತ್ತ ಮಹಾರಾಜನಿಗೆ ಯಜ್ಞ ಸಿದ್ಧಿಗಾಗಿ ನಾನು ಬೇಕಾಗಿದ್ದೆ. ಅವನ ಪುರೋಹಿತನಾಗುವದು ನನಗೆ ಬೇಡವಾಗಿದೆ. ಅದಕ್ಕಾಗಿಯೇ ನಾನು ಅಡಗಿದ್ದು ಈ ಅರಣ್ಯಾಂತರದಲ್ಲಿ. ನನಗೆ ಆ ಕಿಲಾಡಿ ನಾರದನದೇ ಹೆದರಿಕೆ. ನನ್ನ ನಿವಾಸದ ಗುಟ್ಟನ್ನು ರಟ್ಟು ಮಾಡುವದೇ ಆ ನಾರದನ ಹವ್ಯಾಸ. ನಾನೂ ಸಾಧ್ಯವಾದಷ್ಟು ಆ ದೇವ ಮುನಿಗೆ ಗುರುತು ತೋರಬಾರದೆಂದು ಈ ಬೈರಾಗಿಗಳ ಗುಂಪಿನಲ್ಲಿ ಈ ಅಮಾನುಷ ಅಟವಿಯಲ್ಲಿ ಅಡಗಿಕೊಂಡಿದ್ದೇನೆ. ದಯಮಾಡಿ ನೀವು ಯಾರಿಗೂ ನನ್ನ ಇರುವು ಅರಿವುಗಳ ಸುಳಿವನ್ನು ಕೊಡಕೂಡದು. ಮರುತ್ತ ರಾಜನಿಗೆ ನಾನೇಕೆ ಇಷ್ಟು ಹೆದರುತ್ತಿದ್ದೇನೆ ಎಂದು ನಿಮಗೆ ಆಶ್ಚರ್ಯ ಎನಿಸಬಹುದು. ಅದೊಂದು ಮಹಾ ಪ್ರಕರಣ. ಸಂಕ್ಷೇಪದಲ್ಲಿ ಹೇಳಬೇಕೆಂದರೆ ನನ್ನ ತಂದೆ ಅವನನ್ನು ಪರಿತ್ಯಜಿಸಿದ್ದಾನೆ. ಅದಕ್ಕೆಲ್ಲ ಬೇರೆ ಕಾರಣ ಇದೆ. ಅದೊಂದು ದೊಡ್ಡ ಕತೆ. ಅದನ್ನೆಲ್ಲ ಈಗ ಹೇಳುತ್ತ ಕೂಡಲಾರೆ. ನನ್ನ ತಂದೆ ಸಾಮಾನ್ಯರಲ್ಲ. ಗೀರ್ವಾಣ ಗಣಕ್ಕೆಲ್ಲ ಗುರು. ಸುರಾಚಾರ್ಯರಾದ ಆ ನನ್ನ ತಂದೆಯು ಮರುತ್ತನ ಯಜ್ಞಗಳನ್ನು ಸಂಪೂರ್ಣ ಬಹಿಷ್ಕರಿಸಿದ್ದಾರೆ. ಯಜ್ಞದಲ್ಲಿ ನಡೆಯುವ ಪ್ರಾಣಿ ಹಿಂಸೆ ನಮ್ಮ ತಂದೆಗೆ ಸುತರಾಂ ಅನಭಿಪ್ರೇತ. ಹಿಂಸೆಯೆಂದರೆ ಆಗದು ನನ್ನ ಪೂಜ್ಯ ಪಿತೃಪಾದರಿಗೆ.

ಆದುದರಿಂದ ಅವರು ಮರುತ್ತ ಮಹೀಪಾಲನ ಪೌರೋಹಿತ್ಯವನ್ನೇ ತೊರೆದು ಬಿಟ್ಟಿದ್ದಾರೆ. ಗುರು ದೊರಕದಿದ್ದರೆ ಗುರುವಿನ ಮಗನನ್ನಾದರೂ ತನ್ನ ಪುರೋಹಿತನಾಗಿ ಮಾಡಿಕೊಳ್ಳಬೇಕೆಂದು ಮನೀಷೆ ಆ ಮರುತ್ತ ಮಹಾರಾಜನದು. ನನ್ನ ಹಿರಿಯರು ಮರುತ್ತನ ಯಜ್ಞವನ್ನು ಬಹಿಷ್ಕರಿಸಿದ ಕಾರಣವೇ ನನಗೂ ಅದರಿಂದ ದೂರ ಇರಲು ಪ್ರೇರಕ. ಅದಕ್ಕಾಗಿಯೇ ನಾನು ಕೂಡ ಮರುತ್ತ ದೊರೆಯ ಯಜ್ಞ ಯಾಗಾದಿಗಳಿಂದ ಪರಾಙ್ಮುಖ. ಹಿಂಸಾತ್ಮಕವಾದ ಯಜ್ಞಗಳಿಂದ ನನಗೇನು ಆಗಬೇಕಾಗಿದೆ ಲಾಭ ! ನನಗೆ ಧನ, ಸ್ಥಾನ, ಮಾನ, ಗೌರವ, ಮುಂತಾದ ಯಾವ ಲೋಭವೂ ಇಲ್ಲ. ಹಾಗೆಂದು ಸಮ್ಮುಖ ಬಂದಾಗ ಆ ಅರಸನಿಗೆ ನಿಷ್ಠುರ ನುಡಿಯಲಿಕ್ಕೂ ಮನಸ್ಸಿಲ್ಲ. ಅದಕ್ಕಾಗಿಯೇ ಈ ಅಜ್ಞಾತವಾಸ. ಈ ಕಾರಣದಿಂದಲೇ

ಈ ಮುಗಿಲು ಬಟ್ಟೆ ಬರಿಮೈ ಬಾವಾಗಳ ಸಹವಾಸ. ಇದೆಲ್ಲವೂ ನಿಮ್ಮಲ್ಲಿಯೇ ಗುಟ್ಟಾಗಿ ಇರಲಿ. ಎಲ್ಲಿಯೂ ಬಾಯಿ ಬಿಡಬೇಡಿರಿ. ನೀವೆಲ್ಲರೂ ಈ ಇಂದ್ರದ್ಯುಮ್ನ ಭೂಪತಿಯೊಂದಿಗೆ ಮಹೀಸಾಗರ ಸಂಗಮ ತೀರ್ಥಕ್ಕೆ ಪ್ರಯಾಣ ಬೆಳೆಸಿರಿ. ಅಲ್ಲಿ ಮಿಂದವರು ಮಂದಾಕಿನಿ ನದಿಯಲ್ಲಿ ಮಿಂದಂತೆ. ಸ್ವರ್ಗ ಅವರ ಕೈಯಲ್ಲಿ. ಮುಕ್ತಿ ಬಹಳ ಹತ್ತಿರದಲ್ಲಿ.''

ಹೀಗೆ ನುಡಿದು ತನ್ನ ಗಂತವ್ಯ ಸ್ಥಾನದೆಡೆಗೆ ತೆರಳಿದ ಮಹಾಮುನಿ ಸಂವರ್ತ. ಅವನ ಆದೇಶದಂತೆ ಇಂದ್ರದ್ಯುಮ್ನ ಮೊದಲಾದವರು ಅಲ್ಲಿಂದ ಪುಣ್ಯಕರ ಮಹೀಸಾಗರ ಸಂಗಮ ತೀರ್ಥಕ್ಕೆ ಹೊರಟರು. ಆ ಪವಿತ್ರ ತೀರ್ಥದ ತೀರದಲ್ಲಿ ತಪಂಗೈಯುತ್ತಿದ್ದ ಮಹಾಮುನಿ ಭರ್ತ್ರ್ಯಯಜ್ಞ. ಅಂತರ್‌ದೃಷ್ಟಿಯಿಂದಲೇ ತಿಳಿದುಕೊಂಡಿದ್ದ ಆ ಮಹಾಋಷಿ ಇವರೆಲ್ಲರೂ 'ಶಿವ ಗಣ' ಎಂದು. ಅದಕ್ಕಾಗಿಯೇ ಅವರೆಲ್ಲರಿಗೂ ಆದರದ ಸ್ವಾಗತ. ಪ್ರೀತಿಯ ಉಪಚಾರ. ಸೌಹಾರ್ದದ ಸತ್ಕಾರ, ಕುಶಲ ಪ್ರಶ್ನೆಗಳಾದ ಬಳಿಕ ಆ ತೀರ್ಥವಾಸಿ ತಪೋನಿಧಿಗಳು ಆ ಅತಿಥಿ ಅಭ್ಯಾಗತರನ್ನು ಉದ್ದೇಶಿಸಿ ನುಡಿದರು.

**ಭರ್ತ್ರ್ಯಯಜ್ಞ :** ನೀವು ನಿಜವಾಗಿಯೂ ಪುಣ್ಯವಂತರು. ಮಹೀತಲದಲ್ಲಿಯೇ ಪರಮ ಪವಿತ್ರತಮ ತೀರ್ಥವೆಂದರೆ ಈ ಮಹೀಸಾಗರ ಸಂಗಮ ತೀರ್ಥ. ಆದರೆ ಈ ವಿಷಯ ಗುಟ್ಟಾಗಿದೆ. ಬಹು ಜನರು ತಿಳಿಯರು ಈ ತೀರ್ಥದ ಹಿರಿಮೆಯನ್ನು ಭೂತಳದಲ್ಲಿ. ಆದುದರಿಂದಲೇ ಈ ವರೆಗೂ ಇದರ ಏಕಾಂತ ಶಾಂತತೆಗೆ ಭಂಗ ಬಂದಿಲ್ಲ. ಈ ವರೆಗೂ ಒಮ್ಮೆಯೂ ಕದಡಿಲ್ಲ ಇದರ ಶಾಂತತೆ, ಆದರೂ ಹೇಗೋ ನೀವು ಚೆನ್ನಾಗಿ ಅರಿತಿರಿ ಈ ಗುಪ್ತ ತೀರ್ಥದ ಹಿರಿಮೆಯನ್ನು, ಕಷ್ಟಪಟ್ಟು ಆಗಮಿಸಿದಿರಿ ಇಲ್ಲಿಗೆ. ಇದು ನಿಮ್ಮ ಜನ್ಮಜನ್ಮಾಂತರದ ಪುಣ್ಯ. ಈಗ ನಿಮ್ಮ ಜನ್ಮವೇ ಧನ್ಯ. ಈ ಮಹೀಸಾಗರ ಸಂಗಮದಲ್ಲಿ ಮಾಡಿದ ಜಪ, ನೀಡಿದ ದಾನ, ಮಿಂದ ಸ್ನಾನ, ಹುತಿಸಿದ ಹೋಮ ಅಥವಾ ಪಿಂಡದಾನ, ಎಲ್ಲವೂ ಅಕ್ಷಯ. ಅನಂತ. ಹಿಂದೆ, ಬಹುಕಾಲದ ಹಿಂದೆ, ಈ ಸ್ಥಳವನ್ನು ನಿರ್ಮಿಸಿದವರು ದೇವಮುನಿ ನಾರದ. ಇದರ ಮಹಿಮೆಯನ್ನು ತಿಳಿದು ಮುಗಿಲಿನಲ್ಲಿಯ ಮಹಾ ಮಹಾ ಗ್ರಹಗಳು, ನಕ್ಷತ್ರನಾಥರು ಆಗಮಿಸಿದ್ದರು ಈ ಮಹೀಸಾಗರ ಸಂಗಮದ ಮಹಾ ತೀರ್ಥಕ್ಕೆ.

ನವಗ್ರಹಗಳ ಮಾಲೆಯಲ್ಲಿ ಮಹಾಪಾಪಗ್ರಹ ಎಂದರೆ ಶನಿ. ಆ ಶನಿ ಗ್ರಹವು ಕೂಡ ಈ ಮಹೀಸಾಗರ ತೀರ್ಥದಲ್ಲಿ ಮಿಂದು ಮೃದು ಹೃದಯಿಯಾಗಿ ಬಿಟ್ಟಿತ್ತು. ಈ ತೀರ್ಥದ ಮಹಿಮೆಯನ್ನು ಮೊತ್ತಮೊದಲು ಪ್ರಪಂಚಕ್ಕೆ ಸಾರಿ ಈ ತೀರ್ಥಕ್ಕೆ ವರದಾನ ನೀಡಿದ ಮಹಾಗ್ರಹವೆಂದರೆ ಶನೇಶ್ವರ. ಗಗನಾಂಗಣದ ಸಮಸ್ತತಾರೆಗಳ ಗ್ರಹಪತಿಯಾಗಿ ಶನಿದೇವತೆಯು ಈ ತೀರ್ಥರಾಜನಿಗೆ ನೀಡಿದ ಹರಕೆ ಇಂತಿದೆ. ''ಶನಿವಾರ ದಿನ ಅಮಾವಾಸ್ಯಾ ತಿಥಿ ಬಂದರೆ ಅಥವಾ ಸೂರ್ಯ ಸಂಕ್ರಮಣ ಯೋಗವಿದ್ದರೆ ಈ ತೀರ್ಥದಲ್ಲಿ ಸ್ನಾನ ಮಾಡಬೇಕು. ಹೀಗೆ ಅಮಾಶನಿ, ಸಂಕ್ರಮಣ

ಶನಿ, ವ್ಯತೀಪಾತ ಶನಿ ಯೋಗಗಳು ಇಲ್ಲಿ ಪುಷ್ಕರಪರ್ವ ಎಂದು ಕರೆಯಲ್ಪಡುವವು. ಈ ಪುಷ್ಕರಪರ್ವದಲ್ಲಿ ಈ ಮಹೀಸಂಗಮ ತೀರ್ಥದಲ್ಲಿ ಸ್ನಾನ ಮಾಡಿದರೆ ನೂರು ಸೂರ್ಯಗ್ರಹಣ ಸ್ನಾನಕ್ಕಿಂತ ಮಿಗಿಲಾದ ಪುಣ್ಯಫಲ ಪ್ರಾಪ್ತಿ. ಈ ತೀರ್ಥದಲ್ಲಿ ಚಿನ್ನದ ಶನಿಯ ಮೂರ್ತಿ, ಸೂರ್ಯನ ಪ್ರತಿಮೆಗಳನ್ನು ವಿಧಿಪೂರ್ವಕವಾಗಿ ಪೂಜಿಸಬೇಕು. ಶನಿಮಂತ್ರ ಸೂರ್ಯಮಂತ್ರಗಳನ್ನು ಜಪಿಸಿ ಅರ್ಘ್ಯ ನೀಡಬೇಕು. ಅದರಿಂದ ಬರುವ ಪುಣ್ಯ ಪ್ರಯಾಗ ಕುರುಕ್ಷೇತ್ರ ಸ್ನಾನಗಳಿಗಿಂತ ಮಿಗಿಲು. ಈ ಸಂಗಮದಲ್ಲಿ ಸ್ನಾನ ಮಾಡುವಾಗ ''ಅಗ್ನಿಶ್ಚತೇ ಯೋನಿರಿಳಾ ಚ ದೇಹೋ ರೇತೋಽ ಥ ವಿಷ್ಣೋರಮೃತಸ್ಯ ನಾಭಿಃ!

''ಮಹಾನದಿಯೇ ! ಅಗ್ನಿಯೇ ನಿನ್ನ ಉತ್ಪತ್ತಿ ಸ್ಥಾನ. ಈ ಧರಣಿಯೇ ನಿನ್ನ ದೇಹ. ವಿಷ್ಣುವಿನ ಶಕ್ತಿಯಿಂದಲೇ ನಿನ್ನ ಉತ್ಪತ್ತಿ. ನೀನು ಅಮೃತದ ಕೇಂದ್ರ.'' ಈ ಮಂತ್ರ ಹೇಳಿ ಮೀಯಬೇಕು. ಮತ್ತು ಕೆಳಗಿನ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು.

**ಮುಖಂ ಚ ಯಃ ಸರ್ವನದೀಷು ಪುಣ್ಯಃ ।**
**ಪಾಥೋಧಿರಂಬುಪ್ರಚುರಾ ಮಹೀ ಚ ॥**
**ಸಮಸ್ತ ತೀರ್ಥಾಕೃತಿರೇತಯೋಶ್ಚ ।**
**ದದಾಮಿ ಚಾರ್ಘ್ಯಂ ಪ್ರಣಾಮಾಮಿ ನೌಮಿ ॥**

''ಭೂಮಂಡಲದಲ್ಲಿ ಇರುವ ಎಲ್ಲ ನದೀ ಮುಂತಾದ ಜಲಾಶಯಗಳಲ್ಲಿ ಎಲ್ಲಕ್ಕಿಂತ ಪವಿತ್ರ ಹಾಗೂ ಎಲ್ಲಕ್ಕಿಂತ ಶ್ರೇಷ್ಠವಾಗಿವೆ ಸಮುದ್ರ ಹಾಗೂ ಈ ಮಹೀನದೀ. ಇವೆರಡಕ್ಕೂ ನಾನು ಈಗ ಅರ್ಘ್ಯವನ್ನು ನೀಡುತ್ತೇನೆ. ಹಾಗೂ ಮಹೀನದಿಯ ಸ್ತೋತ್ರವನ್ನೂ ಮಾಡುತ್ತೇನೆ.'' ಎಂದು ಹೇಳಿ ಸಮುದ್ರ ಹಾಗೂ ಮಹೀನದಿಗಳಿಗೆ ಅರ್ಘ್ಯವನ್ನು ಕೊಡಬೇಕು. ಪ್ರತಿಯೊಬ್ಬ ಮಾನವನು ಸ್ನಾನ ಮಾಡುವಾಗ ಈ ಪುಣ್ಯ ನದಿಯ ನಾಮಮಾಲೆಯ ಉಚ್ಚಾರಣವನ್ನು ಭಕ್ತಿಯಿಂದ ಮಾಡಬೇಕು. ಪರಮ ಭಗವದ್ಭಕ್ತನಾದ ಪೃಥು ಮಹಾರಾಜನು ಧರಾತಳದ ಈ ಪುಣ್ಯ ಪಯಸ್ವಿನಿಯ ನಾಮಮಾಲೆಯನ್ನು ಸಿದ್ಧಪಡಿಸಿ ಪಠಣಕ್ಕೆ ಅನುಕೂಲವಾಗುವಂತೆ ರಚಿಸಿದ್ದಾನೆ.

**''ತಾಮ್ರಾ ರಸ್ಯಾ ಪಯೋವಾಹಾ ಪಿತೃ ಪ್ರೀತಿಪ್ರದಾ ಶುಭಾ ।**
**ಸಪ್ತಮಾಲಾ ಮಹಾಸಿಂಧು ರ್ಧಾತುರ್ಧಾತ್ರೀ ಪೃಥುಸುತಾ ।**
**ಇಂದ್ರದ್ಯುಮ್ನಸ್ಯ ಕನ್ಯಾ ಚ ಕ್ಷಿತಿಜನ್ಮಾ ಇರಾವತೀ**
**ಮಹೀಪರ್ಣಾ ಮಹೀಶೃಂಗಾ ಗಂಗಾ ಪಶ್ಚಿಮವಾಹಿನೀ ॥**
**ನದೀ ರಾಜನದೀಚೇತಿ ನಾಮಾಷ್ಟಾದಶ ಮಾಲಿಕಾಮ್ ।**
**ಸ್ನಾನಕಾಲೇ ಚ ಸರ್ವತ್ರ ಶ್ರಾದ್ಧಕಾಲೇಜ ಪೇನ್ನರಃ ॥**
**ಪೃಥುನೋಕ್ತಾನಿ ನಾಮಾನಿ ಯಜ್ಞಮೂರ್ತಿಪದಂ ವ್ರಜೇತ್ ॥**

ಈ ಸ್ತೋತ್ರ ಹೇಳಿ ,ಮಹಾನದಿಯಲ್ಲಿ ಮಿಂದವರು ವಿಷ್ಣುಪದವನ್ನು ಹೊಂದುವರು. ಅನಂತರ ಪ್ರತ್ಯೇಕವಾಗಿಯೂ ಮಹೀನದಿಗೆ ಕೆಳಗಿನ ಮಂತ್ರದಿಂದ ಅರ್ಘ್ಯಕೊಡಬೇಕು.

**"ಮಹೀದೋಹೇ ಮಹಾನಂದ ಸಂದೋಹೇ ವಿಶ್ವಮೋಹಿನಿ**
**ಜಾತಾ ಹಿ ಸರಿತಾಂ ರಾಜ್ಞಿ ಪಾಪಂ ಹರ ಮಹೀದ್ರವೇ ॥**

ದೇವಿ, ಮಹೀನದಿಯೇ ನೀನು ಈ ಭೂಮಾತೆಯಮ ಹಾಲಿನಂತೆ ಇರುತ್ತೀ. ಪರಮಾನಂದದ ರಾಶಿಯೇ ನೀನು. ನಿನ್ನನ್ನು ನೋಡಿ ಸಮಗ್ರ ವಿಶ್ವವೇ ಮುಗ್ಧವಾಗಿದೆ. ನೀನು ಎಲ್ಲ ನದಿಗಳ ರಾಣಿಯಾಗಿ ಪ್ರಕಟವಾಗಿರುವೆ. ನೆಲದಾಯಿಯ ಕರುಣೆಯೇ ದ್ರವಿಸಿದಂತಿರುವ ಮಹೀತರಂಗಿಣಿಯೇ ! ನಮ್ಮ ಪಾಪವನ್ನು ನಾಶಪಡಿಸು. ಈ ಮಹೀ ಸಾಗರ ಸಂಗಮತೀರ್ಥದಲ್ಲಿ ಸ್ನಾನ, ಜಪ, ತಪ, ದಾನ, ಧ್ಯಾನ ಮುಂತಾದ ಯಾವುದೇ ಪುಣ್ಯ ಕರ್ಮ ಮಾಡಿದರೂ ರುದ್ರಲೋಕಪ್ರಾಪ್ತಿ ನಿಶ್ಚಿತ. ಅದರಲ್ಲಿಯೂ ಸೋಮವಾರ ಇಲ್ಲಿ ಭಕ್ತಿಯಿಂದ ಮಿಂದು ಐದು ತೀರ್ಥಗಳ ಯಾತ್ರೆ ಮಾಡಿದವನಿಗೆ ಪಂಚಮಹಾಪಾತಕಗಳಿಂದ ಮುಕ್ತಿ.

ಇಂದ್ರದ್ಯುಮ್ನ ಮೊದಲಾದ ಭಕ್ತಾಗ್ರೇಸರರೆ ! ಶಿವನಿಗೆ ಮಿಗಿಲಾದ ದೇವರು ಯಾರು ? ಶಂಕರನನ್ನು ಬಿಟ್ಟು ಬೇರೆ ದೇವರನ್ನು ಬೇಡಿಕೊಳ್ಳುವವ ಅಂಗೈಯಲ್ಲಿ ಅಮೃತ ಇಟ್ಟುಕೊಂಡು ಬಿಸಿಲ್ಗುದುರೆಯ ಬೆನ್ನಟ್ಟಿ ಓಡಿದಂತೆ. ಈ ಬ್ರಹ್ಮಾಂಡದಲ್ಲಿರುವ ಗಂಡು ಪ್ರಾಣಿಗಳೆಲ್ಲ ಶಿವರೂಪ. ಹೆಣ್ಣು ಜಾತಿಯೆಲ್ಲವೂ ಶಕ್ತಿರೂಪ. ಶಿವಶಕ್ತಿ ಸ್ವರೂಪವೇ ಈ ಸಂಪೂರ್ಣ ಜಗತ್ತು. ಭಗವಾನ್ ಭವಾನೀ ಪತಿಯ ಮಹಾ ಮಹಿಮೆ ಶತರುದ್ರಿಯ ಹೆಸರಿನಿಂದ ಪ್ರಪಂಚದ ತುಂಬ ಪ್ರಸಿದ್ಧ. ನಿಮ್ಮ ಪಾಪಗಳೆಲ್ಲ ತೊಳೆದು ಹೋಗಬೇಕೆಂದಿದ್ದರೆ ಭಕ್ತಿಯಿಂದ ಕೇಳಿರಿ ಶಿವನ ಆ ಶತರುದ್ರಿಯ ಮಹಿಮೆಯನ್ನು



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತಮೂರನೇ ಅಧ್ಯಾಯ ಮುಗಿದುದು.**

## ಶಿವನ ಶತರುದ್ರಿಯ ಮಹಿಮೆ

ಅಧ್ಯಾಯ -24

1) ಬ್ರಹ್ಮದೇವನು ಸತ್ಯಲೋಕದಲ್ಲಿ ಶಿವನ ಬಂಗಾರ ಲಿಂಗವನ್ನು 'ಜಗತ್ ಪ್ರಧಾನ ಎಂಬ ಶಿವನ ನಾಮವನ್ನು ಜಪಿಸುತ್ತ ಆರಾಧಿಸುವನು.

2) ವಿಷ್ಣುವು 'ಊರ್ಜಿತ' ಎಂಬ ಶಿವನಾಮವನ್ನು ಜಪಿಸುತ್ತ ಕರಿಕಲ್ಲಿನ ಶಿವಲಿಂಗವನ್ನು ಪೂಜಿಸುತ್ತಾನೆ.

3) ಸನಕಾದಿ ಮಹರ್ಷಿಗಳು ಹೃದಯವನ್ನು 'ಜಗದ್ಗತಿ' ಎಂಬ ಶಿವನಾಮವನ್ನು ಜಪಿಸುತ್ತ ಆರಾಧಿಸುತ್ತಾರೆ.

4) ಸಪ್ತರ್ಷಿಗಳು ದರ್ಭಾಂಕುರದಿಂದ 'ವಿಶ್ವಯೋನಿ' ಎಂಬ ಶಿವನಾಮವನ್ನು ಜಪಿಸುತ್ತ ಪರಮೇಶ್ವರನನ್ನು ಪೂಜಿಸುತ್ತಾರೆ.

5) ನಾರದರು 'ಜಗದ್‌ಬೀಜ' ನಾಮದಿಂದ ಆಕಾಶಲಿಂಗದ ಪೂಜೆಯನ್ನು ಮಾಡುವರು.

6) ದೇವೇಂದ್ರನು ವಜ್ರಮಯವಾದ ಲಿಂಗವನ್ನು ವಿಶ್ವಾತ್ಮಲಿಂಗ ನಾಮದಿಂದ ಸ್ವರ್ಗದಲ್ಲಿ ಪೂಜಿಸುವನು.

7) ಸೂರ್ಯನು 'ವಿಶ್ವಸೃಗ್' ಎಂಬ ಶಂಕರನ ನಾಮದಿಂದ ತಾಮ್ರದ ಶಿವಲಿಂಗವನ್ನು ಪೂಜಿಸುವನು.

8) ಚಂದ್ರನು 'ಜಗತ್ಪತಿ' ಎಂಬ ಶಿವನಾಮದಿಂದ ಮುತ್ತಿನ ಪರಮೇಶ್ವರನ ಲಿಂಗವನ್ನು ಪೂಜಿಸುವನು.

9) ಅಗ್ನಿಯು 'ವಿಶ್ವೇಶ್ವರ' ಎಂಬ ನಾಮದಿಂದ ಇಂದ್ರ ನೀಲಮಣಿಯ ಶಿವಲಿಂಗವನ್ನು ಅರ್ಚಿಸುವನು.

10) ಬೃಹಸ್ಪತಿಯು 'ವಿಶ್ವಮೂಲ' ಎಂಬ ಶಿವನಾಮದಿಂದ ಪುಷ್ಪರಾಗಮಣಿಯ ಶಂಕರಲಿಂಗವನ್ನು ಆರಾಧಿಸುವನು. ಇದರಂತೆಯೇ ಕೆಳಗಿನ ಎಲ್ಲ ದೇವತೆಗಳು ಅಧೋನಿರ್ದಿಷ್ಟ ಶಿವರೂಪಗಳನ್ನು ಬೇರೆ ಬೇರೆ ಬಗೆಯ ಶಿವಲಿಂಗಗಳಲ್ಲಿ ಆರಾಧಿಸುವರು.

| ನಂ | ಜಪಿಸುವ ಶಿವನಾಮ | ಶಿವಲಿಂಗದ ರೂಪ | ಆರಾಧಕರು |
|---|---|---|---|
| 11 | ವಿಶ್ವಕರ್ಮ | ಪದ್ಮರಾಗಮಣಿಮಯ | ಶುಕ್ರಾಚಾರ್ಯರು |
| 12 | ಈಶ್ವರ | ಸುವರ್ಣಲಿಂಗ | ಕುಬೇರ |
| 13 | ಜಗದ್ಗತಿ | ಬೆಳ್ಳಿಯಲಿಂಗ | ವಿಶ್ವೇದೇವಗಣ |
| 14 | ಶಂಭು | ಹಿತ್ತಾಳೆಲಿಂಗ | ಯಮಧರ್ಮ |
| 15 | ಸ್ವಯಂಭು | ಕಾಂಚನಲಿಂಗ | ಅಷ್ಟವಸುಗಳು |
| 16 | ಉಮೇಶ | ಕಬ್ಬಿಣದ ಲಿಂಗ | ಮರುದ್ಗಣ |
| 17 | ಭೂತಭವ್ಯೋದ್ಭವ | ಲೋಹಲಿಂಗ | ರಾಕ್ಷಸರು |
| 18 | ಯೋಗ | ಸೀಸಿನಲಿಂಗ | ಗುಹ್ಯಕಗಣ |
| 19 | ಯೋಗೇಶ್ವರ | ಬ್ರಹ್ಮೇರಂಧ್ರಲಿಂಗ | ಜೈಗೀಷವ್ಯ ಮುನಿ |
| 20 | ಶರ್ವ | ನೇತ್ರಲಿಂಗ | ನಿಮಿರಾಜ |
| 21 | ಸರ್ವಲೋಕೇಶ್ವರ | ಗೋಮಯಲಿಂಗ | ಧನ್ವಂತರಿ |
| 22 | ಸರ್ವಶ್ರೇಷ್ಠ | ಕಟ್ಟಿಗೆಯಲಿಂಗ | ಗಂಧರ್ವರು |
| 23 | ಜ್ಯೇಷ್ಠ | ವೈಡೂರ್ಯಲಿಂಗ | ಶ್ರೀರಾಮಚಂದ್ರ |
| 24 | ವಾಸಿಷ್ಠ | ಮರಕತಲಿಂಗ | ಬಾಣಾಸುರ |

| | | | |
|---|---|---|---|
| 25 | ಪರಮೇಶ್ವರ | ಸ್ಫಟಿಕಲಿಂಗ | ವರುಣ |
| 26 | ಲೋಕತ್ರಯಂಕರ | ಕಂಜಲಿಂಗ | ನಾಗಗಣ |
| 27 | ಲೋಕತ್ರಯಾಶ್ರಿತ | ಮೌಕ್ತಿಕಲಿಂಗ | ಸರಸ್ವತಿ |
| 28 | ಜಗನ್ನಾಥ | ಆವರ್ತಲಿಂಗ | ಶನಿದೇವ |
| 29 | ಸುದುರ್ಜಯ | ಪುಷ್ಪಲಿಂಗ | ರಾವಣ |
| 30 | ಕಾಮಮೃತ್ಯುಜರಾತಿಗ | ಮಾನಸಲಿಂಗ | ಸಿದ್ಧಗಣ |
| 31 | ಜ್ಞಾನಾತ್ಮ | ಯಜ್ಞಮಯ | ಬಲಿಚಕ್ರವರ್ತಿ |
| 32 | ಜ್ಞಾನಗಮ್ಯ | ಕುಸುಮಲಿಂಗ | ಮರೀಚಿ |
| 33 | ಜ್ಞಾನಯಜ್ಞ | ಕರ್ಮಲಿಂಗ | ದೇವತಾಗಣ |
| 34 | ಸುದುರ್ವಿದ | ಬುರುಗಿನಲಿಂಗ | ಫೇನಪಋಷಿ |
| 35 | ವರದ | ಮಳಲಿನಲಿಂಗ | ಕಪಿಲಮುನಿ |
| 36 | ವಾಗೀಶ್ವರ | ವಾಙ್ಮಯಲಿಂಗ | ಸಾರಸ್ವತಮುನಿ |
| 37 | ರುದ್ರ | ಶಿವಮೂರ್ತಿಮಯ | ಶಿವಗಣ |
| 38 | ಶಿತಿಕಂಠ | ಹೇಮಲಿಂಗ | ಸುರವೃಂದ |
| 39 | ಕನಿಷ್ಠ | ಶಂಖಮಯ | ಬುಧ |
| 40 | ಸುಮೇಧ | ಮೃತ್ತಿಕಾಮಯ | ಅಶ್ವಿನೀಕುಮಾರ |
| 41 | ಕಪರ್ದಿ | ಪಿಷ್ಟಮಯ | ಗಣಪತಿ |
| 42 | ಕರಾಳ | ನವನೀತಲಿಂಗ | ಮಂಗಳಗ್ರಹ |
| 43 | ಹರಿಯಕ್ಷ | ಅನ್ನಮಯಲಿಂಗ | ಗರುಡ |
| 44 | ರತಿದ | ಬೆಲ್ಲದಲಿಂಗ | ಕಾಮದೇವ |
| 45 | ಬಭ್ರುಕೇಶ | ಉಪ್ಪಿನಲಿಂಗ | ಶಚೀದೇವಿ |
| 46 | ಯಾಮ್ಯ | ಪ್ರಾಸಾದಮಯಲಿಂಗ | ವಿಶ್ವಕರ್ಮ |
| 47 | ಸುಹೃತ್ತಮ | ಧೂಳಿಲಿಂಗ | ವಿಭೀಷಣ |
| 48 | ಸಂಗತ | ಬಿದಿರುಹುಲ್ಲಿನ ಲಿಂಗ | ಸಗರರಾಜ |
| 49 | ಗಮ್ಯ | ಇಂಗಿನಲಿಂಗ | ರಾಹು |
| 50 | ಹರಿನೇತ್ರ | ಲೇಪ್ಯಲಿಂಗ | ಲಕ್ಷ್ಮೀದೇವಿ |
| 51 | ಸ್ಥಾಣು | ಸರ್ವಭೂತಲಿಂಗ | ಯೋಗಿಗಣ |

| | | | |
|---|---|---|---|
| 52 | ಪುರುಷ | ನಾನಾವಿಧಲಿಂಗ | ಮಾನವ |
| 53 | ಭಾಸ್ವರ | ತೇಜೋಮಯಲಿಂಗ | ನಕ್ಷತ್ರಸಮೂಹ |
| 54 | ಸುದೀಪ್ತ | ಧಾತುಮಯಲಿಂಗ | ಕಿನ್ನರಗಣ |
| 55 | ದೇವದೇವ | ಮೂಳೆಯಲಿಂಗ | ಬ್ರಹ್ಮರಾಕ್ಷಸರು |
| 56 | ರಂಹಸ | ಆನೆಕೋರೆಯಲಿಂಗ | ಚಾರಣಜನ |
| 57 | ಬಹುರೂಪ | ಲೋಕಮಯಲಿಂಗ | ಸಾಧ್ಯಗಣ |
| 58 | ಸರ್ವ | ದರ್ಭೆಯಲಿಂಗ | ಆರು ಋತುಗಳು |
| 59 | ಆಭೂಷಣ | ಕುಂಕುಮಲಿಂಗ | ಅಪ್ಸರೆಯರು |
| 60 | ಪ್ರಿಯವಾಸನ | ಸಿಂಧೂರಲಿಂಗ | ಊರ್ವಶಿ |
| 61 | ವೈಷ್ಣವೀ | ಬ್ರಹ್ಮಚಾರಿಲಿಂಗ | ಬ್ರಹಸ್ಪತಿ |
| 62 | ಸುವಭ್ರುಕ್ | ಅಲತಿಗೆಯಲಿಂಗ | ಯೋಗಿನಿಯರು |
| 63 | ಸಹಸ್ರಾಕ್ಷ | ಶ್ರೀಖಂಡಲಿಂಗ | ಸಿದ್ಧಯೋಗಿನಿಯರು |
| 64 | ಸಮೀಢುಷ | ಮಾಂಸಮಯ | ಡಾಕಿನಿಗಳು |
| 65 | ಗಿರೀಶ | ಅನ್ನಮಯ | ಮನುಗಣ |
| 66 | ಶಂಕರ | ಪಾರ್ಥಿವಲಿಂಗ | ಶಿವಶರಣರು |
| 67 | ಪತಿ | ಅಕ್ಕಿಕಾಳಿನಲಿಂಗ | ದೇವಲಮುನಿ |
| 68 | ಚೀರವಾಸಾ | ಹುತ್ತಿನಮಣ್ಣಿನಲಿಂಗ | ವಾಲ್ಮೀಕಿ |
| 69 | ಹಿರಣ್ಯಭುಜ | ಬಾಣಲಿಂಗ | ಪ್ರತರ್ದನ |
| 70 | ಉಗ್ರ | ಅರಳೆಯಲಿಂಗ | ದೈತ್ಯದಳ |
| 71 | ದಿಕ್ಪತಿ | ನಿಷ್ಪಾವಲಿಂಗ | ದಾನವವೃಂದ |
| 72 | ಪರ್ಜನ್ಯ | ಸಲಿಲಲಿಂಗ | ಮೇಘಮಂಡಲ |
| 73 | ಭೂತಪತಿ | ಉದ್ದಿನಲಿಂಗ | ಯಕ್ಷರಾಜ |
| 74 | ವೃಷಪತಿ | ಎಳ್ಳಿನಲಿಂಗ | ಮೇಘಮಂಡಲ |
| 75 | ಗೋಪತಿ | ಗೋಧೂಳಿಲಿಂಗ | ಗೌತಮಮುನಿ |
| 76 | ವೃಕ್ಷಾವೃತ | ಹಣ್ಣಿನಲಿಂಗ | ವಾನಪ್ರಸ್ಥಾಶ್ರಮಿಗಳು |
| 77 | ಸೇನಾನ್ಯ | ಕಲ್ಲಿನಲಿಂಗ | ಕಾರ್ತವೀರ್ಯಾರ್ಜುನ |
| 78 | ಮಧ್ಯಮ | ಧಾನ್ಯಮಯ | ಅಶ್ವತರ ಹಾವು |

| | | | |
|---|---|---|---|
| 79 | ಸ್ರುವಹಸ್ತ | ಪುರೋಡಾಶಮಯ | ಯಜ್ಞಪುರುಷ |
| 80 | ಧ್ವನಿ | ಉಕ್ಕಿನಲಿಂಗ | ಯಮದೇವ |
| 81 | ಭಾರ್ಗವ | ಯವಾಂಕುರಲಿಂಗ | ಪರಶುರಾಮ |
| 82 | ಬಹುರೂಪ | ತುಪ್ಪದಲಿಂಗ | ಪುರೂರವ |
| 83 | ಬಾಹುಯುಗ | ಸಕ್ಕರೆಯಲಿಂಗ | ಮಾಂಧಾತ |
| 84 | ನೇತ್ರಸಹಸ್ರಕ | ಕ್ಷೀರಲಿಂಗ | ಹಸುಗಳು |
| 85 | ವಿಶ್ವಪತಿ | ಭರ್ತೃಮಯಲಿಂಗ | ಪ್ರತಿವ್ರತಾಸ್ತ್ರೀಯರು |
| 86 | ಸಹಸ್ರಶೀರ್ಷ | ಮೆದೆಯಲಿಂಗ | ನರನಾರಾಯಣ |
| 87 | ಸಹಸ್ರವರ್ಣ | ತಾರ್ಕ್ಷ್ಯಲಿಂಗ | ಪೃಥುರಾಜ |
| 88 | ಸರ್ವಾತ್ಮ | ವ್ಯೋಮಲಿಂಗ | ಪಕ್ಷಿಕುಲ |
| 89 | ದ್ವಿತನು | ಗಂಧಮಯ | ಪೃಥ್ವೀದೇವಿ |
| 90 | ಮಹೇಶ್ವರ | ಬೂದಿಯಲಿಂಗ | ಪಾಶುಪತಗಣ |
| 91 | ಚಿರಸ್ಥಾನ | ಜ್ಞಾನಮಯಲಿಂಗ | ಋಷಿವೃಂದ |
| 92 | ಜ್ಯೇಷ್ಠ | ಬ್ರಹ್ಮಲಿಂಗ | ಬ್ರಾಹ್ಮಣರು |
| 93 | ಪಶುಪತಿ | ಗೋರೋಚನಲಿಂಗ | ಶೇಷನಾಗ |
| 94 | ಶಂಕರ | ವಿಷಲಿಂಗ | ವಾಸುಕಿಸರ್ಪ |
| 95 | ಬಹುರೂಪ | ಕಾಲಕೂಟಮಯ | ತಕ್ಷಕನಾಗ |
| 96 | ಪಿಂಗಾಕ್ಷ | ಹಾಲಾಹಲಮಯ | ಕರ್ಕೋಟಕನಾಗ |
| 97 | ಧೂರ್ಜಟಿ | ಗರಳಲಿಂಗ | ಶೃಂಗಿ |
| 98 | ವಿಶ್ವರೂಪ | ಪಿತೃಮಯಲಿಂಗ | ಪುತ್ರಗಣ |
| 99 | ತ್ರ್ಯಂಬಕ | ಪಾರದಮಯ | ಶಿವಾದೇವಿ |
| 100 | ವೃಷಾಕಪಿ | ಶಸ್ತ್ರಮಯಲಿಂಗ | ಮಚ್ಛ್ಯಾದಿ ಜೀವಗಣ |

ಹೀಗೆ ಎಲ್ಲ ದೇವತೆಗಳು, ದೈತ್ಯರು, ದಾನವರು, ಯಕ್ಷ, ಕಿನ್ನರ, ಮನುಜ, ಮುನಿ ನಾಗ, ಪಿಶಾಚ, ಶಿವಗಣ ಮುಂತಾದವರೆಲ್ಲರೂ ಬೇರೆ ಬೇರೆ ಬಗೆಯ ಶಿವಲಿಂಗಗಳನ್ನು ಆ ಪರಮೇಶ್ವರನ ನೂರು ನಾಮಗಳನ್ನು ಜಪಿಸುತ್ತ ಬೇರೆ ಸ್ಥಳಗಳಲ್ಲಿ ಉಪಾಸನೆ ಗೈಯ್ಯುವರು.

ಹೆಚ್ಚಿನ ಮಾತಿನಿಂದೇನು ! ಈ ಜಗತ್ತಿನಲ್ಲಿ ಎಲ್ಲಿ ಎಲ್ಲಿ ಲೋಕವಿಲಕ್ಷಣವಾದ ಗುಣ, ಶಕ್ತಿ, ಪ್ರಭಾವ, ವರ್ಚಸ್ಸು, ಕಾಂತಿ, ದೀಪ್ತಿ, ಮುಂತಾದ ವೈಶಿಷ್ಟ್ಯ ವೈಭವಗಳು

ಎದ್ದು ತೋರುವವೋ ಅದೆಲ್ಲವೂ ಶಿವನ ಆರಾಧನೆಯ ಫಲವೆಂದೇ ತಿಳಿಯಬೇಕು. ಭಗವಾನ್ ಶಂಕರನ ಈ ದಿವ್ಯವಾದ ಶತರುದ್ರಿಯ ಮಹಿಮೆಯನ್ನು ಭಕ್ತಿಯಿಂದ ಕೇಳುವವರ ಮನೋಭೀಷ್ಟಗಳನ್ನೆಲ್ಲ ಪೂರ್ಣಮಾಡುತ್ತಾನೆ ಆ ಸರ್ವೇಶ್ವರ. ಇದು ವೇದ ವೇದಾಂತಗಳ ರಹಸ್ಯ.

ಇದನ್ನು ನನಗೆ ಉಪದೇಶ ಮಾಡಿದವ ಸಾಕ್ಷಾತ್ ಸೂರ್ಯದೇವನೇ. ಇದರ ಪಾರಾಯಣದಿಂದ ರೋಗಗಳೆಲ್ಲ ದೂರ. ಸೆರೆಮನೆಯಲ್ಲಿ ಕೊಳೆಯುವವರಿಗೆ ಬೇಗನೇ ಮುಕ್ತಿ. ಹೆರಿದವರ ಭಯಪರಿಹಾರ. ಪಶುಪತಿಯ ಈ ನೂರು ನಾಮಗಳನ್ನು ಉಚ್ಚರಿಸುತ್ತ ಪರಮೇಶ್ವರನಿಗೆ ಪುಷ್ಪಾರ್ಚನೆಯನ್ನು ಮಾಡಿದರೆ ಅಥವಾ ಈ ನಾಮಗಳಿಂದ ನೂರು ನಮಸ್ಕಾರ ಹಾಕಿದರೆ ಯಾವ ಪಾಪವೂ ಉಳಿಯಲಾರವು ಆ ಪೂಜಕರಲ್ಲಿ. ಮೇಲೆ ಹೇಳಿದ ನೂರು ಶಿವನಾಮಗಳು, ನೂರು ಬಗೆಯ ಶಿವಲಿಂಗಗಳು, ಮತ್ತು ನೂರು ಶಿವೋಪಾಸಕರು, ಹೀಗೆ ಒಟ್ಟು ಮೂರು ನೂರು ನಾಮಗಳ ಸ್ಮರಣೆಯು ಜನರ ಸರ್ವದೋಷಗಳನ್ನು ನಾಶಮಾಡುವದು. ವಿಶೇಷವಾಗಿ ಈ ಮಹತ್ ತೀರ್ಥದಲ್ಲಿರುವ ಪಂಚಲಿಂಗಗಳ ಮುಂದೆ ಕುಳಿತು ಈ ಶತರುದ್ರೀಯ ಸ್ತೋತ್ರದ ಪಠಣ ಪಾರಾಯಣವು ಗೈಯ್ಯುವವರ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳಿಂದ ಸಂಭವಿಸಿದ ಪಂಚ ಮಹಾಪಾತಕಗಳನ್ನು ಕೂಡ ನಾಶ ಮಾಡುವುದು.

**ನಾರದ :** ಪಾಂಡುನಂದನ, ಈ ಗುಪ್ತ ಕ್ಷೇತ್ರದಲ್ಲಿ ಶಿವಾರಾಧನೆ ಮಹಿಮೆಯನ್ನು ಕೇಳಿ ಸುಪ್ರಸನ್ನರಾದರು ಇಂದ್ರದ್ಯುಮ್ನನೇ ಮೊದಲಾದ ಭಗವದ್ಭಕ್ತರು. ಮಹೀನದಿಯ ತಟಾಕದಲ್ಲಿರುವ ಪಂಚಲಿಂಗಗಳ ಆರಾಧನೆಗೈದರು. ಶಿವಧ್ಯಾನದಲ್ಲಿ ತತ್ಪರರಾದರು. ಹೀಗೆ ಕಳೆದು ಹೋದ ಸಮಯ ಅತ್ಯಲ್ಪ. ತ್ವರಿತದಲ್ಲಿ ಶಿವಪ್ರತ್ಯಕ್ಷ ಅವರ ಭಕ್ತಿಯುಕ್ತ ತಪಸ್ಸಿಗೆ. ಆ ಭಕ್ತರಿಗೆ ಪ್ರೀತಿಯಿಂದ ನುಡಿದ ಪರಮೇಶ್ವರ.

**ಪರಮೇಶ್ವರ :** ಮಹಾರಾಜ, ಇಂದ್ರದ್ಯುಮ್ನ ಮತ್ತು ಗಿಡಗ, ಗೂಗೆ, ನೀರಗೋಳಿ, ಆಮೆ ಮುಂತಾದ ಭಗವದ್ಭಕ್ತರೇ ! ನಾನು ನಿಮ್ಮ ಭಕ್ತಿಗೆ ಮೆಚ್ಚಿದೆ. ನೀವೆಲ್ಲರೂ ಹೊಂದುವಿರಿ ನನ್ನ ಸಮಾನ ರೂಪವನ್ನು. ಮುಕ್ತಿ ನಿಮ್ಮ ಅಂಗೈನೆಲ್ಲಿ. ಇನ್ನು ಮೇಲೆ ಕೈಲಾಸದಲ್ಲಿಯೇ ನಿಮ್ಮ ವಾಸ. ಇಂದಿನಿಂದ ಲೋಮಶಮುನಿ ಸಂಸಾರ ಮುಕ್ತ. ಮಾರ್ಕಂಡೇಯ ಮಹರ್ಷಿ ಜೀವನ್ಮುಕ್ತ.'' ಶಿವನ ಮಾತುಗಳನ್ನು ಚಿತ್ತವಿಟ್ಟು ಆಲಿಸಿದ ಇಂದ್ರದ್ಯುಮ್ನ ದೊರೆ. ಅಲ್ಲಿ ಒಂದು ಶಿವಲಿಂಗವನ್ನು ಪ್ರತಿಷ್ಠಾಪಿಸಿದ. ಇಂದ್ರದ್ಯುಮ್ನೇಶ್ವರ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು ಆ ಶಿವಲಿಂಗ. ಇದು ಶಿವನಿಗೂ ಮೆಚ್ಚಿಗೆಯಾಯಿತು. ಶಿವ ಸಂತಸದುಂಬಿ ನುಡಿದ - ''ಈ ಇಂದ್ರದ್ಯುಮ್ನೇಶ್ವರನ ಪೂಜೆ ಮಾಡಿದವರಿಗೆ ಕೈಲಾಸದಲ್ಲಿ ಸ್ಥಿರವಾಸ.''

ಹೀಗೆ ನುಡಿದು ಮಹೇಶ್ವರನು ಇಂದ್ರದ್ಯುಮ್ನ ರಾಜ ಮೊದಲಾದವರನ್ನು ಕರೆದುಕೊಂಡು ರುದ್ರಲೋಕಕ್ಕೆ ತೆರಳಿದನು. ಅಲ್ಲಿ ಅವರೆಲ್ಲರೂ ಶಿವಗಣದವರೆಂದೇ ಪರಿಗಣಿತರಾದರು. ಈ ಮಹೀಸಾಗರ ಸಂಗಮ ತೀರ್ಥದಲ್ಲಿ ಸ್ನಾನ ಮಾಡಿದವರು ಮತ್ತು ಇಲ್ಲಿಯ ಇಂದ್ರದ್ಯುಮ್ನೇಶ್ವರರನ್ನು ಪೂಜಿಸುವವರು ಕೊನೆಯವರೆಗೆ ಇರುವದು ಕೈಲಾಸದಲ್ಲಿಯೇ. ಈ ಇಂದ್ರದ್ಯುಮ್ನೇಶ್ವರ ಪೂಜೆಯು ಸರ್ವಬಂಧನಗಳಿಂದಲೂ ಭಕ್ತ ಜನರನ್ನು ಬಿಡಿಸುವದು, ಗಣಾಧೀಶ ಪದವನ್ನು ಕೊಡಿಸುವುದು.

ಅರ್ಜುನನೇ, ಈ ರೀತಿಯಾಗಿ ನಿನಗೆ ನಾನು ಮಹೀಸಾಗರ ಸಂಗಮ ತೀರ್ಥದ ಮಾಹಾತ್ಮ್ಯವನ್ನು ಅದರ ತೀರ್ಥಸ್ಥಳದಲ್ಲಿ ಪ್ರತಿಷ್ಠಿತವಾದ ಇಂದ್ರದ್ಯುಮ್ನೇಶ್ವರನ ಮಹಾಮಹಿಮೆಯನ್ನೂ ನಿರೂಪಿಸಿದೆ. ಇದನ್ನು ಓದಿದವರೂ ಕೇಳಿದವರೂ ಪುಣ್ಯಶಾಲಿಗಳು. ಯಾವ ಮನುಷ್ಯನು ಈ ಮಹೀಸಾಗರ ಸಂಗಮ ತೀರ್ಥದಲ್ಲಿ ಸ್ನಾನ ಮಾಡಿ ಇಂದ್ರದ್ಯುಮ್ನೇಶ್ವರ ಎಂಬ ಲಿಂಗದ ಪೂಜೆಯನ್ನು ಭಕ್ತಿಯಿಂದ ಮಾಡುವನೋ ಅವನು ಸಂಸಾರ ಬಂಧನದಿಂದ ಮುಕ್ತನಾಗಿ ಪಾರ್ವತೀ ಪತಿಯ ಸದನದಲ್ಲಿಯೇ ವಾಸ ಮಾಡುವನು. ಈ ಸಂಗಮ ತೀರ್ಥದ ಹಾಗೂ ಈ ತೀರ್ಥದ ತೀರದಲ್ಲಿಯೇ ಸ್ಥಾಪಿತವಾದ ಇಂದ್ರದ್ಯುಮ್ನೇಶ್ವರ ಲಿಂಗದ ಮಹಾ ಮಹಿಮೆಯನ್ನು ಪಠನ ಪಾರಾಯಣ ಮಾಡಿದವರು ಅನಂತ ಪುಣ್ಯವನ್ನು ಹೊಂದುತ್ತಾರೆ.

**ಅರ್ಜುನ :** ಮುನೀಶ್ವರರೇ ! ಮಹಾದೇವ ದಂಪತಿಗಳ ಮೆಚ್ಚಿನ ಮಗನಾದ ಕುಮಾರಸ್ವಾಮಿಯ ಮಹಿಮೆಯನ್ನು ತಾವು ಈ ಮೊದಲು ಆನುಷಂಗಿಕವಾಗಿ ಹೇಳಿದ್ದೀರಿ. ಆ ಷಣ್ಮುಖನ ಕೌತುಕ ಭರಿತವಾದ ಚಾರುಚರಿತವನ್ನು ವಿಸ್ತಾರಪೂರ್ವಕವಾಗಿ ಕೇಳಬೇಕೆಂದು ನನ್ನ ಅಪೇಕ್ಷೆ. ದಯವಿಟ್ಟು ತಾವು ಆ ಕುಮಾರ ಚರಿತ್ರವನ್ನು ಹೇಳಬೇಕು.

**ನಾರದ :** ಅರ್ಜುನ, ಕಾರ್ತಿಕೇಯ ಎಂಬ ಹೆಸರಿನಿಂದ ಪ್ರಸಿದ್ಧನಾದ ಆ ಷಣ್ಮುಖನು ತಾರಕಾಸುರನನ್ನು ಸಂಹರಿಸಿ ಕುಮಾರೇಶ್ವರ ಎಂಬ ಹೆಸರಿನ ಶಿವಲಿಂಗವನ್ನು ಸ್ಥಾಪನೆ ಮಾಡಿದ. ಈಗ ನಾನು ಆ ಕಥೆಯನ್ನು, ಕುಮಾರಸ್ವಾಮಿಯನ್ನು ವಂದಿಸಿ, ನಿನಗೆ ಬಿತ್ತರಿಸುತ್ತೇನೆ. ಏಕಾಗ್ರಚಿತ್ತದಿಂದ ಆಲಿಸು.

**ನಾರದ :** ಪಾಂಡುಪುತ್ರ, ಶಿವಪುತ್ರನಾದ ಸ್ಕಂದನು ಹಿಂದೆ ತಾರಕಾಸುರನನ್ನು ವಧಿಸಿದ್ದನಷ್ಟೇ ! ಅದರಿಂದ ದೇವತೆಗಳಿಗೂ ಮುನಿ ಮನುಜರಿಗೂ ಅತ್ಯಂತ ಸಂತೋಷವಾಗಿತ್ತು. ಅದರಿಂದ ಹರ್ಷಭರಿತರಾದ ಅವರೆಲ್ಲರೂ ಭಕ್ತಿ ಉದ್ರೇಕದಿಂದ ಸ್ತುತಿಸತೊಡಗಿದರು ಆ ಕುಮಾರಸ್ವಾಮಿಯನ್ನು. ತನ್ನನ್ನು ಹಿಗ್ಗಿನಿಂದ ಹಾಡಿ ಹೊಗಳುತ್ತಿರುವ ಆ ದೇವತಾ ಗಣವನ್ನು ತಡೆದು ನಿಲ್ಲಿಸಿದನು ಆ ಕುಮಾರಸ್ವಾಮಿ. ಮತ್ತು ಅವರನ್ನು ಉದ್ದೇಶಿಸಿ ನುಡಿದ -

''ಭಕ್ತ ಗಣಾಧೀಶರೇ, ನಾನು ಮಹಾಪಾಪಿ. ನನ್ನನ್ನು ನೀವು ಏಕೆ ಬಣ್ಣಿಸುವಿರಿ? ಶಿವಭಕ್ತನಾದ ತಾರಕಾಸುರನನ್ನು ನಾನೇ ಕೈಯಿಂದ ಕೊಲ್ಲಲಿಲ್ಲವೆ ! ಈ ತಾರಕ ಹತ್ಯಾ ಎಂಬ ಭಕ್ತಹತ್ಯಾ ಪಾಪವು ನನಗೆ ತಗಲಿದೆ. ಹಂತಕನನ್ನು ಹೊಗಳಿ ಹಾಡುವದೆ! ತಾರಕನೇನೋ ಮಹಾಪಾಪಿ. ಪಾಪಾತ್ಮರ ಸಂಹಾರದಿಂದ ಪಾಪಲೇಪವಿಲ್ಲ ಎಂದು ಹಿರಿಯರ ಹೇಳಿಕೆ ಇದ್ದುದೇನೋ ನಿಜ. ಆದರೆ ಪರಮ ಶಿವಭಕ್ತನಲ್ಲವೆ ಆ ತಾರಕ ದಾನವ ! ಶಿವಭಕ್ತನನ್ನು ಸಂಹರಿಸಿದ ಬಳಿಕ ತಟ್ಟದಿದ್ದೀತೆ ಮಹಾ ಪಾಪ ! ಶಿವಭಕ್ತನನ್ನು ಸಂಹರಿಸಿದ್ದಕ್ಕಾಗಿ ನನಗೆ ಬಹಳೇ ಪಶ್ಚಾತ್ತಾಪವಾಗಿದೆ. ಇದಕ್ಕೇನಾದರೂ ಪ್ರಾಯಶ್ಚಿತ್ತವುಂಟೆ ? ಪ್ರಾಯಶ್ಚಿತ್ತದಿಂದ ಎಂಥ ಪಾಪವಾದರೂ ಪರಿಹೃತವಾಗುವುದು ಎಂದು ಕೇಳಿದ್ದೇನೆ. '' ಕುಮಾರನ ಈ ಅನುತಾಪವನ್ನು ಕೇಳಿ ದೇವತೆಗಳೆಲ್ಲ ಮನದಲ್ಲಿಯೇ ಮಿಡುಕಿದರು. ಆಗ ಅವರಲ್ಲಿ ಮುಂದೆ ಬಂದು ಮಾತಾಡಿದವ ವಿಷ್ಣು. ಶೋಕ ಸಂತಪ್ತ ಸ್ಕಂದ ಸ್ವಾಮಿಯನ್ನು ಸಂತೈಸುತ್ತ ನುಡಿದ.

**ಮಹಾವಿಷ್ಣು :** ಮಹೇಶನಂದನ, ನೀನು ಆಸ್ತಿಕನಷ್ಟೇ ! ಆಸ್ತಿಕ ಎಂದರೆ, ವೇದ ಪ್ರಾಮಾಣ್ಯವನ್ನು ಒಪ್ಪುವವ. ಶ್ರುತಿ ಸ್ಮೃತಿ ಪುರಾಣಗಳಲ್ಲಿ ಹೇಳಿದ ಮಾತು ಪರಮ ಪ್ರಮಾಣ ಎಂಬುದು ಸಕಲ ಆಸ್ತಿಕರಿಗೂ ಸಮ್ಮತ. ಆ ಪ್ರಮಾಣ ಗ್ರಂಥಗಳು 'ದುಷ್ಟರನ್ನು ಸಂಹರಿಸಿದರೆ, ಯಾವ ದೋಷವೂ ಇಲ್ಲ' ಎಂದು ಸ್ಪಷ್ಟವಾಗಿಯೇ ಹೇಳುತ್ತವೆ.

**''ಶ್ರುತಿಃ ಸ್ಮೃತಿ ಶ್ಚೇತಿಹಾಸಾ ಃ ಪುರಾಣಂ ಚ ಶಿವಾತ್ಮಜ ।**
**ಪ್ರಮಾಣಂ ಚೇತ್ತತೋ ದುಷ್ಟವಧೇ ದೋಷೋ ನ ವಿದ್ಯತೇ ॥**

ವೇದ, ಸ್ಮೃತಿ ಗ್ರಂಥಗಳು, ಇತಿಹಾಸ, ಪುರಾಣ ಇವೆಲ್ಲವೂ ಪ್ರಮಾಣ ಎಂದು ಮನ್ನಿಸುವದಾದರೆ, ದುಷ್ಟರನ್ನು ಸಂಹಾರ ಮಾಡಿದರೆ, ಯಾವ ಪಾಪವೂ ಇಲ್ಲ. ಲೋಕ ಕಂಟಕರಾಗಿ ಮಾನವರನ್ನು ಕೊಂದು ಬದುಕುವ ಜನಪೀಡಕರನ್ನು ನಾಶ ಮಾಡಿದರೆ ಪುಣ್ಯವೇ ಬರುವದು, ಪಾಪವಲ್ಲ. ಅಂಥ ಪಾಪಿಗಳ ಸಂಹಾರ ಕಾರ್ಯವು ಪರೋಪಕಾರರೂಪ ಪುಣ್ಯಕಾರ್ಯ ಎನಿಸುವುದು. ಇಂಥ ಪಾಪಾಚಾರಿ ದುಷ್ಟ ದಾನವನನ್ನು ಸಮರ್ಥರಾದ ವೀರಪುರುಷ ಕೊಲ್ಲದಿದ್ದರೆ, ಅಸಮರ್ಥರಾದ ದೀನ ಮಾನವರು ಯಾರಿಗೆ ಶರಣು ಹೋಗಬೇಕು? ವೇದ ಶಾಸ್ತ್ರಗಳು ಉಳಿಯುವದು ಎಂತು? ಸಂಪೂರ್ಣ ವಿಶ್ವವನ್ನೇ, ಧಾರಣ ಮಾಡುವ ಯಜ್ಞ, ಯಾಗಾದಿ ಪುಣ್ಯಕರ್ಮಗಳು ನಡೆಯುವದೆಂತು? ಆದುದರಿಂದ ಇಂಥ ಮಹಾಪಾಪಿಗಳನ್ನು ಸಂಹರಿಸುವದು ವೀರರ ಪುಣ್ಯಕಾರ್ಯವೇ ಎನಿಸುತ್ತದೆ.

ತಾರಕಾಸುರ ಅಂಥ ಮಹಾಪಾಪಿ. ಜಗತ್ತಿಗೇ ಕಂಟಕಪ್ರಾಯನಾಗಿದ್ದ ಅವನನ್ನು ವಧಿಸಿ ನೀನು ಲೋಕೋಪಕಾರವನ್ನೇ ಮಾಡಿರುವೆ. ಅದರಿಂದ ನಿನಗೆ ಮಹಾ ಪುಣ್ಯ ಪ್ರಾಪ್ತಿಯೇ ಆಗಿದೆ. ಪಾಪವಲ್ಲ. ಆದರೆ ಓರ್ವ ಮಹಾ ಶಿವಭಕ್ತನನ್ನು ಕೊಂದೆ

ಎಂದು ನೀನು ಮಿಡುಕುತ್ತಿರುವೆ ಮನದಲ್ಲಿ. ಇದು ನಿನ್ನಂಥ ಶಿವೈಕನಿಷ್ಠರಿಗೆ ಸ್ವಾಭಾವಿಕವೇ ಆಗಿದೆ. ಇದಕ್ಕಾಗಿ ನಾನು ಈಗ ಒಂದು ಅತ್ಯುತ್ತಮ ಉಪಾಯವನ್ನು ಹೇಳುತ್ತೇನೆ. ಶಿವಕುಮಾರ, ನಿನಗೆ ಈಗ ಹೇಗೂ ಶಿವಭಕ್ತನಾದ ತಾರಕಾಸುರನನ್ನು ಸಂಹರಿಸಿದ್ದಕ್ಕಾಗಿ ಪಶ್ಚಾತ್ತಾಪವಾಗಿದೆ, ಪಶ್ಚಾತ್ತಾಪಕ್ಕಿಂತ ಮಿಗಿಲಾದ ಪ್ರಾಯಶ್ಚಿತ್ತ ಯಾವುದಿದೆ ಈ ಲೋಕದಲ್ಲಿ ! ಪಶ್ಚಾತ್ತಾಪ ಪೂರ್ವಕವಾಗಿ ಶಂಕರನನ್ನು ಆರಾಧಿಸಿದ ಬಳಿಕ ಇನ್ನೆಲ್ಲಿ ಪಾಪವು ಉಳಿಯುವುದು ! ಆ ಶಿವನ ಮಹಿಮೆಯನ್ನು ಹೊಗಳಲು ಚತುರಾನನನೂ ಚತುರನಲ್ಲ. ಶ್ರುತಿಯೂ ಸಮರ್ಥವಲ್ಲ. ಇಂಥ ಈ ಈಶ್ವರನಿಗಿಂತ ಯೋಗ್ಯತೆಯಲ್ಲಿ ಅಧಿಕರಾದ ದೇವತೆಗಳು ಯಾರಿದ್ದಾರೆ ! ನಿನ್ನ ತಂದೆಯಾದ ಚಂದ್ರಶೇಖರನು ಏನು ಸಾಮಾನ್ಯ ದೇವತೆಯೆ ! ಪೃಥ್ವೀ ಮಂಡಲವೇ ಅವನಿಗೆ ರಥ, ಚತುರ್ಮುಖ ಅವನಿಗೆ ಸಾರಥಿ. ಮಂದರಬೆಟ್ಟವೇ ಬಿಲ್ಲು, ನಾನು ಬಾಣ. ಸೂರ್ಯಚಂದ್ರರು ರಥದ ಗಾಲಿ. ಬೇರೆ ಯಾರಿದ್ದಾರೆ. ಇಂಥ ಮಹಾ ಮಹಿಮೋಪೇತ ದೇವರು ! ಅದಕ್ಕಾಗಿಯೇ ಅವನಿಗೆ ಮಹಾದೇವ ಎಂದು ಹೆಸರು. ಸೃಷ್ಟಿಯ ಆದಿ ಕಾಲದಲ್ಲಿ ಬ್ರಹ್ಮ ವಿಷ್ಣು ಇವರಿಬ್ಬರ ವಿವಾದದಲ್ಲಿ ಲಿಂಗರೂಪದಿಂದ ಪ್ರಕಟನಾದ ಆ ಮಹಾದೇವ. ಜಗತ್ತೆಲ್ಲವೂ ಅವನಲ್ಲಿ ಲೀನ. ಆದುದರಿಂದ ಅವನಿಗೆ 'ಲಿಂಗ' ಎಂದು ಕರೆದವು ಅವನನ್ನು ವೇದಗಳು. ಶಂಕರನ ಸಾಕ್ಷಾತ್ ಸ್ವರೂಪವೇ ಲಿಂಗ. ಭಕ್ತಿಯಿಂದ ಈ ಲಿಂಗಕ್ಕೆ ಸಲಿಲ ಧಾರೆಯಿಂದ ಅಭಿಷೇಕ ಮಾಡಿದವ ಹುಲ್ಲುಕಡ್ಡಿಯಿಂದ ಆರಂಭಿಸಿ, ಬ್ರಹ್ಮನವರೆಗೆ ಸಂಪೂರ್ಣ ಜಗತ್ತನ್ನೇ ತೃಪ್ತಿಪಡಿಸಿದಂತಾಗುವದು.

ಮಣ್ಣಿನಿಂದಾಗಲೀ, ಕಟ್ಟಿಗೆಯಿಂದಾಗಲೀ ಇಟ್ಟಿಗೆಯಿಂದಾಗಲಿ, ಕಲ್ಲಿನಿಂದಾಗಲೀ ಶಿವಮಂದಿರವನ್ನು ಕಟ್ಟಿಸಿ ಅದರಲ್ಲಿ ಶಿವಲಿಂಗವನ್ನು ಪ್ರತಿಷ್ಠೆ ಮಾಡಿದರೆ, ಬರುವ ಪುಣ್ಯ ಅಪರಿಗಣ್ಯ. ಶಿವಲಿಂಗಕ್ಕಾಗಿ ಮಣ್ಣಿನ ಮನೆಯನ್ನು ಕಟ್ಟಿಸಿದ್ದಕ್ಕಿಂತ ಕಟ್ಟಿಗೆಯ ಶಿವಮಂದಿರ ರಚಿಸಿದವನಿಗೆ ನೂರು ಪಟ್ಟು ಪುಣ್ಯ ಹೆಚ್ಚು. ಅದಕ್ಕಿಂತ ನೂರು ಪಟ್ಟ ಇಟ್ಟಿಗೆಯ ಶಿವಮಂದಿರ ರಚನೆಯಿಂದ. ಅದರ ಶತಗುಣ ಪುಣ್ಯ ಶಿಲಾಮಯ. ಶಿವಮಂದಿರ ಬಂಧನದಿಂದ. ಆದುದರಿಂದ ದೇವಸೇನಾಪತಿಯೇ, ನೀನು ಕೂಡ ಭವ್ಯವಾದ ಶಿವಮಂದಿರವನ್ನು ಕಟ್ಟಿಸು. ಅದರಲ್ಲಿ ದಿವ್ಯವಾದ ಶಿವಲಿಂಗವನ್ನು ಪ್ರತಿಷ್ಠಾಪಿಸು.'' ಭಗವಾನ್, ಖಗವಾಹನನಾದ ವಿಷ್ಣುವಿನ ಈ ವಚನವು ಅಲ್ಲಿ ನೆರೆದ ಸುರೋತ್ತಮರೆಲ್ಲರಿಗೂ ಸಮ್ಮತವಾಯಿತು. ''ಉತ್ತಮ ಉಪಾಯ. ಯೋಗ್ಯತಮ ಸೂಚನೆ, ಒಳ್ಳೆಯದು, ಒಳ್ಳೆಯದು'' ಎಂದು ಹೊಗಳಿದರು. ಆಗ ಶಂಕರನು ಕಾರ್ತಿಕೇಯ ಸ್ವಾಮಿಯನ್ನು ಅಪ್ಪಿಕೊಂಡು ಹೇಳಿದನು - ''ವತ್ಸ, ಈ ವಾಸುದೇವನು ನಿಜವಾಗಿಯೂ ಸಾಕ್ಷಾತ್ ಜಗದ್ಗುರು. ಅವನ ಮಾತು ವೇದದಷ್ಟೇ ಪ್ರಮಾಣ. ವಿಷ್ಣು ಎಂದರೆ, ಪರಬ್ರಹ್ಮನೇ, ನನ್ನದೇ ಇನ್ನೊಂದು ರೂಪ, ನಾನೇ ಅವನು ಅವನೇ ನಾನು, ಹರಿ ಬೇರೆ ಅಲ್ಲ, ಹರ ಬೇರೆ ಅಲ್ಲ.

**ಯೋಽ ಹಂ ಹರೋ ಹರಿರ್ಜ್ಞೇಯೋ ಯೋ ಹರಿಃ ಸೋಽಹಮಿತ್ಯಪಿ ।**
**ನಾವಯೋರಂತರಂ ಕಂಚಿದ್ದ್ವೀಪಯೋರಿವ ಸಂವೃತ ।**
**ಯೋಽಮುಂ ದ್ವೇಷ್ಟಿ ಸ ಮಾಂದ್ವೇಷ್ಟಿ**
**ಯೋಽ ಚೇಶ್ವೈನಂ ಸ ಮಾಮಪಿ ॥**

ನಾನು ಎಂದರೆ. ಸಾಕ್ಷಾತ್ ಆ ಹರಿಯೆಂದೇ ತಿಳಿಯಬೇಕು. ಹರಿ ಎಂದರೆ ನಾನು ಅರ್ಥಾತ್ ಹರ. ಹರಿ ಹರ ಇಬ್ಬರೂ ಒಂದು ಎಂದು ಅರಿಯಬೇಕು. ಸಮಾನವಾಗಿ ಉರಿಯುವ ಎರಡು ದೀಪಗಳು ಸರಿಯಾಗಿಯೇ ಬೆಳಕು ಬೀರುವದಿಲ್ಲವೆ? ಹಾಗೆ ನಾವಿಬ್ಬರೂ ಜಗತ್ಪ್ರಕಾಶಕವಾದ ಜೋಡಿ ದೀಪಗಳಿದ್ದಂತೆ. ಈ ದೀಪದ್ವಂದ್ವದಲ್ಲಿ ಯಾವ ಅಂತರವೂ ಇಲ್ಲ. ಅವು ಬೀರುವ ಬೆಳಕು ಒಂದೇ ಅವುಗಳಿಂದ ಬೆಳಗುವ ಜ್ಯೋತಿಯೂ ಒಂದೇ, ಅವುಗಳಿಂದ ಪ್ರಪಂಚಕ್ಕೆ ದೊರಕುವ ಜ್ಞಾನ ಸ್ಫೂರ್ತಿಯೂ ಒಂದೇ ಅಂದ ಬಳಿಕ ಆ ಜ್ಯೋತಿಯಲ್ಲಿ ಭೇದ ಎಲ್ಲಿಂದ ಬರಬೇಕು ! ಈ ಹರಿಗೂ ನನಗೂ ಯಾವ ಅಂತರವೂ ಇಲ್ಲ. ಆ ವಿಷ್ಣುವನ್ನು ದ್ವೇಷ ಮಾಡುವವ ನನಗೂ ವೈರಿ. ಅವನ ಅನುಯಾಯಿ ಭಕ್ತನು ನನಗೂ ಭಕ್ತ. ಇದೇ ಎಲ್ಲರೂ ಅರಿತುಕೊಳ್ಳಬೇಕಾದ ಹರಿಹರಾದ್ವೈತ ತತ್ವ. ಆದುದರಿಂದ ಇದೀಗ ಈ ಭಗವಾನ್ ಪ್ರಕಟಗೊಳಿಸಿದ್ದಾನೆ ನನ್ನ ಅಭಿನ್ನರೂಪನಾದ ಈ ವಿಷ್ಣು. ಅವನು ಹೇಳಿದಂತೆ ಮಾಡುವದು ನಿನಗೂ ಶ್ರೇಯಸ್ಕರ ಮತ್ತು ಪಾಪಹರ.

**ಸ್ಕಂದ :** ತಂದೆಯೇ ! ತಾವು ಹೇಳಿದ್ದು ಸತ್ಯ. ಹರಿಹರ ಒಂದು ಎಂಬ ತತ್ವ ಶಾಶ್ವತ ಸತ್ಯ. ಅದರ ಅರಿವು ಈಗ ನನಗೆ ಮನದಟ್ಟಾಯಿತು. ಭಕ್ತವತ್ಸಲನಾದ ಭಗವಾನ್ ಶ್ರೀಹರಿಯು ನನಗೆ ಶಿವಲಿಂಗವನ್ನು ಸ್ಥಾಪಿಸಲು ಸೂಚಿಸಿರುವನಷ್ಟೇ ! ಹಿಂದೊಮ್ಮೆ ಆಕಾಶವಾಣಿಯು ನನಗೆ ಇದೇ ಸಂದೇಶವನ್ನು ನೀಡಿತು ತಾರಕ ಸಂಹಾರಕ್ಕಿಂತ ಮೊದಲು. ನಾನು ತಡಮಾಡದೇ ಇನ್ನು ಶಿವಲಿಂಗ ಸ್ಥಾಪನೆಯನ್ನು ಮಾಡುವೆನು.'' ಹೀಗೆ ನುಡಿದ ಆ ದೇವಸೇನಾಪತಿಯು ವಿಶ್ವಕರ್ಮನನ್ನು ಕರೆ ಕಳಿಸಿದನು. ಏನು ಅಪ್ಪಣೆ ಎಂದು ಕೈಮುಗಿದು ಕೇಳಿದ ಆ ಅಮರಾವತಿಯ ಬಡಿಗ. ಅವನಿಗೆ ಸ್ಕಂದನು ಹೇಳಿದನು - ''ಮೂರು ಶಿವಲಿಂಗಗಳನ್ನು ಸಿದ್ಧ ಮಾಡಿಕೊಡು ತಡಮಾಡದೆ.'' ಆಲಸ್ಯ ಎನ್ನುವದು ಗೊತ್ತೇ ಇಲ್ಲ ಆ ವಿಶ್ವಕರ್ಮನಿಗೆ. ಮೇಲೆ ಸುರಸೇನಾ ಪತಿಯ ಆದೇಶ. ಕೇಳಬೇಕೆ ! ತಕ್ಷಣವೇ ನಿರ್ಮಿಸಿಬಿಟ್ಟ ಮೂರೂ ಶಿವಲಿಂಗಗಳನ್ನು. ಕುಮಾರಸ್ವಾಮಿಯ ಮುಂದೆ ತಂದಿರಿಸಿದ ಆ ಮೂರು ಲಿಂಗಗಳನ್ನು. ಅವುಗಳನ್ನು ನೋಡಿ ಪರಮಾನಂದ ಸ್ಕಂದಕುಮಾರನಿಗೆ, ಬ್ರಹ್ಮಾನಂದ ದೇವತೆಗಳಿಗೆ. ಎಲ್ಲ ದೇವತೆಗಳೊಂದಿಗೆ ಆ ಲಿಂಗವನ್ನು ತೆಗೆದುಕೊಂಡು ಹೊರಟ ಸ್ಕಂದದೇವ, ಬ್ರಹ್ಮ, ಇಂದ್ರ, ಯಮ, ವಾಯು, ವರುಣ ಮುಂತಾದ ದೇವತೆಗಳೆಲ್ಲ ಅವನ ಹಿಂದೆ ನಡೆದರು. ಲಿಂಗ ಪ್ರತಿಷ್ಠಾನ ಮಹೋತ್ಸವಕ್ಕೆ. ಪಶ್ಚಿಮ ದಿಕ್ಕಿನಲ್ಲಿ

ಪ್ರತಿಜ್ಞೇಶ್ವರ ಎಂಬ ಲಿಂಗವನ್ನು ಆ ಮಯೂರ ವಾಹನನು ಪರಮ ಸಂಭ್ರಮದಿಂದ ಪ್ರತಿಷ್ಠೆಗೈದನು. ಆದರಿಂದ ಪರಮ ಸಂತುಷ್ಟನಾದ ಮಹೇಶ್ವರನು 'ಈ ಸ್ಥಾನದಲ್ಲಿ ಕಾರ್ತೀಕ ಶುಕ್ಲಪಕ್ಷ ಅಷ್ಟಮಿ ಮತ್ತು ಚೈತ್ರ ಶುಕ್ಲಪಕ್ಷ ಅಷ್ಟಮಿ ದಿನಗಳಂದು ಸ್ನಾನ ಮಾಡಿ ಆಹಾರವನ್ನು ತೆಗೆದುಕೊಳ್ಳದೇ ಉಪವಾಸದಿಂದ ಈ ಶಿವ ಪ್ರತಿಜ್ಞೇಶ್ವರ ಶಿವಲಿಂಗವನ್ನು ಪೂಜೆಮಾಡಿ ಜಾಗರ ಸೇವೆಯನ್ನು ಸಲ್ಲಿಸುವವರು ಮೃತ್ಯುವನ್ನು ಮೀರಿ ಅಮರತ್ವವನ್ನು ಪಡೆಯುವರು ಎಂದು ಹೇಳಿದನು.''

ಅನಂತರ ಆ ಪಾರ್ವತೀ ನಂದನನು ಆಗ್ನೇಯ ಕೋಣದಲ್ಲಿ ತಾರಕಾಸುರನ ಕಪಾಲದಿಂದ ಶಕ್ತಿಯ ಉತ್ಪತ್ತಿಯಾದ ಸ್ಥಳದಲ್ಲಿ ಎರಡನೆಯ ಶಿವಲಿಂಗವನ್ನು ಪ್ರತಿಷ್ಠೆಗೈದನು. ಆದರಿಂದ ಕಪಾಲೇಶ್ವರ ಎಂದು ಆ ಶಿವಲಿಂಗವು ಪ್ರಸಿದ್ಧವಾಯಿತು. ಆ ಕಪಾಲೇಶ್ವರನ ಸಮೀಪದಲ್ಲಿಯೇ ಉದ್ಭೂತವಾದ ಶಕ್ತಿಯನ್ನು ಸ್ತೋತ್ರಮಾಡಿ ಶಿವಕುಮಾರನು ಶಕ್ತಿ ಪ್ರತಿಷ್ಠಾಪನೆಯನ್ನು ನೆರವೇರಿಸಿದನು. ಕಪಾಲಿಕೇಶ್ವರಿ ಎಂಬ ಹೆಸರಿನಿಂದ ಅದು ಪ್ರಸಿದ್ದಿಯನ್ನು ಪಡೆಯಿತು. ಅಲ್ಲಿಯೇ ಉತ್ತರದಿಕ್ಕಿನಲ್ಲಿ ಶಕ್ತಿಚ್ಛಿದ್ರ ಎಂಬ ಒಂದು ತೀರ್ಥವಿದೆ. ಪಾತಾಳಗಂಗೆಯು ಪ್ರಕಟವಾದದ್ದು ಅದೇ ತೀರ್ಥದಿಂದ. ಸ್ಕಂದ ಸ್ವಾಮಿಯು ಎಲ್ಲ ದೇವತೆಗಳೊಂದಿಗೆ ಆ ಶಕ್ತಿಚ್ಛಿದ್ರ ತೀರ್ಥದಲ್ಲಿ ಸ್ನಾನಮಾಡಿ ತಾರಕಾಸುರನಿಗೆ ನೀರಿನಿಂದ ತರ್ಪಣವನ್ನು ನೀಡಿದನು. ಆಗ ಪರಮೇಶ್ವರನು ಸುಪ್ರಸನ್ನನಾಗಿ ವರ ನೀಡಿದನು. ''ಚೈತ್ರ ಕೃಷ್ಣ ಚತುರ್ದಶಿ ದಿನದಂದು ಈ ಶಕ್ತಿಚ್ಛಿದ್ರ ತೀರ್ಥದಲ್ಲಿ ಸ್ನಾನಮಾಡಿ ಉಪವಾಸವಿದ್ದು ಕಪಾಲೇಶ್ವರನ ಪೂಜೆಮಾಡಿದವನು ಮಹಾಪುರುಷಸಂಹಾರ ಪಾಪದಿಂದ ಮುಕ್ತನಾಗುವನು. ಆ ತಿಥಿಯಂದು ಸೋಮವಾರ, ಶಿವಯೋಗ, ತೈಲಕರಣ ಇವು ಮೂರು ಇದ್ದರೆ, ಚೈತ್ರ, ಕೃಷ್ಣ ಚತುರ್ದಶಿ, ಇವು ಮೂರು ಸೇರಿ ಷಡ್‌ಯೋಗ ಎನಿಸುವದು. ಈ ಷಡ್ ಯೋಗದಲ್ಲಿ ಶಕ್ತಿಚ್ಛಿದ್ರ ತೀರ್ಥದಲ್ಲಿ ಸ್ನಾನಮಾಡಿ ಶತರುದ್ರೀಯ ಜಪ ಮಾಡಿದರೆ, ಈ ಶರೀರ ಸಹಿತವಾಗಿ ರುದ್ರಲೋಕಕ್ಕೆ ಹೋಗುತ್ತಾನೆ ಶಿವಭಕ್ತ.'' ಶಿವನ ಈ ವರದಾನವನ್ನು ಕೇಳಿ ಭಲಾ ! ಭೇಷ್ ! ಎಂದು ಹರ್ಷೋದ್ಗಾರ ತೆಗೆದರು ದೇವತಾಪುರುಷರು.

ಅನಂತರ ಮೂರನೆಯ ಶಿವಲಿಂಗದ ಸಿದ್ಧತೆಯಲ್ಲಿ ತೊಡಗಿದ ಆ ಕುಮಾರಸ್ವಾಮಿ. ಆಗ ಬ್ರಹ್ಮದೇವರ ಮೈಯಲ್ಲಿ ಉತ್ಸಾಹ. ಅವರು ಸ್ಕಂದನನ್ನು ಕುರಿತು ''ಕುಮಾರ, ನಾನು ಒಂದು ಸ್ವಯಂ ಶಿವಲಿಂಗವನ್ನು ನಿರ್ಮಾಣ ಮಾಡುತ್ತೇನೆ'' ಎಂದು ಹೇಳಿ ಚತುರನಾದ ಆ ಚತುರ್ಮುಖನು ಕೂಡಲೇ ಒಂದು ಶಿವಲಿಂಗವನ್ನು ನಿರ್ಮಿಸಿದನು. ಬಹಳ ಸುಂದರವಾಗಿತ್ತು ಆ ಶಿವಲಿಂಗ. ಆಗ ಎಲ್ಲ ದೇವತೆಗಳೂ

ಆ ಮಹೇಶಕುಮಾರನನ್ನು ಮೆಚ್ಚಿಸಲಿಕ್ಕಾಗಿ ಒಂದು ಸುಂದರ ಸರೋವರವನ್ನು ನಿರ್ಮಿಸಿದರು. ಕೂಡಲೇ ಅದರಲ್ಲಿ ದೇವತಾಧುರೀಣರ ಆದೇಶದಂತೆ, ಗಂಗಾದಿತೀರ್ಥಗಳೆಲ್ಲವೂ ಬಂದು ಸೇರಿಕೊಂಡವು. ಆಗ ಆ ಸುರಸೇನಾಪತಿ ಸ್ಕಂದನು ಆ ಎಲ್ಲ ತೀರ್ಥಜಲದಿಂದ ಬ್ರಹ್ಮನಿರ್ಮಿತವಾದ ಶಿವಲಿಂಗಕ್ಕೆ ಸ್ನಾನ ಮಾಡಿಸಿದನು. ಸದ್ಯೋಜಾತಾದಿ ಐದು ಮಂತ್ರಗಳಿಂದ ಅದಕ್ಕೆ ಪುಷ್ಪಾರ್ಚನೆ ಮಾಡಿದನು. ಭಕ್ತಿಭಾವದಿಂದ ಯುಕ್ತನಾಗಿ ಆ ಶಿವಾರ್ಚನೆಗೈಯುವ ಸಮಯದಲ್ಲಿ ಸ್ಕಂದನು ತಂದೆಯಾದ ಮಹಾದೇವನನ್ನು ಕೈಜೋಡಿಸಿ ಕೇಳಿದನು - ''ಭಗವಾನ್, ಶಿವನಿಗೆ ಯಾವ ಭಕ್ತಿಯ ಕಾಣಿಕೆಯನ್ನು ಸಲ್ಲಿಸುವದರಿಂದ ಎಂಥ ಫಲ ದೊರಕುವುದು'' ತಿಳಿಸಿರಿ.

**ಮಹೇಶ್ವರ** : ಶಿವಲಿಂಗವನ್ನು ಸ್ಥಾಪಿಸಿ ಅದರ ಮೇಲೆ ಸುಂದರವಾದ ಮಂದಿರವನ್ನು ನಿರ್ಮಾಣ ಮಾಡಿದವನು ಒಂದು ಕಲ್ಪಕಾಲ ಪರ್ಯಂತ ಕೈಲಾಸ ಪರ್ವತದಲ್ಲಿ ವಾಸ ಮಾಡುವನು. ಶಿವಮಂದಿರದಲ್ಲಿ ಬಿದ್ದ ಕೊಳೆ ಕೆಸರು ತೊಡೆದು, ಕಸ ಹೊಡೆದು ಗುಡಿಸಿ, ಸಾರಿಸಿ, ಶುದ್ಧ ಮಾಡಿದವನಿಗೆ ಸರ್ವರೋಗಗಳಿಂದ ಮುಕ್ತಿ. ದೇವಾಲಯಗಳ ಕಂಬ, ಗೋಡೆ, ನೆಲಗಳಿಗೆ, ಸುಣ್ಣ ಬಳಿದು ಸಾರಣಿ ಕಾರಣಿ ಮಾಡುವವರು ವಜ್ರದಂತೆ ದೃಢಕಾಯರಾಗುವರು. ಹೂವು, ಹಾಲು, ಕುಶ, ಎಳ್ಳು ನೀರು ಅಕ್ಷತೆಗಳಿಂದ ಶಂಕರನ ಅರ್ಘ್ಯ, ಪಾದ್ಯ, ಅಭಿಷೇಕ, ಪೂಜೆ, ಸ್ತೋತ್ರಗಳನ್ನು ಮಾಡಿದವರು ಹತ್ತು ಸಾವಿರ ವರ್ಷ ಸ್ವರ್ಗದಲ್ಲಿ ಸುಖಿಸುವರು. ಹಾಲು, ಮೊಸಲು, ತುಪ್ಪ , ನೀರು ಮುಂತಾದವುಗಳಿಂದ ಶಿವಲಿಂಗಕ್ಕೆ ಪಂಚಾಮೃತಸ್ನಾನ ಮಾಡಿಸಿ, ಅದರ ಮೇಲೆ ಗಂಗಾಜಲದಿಂದ ಅಭಿಷೇಕಗೈದು, ಅನಂತರ ವಿಧಿಪೂರ್ವಕ ಶಿವಪೂಜೆ ಮಾಡಿದರೆ, ನಿರಂತರ ಶಿವನ ಪರಂಧಾಮದಲ್ಲಿ ನಿವಾಸದ ಸೌಭಾಗ್ಯವು ತಾನಾಗಿಯೇ ಪ್ರಾಪ್ತವಾಗುವದು. ದರ್ಭೆ, ಗಂಧ ಮುಂತಾದ ಸುಗಂಧ ದ್ರವ್ಯಗಳನ್ನು ನೀರಿನಲ್ಲಿ ಹಾಕಿ ತಾಮ್ರ, ಬೆಳ್ಳಿ, ಯೋಗ್ಯತೆ ಇದ್ದರೆ - ಬಂಗಾರದ ಕಲಶಗಳಲ್ಲಿ ತೀರ್ಥಗಳ ವಿಶೇಷತಃ ಮಹೀಸಾಗರದ ನೀರನ್ನು ತುಂಬಿ, ಶಿವಲಿಂಗಕ್ಕೆ ಅಭಿಷೇಕ ಮಾಡುವದರಿಂದ ಸಾಮಾನ್ಯ ಅಭಿಷೇಕಕ್ಕಿಂತ ನೂರ್ಮಡಿ ಹೆಚ್ಚಿನ ಪುಣ್ಯ. ಆ ಶಿವಲಿಂಗಕ್ಕೆ ಚಂದನ, ಅಗುರು, ಕೇಶರ, ಕರ್ಪೂರ ಮುಂತಾದವುಗಳನ್ನು ಲಿಂಗದ ಅಂಗಾಂಗಗಳಿಗೆ ಲೇಪಿಸುವದರಿಂದ ಮಾನವನಿಗೆ ಸುಖ ಸೌಭಾಗ್ಯ. ಗುಗ್ಗುಳ ಅಗರುಗಳ ಧೂಪಾರತಿಯಿಂದ ಸ್ವರ್ಗ. ದೀಪದಾನದಿಂದ ಕೀರ್ತಿ ಹಾಗೂ ನಯನಪಾಟವ ನೈವೇದ್ಯ ಸಮರ್ಪಣೆಯಿಂದ ಮೃಷ್ಟಾನ್ನ ಭೋಜನ, ಬಿಲ್ವ ಪತ್ರೆ ಹಾಗೂ ಬಗೆ ಬಗೆಯ ಪುಷ್ಪಗಳಿಂದ, ಶಿವಲಿಂಗದ ಪೂಜೆಗೈದರೆ ಒಂದು ಲಕ್ಷ ವರ್ಷ ಸ್ವರ್ಗ ವಾಸ, ಚಾಮರ ಸೇವೆಯಿಂದ ಸಾಮ್ರಾಜ್ಯ, ಶಿವಮಂದಿರದಲ್ಲಿ ಹಾಡು, ವಾದ್ಯ, ನೃತ್ಯ, ಸೇವೆಯಿಂದ ಶಿವಪ್ರಾಪ್ತಿ. ಶಂಖ, ಘಂಟಾ, ವಾದನ ಅಥವಾ ಗಾನಧ್ಯಾನದಿಂದ ಪಾಂಡಿತ್ಯ. ಶಿವನ ರಥೋತ್ಸವ ಮಾಡಿಸಿದವರ ಸರ್ವಶೋಕ ಪರಿಹಾರ. ಪ್ರದಕ್ಷಣ ನಮಸ್ಕಾರಗಳಿಂದ ಮಹಾವಂಶದಲ್ಲಿ ಜನನ ಆಗುವದು.

ಶಿವಲಿಂಗದ ಮುಂದೆ ವೇದ ಶಾಸ್ತ್ರ ಪಾರಾಯಣದಿಂದ ದಿವ್ಯ ಜ್ಞಾನ. ಸ್ತೋತ್ರಪಾಠದಿಂದ ಮನಸ್ಸಿಗೆ ಮೋಹದಿಂದ ಮುಕ್ತಿ. ಆರತಿ ಬೆಳಗುವದರಿಂದ ಪೀಡಾ ಪರಿಹಾರ, ಶಿವಲಿಂಗದ ಎದುರು ಗಾನದಿಂದ ನೂರುಮಡಿ ಅಧಿಕ ಪುಣ್ಯಫಲ. ಪ್ರಣಾಮದಿಂದ ಮಾನವನ ಸರ್ವಾಪರಾಧ ಕ್ಷಮೆ. ವಿಧಿಪೂರ್ವಕವಾಗಿ ಶಿವಲಿಂಗದ ಪೂಜೆ ಮಾಡುವದರಿಂದ ಹಿಂದೆ ಹೇಳಿದ ಎಲ್ಲ ಫಲಗಳನ್ನೂ ಭಕ್ತನಿಗೆ ನಾನು ನೀಡುತ್ತೇನೆ. ಕಾಶಿಯಲ್ಲಿ ನಾನು ವಿಶ್ವನಾಥ ರೂಪದಿಂದ ವಾಸಿಸುವದಿಲ್ಲವೆ ! ಅದರಂತೆ ಇಲ್ಲಿ, ಕುಮಾರೇಶ್ವರ ನಾಮದಿಂದ ನಾನು ಈ ಶಿವಲಿಂಗದಲ್ಲಿ ನೆಲಸಿರುತ್ತೇನೆ.'' ಎಲ್ಲ ದೇವತೆಗಳ ಎದುರು ಶಂಕರನು ನುಡಿದ ಈ ಮಾತುಗಳನ್ನು ಕೇಳಿ ಅತ್ಯಾಶ್ಚರ್ಯವಾಯಿತು ಕುಮಾರಸ್ವಾಮಿಗೆ. ಅವನು ಗೌರೀಪತಿಗೆ ದೀರ್ಘದಂಡ ನಮಸ್ಕಾರಗೈದ ಮತ್ತು ಕೈ ಜೋಡಿಸಿ ವಿವಿಧ ನಾಮ ರೂಪಗಳಿಂದ ಪರಮೇಶ್ವರನ ಸ್ತೋತ್ರವನ್ನು ಮಾಡಿದ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತನಾಲ್ಕನೇ ಅಧ್ಯಾಯ ಮುಗಿದುದು**

## ಸ್ಕಂದ ಕೃತ ಶಿವಸ್ತುತಿ

ಅಧ್ಯಾಯ -25

**ನಮಃ ಶಿವಾಯಾಸ್ತು ನಿರಾಮಯಾಯ ನಮಃ ಶಿವಾಯಾಸ್ತು ಮನೋಮಯಾಯ।**
**ನಮಃ ಶಿವಾಯಾಸ್ತು ಸುರಾರ್ಚಿತಾಯ ತುಭ್ಯಂ ಸದಾ ಭಕ್ತಕೃಪಾಪರಾಯ॥**

**ನಮೋ ಭವಾಯಾಸ್ತು ಭವೋದ್ಭವಾಯ ನಮೋಽಸ್ತು ತೇ ಧ್ವಸ್ತಮನೋಭವಾಯ।**
**ನಮೋಽಸ್ತು ತೇ ಗೂಢ ಮಹಾವ್ರತಾಯ ನಮೋಽಸ್ತು ಮಾಯಾಗಹನಾಶ್ರಯಾಯ॥**
**ನಮೋಽಸ್ತು ಶರ್ವಾಯ ನಮಃ ಶಿವಾಯ ನಮೋಽಸ್ತು ಸಿದ್ಧಾಯ ಪುರಾತನಾಯ॥**
**ನಮೋಽಸ್ತು ಕಾಲಾಯ ನಮಃ ಕಲಾಯ ನಮೋಽಸ್ತು ತೇ ಕಾಲಕಲಾತಿಗಾಯ**

**ನಮೋ ನಿಸರ್ಗಾತ್ಮಕ ಭೂತಿಕಾಯ ನಮೋಽಸ್ತ್ವಮೇಯೋಕ್ಷಮಹರ್ಧಿಕಾಯ।**
**ನಮಃ ಶರಣ್ಯಾಯ ನಮೋ ಗುಣಾಯ ನಮೋಽಸ್ತು ತೇ ಭೀಮಗುಣಾನುಗಾಯ॥**
**ನಮೋಽಸ್ತು ನಾನಾ ಭುವನಾದಿಕರ್ತ್ರೇ ನಮೋಽಸ್ತು ಭಕ್ತಾಭಿಮತ ಪ್ರದಾತ್ರೇ।**
**ನಮೋಽಸ್ತು ಕರ್ಮಪ್ರಸವಾಯ ದಾತ್ರೇ ನಮಃ ಸದಾ ತೇ ಭಗವನ್ಸುಕರ್ತ್ರೇ।**

**ಅನಂತರೂಪಾಯ ಸದೈವ ತುಭ್ಯಮಸಹ್ಯಕೋಪಾಯ ಸದೈವ ತುಭ್ಯಂ।**
**ಅಮೇಯಮಾನಾಯ ನಮೋಽಸ್ತು ತುಭ್ಯಂ ವೃಷೇಂದ್ರಯಾನಾಯ ನಮೋಽಸ್ತು ತುಭ್ಯಂ॥**

**ನಮಃ ಪ್ರಸಿದ್ಧಾಯ ಮಹೌಷಧಾಯ ನಮೋಽಸ್ತು ತೇ ವ್ಯಾಧಿಗಣಾಪಹಾಯ।**
**ಚರಾಚರಾಯಾಥ ವಿಚಾರದಾಯ ಕುಮಾರನಾಥಾಯ ನಮಃ ಶಿವಾಯ।**

**ಮಮೇಶ ಭೂತೇಶ ಮಹೇಶ್ವರೋಽಸಿ ಕಾಮೇಶ ವಾಗೀಶ ಬಲೇಶ ಧೀಶ।**
**ಕ್ರೋಧೇಶ, ಮೋಹೇಶ, ಪರಾಪರೇಶ, ನಮೋಽಸ್ತು ಮೋಕ್ಷೇಶ ಗುಹಾಶಯೇಶ॥**

ಲೋಕಕ್ಕೆಲ್ಲ ಕಲ್ಯಾಣಕಾರಕನೂ ರೋಗ ಶೋಕಗಳಿಂದ ರಹಿತನೂ, ಜ್ಞಾನ ಸ್ವರೂಪಿಯೂ, ದೇವತೆಗಳಿಂದ ಪರಿಪೂಜಿತನೂ ಭಕ್ತರ ಮೇಲೆ ಕರುಣಾರಸವನ್ನು ಸುರಿಸುವನೂ ಆದ ಮಹಾದೇವನೇ ನಿನಗೆ ನಮೋ ನಮಃ. ನಮೋ ನಮಃ. ನಿನ್ನ

ಹೆಸರು ಭವ. ಈ ಭವ ಎಂದರೆ ಸಂಸಾರದ ಉತ್ಪತ್ತಿಯೂ ನಿನ್ನಿಂದಲೇ. ಮನೋಭವನಾದ ಕಾಮನ ಧ್ವಂಸ ಮಾಡಿದವನೂ ನೀನೇ. ಗೂಢ ಭಾವದಿಂದ ಮಹಾವ್ರತಗಳನ್ನು ಪಾಲನಮಾಡುವ, ಮಾಯೆಗೆ ಆಶ್ರಯನಾದ ನಿನಗೆ ವಂದನೆ, ಶರ್ವ, ಶಿವ, ಸಿದ್ಧ, ಪುರಾಣಪುರುಷ ಕಾಲ, ಕಾಲಾತೀತ, ಕಾಲನಿಯಾಮಕ, ಎಂದು ನೀನೇ ಕರೆಯಲ್ಪಡುವೆ. ನೀನು ನೈಸರ್ಗಿಕವಾದ ಆತ್ಮೈಶ್ವರ್ಯದಿಂದ ಒಡಗೂಡಿರುವೆ. ನಂದೀಶ್ವರನಿಗೆ ಸಮೃದ್ಧಿಯನ್ನು ದಯಪಾಲಿಸಿದ ನೀನು ದೀನ ಜನರಿಗೆ ಶರಣ್ಯ. ಅರ್ಥಾತ್ ಶರಣು ಬಂದವರ ರಕ್ಷಕನು ಆಗಿರುವೆ. ನಿರ್ಗುಣ ಸ್ವರೂಪಿಯಾದ ನಿನ್ನನ್ನು ಭೀಷಣಗುಣಗಳುಳ್ಳ ಭೂತಪ್ರೇತ ದೈತ್ಯ ದಾನವರು ಕೂಡ ಉಪಾಸನೆ ಮಾಡುವರು.

ಈ ಹದಿನಾಲ್ಕು ಲೋಕಗಳ ಮೇಲೆ ನಿನ್ನೊಬ್ಬನದೇ ಅಧಿಕಾರ. ಭಕ್ತರ ಅಭೀಷ್ಟಗಳನ್ನು ಪ್ರದಾನ ಮಾಡುವ ನೀನು ಎಲ್ಲ ಕರ್ಮಗಳ ಫಲಪ್ರದನೂ ಆಗಿರುವೆ. ಯಾವಾಗಲೂ ಲೋಕಕಲ್ಯಾಣ ಮಾಡುವ ನಿನಗೆ ವಂದನೆ. ನೀನು ಅನಂತರೂಪ. ನಿನಗೆ ಕೋಪಬಂದರೆ ಯಾರಿಗೂ ತಡೆಯಲು ಶಕ್ಯವಿಲ್ಲ. ವೃಷಭವಾಹನನಾದ ನೀನು ಸಾಕ್ಷಾತ್ ಸರ್ವಜ್ಞಮೂರ್ತಿ. ಔಷಧಿ ರೂಪನಾಗಿ ಎಲ್ಲರ ಆಧಿ, ವ್ಯಾಧಿಗಳನ್ನು ಪರಿಹರಿಸುವೆ. ಚರಾಚರ ಪ್ರಪಂಚಕ್ಕೆಲ್ಲ ಜ್ಞಾನಪ್ರದನಾದ ನೀನು ಕುಮಾರೇಶ್ವರ, ಎಂದು ಪ್ರಸಿದ್ಧನಾಗಿರುವೆ. ಎಲ್ಲ ಪ್ರಾಣಿಗಳ ಒಡೆಯನಾದ ಮಹೇಶ್ವರನೆ, ಕಾಮ, ಕ್ರೋಧ, ಮೋಹ, ಬುದ್ಧಿ ವಾಣಿ, ಎಲ್ಲವನ್ನೂ ನಿಯಂತ್ರಿಸುವವನು ನೀನೇ. ಇಂದ್ರಿಯಗಳ ನಿಯಾಮಕನಾದ ನೀನು ಪರಾಪರ ತತ್ವಗಳಿಗೆ ಅಧೀಶ್ವರ. ನಿನಗೆ ನನ್ನ ಪುನಃ ಪುನಃ ನಮಸ್ಕಾರ'' ಹೀಗೆ ಪಾರ್ವತೀ ಪುತ್ರನಾದ ಕಾರ್ತಿಕೇಯನು ತನ್ನ ಸ್ತೋತ್ರದ ಪ್ರತಿಯೊಂದು ಶಬ್ದದ ಮೊದಲು ಹಾಗೂ ಕೊನೆಯಲ್ಲಿ ' ನಮಸ್ಕಾರ ನಮಸ್ಕಾರ ' ಎಂಬ ಶಬ್ದಗಳನ್ನು ಸೇರಿಸುತ್ತ ಅತಿಶಯಿತ ಭಕ್ತಿಭಾವದಿಂದ ಶಿವನನ್ನು ಮೇಲೆ ಹೇಳಿದ ರೀತಿಯಿಂದ ಸ್ತೋತ್ರಮಾಡಿದನು.

ತನ್ನ ಪ್ರೀತಿಯ ಕುಮಾರನಾದ ಕುಮಾರಸ್ವಾಮಿಯ ಭಕ್ತಿಯುಕ್ತವಾದ ಭಾವಭರಿತವಾದ ಈ ಸ್ತೋತ್ರದಿಂದ ಪರಮೇಶ್ವರನು ಪರಿತುಷ್ಟನಾದ ಮತ್ತು ಅವನನ್ನು ಅಭಿನಂದಿಸುತ್ತ ನುಡಿದ. ''ವತ್ಸ , ನನ್ನ ಭಕ್ತನಾದ ತಾರಕಾಸುರನನ್ನು ವಧಿಸಿದ ಪಾಪವು ತಗಲೀತೆ ! ಎಂಬ ಯೋಚನೆಯನ್ನೇ ನೀನು ಬಿಟ್ಟುಬಿಡು. ನೀನು ಮಾಡಿದ ತಾರಕನಹತ್ಯಾ ಪಾಪವೂ ಸಂಪೂರ್ಣವಾಗಿ ತೊಳೆದು ಹೋಗಿದೆ. ನೀನು ಮಾಡಿದ, ಈ ಶಿವಸ್ತುತಿಯಿಂದ ನೀನು ಅತ್ಯಂತ ಪರಿಶುದ್ಧನಾಗಿರುವೆ. ಯಾವ ಪಾಪಲೇಶವೂ ನಿನ್ನಲ್ಲಿ ಉಳಿದಿಲ್ಲ. ಇದೀಗ ನೀನು ಪಠಿಸಿದ ಶಿವಸ್ತುತಿ ಹಾಗೂ ಶಿವಾರಾಧನೆಗಳಿಂದ ಎಲ್ಲ ಮುನಿ ಮಹರ್ಷಿಗಳೂ ನಿನ್ನನ್ನು ಮನ್ನಿಸುವಂತಾಗಿದೆ. ಸಾಕ್ಷಾತ್ ನನ್ನ ಪುತ್ರನಾದ ಸ್ಕಂದನು ರಚಿಸಿದ ಈ ಶಿವಸ್ತೋತ್ರವನ್ನು ಸಂಜೆ, ಮುಂಜಾವುಗಳಲ್ಲಿ ಭಕ್ತಿಯಿಂದ ಪಾರಾಯಣ ಮಾಡಿದವರು ಎಂದೂ ದರಿದ್ರರಾಗುವದಿಲ್ಲ. ಯಾವ ರೋಗವೂ ತಾಗದು ಈ ಶಿವಸ್ತುತಿ ಪಾಠಕರಿಗೆ. ಇಹದಲ್ಲಿ ಸರ್ವಸುಖೋಪಭೋಗ, ಪರದಲ್ಲಿ ಪುಣ್ಯಧಾಮ ಪ್ರಾಪ್ತಿ, ವೈಶಾಖ

ಹುಣ್ಣಿಮೆಯಂದು ಈ ಮಹೀಸಾಗರ ಸಂಗಮ ತೀರ್ಥದಲ್ಲಿ ಮಿಂದು ಈ ಶಿವಸ್ತುತಿಯನ್ನು ಅಂದು ನನ್ನ ಪೂಜೆ ಮಾಡುವವರು ಅಕ್ಷಯ ಪುಣ್ಯಭಾಗಿಗಳು. ದೇಶದಲ್ಲಿ ಅನಾವೃಷ್ಟಿಯಿಂದ ಕ್ಷಾಮಡಾಮರಗಳು ತಲೆದೋರಿದರೆ, ಉತ್ತಮ ಕಲಶಗಳಲ್ಲಿ ಸುಗಂಧಿ ಸಲಿಲವನ್ನು ತುಂಬಿ ಐದು ಅಥವಾ ಏಳು ರಾತ್ರಿಕಾಲದಲ್ಲಿ ರುದ್ರಾಭಿಷೇಕ ಮಾಡಬೇಕು. ಶಿವಲಿಂಗಕ್ಕೆ ಸರ್ವಾಂಗದಲ್ಲಿ ಕುಂಕುಮ ಲೇಪನ ಮಾಡಿ, ಎರಡು ವಸ್ತ್ರ ಹೊದಿಸಿ, ಕೆಂಪು ಹೂಗಳ ಮಾಲೆ ಏರಿಸಿ ಭಕ್ತಿಯಿಂದ ಶಿವಪೂಜೆ ಮಾಡಿಸಬೇಕು. ಒಂದು ಲಕ್ಷ ಆಹುತಿ ನೀಡಿ ಪರಮೇಶ್ವರನು ಪ್ರಸನ್ನನಾಗಲಿ ಎಂದು ಯಜ್ಞ ಮಾಡಬೇಕು. ತಪಸ್ವಿಗಳಿಗೆ ಊಟಕ್ಕೆ ಹಾಕಿ ಗೋದಾನ, ಭೂದಾನ, ಧಾನ್ಯದಾನ ಮುಂತಾದವುಗಳನ್ನು ನೀಡಬೇಕು. ಅನಂತರ ರುದ್ರ ಜಪ ಮಾಡಬೇಕು. ಈ ವಿಧಾನದಿಂದ ಜ್ಞಾನಿಗಳಿಂದ ಯಜ್ಞ, ದಾನ ಶಿವ ಪೂಜೆಗಳನ್ನು ಮಾಡಿಸಿದರೆ, ಮುಗಿಲು ತುಂಬ ಮೋಡಪಡೆ ಮೂಡಿ ಧಾರಾಕಾರವಾಗಿ ಮಳೆ ಸುರಿಯುವುದು. ಸುವೃಷ್ಟಿಯಿಂದ ಭೂತಲದ ಹೊಲ ನೆಲಗಳೆಲ್ಲ ಹಚ್ಚ ಹಸಿರು ಪೈರು ಬೆಳೆದು, ಸಮೃದ್ಧ ಬೆಳೆ ಬಂದು, ಸುಭಿಕ್ಷ ಉಂಟಾಗುವದು. ಜನ ಜನಾವರಗಳಲ್ಲಿ ಹಬ್ಬಿದ ರೋಗಗಳೆಲ್ಲವೂ ದೂರಾಗುವವು.

ಮೇಲೆ ಹೇಳಿದ ಶಿವಪೂಜೆ ಶಿವಾನುಷ್ಠಾನದ ಪ್ರಭಾವದಿಂದ ರಾಜ್ಯದಲ್ಲಿ ಶಾಂತಿ ಸಂತಸಗಳು ನೆಲಸುವವು. ಶತ್ರುಪೀಡಾ ಪರಿಹಾರವಾಗುವದು.

ಭಕ್ತಿಯಿಂದ ಶಿವಲಿಂಗಕ್ಕೆ ತುಪ್ಪದಿಂದ ಸ್ನಾನ ಮಾಡಿಸಿದರೆ, ಕನ್ಯಾದಾನ ಫಲ. ಪಂಚಾಮೃತದಿಂದ ಸ್ನಾನ ಮಾಡಿಸಿದರೆ, ಅಗ್ನಿಷ್ಟೋಮ ಯಜ್ಞದ ಪುಣ್ಯ, ಇಲ್ಲಿಯ ತೀರ್ಥದಲ್ಲಿ ಮರಣಿಸಿದರೆ ಶಿವಲೋಕ ವಾಸ, ಗ್ರಹಣ ಸಂಕ್ರಮಣ, ಪರ್ವಕಾಲ, ಪುಣ್ಯ ಕಾಲಗಳಲ್ಲಿ ಈ ತೀರ್ಥ ಸ್ನಾನ ಹಾಗೂ ಶಿವಪೂಜೆಗಳಿಂದ ಶಿವ ಸಾರೂಪ್ಯ ಪ್ರಾಪ್ತಿ. ಈ ತೀರ್ಥದ ತಡಿಯಲ್ಲಿದ್ದು ಬ್ರಹ್ಮಚರ್ಯ ವ್ರತವನ್ನು ಪಾಲಿಸಿ ತಪಸ್ಸನ್ನು ಆಚರಿಸುವವರು ಪಾಶುಪತ ಯೋಗದಿಂದ ನನ್ನಲ್ಲಿಯೇ ಲೀನರಾಗುವರು.''

ಮಹಾದೇವರು ಹೀಗೆ ತಾವು ಸ್ಥಾಪಿಸಿದ ಕುಮಾರೇಶ್ವರ ಲಿಂಗ ಪೂಜಕರಿಗೆ ಹಲವಾರು ತರಹದ ಪುಣ್ಯ ಫಲಗಳನ್ನು ನೀಡುವ ವರದಾನ ಭರವಸೆಯನ್ನು ನೀಡಿದ್ದನ್ನು ಕಂಡು ಅತಿಶಯಿತವಾದ ಸಂತೋಷವಾಯಿತು ಸ್ಕಂದನಿಗೆ. ಆದರಿಂದ ಅತ್ಯಂತ ಸಂತುಷ್ಟವಾದ ಆ ಷಣ್ಮುಖನೇ ಪರಮೇಶ್ವರನಿಗೆ ಪರಮಾದರದಿಂದ ಪ್ರಣಾಮಗೈದು ತನ್ನ ತಾಯಿಯಾದ ಪಾರ್ವತಿದೇವಿಗೂ ಕೈಮುಗಿದು ಕೇಳಿಕೊಂಡನು- ''ಅಮ್ಮಾ, ನಿನಗೆ ನಿನ್ನ ಮಗನಾದ ಈ ಕುಮಾರಸ್ವಾಮಿಯನ್ನು ಸಂತೋಷಪಡಿಸಬೇಕೆಂದು ಅಪೇಕ್ಷ ಇದೆಯಷ್ಟೇ ! ಹಾಗಾದರೆ ನೀನು ಕೂಡ ಈ ಸ್ಥಾನವನ್ನು ಬಿಟ್ಟು ಹೋಗಬಾರದು. ಇಲ್ಲಿಯ ಕುಮಾರೇಶ್ವರನ ಜೊತೆಗೆ ನೀನೂ ಕೂಡ ಈ ಪುಣ್ಯಕ್ಷೇತ್ರದಲ್ಲಿ ನಿತ್ಯ ಸನ್ನಿಹಿತಳಾಗಿರಬೇಕು.

**ಪಾರ್ವತಿ :** ಮಗು ! ನನ್ನ ಪತಿ ಮಹಾದೇವನು ಇದ್ದಲ್ಲಿ ನಾನೂ ಕೂಡ ಸನ್ನಿಹಿತಳಾಗಿ ಇರುತ್ತೇನೆ. ಇಲ್ಲಿ ನನ್ನ ನಾಥನ ಬಳಿಯಲ್ಲಿ ನೆಲೆಸಿ ನನ್ನನ್ನು ಆರಾಧಿಸುವ

ನಾರಿಯರಿಗೆ ನಾನು ಮನಮೆಚ್ಚಿದ ಪತಿಯನ್ನು ದಯಪಾಲಿಸುತ್ತೇನೆ. ಅಖಂಡ ಸೌಭಾಗ್ಯವನ್ನು ಕರುಣಿಸುತ್ತೇನೆ. ಉತ್ತಮ ಸಂತಾನವನ್ನು ನೀಡುತ್ತೇನೆ. ಚೈತ್ರ ಶುದ್ಧ ತದಿಗಿಯ ದಿನ ತಣ್ಣೀರಿನಿಂದ ಮೈತೊಳೆದುಕೊಂಡು ಯಾವ ಮಹಿಳೆಯು ನನಗೆ ಹಣ್ಣು, ಹೂವು, ಕಾಯಿ, ಗಂಧ, ಮಾಲೆ, ಧೂಪ, ದೀಪ, ನೈವೇದ್ಯ, ಮಂಗಳಾರತಿ ಮುಂತಾದವುಗಳಿಂದ ಪೂಜೆ ಮಾಡುವಳೋ ಅವಳಿಗೆ ಒಳ್ಳೆ, ತಂದೆ, ತಾಯಿ, ಅತ್ತೆ, ಮಾವ, ಗಂಡ, ಮಗ, ಸಂಪತ್ತು ಸೌಭಾಗ್ಯ ಮುಂತಾದ ಎಂಟು ವಿಧವಾದ ಭಾಗ್ಯೈಶ್ವರ್ಯವನ್ನು ಸುಖಾತಿಶಯಕ್ಕೆ ಕಾರಣವಾಗುವಂತೆ ಒದಗಿಸುತ್ತೇನೆ. ಮುತ್ತೈದೆಯರಿಗೆ ಚಿರಮಾಂಗಲ್ಯವು ಅಥವಾ ಅಖಂಡ ಸೌಭಾಗ್ಯವು ಲಭಿಸಲು ನಾನೊಂದು ಉಪಾಯ ಹೇಳುತ್ತೇನೆ. ಇದು ಬಹು ಸುಲಭ ಹಾಗೂ ಸರ್ವ ಸಾಧ್ಯ. ಕುಂಕುಮ, ಹೂವು, ಗಂಧ, ತಾಂಬೂಲ, ಕಾಡಿಗೆ, ಕರಿಮಣಿ, ಉಪ್ಪು, ಹಾಗೂ ಜೀರಿಗಿ, ಈ ಎಂಟು ಸೌಭಾಗ್ಯ ದ್ರವ್ಯಗಳನ್ನು ಒಂದು ಪರಡಿಯಲ್ಲಿ ಹಾಕಿ ಇನ್ನೊಂದರಲ್ಲಿ ತಾನು ಕುಳಿತು ತುಲಾಭಾರ ಮಾಡಿಕೊಂಡು ಅವುಗಳನ್ನೆಲ್ಲ ಸುವಾಸಿನಿಯರಿಗೆ ದಾನ ಕೊಡಬೇಕು. ಅನಂತರ ಮೂರು ದಿನ ಉಪ್ಪು ಇಲ್ಲದ ಊಟಮಾಡಬೇಕು. ಹೀಗೆ ಮಾಡಿದರೆ ಸ್ತ್ರೀಯರಿಗೆ ವೈಧವ್ಯವು ಎಂದೂ ಬರುವದಿಲ್ಲ. ಚೈತ್ರ, ಕಾರ್ತೀಕ, ಮಾಘ, ಈ ಮೂರು ತಿಂಗಳು ಈ ತೀರ್ಥದಲ್ಲಿ ಸ್ನಾನ ಮಾಡಿ ನನ್ನ ಪೂಜೆ ಮಾಡುವವರ ದುಃಖ ದೂರವಾಗುವದು. ದಾರಿದ್ರ್ಯ ಅಳಿದು ಹೋಗುವದು. ದೌರ್ಭಾಗ್ಯ ಸಂಪರ್ಕ ಎಂದಿಗೂ ಆಗುವುದಿಲ್ಲ.'' ತಾಯಿಯ ಮಾತು ಕೇಳಿ ಸ್ಕಂದನಿಗೆ ಪರಮಾನಂದ. ಕೂಡಲೇ ಅವನು ಅಲ್ಲಿಯೇ ಪಾರ್ವತಿಯ ಪ್ರತಿಷ್ಠಾಪನೆಯನ್ನು ಮಾಡಿದನು. ಅಲ್ಲಿಯೆ ಪಕ್ಕದಲ್ಲಿ ಕುಳಿತ ಗಣಪತಿಯನ್ನು ಕುರಿತು ಹೇಳಿದನು - ''ಗಜಾನನ ! ಯಾರು ಹೂವು, ಗಂಧ, ಧೂಪ, ದೀಪ, ಮತ್ತು ಮೋದಕ ಮೊದಲಾದವುಗಳಿಂದ ಮೊಟ್ಟ ಮೊದಲು ನಿನ್ನ ಪೂಜೆ ಮಾಡಿ ನಂತರ ಕುಮಾರೇಶ್ವರ ಪೂಜೆ ಗೈಯ್ಯುವರೊ ಅವರ ಎಲ್ಲ ವಿಘ್ನಗಳನ್ನು ನೀನು ದೂರಮಾಡಬೇಕು.

**ಗಣೇಶ :** ಸೋದರ ! ನೀನು ಸ್ಥಾಪಿಸಿದ ಈ ಶಿವಲಿಂಗವನ್ನು ಭಕ್ತಿಯಿಂದ ಪೂಜಿಸುವವರ ಯಾವ ಕಾರ್ಯದಲ್ಲಿಯೂ ವಿಘ್ನವನ್ನು ಒಡ್ಡುವದಿಲ್ಲ. ನನ್ನ ಅನುಯಾಯಿಗಳಾದ ಶಿವಭಕ್ತರು ಮಾಡುವ ಸತ್ಕಾರ್ಯಕ್ಕೆ ಎಂದೂ ಎಲ್ಲಿಯೂ ಯಾರೂ ಅಡ್ಡಿ ಆತಂಕ ಬಾರದಂತೆ ನೋಡಿಕೊಳ್ಳುವರು.

ವಿಘ್ನೇಶ್ವರನು ಈ ಮಾತನ್ನು ಪ್ರಸನ್ನ ಮನಸ್ಸಿನಿಂದ ಹೇಳಿದ್ದ. ಅದನ್ನು ಕೇಳಿ ಆ ಕುಮಾರಸ್ವಾಮಿಗೆ ಸಂತಸ ಉಕ್ಕಿತು. ಶಿವಪಾರ್ವತಿಯರ ಪಕ್ಕದಲ್ಲಿಯೇ ಗಜಾನನನನ್ನು ಪ್ರತಿಷ್ಠೆಗೈದ. ಮಹಾಮಹಿಮನಾದ ಆ ಅಗ್ನಿಕುಮಾರ ಷಣ್ಮುಖನಿಂದ ಸುಪ್ರತಿಷ್ಠನಾದ ಸಿದ್ಧವಿನಾಯಕನ ಪೂಜೆಯನ್ನು ಚತುರ್ಥಿ ದಿನದಂದು ಎಲ್ಲರೂ ಮಾಡಲೇಬೇಕು.

ಈ ರೀತಿಯಾಗಿ ತಾರಕಾಂತಕನಾದ ಸ್ಕಂದನು ಮಹೀಸಾಗರ ಸಂಗಮ ತೀರ್ಥದ ತಟಾಕದಲ್ಲಿ ಕುಮಾರೇಶ್ವರ ಪಾರ್ವತಿ ಹಾಗೂ ಗಣಪತಿ ಮೂವರನ್ನೂ ಪ್ರತಿಷ್ಠೆಗೈದು

ಕೃತಕೃತ್ಯನಾದನು. ಮತ್ತು ಅಲ್ಲಿ ಆ ಕುಮಾರೇಶ್ವರನ ವರ ಕುಮಾರನಾದ ತಾನೂ ಕೂಡ ಪೂರ್ಣಾಂಶದಿಂದ ನಿರಂತರವಾಗಿ ನೆಲಸಿದನು. ಈ ಶಿವಕುಟುಂಬದ ಸಾಮೂಹಿಕ. ಸಂದರ್ಶನವನ್ನು ಪಡೆದುಕೊಂಡು ಪೂಜೆ ಮಾಡುವವರು, ಸೇವೆ ಗೈಯುವವರು, ಅತಿಶಯ ಶ್ರೇಯೋಭಾಗಿಗಳು ಆಗುವರು. ವಿಶೇಷವಾಗಿ ಕಾರ್ತೀಕ ಪೂರ್ಣಿಮೆಯ ದಿನ ಕಾರ್ತೀಕೇಯನಾದ ಕುಮಾರಸ್ವಾಮಿಯ ಪೂಜೆಮಾಡುವವರಿಗೆ ಸರ್ವಾಭೀಷ್ಟ ಪ್ರಾಪ್ತಿ ಖಂಡಿತವಾಗಿಯೂ ಆಗುವದು. ಈ ದೇವಸೇನಾನಿಯ ಬ್ರಹ್ಮವಾದಿ ಮುಂತಾದ ಅಷ್ಟೋತ್ತರ ಶತನಾಮಗಳನ್ನು ಪ್ರತಿನಿತ್ಯ ಪಾರಾಯಣ ಮಾಡುತ್ತಾ ಒಂದು ತಿಂಗಳವರೆಗೆ ಇದರ ಪಠಣವನ್ನು ಗೈದರೆ, ಮಾನವನ ಜೀವನದಲ್ಲಿ ಸಂಕಟಗಳೇ ಬರುವುದಿಲ್ಲ.

ನಾನು ಈವರೆಗೆ ಹೇಳಿದ ಕುಮಾರೇಶ್ವರನ ಮಹಾತ್ಮೆಯನ್ನು ಪಠಿಸುವವರು ಷಣ್ಮುಖನ ಅನುಗ್ರಹದಿಂದ ರುದ್ರಲೋಕದಲ್ಲಿ ನೆಲಿಸುವರು. ಈ ಎಲ್ಲವೂ ಪರ್ಯಾಯವಾಗಿ ಶಿವಲಿಂಗದ ಮಹಾ ಮಹಿಮೆಯೆ. ಇದನ್ನು ಉಪವರಳಾದ ಕನ್ಯೆಯು ಭಕ್ತಿಯಿಂದ ಕೇಳಿದರೆ ಮನ ಮೆಚ್ಚಿದ ಪತಿ ದೊರೆಯುವನು. ಮದುವೆಯಾದ ಮಹಿಳೆಯು ಶ್ರವಣ ಮಾಡಿದರೆ ಸರ್ವೋತ್ಕೃಷ್ಟ ಸಂತಾನ ಪ್ರಾಪ್ತಿ.

**ನಾರದ :** ಶಿವಕುಮಾರನಾದ ಆ ಕುಮಾರಸ್ವಾಮಿಯು ಮಹೀಸಾಗರ ಸಂಗಮದ ರಂಗಸ್ಥಳದಲ್ಲಿ ಕುಮಾರೇಶ್ವರನನ್ನು ಸ್ಥಾಪಿಸಿದ ಬಳಿಕ ದೇವತೆಗಳೆಲ್ಲರೂ ಕೈಜೋಡಿಸಿ ನಮಸ್ಕಾರ ಮಾಡಿದರು. ನಮ್ರತೆಯಿಂದ ಬಿನ್ನವಿಸಿಕೊಂಡರು: ''ಮಹಾಪ್ರಭು, ನೀನು ನಿರ್ಮಿಸಿದ ಮೂರು ಶಿವಲಿಂಗಗಳಲ್ಲಿ ಎರಡು ಲಿಂಗಗಳ ಪ್ರತಿಷ್ಠೆ ಮಾತ್ರ ಈವರೆಗೆ ಆಯಿತು. ಇನ್ನೊಂದು ಲಿಂಗವು ಮಾತ್ರ ಹಾಗೆಯೇ ಉಳಿದಿದೆ. ಈ ನಿನ್ನ ಮೂರನೆಯ ಈಶ್ವರ ಲಿಂಗಕ್ಕೆ ನಾವು ಒಂದು ಸ್ಥಾನವನ್ನು ಕಲ್ಪಿಸಿಕೊಡುತ್ತೇವೆ. ನೀನು ದರ್ಪಿಷ್ಠನಾದ ದುಷ್ಟ ತಾರಕಾಸುರನನ್ನು ಈ ಮೊದಲೇ ಕೊಂದಿರುವೆಯಷ್ಟೇ ! ನಿಮ್ಮ ಕೀರ್ತಿಯನ್ನು ವಿಶ್ವವ್ಯಾಪಿಯಾಗಿ ಮಾಡಲಿಕ್ಕಾಗಿ ನಾವು ನೀರಿನಲ್ಲಿ ಒಂದು ಅತ್ಯುತ್ತಮವಾದ ಕಂಬವನ್ನು ಗಟ್ಟಿಯಾಗಿ ನೆಡುತ್ತೇವೆ. ಅದರ ಮೇಲೆ ನೀವು ನಿಮ್ಮಲ್ಲಿ ಉಳಿದಿರುವ ವಿಶ್ವಕರ್ಮನು ರಚಿಸಿದ ಮೂರನೆಯ ಶಿವಲಿಂಗವನ್ನು ಸ್ಥಾಪನೆಮಾಡಿರಿ.''

ದೇವಾಧಿದೇವತೆಗಳ ಈ ನಮ್ರ ವಿನಂತಿಗೆ ತಥಾಸ್ತು ಎಂದು ಸಮ್ಮತಿ ನೀಡಿದ ಕಾರ್ತಿಕೇಯ. ತಾರಕಾಂತಕನ ಅನುಮತಿಯು ದೊರೆತ ಮರುಕ್ಷಣದಲ್ಲಿಯೇ ಸುರುವಾಯಿತು ಸುರಸಂದೋಹದ ಸ್ತಂಭ ಸ್ಥಾಪನಾ ಕಾರ್ಯ. ತಮ್ಮ ಸ್ಥಪತಿಗೆ ಹೇಳಿ ಅವರು ಒಂದು ಸುವರ್ಣಘಟಿತವಾದ ರತ್ನ ಜಟಿತ ಸ್ತಂಭವನ್ನು ನಿರ್ಮಿಸಿ ನೀರಿನಲ್ಲಿ ನೆಟ್ಟು ಗಟ್ಟಿಯಾಗಿ ನಿಲ್ಲಿಸಿದರು. ಆ ಕಂಬದ ನಾಲ್ಕು ಕಡೆಗಳಲ್ಲಿಯೂ ರತ್ನದ ಪೀಠಗಳನ್ನು ನಿರ್ಮಾಣ ಮಾಡಿದರು. 'ವಿಶ್ವನಂದಕ, ಎಂದು ಅದನ್ನು ಹೆಸರಿಸಿದರು. ಮುಗಿಲಿನಿಂದ ಹೂಗಳ ರಾಶಿಯನ್ನೇ ದೇವತೆಗಳು ಸುರಿಸಿದರು ಆ ಕಂಬದ ಮೇಲೆ. ದೇವ ದುಂಧುಬಿಗಳು ಮೊಳಗಿದವು. ಈ ಸ್ತಂಭಪ್ರತಿಷ್ಠೆಯಾದ ಬಳಿಕ ಅದರ ಪಶ್ಚಿಮ ಬದಿಯಲ್ಲಿ ಸ್ತಂಭೇಶ್ವರನ ಸ್ಥಾಪನೆಯನ್ನು ಮಾಡಲಾಯಿತು. ಆ ಸ್ತಂಭೇಶ್ವರನ ಹಿಂಬದಿಯಲ್ಲಿ ಷಣ್ಮುಖನು ತನ್ನ ಶಕ್ತ್ಯಾಯುಧದ ಮುಖದಿಂದ ಒಂದು ತೀರ್ಥವನ್ನು ನಿರ್ಮಿಸಿದನು.

ಅದರಿಂದ ಪಾತಾಳಗಂಗೆ ಪ್ರಕಟವಾಯಿತು. ಮಾಘ ಶುದ್ಧ ಚತುರ್ದಶಿ ದಿನದಂದು ಆ ಪಾತಾಳಗಂಗಾ ತೀರ್ಥದಲ್ಲಿ ಸ್ನಾನಮಾಡಿ ಪಿತೃತರ್ಪಣ ಮಾಡಿದರೆ ಗಯಾ ಶ್ರಾದ್ಧದ ಪುಣ್ಯ.

ಆ ಸ್ಥಳದಲ್ಲಿ ಗಂಧ ಪುಷ್ಪಗಳಿಂದ ಸ್ತಂಭೇಶ್ವರನ ಪೂಜೆಮಾಡುವವಗೆ ವಾಜಪೇಯ ಯಜ್ಞದ ಫಲ. ಹುಣ್ಣಿಮೆ ಅಮವಾಸ್ಯಾ ದಿನಗಳಲ್ಲಿ ಮಹೀಸಾಗರ ಸಂಗಮ ಸ್ಥಳದಲ್ಲಿ ಶ್ರಾದ್ಧ ಮಾಡಿ ಸ್ತಂಭೇಶ್ವರನ ಪೂಜೆಗೈದರೆ ಅವನ ಪಾಪಗಳೆಲ್ಲವೂ ನಷ್ಟ. ಪಿತೃಗಣದವರೂ ಅವನ ಮೇಲೆ ಸಂತುಷ್ಟ. ಕೊನೆಗೆ ಅವನಿಗೆ ರುದ್ರಲೋಕದಲ್ಲಿ ಶಾಶ್ವತ ಸ್ಥಿತಿ. ಹೀಗೆ ಮಯೂರವಾಹನನಾದ ಆ ದೇವ ಸೇನಾಪತಿಯು ಮೂರು ವಿಶ್ವಕರ್ಮ ನಿರ್ಮಿತ ಲಿಂಗ, ಸ್ವಯಂ ನಿರ್ಮಿತವಾದ ಇನ್ನೊಂದು ಲಿಂಗ, ಹೀಗೆ ಒಟ್ಟು ನಾಲ್ಕು ಶಿವಲಿಂಗಗಳನ್ನು ಪ್ರತಿಷ್ಠೆ ಮಾಡಿದನು. ಅವನ ಈ ಕಾರ್ಯವನ್ನು ಮನಮೆಚ್ಚಿ ಹೊಗಳಿ ಆ ಲಿಂಗ ಚತುಷ್ಟಯವನ್ನು ಭಕ್ತಿಯಿಂದ ಪ್ರಣಮಿಸಿದರು ಎಲ್ಲ ಸುರಸಾಮಾಜಿಕರು.

ಈ ಶಿವಲಿಂಗ ಸ್ಥಾಪನೆಯ ಸಂಭ್ರಮ ಸಮಾರಾಧನೆಯನ್ನು ಕಂಡು, ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ದೇವತೆಗಳಲ್ಲಿ ಉತ್ಸಾಹ ತುಂಬಿತು. ಶಿವನ ಅಪ್ಪಣೆ ಪಡೆದು ಅವರೂ ಬೇರೊಂದು ಶಿವಲಿಂಗವನ್ನು ಸ್ಥಾಪಿಸಿದರು. ಸಿದ್ದೇಶ್ವರ ಎಂದು ಅದಕ್ಕೆ ಹೆಸರು ಬಂದಿತು. ಎಲ್ಲ ದೇವತೆಗಳೂ ಕೂಡಿ ಒಂದು ಉತ್ತಮವಾದ ಸರೋವರವನ್ನು ಆ ಸಿದ್ದೇಶ್ವರ ದೇವಸ್ಥಾನದ ಬಳಿಯಲ್ಲಿಯೇ ಅಗೆದು ಎಲ್ಲ ತೀರ್ಥಗಳ ನೀರನ್ನು ಅದರಲ್ಲಿ ತುಂಬಿಸಿದರು. ಇದೇ ಸಮಯದಲ್ಲಿ ಶೇಷನಾಗನ ಪುತ್ರ ಕುಮುದನು ಅಲ್ಲಿಗೆ ಪಾತಾಳದಿಂದ ಎದ್ದು ಬಂದನು. ಮತ್ತು ಅಲ್ಲಿರುವ ಶೇಷನೇ ಮೊದಲಾದ ಪನ್ನಗ ಪತಿಗಳ ಎದುರು ಹೇಳಿದನು - ''ತಾರಕಾಸುರನೊಂದಿಗೆ ನಡೆದ ದಾರುಣ ತುಮುಲದಲ್ಲಿ ಪ್ರಲಂಬ ಎಂಬ ದಾನವನು ಓಡಿ ಹೋದ ಪಾತಾಳಕ್ಕೆ. ಸ್ಕಂದಭಯದ ಖಡ್ಗ ತೂಗುತ್ತಿತ್ತು ಅವನ ತಲೆಯ ಮೇಲೆ. ಈಗ ಅವನು ಪಾತಾಳದಿಂದ ಎದ್ದು ಈ ಮಧ್ಯಲೋಕಕ್ಕೆ ಬರುವವನಿದ್ದಾನೆ. ಇಲ್ಲಿಯ, ಜನರ, ಪುತ್ರ, ಪತ್ನಿ, ಕನ್ಯಾ, ಮನೆ, ಮಾರು ಎಲ್ಲವನ್ನೂ ವಿಧ್ವಂಸಗೊಳಿಸಲು ಸಂಕಲ್ಪ ಮಾಡಿದ್ದಾನೆ.''

ದೇವತೆಗಳ ಈ ದೀನ ವಾಣಿಯನ್ನು ಕೇಳಿ ದೇದೀಪ್ಯಮಾನನಾಗಿ ಎದ್ದು ನಿಂತುಕೊಂಡ ಆ ಅಗ್ನಿಕುಮಾರ. ''ಪ್ರಲಂಬ ನಾಮಕ ದೈತ್ಯವನ್ನು ನಾನು ಬೇಗ ವಧಿಸುವೆನು'' ಎಂಬ ಪ್ರತಿಜ್ಞೆಯನ್ನು ಮಾಡಿದನು. ಅದರಂತೆ ತನ್ನ ಕೈಯಲ್ಲಿಯ ಶಕ್ತ್ಯಾಯುಧವನ್ನು ಅಭಿಮಂತ್ರಿಸಿ ''ಪ್ರಲಂಬ ನಾಮಕ ದೈತ್ಯನು ಇದರಿಂದ ಮರಣಸಲ್ಪಡಲಿ'' ಎಂದು ಸಂಕಲ್ಪಿಸಿ ಪಾತಾಳಲೋಕದೆಡೆಗೆ ಬಿಟ್ಟನು. ಸ್ಕಂದನ ಕೈಯಿಂದ ಬಿಡಲ್ಪಟ್ಟ ಆ ಶಕ್ತ್ಯಾಯುಧವು ಪೃಥ್ವಿಯ ಉದರವನ್ನು ಬಗೆದು ಸಮಗ್ರ ಇಳಾತಳವನ್ನೇ ಸೀಳಿ ಹಾಕುತ್ತ ಮಹೀ ಭೇದನ ಮಾಡಿ ಪಾತಾಳಕ್ಕೆ ನುಗ್ಗಿತು. ಆಗ ಪ್ರಲಂಬಾಸುರನ ದೊಡ್ಡ ದರಬಾರ ನಡೆದಿತ್ತು. ಅವನ ರಾಜಾಂಗಣದಲ್ಲಿ, ಸ್ಕಂದನಿಂದ ಬಿರುಸಿನಿಂದ ಎಸೆಯಲ್ಪಟ್ಟ ಆ ಶಕ್ತ್ಯಾಯುಧವು ನೇರವಾಗಿ

ಪ್ರಲಂಬಾಸುರನಿದ್ದಲ್ಲಿಗೆ ಬಂದಿತು. ತನ್ನ ದಾರುಣವಾದ ಜ್ವಾಲಾಮಾಲೆಗಳಿಂದ ಆ ಪ್ರಲಂಬಾಸುರನನ್ನು ಸುಟ್ಟು ಬೂದಿ ಮಾಡಿತು. ಮತ್ತೆ ಪುನಃ ನೀರಿನ ತೆರೆಗಳ ಗುಂಟ ಮರಳಿ ಬಂದಿತು.

ಕುಮಾರನ ಶಕ್ತ್ಯಾಯುಧವು ಪಾತಾಳಕ್ಕೆ ಧಾವಿಸುವಾಗ ಉಂಟಾದ ಸುರಂಗಮಾರ್ಗದಿಂದಲೇ ಪಾತಾಳಗಂಗೆಯು ಮೇಲೆಕ್ಕೆ ಹರಿದು ಬಂದು ಸಿದ್ಧರೂಪ ಎಂದು ಸ್ಕಂದನು ಇಟ್ಟ ಹೆಸರಿನಿಂದ ಪ್ರಸಿದ್ಧವಾಯಿತು. ಕೃಷ್ಣ ಪಕ್ಷ ಅಷ್ಟಮಿ ಮತ್ತು ಚತುರ್ದಶಿ ದಿನಗಳಂದು ಈ ಸಿದ್ಧ ರೂಪದಲ್ಲಿ ಸ್ನಾನಮಾಡಿ ಸಿದ್ದೇಶ್ವರನ ಪೂಜೆಮಾಡಿದವರ ಜನ್ಮ ಜನ್ಮಾಂತರದ ಪಾಪಗಳು ನಶಿಸಿ ಹೋಗುವವು. ಅದೇ ತೀರ್ಥದಲ್ಲಿ ಅಕ್ಷಯವಟವೂ ಇರುತ್ತದೆ. ಪರಮ ಸಂತುಷ್ಟನಾದ ಭಗವಾನ್ ಶಂಕರನು ''ಈ ವಟವೃಕ್ಷವು ಪ್ರಯಾಗ ಕ್ಷೇತ್ರದಲ್ಲಿ ಇರುವ ಅಕ್ಷಯ ವಟ ವೃಕ್ಷಕ್ಕೆ ಸಮಾನವಾಗಿದೆ ಇಲ್ಲಿ ಸ್ನಾನ, ಶ್ರಾದ್ಧ, ಪಿಂಡಪ್ರದಾನಗಳಿಂದ ಪಿತೃಗಳಿಗೆ ಪೂರ್ಣ ತೃಪ್ತಿ ಮಾಡಿದವನಿಗೆ ಅಕ್ಷಯ ಫಲ ಪ್ರಾಪ್ತಿ'' ಎಂದು ಹೇಳಿದ್ದಾನೆ.

ಅನಂತರ ಬ್ರಹ್ಮಾದಿ ದೇವತೆಗಳು ಷಣ್ಮುಖನನ್ನು ಮುಂದೆ ಮಾಡಿಕೊಂಡು ಮಹಾಸತಿ ಸಿದ್ಧಾಂಬಿಕಾದೇವಿಯನ್ನು - ''ದೇವಿ ನೀನು ಇಲ್ಲಿಯೇ ನೆಲಿಸಬೇಕು. ದುಷ್ಟ ಜನರು ಈ ಕ್ಷೇತ್ರವನ್ನು ಅಶುಚಿಗೊಳಿಸಲು ಯತ್ನಿಸಿದರೆ, ಅವರನ್ನು ಶಿಕ್ಷಿಸಿ ಈ ಕ್ಷೇತ್ರವನ್ನು ರಕ್ಷಿಸು'' ಎಂದು ಬೇಡಿಕೊಂಡರು. ದೇವತೆಗಳಿಗೆ ಸಿದ್ಧಾಂಬಿಕೆಯು ಸಂತಸದಿಂದ ಕೊಟ್ಟ ಉತ್ತರ 'ತಥಾಸ್ತು'. ತನ್ನ ಮಾತನ್ನು ನಡೆಸಿದ್ದಕ್ಕಾಗಿ ದೇವತೆಗಳಿಗೆ ಅತೀವ ಹಿಗ್ಗು. ಮಹರ್ಷಿಗಳಿಗೆಲ್ಲ ಹರ್ಷೋತ್ಕರ್ಷ. ಅವರೆಲ್ಲರೂ ಕೂಡಿ ಬಳಿಕ ಸಿದ್ದೇಶ್ವರ ಲಿಂಗದ ಉತ್ತರ ಭಾಗದಲ್ಲಿ ಜೀವಂತ ಮೂರ್ತಿಯಾದ ಸಿದ್ಧಾಂಬಿಕೆಯನ್ನು ಅಲ್ಲಿ ಸ್ಥಾಪನೆ ಮಾಡಿದರು. ಆ ಸಿದ್ದೇಶ್ವರ ಕ್ಷೇತ್ರದ ರಕ್ಷಣೆಗಾಗಿ ಎಲ್ಲ ದೇವತೆಗಳೂ ಕೂಡಿ ಅರವತ್ನಾಲ್ಕು ಶಿವಲಿಂಗಗಳನ್ನು ತಮ್ಮ ಈ ಕಾರ್ಯಸಿದ್ಧಿಗಾಗಿ ಸ್ಥಾಪಿಸಿದರು. ಆ ಬಳಿಕ ಆ ಸುರಸಾಮಾಜಿಕರು ತಮ್ಮ ಎಲ್ಲಕಾರ್ಯಗಳಲ್ಲಿಯೂ ಸಿದ್ಧಿ ಸಮೃದ್ಧಿಗಾಗಿ ಸಿದ್ಧಿವಿನಾಯಕನೆಂದು ಹೆಸರಿಟ್ಟು ಗಣೇಶನ ವಿಗ್ರಹದ ಪ್ರತಿಷ್ಠಾಪನೆಯನ್ನೂ ಮಾಡಿದರು. ಕಾರ್ಯಾರಂಭದಲ್ಲಿ ತನ್ನ ಪೂಜೆ ಮಾಡುವವರ ಮೇಲೆ ಈ ವಿಘ್ನರಾಜನು ಅನುಗ್ರಹದ ಅಮೃತಧಾರೆಯನ್ನೇ ಎರೆಯುತ್ತಾನೆ ಮತ್ತು ಸಿದ್ಧಿ ಪ್ರದಾನವನ್ನೂ ಮಾಡುತ್ತಾನೆ. ಈ ತೀರ್ಥದ ದಂಡೆಯಲ್ಲಿ ಇದ್ದ ಸಿದ್ದೇಶ್ವರ, ಸಿದ್ಧವಟ, ಸಿದ್ಧಾಂಬಿಕಾ, ಸಿದ್ಧಿವಿನಾಯಕ, ಸಿದ್ದೇಶ, ಸಿದ್ಧಸರ, ಮತ್ತು ಸಿದ್ಧಿ ರೂಪ - ಹೀಗೆ ಏಳು ಈ ಪುಣ್ಯಕ್ಷೇತ್ರಗಳು ಸಿದ್ಧ ಸಪ್ತಕ ಎಂದು ಜಗತ್ತಿನಲ್ಲೆಲ್ಲ ಪ್ರಸಿದ್ಧವಾಗಿವೆ. ಇದಕ್ಕೆ ಮಾರುತ ಸ್ಕಂದವೆಂದು ಅನ್ನುವರು. ಅರ್ಜುನನೇ, ಈ ರೀತಿಯಾಗಿ ನಾನು ನಿನಗೆ ಮಹೀಸಾಗರ ಸಂಗಮ ತೀರ್ಥದ ಪಂಚಲಿಂಗ ತೀರ್ಥಕ್ಷೇತ್ರ ವೃತ್ತಾಂತವನ್ನು ಹೇಳಿದ್ದಾಯಿತು.

ಕುಂತೀಪುತ್ರ, ನಾನೀಗ ನಿನಗೆ ಸೃಷ್ಟಿಕ್ರಮವನ್ನು ಭೂಗೋಲ ವರ್ಣನೆಯನ್ನು ತಿಳಿಸುತ್ತೇನೆ. ಚಿತ್ತವಿಟ್ಟು ಆಲಿಸು. ಸೃಷ್ಟಿಯ ಮೊದಲು ಎಲ್ಲವೂ ಅವ್ಯಕ್ತವೂ, ಅಂಧಕಾರಮಯವೂ ಆಗಿದ್ದಿತು. ಈ ಅವ್ಯಾಕೃತ ಅವಸ್ಥೆಯಲ್ಲಿ ಜನ್ಮರಹಿತವಾದ ಪ್ರಕೃತಿ

ಮತ್ತು ಪುರುಷ ಇವರಿಬ್ಬರೂ ಒಬ್ಬರಿಗೊಬ್ಬರು ಕೂಡಿಕೊಂಡು ಏಕ ರೂಪರಾದರು. ತದನಂತರ ಅವರು ಭಗವತ್ಸಂಕಲ್ಪದಂತೆ ಸೃಷ್ಟಿಕಾರ್ಯಕ್ಕಾಗಿ ಉಜ್ಜುಗಿಸಿದರು. ಆ ಬಳಿಕ ತನ್ನ ಸ್ವರೂಪಭೂತ ಸ್ವಭಾವ, ಕಾಲನ ಪ್ರೇರಣೆಯಿಂದ ಪುರುಷೋತ್ತಮನ ಸೃಷ್ಟಿ ಸಂಕಲ್ಪಕ್ಕೆ ಅನುಗುಣವಾಗಿ ಪ್ರಕೃತಿಯಲ್ಲಿ ಕ್ಷೋಭೆ ಉಂಟಾಯಿತು. ಅದರಿಂದ ಮಹತ್ತತ್ವದ ಉತ್ಪತ್ತಿಯಾಯಿತು. ಮಹತ್ತತ್ವದಲ್ಲಿಯೂ ಮತ್ತೆ ಕ್ಷೋಭೆ ಉಂಟಾದ ಬಳಿಕ ಅಹಂಕಾರ ತತ್ವವು ಪ್ರಕಟವಾಯಿತು. ಆ ಅಹಂಕಾರ ತತ್ವವನ್ನು ಮುನಿಮನೀಷಿಗಳು ವೈಕಾರಿಕ, ತೈಜಸ, ತಾಮಸ - ಮೂರು ಬಗೆಯಾಗಿ ಇವೆ ಎಂದು ಹೇಳುತ್ತಾರೆ.

ತಾಮಸ ಅಹಂಕಾರದಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ತನ್ಮಾತ್ರೆಗಳು ಉದ್ಭವಿಸಿದವು. ಆ ತನ್ಮಾತ್ರೆಗಳಿಂದ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಎಂಬ ಐದು ಮಹಾಭೂತಗಳ ಉತ್ಪತ್ತಿಯಾಯಿತು. ತೈಜಸ ಅಹಂಕಾರದಿಂದ ಪಂಚ ಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು ಉತ್ಪನ್ನವಾದವು. ಈ ಇಂದ್ರಿ-ಯಾಭಿಮಾನಿ ಹತ್ತೂ ದೇವತೆಗಳೂ ಹನ್ನೊಂದನೆಯ ಇಂದ್ರಿಯವಾದ ಮನಸ್ಸೂ ಅಹಂಕಾರ ತತ್ವದಿಂದ ಉತ್ಪನ್ನವಾದವು. ವೈಕಾರಿಕ ಬುದ್ಧಿ, ಚಿತ್ತ, ಅಹಂತ್ವ ಮೂರು ಕೂಡಿ ಒಟ್ಟು ಇಪ್ಪತ್ನಾಲ್ಕು ತತ್ವಗಳು ಪೂರ್ವಕಾಲದಲ್ಲಿಯೇ ಉದಿಸಿ ಬಂದಿದ್ದವು. ಮತ್ತೆ ಭಗವಾನ್ ಸದಾಶಿವನ ದೃಷ್ಟಿ ಅವುಗಳ ಮೇಲೆ ಬಿದ್ದ ಬಳಿಕ ಅವೆಲ್ಲವೂ ಬುಲ್ ಬುಲ್ ಪಕ್ಷಿಯ ಆಕಾರದಲ್ಲಿ ಪರಿಣತವಾದವು. ಆ ಪಕ್ಷಿಯು ಒಂದು ಸುಂದರವಾದ ಮೊಟ್ಟೆಯನ್ನು ಇಟ್ಟಿತು. ಆ ಮೊಟ್ಟೆಯ ಪರಿಣಾಮವು ಮೂರು ಕೋಟಿ ಯೋಜನ ವಿಸ್ತೀರ್ಣವಿದೆ. ನಾವು ಈಗ ಬ್ರಹ್ಮಾಂಡ ಎಂದು ಕರೆಯುವದು ಆ ಬುಲ್ ಬುಲ್ ಪಕ್ಷಿಯ ಅಂಡವನ್ನೇ.

ಈ ಬ್ರಹ್ಮಾಂಡದ ಆತ್ಮ ಸ್ವರೂಪರೇ ಆಗಿದ್ದಾರೆ ಬ್ರಹ್ಮದೇವರು. ಇದರಲ್ಲಿ ಊರ್ಧ್ವ ಭಾಗ, ಮಧ್ಯಭಾಗ, ಅಧೋಭಾಗ, ಎಂದು ಮೂರು ವಿಭಾಗಗಳನ್ನು ಮಾಡಲಾಯಿತು. ಊರ್ಧ್ವ ಭಾಗವೇ ಸ್ವರ್ಗ. ಅಲ್ಲಿ ದೇವತೆಗಳ ವಾಸ, ಮಧ್ಯಭಾಗವೇ ಭೂಲೋಕ. ಇದು ಮನುಷ್ಯ ಮೊದಲಾದ ಎಲ್ಲ ಪ್ರಾಣಿಗಳ ನಿಲ್ದಾಣ. ಇದರ ಅಧೋಭಾಗಕ್ಕೆ ಪಾತಾಳ ಎಂದು ಹೆಸರು. ಅಲ್ಲಿ ಇರುವವರು ನಾಗ ಹಾಗೂ ದೈತ್ಯ ಕುಲದ ಅಸಂಖ್ಯ ಜನರು. ಈ ಮೂರು ಭಾಗಗಳನ್ನು ಮತ್ತೆ ಬ್ರಹ್ಮದೇವರು ಒಂದೊಂದರಲ್ಲಿ ಏಳು ಏಳು ವಿಭಾಗಗಳನ್ನು ಮಾಡಿದರು. ಇವುಗಳಲ್ಲಿ ಏಳು ಪಾತಾಳ. ಏಳು ಮಧ್ಯಲೋಕದ ಸಪ್ತದ್ವೀಪಗಳು, ಮೇಲಿನ ಭೂರ್ಲೋಕ, ಸ್ವರ್ಲೋಕ, ಜನೋಲೋಕ, ತಪೋಲೋಕ, ಮಹೋಲೋಕ, ಸತ್ಯಲೋಕ ಮುಂತಾಗಿ ಅಂತರಿಕ್ಷ ಲೋಕ ಹಿಡಿದು ಏಳು ಸ್ವರ್ಗಲೋಕ ರೂಪದಿಂದ ಪ್ರಸಿದ್ಧವಾಗಿರುತ್ತವೆ.

ಮೊದಲು ಮಧ್ಯಲೋಕದ ಸಪ್ತದ್ವೀಪದ ವರ್ಣನೆಯನ್ನು ಮಾಡುತ್ತೇನೆ ಕೇಳು : ಭೂಮಿಯ ನಟ್ಟ ನಡುವೆ ಜಂಬೂ ದ್ವೀಪ. ಅದರ ವಿಸ್ತಾರ ಒಂದು ಲಕ್ಷ ಯೋಜನ. ಸೂರ್ಯಮಂಡಲಕ್ಕೆ ಸಮಾನ ಅದರ ಆಕಾರ. ಸುತ್ತಲೂ ಉಪ್ಪುನೀರಿನ

ಸಮುದ್ರವು ಭೋರ್ಗರೆಯುತ್ತದೆ. ಈ ಜಂಬೂ ದ್ವೀಪ ಹಾಗೂ ಉಪ್ಪಿನ ಕಡಲುಗಳ ಆಚೆ ಶಾಕದ್ವೀಪ. ಜಂಬೂದ್ವೀಪದ ಎರಡು ಪಟ್ಟು ವಿಸ್ತಾರ. ಎರಡು ಲಕ್ಷ ಯೋಜನ ವಿಶಾಲವಾದ ಹಾಲ್ಗಡಲು ಈ ಶಾಕ ದ್ವೀಪವನ್ನು ಸುತ್ತುವರೆದು ಘೂರ್ಮಿಸುತ್ತಿದೆ. ಇದರ ಅನಂತರ ನಾಲ್ಕು ಲಕ್ಷ ಯೋಜನ ವಿಸ್ತೀರ್ಣವಾದ ಪುಷ್ಕರ ದ್ವೀಪವಿದೆ. ಅದನ್ನು ಸುತ್ತುವರೆದದ್ದು ಸೆರೆಯ ಶರಧಿ. ಅದರಾಚೆ ಕುಶದ್ವೀಪವಿದೆ. ಪುಷ್ಕರ ದ್ವೀಪದ ಎರಡು ಪಟ್ಟು ವಿಸ್ತಾರ. ಅಷ್ಟೇ ವಿಸ್ತಾರವಾದ ಮೊಸರಿನ ಸಮುದ್ರವು ಈ ಕುಶದ್ವೀಪಕ್ಕೆ ಪರಿಧಿ ಶರಧಿಯಾಗಿ ವಿಜೃಂಭಿಸುತ್ತಿದೆ. ಇದರ ಎರಡು ಪಟ್ಟು ವಿಸ್ತಾರವಾಗಿದೆ ಅದರಾಚೆಯ ಕ್ರೌಂಚ ದ್ವೀಪ. ಇದರ ಸುತ್ತು ಮುತ್ತು ಇದೇ ಪರಿಮಾಣದ ತುಪ್ಪದ ಸಾಗರ. ಇದರ ಅನಂತರ ಇರುವ ಶಾಲ್ಮಲಿ ದ್ವೀಪವು ಕ್ರೌಂಚ ದ್ವೀಪದ ಇಮ್ಮಡಿ ವಿಸ್ತಾರ ಉಳ್ಳದ್ದು. ಕಬ್ಬಿನ ರಸದ ಕಡಲಿನಿಂದ ಸುತ್ತುವರೆಯಲ್ಪಟ್ಟಿದೆ. ಇದರ ಆಚೆಗಿರುವುದೇ ಕೊನೆಯದಾದ ಪ್ಲಕ್ಷದ್ವೀಪ. ಇದರ ಸುತ್ತಮುತ್ತಲೂ ಸಿಹಿನೀರಿನ ಕಡಲು ಭೋರಿಟ್ಟು ಮೊರೆಯುತ್ತಿದೆ.

ಅರ್ಜುನಾ! ಈ ಎಲ್ಲ ಏಳು ದ್ವೀಪಗಳೂ, ಈ ದ್ವೀಪಗಳನ್ನೆಲ್ಲ ತಮ್ಮ ತಮ್ಮ ತೋಯ ತರಂಗಗಳ ತೋಳ ತೆಕ್ಕೆಯಲ್ಲಿ ತಕ್ಕೈಸುತ್ತಿರುವ ಸಪ್ತ ಸಮುದ್ರಗಳೂ ಕೂಡಿ ಒಟ್ಟು ಪೃಥ್ವೀ ಮಂಡಲದ ವಿಸ್ತಾರ ಎರಡು ಕೋಟಿ ಐವತ್ತು ಲಕ್ಷ ಸಾವಿರ ಯೋಜನವಾಗುತ್ತದೆ. ಶುಕ್ಲ ಪಕ್ಷ ಕೃಷ್ಣ ಪಕ್ಷಗಳಲ್ಲಿ ಎಲ್ಲ ಸಮುದ್ರದ ರಸವು ಐದು ನೂರು ಬೆರಳಿನ ಪ್ರಮಾಣದಷ್ಟು ವೃದ್ಧಿಯನ್ನು ತೋರಿಸುತ್ತದೆ. ಇದರ ಆಚೆ ಹತ್ತು ಕೋಟಿ ಯೋಜನ ವಿಶಾಲವಾದ ಬಂಗಾರದ ಭೂಮಿ. ಸುರಪುರದ ಆಚೆಗೆ ಕಂಕಣದಂತೆ ದುಂಡಗಾಗಿರುವ ಹತ್ತು ಸಾವಿರ ಯೋಜನದ ಬಿತ್ತರದ ಲೋಕಾಲೋಕಪರ್ವತ. ಈ ಲೋಕಾಲೋಕ ಪರ್ವತದ ಬಾಹ್ಯ ಭಾಗದ ತುಂಬ ಬರೀ ಕಗ್ಗತ್ತಲು. ಅಲ್ಲಿ ಯಾವ ಜೀವ ಜಂತುವೂ ಜೀವಿಸಲಾರವು. ಈ ಅಂಧಕಾರದಿಂದ ಆಚ್ಛನ್ನವಾದ ಪ್ರದೇಶವು ಇಪ್ಪತ್ತೈದು ಕೋಟಿ ಮೂವತ್ತು ಲಕ್ಷ ನಲವತ್ತು ಸಾವಿರ ಯೋಜನಗಳವರೆಗೆ ಹಬ್ಬಿದೆ. ಅದರ ನಂತರ ಗರ್ಭೋದಕ ಸಾಗರ. ಅದರ ವಿಸ್ತಾರ ಏಳು ಸಮುದ್ರಗಳಿಗೆ ಸಮಾನವಾಗಿದೆ. ಅದರ ಅನಂತರ ಒಂದು ಕೋಟಿ ಯೋಜನ ವಿಸ್ತಾರವಾದ ಕಟಾಹವಿದೆ. ಅದು ಬ್ರಹ್ಮಾಂಡ ಕಟಾಹದಿಂದ ಆಚ್ಛಾದಿತವಾಗಿದೆ.

ಬ್ರಹ್ಮಾಂಡದ ಮಧ್ಯದಲ್ಲಿ ಮೇರು ಪರ್ವತ. ಅದರ ಹತ್ತೂ ದಿಕ್ಕುಗಳಲ್ಲಿ ಐವತ್ತು ಕೋಟಿ ಯೋಜನ ವಿಸ್ತೀರ್ಣವಾಗಿದೆ ಬ್ರಹ್ಮಾಂಡದ ಹರವು. ಜಂಬೂ ದ್ವೀಪದ ನಟ್ಟ ನಡುವೆ ಇರುವ ಮೇರು ಪರ್ವತವು ತಳದಿಂದ ತುದಿಯವರೆಗೆ ಒಂದು ಲಕ್ಷಯೋಜನ ಎತ್ತರವಿದೆ. ಈ ಮೇರು ಪರ್ವತವು ಭೂಮಿಯ ಒಡಲಿನಲ್ಲಿ ಹದಿನಾರು ಸಾವಿರ ಯೋಜನ ಸಿಕ್ಕಿಕೊಂಡಿದೆ. ಎಂಬತ್ನಾಲ್ಕು ಸಾವಿರ ಯೋಜನ ಪೃಥ್ವಿಯ ಮೇಲೆ ಅದರ ಎತ್ತರವಿದೆ. ಮೇರು ಶಿಖರದ ವಿಸ್ತಾರ ಮೂವತ್ತೆರಡು ಸಾವಿರ ಯೋಜನ. ಈ ಮೇರು ಪರ್ವತದ ಮೂರು ಶಿಖರಗಳಲ್ಲಿ ತ್ರಿಮೂರ್ತಿಗಳ ನಿವಾಸ. ನಟ್ಟ ನಡುವಿನ ಮಧ್ಯಮ ಶಿಖರದ ಮೇಲೆ ಬ್ರಹ್ಮ ದೇವರ ಆವಾಸ. ಈಶಾನ್ಯ ಕೋನದ ಶಿಖರದ ಮೇಲೆ ಶಂಕರನ ವಸತಿ. ನೈಋತ್ಯ ಕೋನದ ಶಿಖರದ ಮೇಲೆ ವಿಷ್ಣುವಿನ ವಾಸ್ತವ್ಯ. ಬ್ರಹ್ಮನಿರುವ ಶಿಖರ

ಬಂಗಾರದ್ದು. ವಿಷ್ಣು ನೆಲಿಸಿದ ಶಿಖರ ಬೆಳ್ಳಿಯದು. ಶಂಕರ ಭಗವಂತನ ತಂಗುದಾಣವಾದ ಶಿಖರವು ಮಾತ್ರ ರತ್ನಮಯ.

ಈ ಮೇರು ಪರ್ವತದ ನಾಲ್ಕೂ ನಿಟ್ಟಿನಲ್ಲಿ ತಲೆಯೆತ್ತಿ ನಿಂತಿವೆ ನಾಲ್ಕು ವಿಷ್ಕಂಭ ಬೆಟ್ಟಗಳು. ಪೂರ್ವದಲ್ಲಿ ಮಂದರ, ದಕ್ಷಿಣದಲ್ಲಿ ಗಂಧಮಾದನ, ಪಶ್ಚಿಮದಲ್ಲಿ ಸುಪಾರ್ಶ್ವ, ಉತ್ತರದಲ್ಲಿ ಕುಮುದ, ಮಂದರಾಚಲದಲ್ಲಿಯ ಕದಂಬ ವೃಕ್ಷವು ಅತ್ಯದ್ಭುತವಾಗಿದೆ. ಅಷ್ಟು ಬೃಹತ್ಪ್ರಮಾಣದ ಮರ ಮೇದಿನೀ ತಳದಲ್ಲಿ ಎಲ್ಲಿಯೂ ಇಲ್ಲ. ಇದರಂತೆ ಗಂಧಮಾದನ ಗುಡ್ಡದ ಮೇಲೆ ನೇರಳೆ ಮರ. ಸುಪಾರ್ಶ್ವ ಶಿಖರದ ಮೇಲೆ ಅರಳೆಯ ಮರ. ಕುಮುದ ಬೆಟ್ಟದ ಮೇಲೆ ಆಲದ ಮರಗಳು ಅದ್ಭುತಾಕಾರದಲ್ಲಿ ನಿಂತಿರುತ್ತವೆ. ಇವುಗಳ ವಿಸ್ತಾರವು ಹನ್ನೊಂದು ನೂರು ಯೋಜನ. ಈ ನಾಲ್ಕು ಬೆಟ್ಟಗಳ ಮೇಲೆ ನಾಲ್ಕು ಉದ್ಯಾನವನಗಳು. ಪೂರ್ವದ ನಿಟ್ಟಿನಲ್ಲಿ ನಂದನವನ. ದಕ್ಷಿಣದಲ್ಲಿ ಚೈತ್ರರಥ. ಪಶ್ಚಿಮದಲ್ಲಿ ವೈಭ್ರಾಜ. ಉತ್ತರದಲ್ಲಿ ಸರ್ವತೋಭದ್ರ. ಈ ನಾಲ್ಕೂ ಉದ್ಯಾನವನಗಳಲ್ಲಿ ನಾಲ್ಕು ಸರೋವರಗಳು ಇರುತ್ತವೆ. ಪೂರ್ವ ದಿಕ್ಕಿನಲ್ಲಿ ಅರುಣೋದ ಸರೋವರ. ದಕ್ಷಿಣದಲ್ಲಿ ಮಾನಸ ಸರೋವರ, ಪಶ್ಚಿಮದಲ್ಲಿ ಶೀತೋದ ಸರೋವರ, ಉತ್ತರ ದಿಕ್ಕಿನಲ್ಲಿ ಮಹಾಹ್ರದ ಹೆಸರಿನ ಸರೋವರ. ಈ ವಿಷ್ಕಂಭ ಪರ್ವತಗಳು ಐವತ್ತು ಐವತ್ತು ಸಾವಿರ ಯೋಜನ ಎತ್ತರ. ಒಂದೊಂದು ಸಾವಿರ ಯೋಜನ ಅಗಲ ಇರುತ್ತವೆ. ಇವಲ್ಲದೆ, ಅಲ್ಲಿ ಮೇರುಗಿರಿಯ ದಕ್ಷಿಣ ದಿಕ್ಕಿನಲ್ಲಿ ನಿಷಧ, ಹೇಮಕೂಟ, ಹಿಮವಂತ, ಎಂಬ ಒಂದು ಲಕ್ಷ ಯೋಜನ ಎತ್ತರ ಎರಡು ಸಾವಿರ ಯೋಜನ ಅಗಲವಾದ ಮರ್ಯಾದಾ ಪರ್ವತಗಳು. ಅರ್ಥಾತ್ ಗಡಿ ಸೀಮೆಯ ಗುಡ್ಡಗಳು ಇರುತ್ತವೆ. ಮೇರುವಿನ ಉತ್ತರ ನಿಟ್ಟಿನಲ್ಲಿ ನೀಲ, ಶ್ವೇತ, ಶೃಂಗವಂತ, ಪೂರ್ವದಲ್ಲಿ ಮಾಲ್ಯವಂತ, ಪಶ್ಚಿಮದಲ್ಲಿ ಗಂಧಮಾದನ ಎಂಬ ಸೀಮೆಯ ಶೈಲಗಳು ಇರುತ್ತವೆ, ಗಂಧಮಾದನ ಬೆಟ್ಟದ ಮೇಲೆ ಇರುವ ನೇರಳೆಯ ಮರಕ್ಕೆ ಆನೆಯಾಕಾರದ ಗಡುತರ ಹಣ್ಣುಗಳು ಆಗುತ್ತವೆ. ಅತ್ಯದ್ಭುತವಾದ ಆ ಜಂಬೂ ವೃಕ್ಷದಿಂದಲೇ ಆ ದ್ವೀಪಕ್ಕೆ ಜಂಬೂ ದ್ವೀಪ ಎಂಬ ಹೆಸರು ಬಂದಿದೆ.

ಪುರಾತನ ಕಾಲದಲ್ಲಿ ಸ್ವಾಯಂಭುವ ಹೆಸರಿನಿಂದ ಪ್ರಸಿದ್ಧನಾಗಿದ್ದ ಓರ್ವ ಮನು ಮಹರ್ಷಿ. ಅವನು ಪ್ರಜಾಪತಿಯೂ ಅಹುದು. ಪ್ರಿಯವ್ರತ, ಉತ್ತಾನಪಾದ, ಎಂಬ ಜೋಡು, ಗಂಡು ಮಕ್ಕಳು ಆ ರಾಜರ್ಷಿಗೆ. ಉತ್ತಾನಪಾದನ ವರಕುವರನೇ ಬಾಲ ಭಕ್ತ ಧ್ರುವ. ಆ ಮಗು ಭಕ್ತಿ ಭಾವದಿಂದ ಆರಾಧಿಸಿತು ಭಗವಾನ್ ಶ್ರೀ ಹರಿಯನ್ನು. ಅದರಿಂದ ಪರಿತುಷ್ಟನಾದ ಪರಮಾತ್ಮ ಪ್ರದಾನ ಮಾಡಿದ ಧ್ರುವ ಪದವನ್ನು ಆ ಬಾಲಭಕ್ತನಿಗೆ.

ಸ್ವಾಯಂಭುವ ಮನುವಿನ ಎರಡನೆಯ ಮಗ ಪ್ರಿಯವ್ರತ. ಅವನಿಗೆ ಹತ್ತು ಜನ ಮಕ್ಕಳು. ಅವರಲ್ಲಿ ಮೂವರು ಹುಟ್ಟಿನಿಂದಲೇ ವೀತರಾಗ ಪೂತಾತ್ಮರು. ಮನೆ

ಮಾರು ತೊರೆದರು. ಕಾಡಿನಲ್ಲಿ ತಪಿಸಿದರು. ಸನ್ಯಾಸ ದೀಕ್ಷೆಯಿಂದ ಭಗವದಾರಾಧನೆಯನ್ನು ಮಾಡಿ ನೇರವಾಗಿ ಮುಕ್ತಿ ಮಂದಿರವನ್ನು ಪ್ರವೇಶಿಸಿದರು. ಪ್ರಿಯವ್ರತನಿಗೆ ಈಗ ಉಳಿದವರು ಏಳು ಜನ ಚಿರಂಜೀವರು.

ತನ್ನ ಆಡಳಿತದಲ್ಲಿರುವ ಒಂದೊಂದು ದ್ವೀಪಕಲ್ಪಕ್ಕೆ ಅಧಿಕಾರಿಗಳನ್ನಾಗಿ ಮಾಡಿದ ಒಬ್ಬೊಬ್ಬ ಮಗನನ್ನು, ಪ್ರಿಯವ್ರತನ ಸಪ್ತಪುತ್ರರು ಸಪ್ತದ್ವೀಪಗಳಿಗೆ ಒಡೆಯರು. ಹಿರಿಯ ಮಗ ಅಗ್ನೀಧ್ರ. ಅವನಿಗೆ ಜಂಬೂ ದ್ವೀಪದಲ್ಲಿ ಸಾರ್ವಭೌಮ ಪಟ್ಟಾಭಿಷೇಕ. ಅವನಿಗೆ ಒಂಭತ್ತು ಜನ ಪುತ್ರರು. ಅವರೆಲ್ಲರೂ ನವಖಂಡ , ಭೂಖಂಡಕ್ಕೆ ಅಧೀಶ್ವರರು. ಇಂದು ಆ ಒಂಭತ್ತು ಖಂಡಗಳಿಗೆಲ್ಲ ಅಗ್ನೀಧ್ರ ರಾಜರ್ಷಿಯ ನವ ಪುತ್ರರ ಹೆಸರುಗಳೇ ಬಿದ್ದಿರುತ್ತವೆ. ಈ ಒಂಭತ್ತು ಭೂಖಂಡಗಳ ವಿಸ್ತಾರವು ಒಂದೊಂದು ಸಾವಿರ ಯೋಜನೆ.

ಮೇರುಗಿರಿಯ ನಾಲ್ಕು ನಿಟ್ಟಿನಲ್ಲಿ ಗಂಧಮಾಧನ ಮತ್ತು ಮಾಲ್ಯವಂತ ಬೆಟ್ಟಗಳ ನಡುವೆ ಥಳಥಳಿಸುವ ಬಂಗಾರದ ಭೂಭಾಗವೇ ಇಲಾವೃತ ವರ್ಷ ಎಂದು ಕರೆಯಲ್ಪಡುತ್ತದೆ. ಮಾಲ್ಯವಂತ ಪರ್ವತದಿಂದ ಸಾಗರದವರೆಗೆ ಚಾಚಿದ ಭೂಖಂಡವೇ ಭದ್ರಾಶ್ವ ವರ್ಷ. ಗಂಧಮಾದನ ಗಿರಿಯಿಂದ ಸಮುದ್ರದ ಅಂಚಿನವರೆಗೆ ಮೈ ಚಾಚಿದ ಭೂಭಾಗವೇ ಕೇತುಮಾಲ ವರ್ಷ. ಶೃಂಗವಂತ ಪರ್ವತದಿಂದ ಸಮುದ್ರದವರೆಗೆ ಹರವುಗೊಂಡ ಭೂಮಂಡಲವೆ ಕುರುವರ್ಷ. ಶೃಂಗವಂತ ಮತ್ತು ಶ್ವೇತ ಗಿರಿಗಳ ನಡುವೆ ಪರ್ವತಗಳ ನಟ್ಟ ನಡುವಿನ ಭಾಗವು ಹಿರಣ್ಮಯ ವರ್ಷ. ನೀಲಾದ್ರಿ ಶ್ವೇತಾದ್ರಿಗಳ ನಡುವೆ ತಲೆಯೆತ್ತಿ ನಿಂತ ರಮಣೀಯ ಭಾಗವೇ ರಮ್ಯಕ ವರ್ಷ. ನಿಷಧ ಮತ್ತು ಹೇಮಕೂಟ ಶೈಲಗಳ ಮಧ್ಯದಲ್ಲಿ ತಲೆಯೆತ್ತಿರುವದೇ ಹರಿವರ್ಷ. ಹಿಮವಂತ ಹಾಗೂ ಹೇಮಕೂಟ ಬೆಟ್ಟಗಳ ನಟ್ಟ ನಡುವಿನ ನೆಲವೆಲ್ಲ ಕಿಂಪುರುಷ ವರ್ಷ.

ಹಿಮಾಲಯದಿಂದ ಆರಂಭಿಸಿ ಸಮುದ್ರದ ದಂಡೆಯವರೆಗೆ ಹರಡಿಕೊಂಡ ಭೂಭಾಗಕ್ಕೆ ನಾಭಿಖಂಡ ಎನ್ನುವರು. ಈ ನಾಭಿ ರಾಜನ ಮಗ ಯೋಗೀಶ್ವರನಾದ ವೃಷಭ. ನಾಭಿಯ ಚೊಚ್ಚಿಲು ಗಂಡು ಮಗು ಭರತ. ಈ ಭರತನಿಂದಲೇ ನಮ್ಮ ದೇಶಕ್ಕೆ ಭಾರತ ವರ್ಷ ಎಂಬ ಹೆಸರು ಬಂದಿದೆ. ಅರ್ಜುನ, ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ವಿಧವಾದ ಪುರುಷಾರ್ಥಗಳ ಸಾಧನಮಾಡಿಕೊಳ್ಳಬೇಕಾದರೆ, ಈ ಭರತ ದೇಶದಲ್ಲಿಯೇ ಹುಟ್ಟಬೇಕು. ಇದರ ಹೊರತು ಉಳಿದ ದೇಶಗಳೆಲ್ಲವೂ ಭೋಗ ಭೂಮಿಗಳು. ಈ ಭರತವರ್ಷ ಒಂದೇ ಕರ್ಮ ಭೂಮಿ. ಸಾಧನ ಕ್ಷೇತ್ರ. ಸಿದ್ಧಿ ಕ್ಷೇತ್ರ, ಶಾಕ ದ್ವೀಪದಲ್ಲಿ ಒಂದು ಶಾಕ ವೃಕ್ಷ ಇದೆ. ಅದರ ಅಗಲ ಸಾವಿರ ಯೋಜನ. ಆ ಹೆಮ್ಮರದಿಂದಲೇ ಆ ದ್ವೀಪಖಂಡಕ್ಕೆ ಶಾಕ ದ್ವೀಪ ಎಂದು ಹೆಸರು. ಪ್ರಿಯವ್ರತನ ಮಗನಾದ ಮೇಧಾತಿಥಿಯೇ ಈ ದ್ವೀಪದ ಅಧಿಪತಿ. ಆ ಮೇಧಾತಿಥಿ ಮಹಾರಾಜನಿಗೆ ಪುರೋಜವ, ಮನೋಜವ, ಪವಮಾನ, ಧೂಮ್ರಾನೀಕ, ಚಿತ್ರರೇಫ, ಬಹುರೂಪ, ವಿಶ್ವಧಾರ ಎಂದು ಏಳು ಜನ ಸತ್ಪುತ್ರರು. ಅವರು ಆಳುವ ಭೂಭಾಗಗಳೆಲ್ಲ ಆ ಮನುಪುತ್ರರ ಹೆಸರಿನಿಂದಲೇ ಪ್ರಸಿದ್ಧ.

ಶಾಕ ದ್ವೀಪದಲ್ಲಿ ವ್ರತಾವ್ರತ, ಸತ್ಯವ್ರತ, ದಾನವ್ರತ, ಅನುವ್ರತ ಎಂಬ ನಾಲ್ಕು ಜಾತಿಯ ಜನರು ಇರುತ್ತಾರೆ. ಈ ಶಾಕದ್ವೀಪದ ಜನರೆಲ್ಲರೂ ವಾಯುದೇವರ ಉಪಾಸಕರು. ಈ ವಾಯುದೇವರು ಮಾನವರ ಪ್ರಾಣಾದಿ ವೃತ್ತಿಗಳ ಮುಖಾಂತರ ಎಲ್ಲ ಪ್ರಾಣಿಗಳ ಒಳಗೆ ಪ್ರವೇಶ ಮಾಡಿ ಅವರೆಲ್ಲರ ಪಾಲನ ಪೋಷಣ ಮಾಡುತ್ತಾರೆ. ಈಚರಾಚರ ಪ್ರಪಂಚವೆಲ್ಲವೂ ಆ ವಾಯುದೇವರ ಅಧೀನ. ಎಲ್ಲ ಪ್ರಾಣಿಗಳ ಅಂತರ್ಯಾಮಿಯಾದ ಪ್ರಾಣದೇವರು ನಮ್ಮೆಲ್ಲರನ್ನು ರಕ್ಷಿಸಲಿ. ಪ್ರಿಯವ್ರತ ಮಹಾರಾಜನ ಹಿರಣ್ಯರೋಮ ಎಂಬ ಹೆಸರಿನ ಗಂಡು ಮಗನು ಕುಶದ್ವೀಪವನ್ನು ಆಳುವ ಸಾರ್ವಭೌಮ. ಸಾವಿರ ಯೋಜನ ವಿಸ್ತೀರ್ಣವಾದ ಅಲ್ಲಿಯ ಕುಶವೃಕ್ಷದಿಂದ ಆ ದ್ವೀಪಕ್ಕೆ ಕುಶದ್ವೀಪ ಎಂಬ ಹೆಸರು ಬಂದಿತು.

ಅಲ್ಲಿಯ ಚಕ್ರವರ್ತಿ ಹಿರಣ್ಯರೋಮನಿಗೆ 'ವಸು' ವಸುದಾನ, ದೃಢರುಚಿ, ನಾಭಿಗುಪ್ತ, ಸ್ತುತವ್ರತ, ವಿವಿಕ್ತ ಮತ್ತು ವಾಮದೇವ ಎಂದು ಏಳು ಮಕ್ಕಳು. ಇದೇ ಹೆಸರಿನ ಅಲ್ಲಿಯ ಏಳು ದೇಶಗಳನ್ನು ಆಳುತ್ತಿದ್ದಾರೆ. ಅಲ್ಲಿ ಕುಶಲ, ಕೋವಿದ, ಅಭಿಯುಕ್ತ, ಕುಲಕ ಎಂದು ನಾಲ್ಕು ಜಾತಿಯ ಜನರು ಇರುವರು. ಅವರೆಲ್ಲರೂ ಅಗ್ನಿಯ ಉಪಾಸಕರು. ಅವರು ಅಗ್ನಿಯನ್ನು ಪ್ರತಿ ದಿನ ಹೀಗೆ ಪ್ರಾರ್ಥಿಸುವರು :-

**''ಅಗ್ನಿ ದೇವನೆ !** ನೀನು ಈ ಪ್ರಪಂಚದಲ್ಲಿ ಹುಟ್ಟಿದವರೆಲ್ಲರನ್ನೂ ಚೆನ್ನಾಗಿ ಬಲ್ಲೆ. ಅದಕ್ಕಾಗಿಯೇ ನಿನಗೆ ಹೆಸರು 'ತೇಜೋದೇವ ' ಎಂದು. ಪರಬ್ರಹ್ಮನಾದ ಪರಮಾತ್ಮನಿಗಾಗಿ ದೀಕ್ಷಿತರು ನೀಡಿದ ಹವಿಸ್ಸನ್ನು ಆ ಭಗವಂತನಿಗೆ ಮುಟ್ಟಿಸುವ ಮಾಧ್ಯಮ ನೀನೆ. ಎಲ್ಲ ದೇವತೆಗಳೂ ಆ ಪರಮಾತ್ಮನ ಅಂಶಭೂತರೇ. ನೀನು ಯಜ್ಞಗಳ ಮುಖಾಂತರ ಎಲ್ಲ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸಿ ಯಜ್ಞ ಪುರುಷನಾದ ಆ ಭಗವಂತನನ್ನೂ ದೇವತಾ ದ್ವಾರದಿಂದ ತೃಪ್ತಿಪಡಿಸುವೆ. ಕ್ರೌಂಚ ದ್ವೀಪದಲ್ಲಿ ಕ್ರೌಂಚ ಎಂಬ ಪರ್ವತವು ಹತ್ತು ಸಾವಿರ ಯೋಜನ ವಿಸ್ತಾರ ಉಳ್ಳದ್ದಾಗಿದೆ. ಈ ಪರ್ವತವನ್ನು ಪಾರ್ವತೀ ಪುತ್ರನಾದ ಸ್ಕಂದನು ಸೀಳಿ ಹಾಕಿದನು. ಆ ಪರ್ವತದಿಂದಲೇ ಕ್ರೌಂಚ ದ್ವೀಪ ಎಂಬ ಹೆಸರು ಬಂದಿತು ಆ ಭೂಖಂಡಕ್ಕೆ.

ಅಲ್ಲಿ ಪ್ರಿಯವ್ರತನ ಪುತ್ರನಾದ ಧೃತಪೃಷ್ಠನ ಸ್ವಾಮಿತ್ವ, ಅವನಿಗೆ ಏಳು ಮಕ್ಕಳು 'ಆಮ, ಮಧುಹರ, ಮೇಘಪೃಷ್ಠ, ಸುಧಾಮಾ, ಭ್ರಾಜಿಷ್ಣು, ಲೋಹಿತಾಶ್ವ, ವನಸ್ಪತಿ ಎಂದು. ಇವರು ಅಧಿಪತಿ ಆಗಿ ಉಳ್ಳ ಏಳು ದೇಶವಿಭಾಗಗಳು ಉಂಟು ಆ ಕ್ರೌಂಚದ್ವೀಪದಲ್ಲಿ. ಅಲ್ಲಿ ಬಾಳುವ ಜನರಲ್ಲಿ ಪುರುಷ, ವೃಷಭ, ದ್ರವಿಣ, ದೇವಕ ಎಂದು ನಾಕು ಜಾತಿಗಳು. ಅಲ್ಲಿಯ ಜನ ಜಲರೂಪಿ ಜನಾರ್ದನನ ಉಪಾಸಕರು.- ''ಎಲೈ ಜಲವೇ ! ನೀನು ಪರಮರೂಪನಾದ ಪರಮಾತ್ಮನ ಶಕ್ತಿ ರೂಪವಾಗಿರುವೆ. ನೀನು ಆ ಜಗದೀಶನ ರೇತೋರೂಪನಾಗಿ ಭೂಃ ! ಭುವಃ ಸ್ವಃ ಎಂಬ ಮೂರು ಲೋಕಗಳನ್ನು ಪವಿತ್ರ ಮಾಡುವೆ. ನಿನ್ನ ಸ್ವಭಾವದಿಂದಲೇ ನೀನು ಪಾಪನಾಶಕ. ನಾವು ನಿನ್ನ ಸ್ಪರ್ಶ ಮಾಡುತ್ತೇವೆ. ನೀನು ನಮ್ಮನ್ನು ಪವಿತ್ರಗೊಳಿಸು.'' ಎಂದು ಜಲರೂಪಿ ಜನಾರ್ದನನನ್ನು ಸ್ತುತಿಸುತ್ತ ಆರಾಧಿಸುವರು.

ಶಾಲ್ಮಲೀ ದ್ವೀಪದಲ್ಲಿ ಶಾಲ್ಮಲಿ ಎಂಬ ಹೆಸರಿನ ಹೆಮ್ಮರವಿದೆ. ಆ ಗಿಡದ ಹೆಸರೇ ಈ ದ್ವೀಪಕ್ಕೆ ಬಂದಿದೆ. ಶ್ರೀ ಹರಿಯ ವಾಹನನಾದ ಗರುಡನು ಈ ಮರದ ಟೊಂಗೆಯಲ್ಲಿ ತಂಗುತ್ತಾನೆ. ಒಂದು ಸಾವಿರ ಯೋಜನ ವಿಸ್ತಾರವಿದೆ ಈ ವೃಕ್ಷ. ಪ್ರಿಯವ್ರತನ ಮಗನಾದ ಯಜ್ಞಬಾಹುವಿನ ಆಧಿಪತ್ಯ ಈ ದ್ವೀಪಖಂಡದಲ್ಲಿ. ಸುರೋಚನ, ಸೌಮನಸ್ಯ, ಪ್ರಾಮಾಣಿಕ, ದೇವಬರ್ಹಿ, ಪಾರಿಭದ್ರ, ಆಪ್ಯಾಯನ, ಅವಿಜ್ಞಾತ, ಎಂಬ ಹೆಸರಿನ ಏಳು ವರ ಪುತ್ರರು ಅದೇ ಹೆಸರಿನ ಅಲ್ಲಿಯ ಏಳು ದೇಶಗಳನ್ನು ಆಳುತ್ತಾರೆ. ಶ್ರುತಧರ, ವೀರ್ಯಧರ, ವಸುಂಧರ, ಈಶಂಧರ ಎಂಬ ನಾಲ್ಕು ಜಾತಿಯ ಜನ ಅಲ್ಲಿ ಭಗವಾನ್ ಸೋಮನ ಉಪಾಸಕರಾಗಿದ್ದಾರೆ. ತಮ್ಮ ಉಪಾಸ್ಯ ದೇವತೆಯಾದ ಚಂದ್ರನನ್ನು ಅವರು ಈ ರೀತಿಯಾಗಿ ಸ್ತುತಿಸಿ ಉಪಾಸಿಸುತ್ತಾರೆ. ''ಶುಕ್ಲ ಪಕ್ಷ ಮತ್ತು ಕೃಷ್ಣ ಪಕ್ಷಗಳಲ್ಲಿ ತನ್ನ ಕಿರಣಗಳಿಂದ ದೇವತೆಗಳಿಗೂ ಅನ್ನವನ್ನು ನೀಡುವ ಭಗವಾನ್ ಚಂದ್ರನು ನಮ್ಮೆಲ್ಲರಿಗೂ ರಾಜನಾಗಿ ಇರಲಿ.'' ಪ್ಲಕ್ಷ ದ್ವೀಪದಲ್ಲಿ ಗೋಮೇಧ ಎಂಬ ಹೆಸರಿನ ದೊಡ್ಡದಾದ ಒಂದು ಅತ್ತಿ ಮರವು ಇರುತ್ತದೆ. ಇದರ ಸೌರಭ ಸೂಸುವ ನೆರಳಿನಿಂದ ಆ ದ್ವೀಪವಾಸಿಗಳಿಗೆ ಶಾಂತಿ ಸಂತಸಗಳು ದೊರಕುವುದಲ್ಲದೇ ಬುದ್ಧಿಯೂ ಅಭಿವೃದ್ಧಿಯಾಗುವುದು. ಈ ಗೋಮೇಧ ಎಂಬ ಹೆಸರಿನ ಈ ವೃಕ್ಷವೇ ಈ ದ್ವೀಪಕ್ಕೆ ಗೋಮೇಧ ಎಂಬ ಹೆಸರು ಬರಲು ಕಾರಣ. ಅಲ್ಲಿ ಪ್ರಿಯವ್ರತ ಪುತ್ರನಾದ ಇಧ್ಮ ಜಿಹ್ವ ಎಂಬ ರಾಜನ ಆಳಿಕೆ. ಅವನಿಗೆ ಶಿವ, ಯವಸ, ಸುಭದ್ರ, ಶಾಂತ, ಕ್ಷೇಮ, ಅಮೃತ, ಅಭಯ ಎಂಬ ಏಳು ಜನ ಗಂಡು ಮಕ್ಕಳು, ಅದೇ ಹೆಸರಿನ ಏಳು ನಾಡುಗಳನ್ನು ಆಳುವರು.

ಆ ದ್ವೀಪವಾಸಿಗಳಲ್ಲಿ ಹಂಸ, ಪತಂಗ, ಊರ್ಧ್ವಂಚನ, ಸತ್ಯಾಂಗ ಎಂಬ ನಾಲ್ಕು ವರ್ಣದ ಜನರು ಜೀವಿಸುತ್ತಿದ್ದಾರೆ. ಅವರ ಉಪಾಸ್ಯ ದೇವತೆ ಭಗವಾನ್ ಸೂರ್ಯ. ಅವರು ಈ ಸೂರ್ಯನಾರಾಯಣನನ್ನು ಹೀಗೆ ಪ್ರಾರ್ಥಿಸುತ್ತಾರೆ: ''ಪುರಾಣ ಪುರುಷನಾದ ಸೂರ್ಯದೇವನೆ. ನೀನು ಭಗವಾನ್ ವಿಷ್ಣುವಿನ ಸ್ವರೂಪವೇ ಆಗಿರುವೆ. ಸತ್ಯ, ಋತ, ವೇದ, ಅಮೃತ, ಹಾಗೂ ಮೃತ್ಯು ಇವೆಲ್ಲವೂಗಳಿಗೂ ನೀನೇ ನಿಯಾಮಕನಾದ ಸ್ವಾಮಿ. ಇಂಥ ಭಗವಾನ್ ಸೂರ್ಯದೇವನನ್ನು ನಾವು ಶರಣು ಹೋಗುತ್ತೇವೆ.'' ಪುಷ್ಕರ ದ್ವೀಪದಲ್ಲಿ ಒಂದು ಅತ್ಯದ್ಭುತವಾದ ಕಮಲ ಪುಷ್ಪ ಇದೆ. ಅದರ ಹರವು ಒಂದು ಸಾವಿರ ಯೋಜನೆ. ಈ ಸುವರ್ಣ ಕಮಲಕ್ಕೆ ಒಂದು ಲಕ್ಷ ಬಂಗಾರದ ದಳಗಳು ಇರುತ್ತವೆ. ಈ ಕಮಲ ಪುಷ್ಪ ಅಥವಾ ಪುಷ್ಕರದಿಂದ ಇದಕ್ಕೆ ಪುಷ್ಕರ ದ್ವೀಪ ಎಂಬ ಹೆಸರು ಬಂದಿದೆ. ಪ್ರಿಯವ್ರತ ರಾಜರ್ಷಿಯ ಪ್ರೀತಿಯ ಪುತ್ರ, ವೀತಿಹೋತ್ರನ ಅಧಿಕಾರ ಈ ನಾಡಿನ ತುಂಬ. ಇವನಿಗೆ ಮಕ್ಕಳು ಮಾತ್ರ ಇಬ್ಬರೆ. ರಮಣಕ, ಧಾತಕಿ , ಈ ಇಬ್ಬರು ಪುತ್ರರಿಂದ ಈ ದ್ವೀಪಕಲ್ಪವು ಎರಡು ಭಾಗವಾಗಿದೆ. ರಮಣಕ ದ್ವೀಪ, ಧಾತಕಿ ದ್ವೀಪ ಎಂದು. ಈ ರಮಣಕ ಖಂಡ ಮತ್ತು ಧಾತಕಿ ಖಂಡ ಇವುಗಳ ಮಧ್ಯ ಭಾಗದಲ್ಲಿ ಪರ್ವತದ ಮೇಲ್ಭಾಗದಲ್ಲಿ ಸೂರ್ಯನ ಸಂಚಾರ. ಇಲ್ಲಿ ಯಾವುದೇ ಜಾತಿ ವರ್ಣ ವಿಭಾಗ ಇಲ್ಲ. ಎಲ್ಲರೂ ಸಮಾನರು. ಎಲ್ಲರೂ ದೇವಭಕ್ತರು. ಬ್ರಹ್ಮ ದೇವರ ಉಪಾಸಕರು. ತಮ್ಮ ಉಪಾಸ್ಯ ದೇವತೆಯಾದ ಚತುರ್ಮುಖನನ್ನು ಅವರು ಹೀಗೆ ಪ್ರಾರ್ಥಿಸುವರು. -''ಎಲ್ಲ ಪ್ರಾಣಿಗಳ, ಕರ್ಮಗಳಿಗೆ ಫಲವನ್ನು ನೀಡುವ ಬ್ರಹ್ಮದೇವ, ನೀನು ಪರಬ್ರಹ್ಮನಾದ

ಶ್ರೀ ವಿಷ್ಣುವಿನ ಸಾಕ್ಷಾತ್ ಪ್ರತೀಕನೇ ಆಗಿರುವೆ. ಜಗತ್ತಿನಲ್ಲಿಯ ಎಲ್ಲ ಜನರೂ ನಿನ್ನನ್ನು ಪೂಜಿಸುವರು. ಅದ್ವಿತೀಯನೂ, ಪರಮಶಾಂತ ಸ್ವರೂಪಿಯೂ ಇಂಥ ಬ್ರಹ್ಮರೂಪಿಯೂ ಆದ ಭಗವಂತನೇ ನಿನಗೆ ನಮ್ಮ ನಮಸ್ಕಾರ.''

ಈ ಹೊಂದಾವರೆಯ ಸುಂದರನಾಡಿನಲ್ಲಿರುವ ಜನರಿಗೆ ಕೋಪದ ಪರಿಚಯವಿಲ್ಲ. ಅಸೂಯೆಯ ಅರಿವೂ ಇಲ್ಲ. ಉಳಿದಾವ ದೋಷಗಳ ಸ್ಪರ್ಶವೇ ಇಲ್ಲ. ಪಾಪ ಕರ್ಮಗಳಲ್ಲಿ ಅವರಿಗೆ ಎಂದೂ ಪ್ರವೃತ್ತಿಯೇ ಇಲ್ಲ. ಅಲ್ಲಿ ಇರುವವರೆಲ್ಲರೂ ಶುದ್ಧಾಂತಃಕರಣಿಗಳು. ಅವರ ಆಯುಷ್ಯ ಹತ್ತು ಸಾವಿರದಿಂದ ಇಪ್ಪತ್ತು ಸಾವಿರ ವರ್ಷ. ದೇವರ ಧ್ಯಾನ ಉಪಾಸನೆಗೈಯುತ್ತಾರೆ ದೇವತೆಗಳಂತೆ. ಅವರು ತಮ್ಮ ಮೆಚ್ಚಿನ ಮಡದಿಯರಾದ ಮಹಿಳಾಮಣಿಗಳೊಂದಿಗೆ ಸ್ವಚ್ಛಂದ ವಿಹಾರಗೈಯುತ್ತ ಆನಂದ ತುಂದಿಲರಾಗಿ ಇರುತ್ತಾರೆ. ಅರ್ಜುನಾ ! ನಾನು ಇನ್ನು ನಿನಗೆ ಮೇಲಿನ ಊರ್ಧ್ವಲೋಕಗಳ ಸ್ಥಿತಿಗತಿಗಳನ್ನು ಬಿತ್ತರಿಸುತ್ತೇನೆ. ಕೇಳು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತೈದನೇ ಅಧ್ಯಾಯ ಮುಗಿದುದು**

# ಮೇಲಿನ ಊರ್ಧ್ವಲೋಕಗಳ ಸ್ಥಿತಿಗತಿ

ಅಧ್ಯಾಯ -26

ಕುರುಶ್ರೇಷ್ಠನಾದ ಧನಂಜಯನೇ, ನಮ್ಮ ಕಣ್ಣಿಗೆ ಕಾಣುವ ಈ ಸೂರ್ಯ ಮಂಡಲವು ಒಂದು ಲಕ್ಷ ಯೋಜನ ದೂರದಲ್ಲಿ ಇದೆ ನಾವಿರುವ ಈ ನೆಲದಿಂದ. ಈ ಸೂರ್ಯನಾರಾಯಣನ ರಥವು ಒಂಬತ್ತು ಸಾವಿರ ಯೋಜನ ವಿಸ್ತಾರ ಉಳ್ಳದ್ದು. ಇದರ ಮಧ್ಯದಂಡವು ಹದಿನೆಂಟು ಸಾವಿರ ಯೋಜನ ಗಡುತರವಾಗಿದೆ. ಈ ರಥದ ನೊಗವು ಎರಡೂವರೆ ಕೋಟಿ, ಏಳು ಲಕ್ಷ ಯೋಜನ ಪರಿಮಾಣದ್ದಿರುತ್ತದೆ. ಈ ಸೂರ್ಯ ರಥದ ಗಾಲಿಗಳಲ್ಲಿ ಮೂರು ನಾಭಿ, ಐದು ಆರೆಗಳು, ಆರು ನೇಮಿಗಳು ಅಥವಾ ಹಲ್ಲುಗಳು ಇರುತ್ತವೆ. ಸೂರ್ಯರಥದ ಎರಡನೇ ಉದ್ದಿಗೆಯು ಮೊದಲನೆಯ ನೊಗದಷ್ಟೇ ಇದೆ. ಈ ಎರಡೂ ನೊಗಗಳ ಪ್ರಮಾಣವೇ ಎರಡು ಯುಗಾರ್ಧಗಳ ಪರಿಮಾಣವಾಗಿರುತ್ತದೆ. ವೇದದ ಗಾಯಿತ್ರಿ, ಬೃಹತೀ, ಉಷ್ಣಿಕ್, ಜಗತೀ, ತ್ರಿಷ್ಟುಪ್, ಅನುಷ್ಟುಪ್ ಮತ್ತು ಪಂಕ್ತಿ ಎಂಬ ಏಳು ಛಂದಸ್ಸುಗಳೇ ಈ ರವಿ ರಥಕ್ಕೆ ಹೂಡಿದ ಕುದುರೆಗಳು. ಸೂರ್ಯನು ಎಲ್ಲಿಯೂ ಹೋಗುವುದಿಲ್ಲ, ಎಂದೂ ಸಂಚರಿಸುವದಿಲ್ಲ. ಅವನು ಸ್ಥಿರ. ಅವನಿಗೆ ಅಸ್ತವೂ ಇಲ್ಲ. ಉದಯವೂ ಇಲ್ಲ. ಸೂರ್ಯನು ನಮ್ಮ ಕಣ್ಣಿಗೆ ಕಾಣುವುದನ್ನೇ ನಾವು ಉದಯ ಎನ್ನುತ್ತೇವೆ. ನಮ್ಮ ಕಣ್ಣಿನ ಅಳವಿನಿಂದ ಕಾಣದಾದಾಗ ಸೂರ್ಯನು ಅಸ್ತನಾದ ಎಂದೆನ್ನುತ್ತೇವೆ. ಇಂದ್ರ,

ಯಮ, ವರುಣ, ಕುಬೇರ ಈ ನಾಲ್ಕು ದೇವತೆಗಳ ಅಧಿಕಾರಕ್ಕೆ ಒಳಪಟ್ಟ ಪೂರ್ವ, ದಕ್ಷಿಣ, ಪಶ್ಚಿಮ ಹಾಗೂ ಉತ್ತರ ದಿಕ್ಕುಗಳಲ್ಲಿ ಸೂರ್ಯನು ಒಂದು ದಿಕ್ಕಿನಲ್ಲಿ ಇದ್ದಾಗಲೂ ಉಳಿದ ಮೂರು ದಿಕ್ಕುಗಳನ್ನು ಬೆಳಗುತ್ತಾನೆ.

ಉತ್ತರಾಯಣ ಪ್ರಾರಂಭದಲ್ಲಿ ಸೂರ್ಯನು ಮಕರ ರಾಶಿಯಲ್ಲಿ ಪ್ರವೇಶಿಸುತ್ತಾನೆ. ಅನಂತರ ಕುಂಭ, ಮೀನ ಮುಂತಾದ ರಾಶಿಗಳನ್ನು ಒಂದಾದ ನಂತರ ಮತ್ತೊಂದನ್ನು ಪ್ರವೇಶಿಸುತ್ತಾ ಹೋಗುತ್ತಾನೆ. ಈ ಮೂರು ರಾಶಿಗಳನ್ನು ಭೋಗಿಸಿದ ಮೇಲೆ ದಿನರಾತ್ರಿಗಳನ್ನು ಸರಿಪಡಿಸುತ್ತಾ ವಿಷುವ ರೇಖೆಯ ಮೇಲೆ ಬಂದು ತಲುಪುತ್ತಾನೆ. ಅನಂತರ ಪ್ರತಿದಿನವೂ ರಾತ್ರಿಯು ಕಡಿಮೆಯಾಗುತ್ತದೆ. ಹಗಲು ಬೆಳೆಯುತ್ತ ಹೋಗುತ್ತದೆ. ಮತ್ತೆ ಮೇಷ, ವೃಷಭಾದಿರಾಶಿಗಳನ್ನು ದಾಟಿ, ಮಿಥುನ ರಾಶಿಯ ಕೊನೆಯಲ್ಲಿ ಸೂರ್ಯದೇವನು ಉತ್ತರಾಯಣದ ಅಂತಿಮ ಸೀಮೆಯಲ್ಲಿ ಉಪಸ್ಥಿತನಾಗುತ್ತಾನೆ. ಅವನು ಕರ್ಕರಾಶಿಗೆ ಬಂದಕೂಡಲೇ ದಕ್ಷಿಣಾಯನವು ಪ್ರಾರಂಭವಾಗುತ್ತದೆ.

ಈ ಸೂರ್ಯನ ರಥವು ವಾಯುವೇಗದಿಂದ ಶೀಘ್ರ ಗತಿಯಲ್ಲಿ ಚಲಿಸುತ್ತ ದಕ್ಷಿಣಾಯನವನ್ನು ಬಹು ಬೇಗ ದಾಟಿ ಬಿಡುತ್ತದೆ. ಬಹುದೂರದ ಭೂಮಿಯನ್ನು ಗತಿಯ ವೇಗದಿಂದ ಸ್ವಲ್ಪೇ ಅವಧಿಯಲ್ಲಿ ಅತಿಕ್ರಮಿಸುವದು ದಕ್ಷಿಣಾಯನದಲ್ಲಿ ಸಾಧ್ಯವಾಗುತ್ತದೆ. ಆದರೆ ಉತ್ತರಾಯಣದಲ್ಲಿ ಮಾತ್ರ ಈ ಸೂರ್ಯನ ಹೊಂದೇರು ಮಂದಗತಿಯಿಂದ ಚಲಿಸುವದರಿಂದ ಸ್ವಲ್ಪ ಭೂಮಿಯನ್ನು ಅತಿಕ್ರಮಿಸಲು ಹೆಚ್ಚು ಸಮಯವು ತಗಲುತ್ತದೆ.

ಸಂಧ್ಯಾಕಾಲವು ಬಂದಕೂಡಲೇ ಮಂದೇಹ ಎಂಬ ರಾಕ್ಷಸರ ಗುಂಪು ಸೂರ್ಯನನ್ನು ನುಂಗಲು ಬರುತ್ತದೆ. ಸೂರ್ಯನಿಗೂ ಆ ಮಂದೇಹ ರಾಕ್ಷಸರಿಗೂ ಪ್ರತಿ ದಿನವೂ ಸಂಧ್ಯಾಕಾಲದಲ್ಲಿ ಘೋರ ಹೋರಾಟವು ಮಸುಗುತ್ತದೆ. ಈ ಸಮಯದಲ್ಲಿ ಬ್ರಾಹ್ಮಣರು ಗಾಯತ್ರಿ ಮಂತ್ರದ ಉಚ್ಚಾರಣೆಯಿಂದ ನೀರನ್ನು ಅಭಿಮಂತ್ರಣಗೊಳಿಸಿ ಸೂರ್ಯನಿಗೆ ಅರ್ಘ್ಯಪ್ರದಾನ ಮಾಡುವರು. ತಪಸ್ವಿಗಳಾದ ಆ ವಿಪ್ರೋತ್ತಮರ ಮಂತ್ರಪೂತವಾದ ಜಲಾಂಜಲಿಗಳಿಂದ ಸುಟ್ಟು ಹೋಗುತ್ತಾರೆ ಆ ದುಷ್ಟ ರಾಕ್ಷಸರು. ಅಂದು ಅವರು ಸತ್ತರೂ ಮತ್ತೆ ಬದುಕಿ ಮರು ದಿನ ಪ್ರಾತಃ ಸಂಧ್ಯಾಕಾಲಕ್ಕೆ ಸೂರ್ಯನ ರಥಕ್ಕೆ ಅಡ್ಡಿ ಒಡ್ಡಲು ನುಗ್ಗಿ ಬರುತ್ತಾರೆ ಆ ಮಂದೇಹ ರಾಕ್ಷಸರು. ಅವರಿಗೆ ಬ್ರಹ್ಮದೇವರ ವರ ಇದೆ. ಅರ್ಘ್ಯಾಂಜಲಿಗಳಿಂದ ದಗ್ಧರಾಗಿ ಹೋದರೂ ಮತ್ತೆ ಬದುಕಿ ಪುನರುಜ್ಜೀವಿತರಾಗಿರಿ ಎಂದು.

ಈ ಬ್ರಹ್ಮದೇವರ ವರ ಬಲದಿಂದ ಆ ಮಂದೇಹ ರಾಕ್ಷಸರಿಗೆ ನಿತ್ಯ ಮೃತ್ಯು, ಮತ್ತೆ ಹೊಸ ಹುಟ್ಟು, ಹೊಸ ಚೈತನ್ಯ. ಬಲು ಹುರುಪಿನಿಂದ ಮತ್ತೆ ಸೂರ್ಯನ ರಥಕ್ಕೇ ಅವರಿಂದ ಆತಂಕ. ಮತ್ತೆ ಬ್ರಾಹ್ಮಣರ ಮಂತ್ರಪೂತ ಜಲಾಂಜಲಿಗಳಿಂದ ಅವರಿಗೆ ನಿತ್ಯ ಸಾವು. ಬ್ರಹ್ಮದೇವರ ವರ ಬಲದಿಂದ ನಿತ್ಯ ಮರಣ ನಿತ್ಯ ಜನನ.

ಆದುದರಿಂದಲೇ ಮಾನವರು ಪ್ರತಿದಿನವೂ ತಪ್ಪದೇ ಸಂಧ್ಯಾವಂದನೆಯನ್ನು ಮಾಡಬೇಕು. ಮಾಡದಿದ್ದವ ಕೃತಘ್ನ, ಪಾಪಿ. ಘೋರ ರೌರವ ನರಕವೇ ಅವನಿಗೆ ಗತಿ!

ಸೂರ್ಯದೇವನ ರಥದಲ್ಲಿ ಸೂರ್ಯದೇವನೊಡನೆ ಬೇರೆ ಬೇರೆ ಋಷಿಗಳು, ಗಂಧರ್ವರು, ರಾಕ್ಷಸರು, ಅಪ್ಸರೆಯರು, ಯಕ್ಷರು, ಸರ್ಪಗಳೂ ಇದ್ದು ಅವನೊಡನೆ ಸಂಚರಿಸುತ್ತಾರೆ. ಸೂರ್ಯ, ಧಾತಾ, ಅರ್ಯಮಾ, ಮಿತ್ರ, ವರುಣ, ವಿವಸ್ವಂತ, ಇಂದ್ರ, ಪೂಷಾ, ಸವಿತಾ, ಭಗ, ತ್ವಷ್ಟಾ, ವಿಷ್ಣು ಈ ಹನ್ನೆರಡು ಹೆಸರಿನಿಂದ ಸೂರ್ಯ ದೇವನು ಚೈತ್ರ ಮೊದಲಾದ ಹನ್ನೆರಡು ತಿಂಗಳುಗಳಲ್ಲಿ ಸೂರ್ಯಮಂಡಲದ ಅಧಿಕಾರಿಯಾಗಿ ಗ್ರಹಮಂಡಲದ ಪರಿಭ್ರಮಣಕ್ಕೆ ನಿಯಾಮಕನಾಗಿರುತ್ತಾರೆ. ಸೂರ್ಯ ಮಂಡಲದಿಂದ ಲಕ್ಷ ಯೋಜನೆ ಅಂತರದಲ್ಲಿ ಚಂದ್ರ ಮಂಡಲವು ತಳತಳಿಸುತ್ತದೆ. ಮೂರು ಗಾಲಿಯ ಈ ಚಂದ್ರನ ತೇರಿಗೆ ಕುಂದ ಕುಸುಮದಂತೆ ಅಚ್ಚ ಬಿಳಿ ಬಣ್ಣದ ಹತ್ತು ಕುದುರೆಗಳನ್ನು ಹೂಡಿರುತ್ತಾರೆ. ಈ ಚಂದ್ರ ಬಿಂಬದಿಂದ ಒಂದು ಲಕ್ಷ ಯೋಜನ ಅಂತರದಲ್ಲಿ ನಕ್ಷತ್ರ ಮಂಡಲವು ದೇದೀಪ್ಯಮಾನವಾಗಿ ಬೆಳಗುತ್ತಿದೆ.

ಗಗನಾಂಗಣದಲ್ಲಿರುವ ಅಸಂಖ್ಯ ನಕ್ಷತ್ರಗಳನ್ನು ಎಣಿಸಿದ್ದಾರೆ ನಮ್ಮ ಹಿಂದಿನ ಹಿರಿಯರು ತಮ್ಮ ದಿವ್ಯ ದೃಷ್ಟಿಯಿಂದ. ಅವುಗಳ ಸಂಖ್ಯೆ ಎಂಬತ್ತು ಸಮುದ್ರ, ಹದಿನಾಲ್ಕು ಅಬ್ಜ ಇಪ್ಪತ್ತು ಕೋಟಿ. ಈ ಎಲ್ಲ ನಕ್ಷತ್ರಗಳು ಅಂತರಿಕ್ಷದ ವಕ್ಷಸ್ಥಳದಲ್ಲಿ ದೇವರು ಹಚ್ಚಿಟ್ಟ ನಂದಾದೀಪಗಳಂತೆ ಲಕಲಕಿಸುತ್ತವೆ. ಈ ನಕ್ಷತ್ರ ಮಂಡಲದ ಮೇಲೆ ಎರಡು ಲಕ್ಷ ಯೋಜನೆ ಎತ್ತರದಲ್ಲಿ ಬುಧಗ್ರಹದ ಸ್ಥಾನ. ಈ ಬುಧ ಚಂದ್ರನ ಮಗನೇ. ವಾಯು ಹಾಗೂ ಅಗ್ನಿ ದ್ರವ್ಯಗಳಿಂದ ನಿರ್ಮಿಸಲ್ಪಟ್ಟಿದೆ ಈ ಬುಧರಥವು. ವಾಯು ವೇಗದ ಎಂಟು ಕುದುರೆಗಳನ್ನು ಹೂಡಿದ್ದಾರೆ ಈ ಬುಧ ಸ್ಯಂದನಕ್ಕೆ. ಈ ಬುಧಗ್ರಹದಿಂದ ಎರಡು ಲಕ್ಷ ಯೋಜನದ ಮೇಲೆ ಶುಕ್ರ ಗ್ರಹವಿದೆ. ಶುಕ್ರನಿಂದ ಎರಡು ಲಕ್ಷ ಯೋಜನದ ಮೇಲೆ ಮಂಗಳ. ಮಂಗಳ ಗ್ರಹದ ಮೇಲೆ ಎರಡು ಲಕ್ಷ ಯೋಜನ ಎತ್ತರದಲ್ಲಿ ಬೃಹಸ್ಪತಿ ಗ್ರಹ. ಅದರ ಮೇಲೆ ಎರಡು ಲಕ್ಷ ಯೋಜನದಲ್ಲಿ ಶನಿಗ್ರಹ. ಈ ಎಲ್ಲ ಗ್ರಹ ದೇವತೆಗಳ ರಥಗಳಿಗೂ ಬೇರೆ ಬೇರೆ ಬಣ್ಣದ ಎಂಟೆಂಟು ಕುದುರೆಗಳನ್ನು ಹೂಡಿರುತ್ತಾರೆ. ಸೂರ್ಯ ಲೋಕದ ಕೆಳಗಡೆ ರಾಹುಗ್ರಹವಿದೆ. ಕಪ್ಪು ಬಣ್ಣದ ಎಂಟು ಕುದುರೆಗಳು ಯಾವಾಗಲೂ ಧೂಳಿಧೂಸರವಾದ ಈ ರಾಹು ರಥವನ್ನು ಎಳೆಯುತ್ತಿರುತ್ತವೆ.

ಶನಿಗ್ರಹದ ಮೇಲುಗಡೆ ಒಂದು ಲಕ್ಷ ಯೋಜನ ಎತ್ತರದಲ್ಲಿ ಸಪ್ತರ್ಷಿಗಳ ಮಂಡಲವಿದೆ. ಅಲ್ಲಿಂದ ಮೇಲಕ್ಕೆ ಮತ್ತೂ ಒಂದು ಲಕ್ಷ ಯೋಜನ ಎತ್ತರದ ಮೇಲೆ ಧ್ರುವ ಮಂಡಲವು ಕಂಗೊಳಿಸುತ್ತದೆ. ಈ ಧ್ರುವನು ಎಲ್ಲ ಜ್ಯೋತಿರ್ಮಂಡಲದ ಕೇಂದ್ರಸ್ಥಾನದಲ್ಲಿರುತ್ತಾನೆ. ಸಮಸ್ತ ಗ್ರಹ ಗಣಗಳ ಕೇಂದ್ರಬಿಂದುವಾಗಿ ಸ್ಥಿತಿ ಸ್ಥಾಪಕನಾಗಿ ಇರುವ ಈ ಧ್ರುವ ಮಂಡಲವು ಶ್ರೀ ವಿಷ್ಣುವಿನ ಶಿಂಶುಮಾರ ಚಕ್ರದ

ಪುಚ್ಛ ಸ್ಥಾನದಲ್ಲಿ ಇರುತ್ತದೆ. ಭಗವದ್ಭಕ್ತನಾದ ಶಿವನು ಶಿಂಶುಮಾರ ಸ್ವರೂಪಿಯಾದ ಸಮಸ್ತ ಗ್ರಹಗಣಗಳನ್ನೂ, ನಕ್ಷತ್ರ ಲೋಕಗಳನ್ನೂ ನಿಯಂತ್ರಿಸುವ ಶಿಂಶುಮಾರ ರೂಪದ ಭಗವಂತನ ಪುಚ್ಛ ಭಾಗವನ್ನು ಆಶ್ರಯಿಸಿ ಇರುತ್ತಾನೆ. ಬ್ರಹ್ಮಾಂಡದಲ್ಲಿ ಇರುವ ಎಲ್ಲ ಜ್ಯೋತಿರ್ಮಂಡಲಗಳು ವಾಯು ರೂಪದ ದಾರಗಳಿಂದ ಧ್ರುವ ಮಂಡಲಕ್ಕೆ ಬಿಗಿಯಲ್ಪಟ್ಟಿವೆ.

ಸೂರ್ಯ ಮಂಡಲದ ವಿಸ್ತಾರ ಒಂಬತ್ತು ಸಾವಿರ ಯೋಜನ ; ಆದರ ಎರಡು ಪಟ್ಟು ಚಂದ್ರಮಂಡಳದ ವಿಸ್ತಾರ. ಮಂಡಲಾಕಾರವಾದ ರಾಹುಗ್ರಹವು ತನ್ನ ಮಂಡಲಾಕಾರದಿಂದ ಈ ಸೂರ್ಯ ಚಂದ್ರಗ್ರಹಗಳಿಗೆ ಸಮಾನಾಕಾರವಾಗಿ ಪೃಥ್ವಿಯ ಛಾಯಾಗ್ರಹಣವನ್ನು ಮಾಡಿಕೊಂಡು ಅವುಗಳ ಕೆಳಗೆ ಚಲಿಸುತ್ತದೆ. ಶುಕ್ರಗ್ರಹವು ಚಂದ್ರಮಂಡಲದ ಹದಿನಾರನೆಯ ಒಂದು ಭಾಗದಷ್ಟಿರುವದು. ಗುರುಗ್ರಹವು ವಿಸ್ತಾರದಲ್ಲಿ ಶುಕ್ರಗ್ರಹಕ್ಕಿಂತ ಒಂದು ಕಾಲು ಭಾಗ ಕಡಿಮೆ. ಮಂಗಳ, ಶನಿ, ಬುಧ, ಗ್ರಹಗಳು ಈ ಬೃಹಸ್ಪತಿ ಗ್ರಹಕ್ಕಿಂತ ಕಾಲುಭಾಗ ಕಡಿಮೆ ಅಳತೆಯುಳ್ಳದ್ದು ಇರುತ್ತವೆ. ನಕ್ಷತ್ರ ಮಂಡಲದಲ್ಲಿಯ ಪ್ರತಿಯೊಂದು ನಕ್ಷತ್ರದ ಪರಿಮಾಣವು ಐದು ನೂರು ನಾಲ್ಕು ನೂರು, ಮೂರುನೂರು, ಎರಡುನೂರು, ಒಂದುನೂರು, ಕನಿಷ್ಠ ಐವತ್ತು ಯೋಜನವಾದರೂ ವಿಸ್ತಾರವಿರುತ್ತದೆ. ಇದಕ್ಕಿಂತ ಕಡಿಮೆ ವಿಸ್ತಾರ ಯಾವ ಚಿಕ್ಕಗೂ ಇರುವುದಿಲ್ಲ. ಪೃಥ್ವೀ ಮಂಡಲದಲ್ಲಿ ಕಾಲಿನಿಂದ ನಡೆದುಹೋಗಲು ಬರಲು ನೆಲವುಳ್ಳ ಪ್ರದೇಶಕ್ಕೆಲ್ಲ ಭೂಲೋಕ ಎನ್ನುತ್ತಾರೆ. ಭೂಲೋಕ ಮತ್ತು ಸೂರ್ಯಲೋಕಗಳ ಮಧ್ಯವರ್ತಿಯಾದ ನಡುವಿನ ಲೋಕಕ್ಕೆ ಭುವರ್ಲೋಕ ಎನ್ನುವರು. ಧ್ರುವ ಮಂಡಲ ಹಾಗೂ ಸೂರ್ಯ ಮಂಡಲಗಳ ನಡುವೆ ಹದಿನಾಲ್ಕು ಯೋಜನೆಗಳ ವಿಸ್ತಾರವಾದ ಆಕಾಶದಲ್ಲಿ ಸ್ವರ್ಗಲೋಕವಿದೆ ಎಂದು ಖಗೋಲ ವಿಜ್ಞಾನಿಗಳ ಅಭಿಪ್ರಾಯ. ಧ್ರುವ ಮಂಡಲದ ಮೇಲೆ ಒಂದು ಕೋಟಿ ಯೋಜನದ ಎತ್ತರದ ಮೇಲೆ ಮಹರ್ಲೋಕ. ಆದರ ಮೇಲೆ ಮತ್ತೆ ಎರಡು ಕೋಟಿ ಯೋಜನ ಎತ್ತರದ ಮೇಲೆ ಜನೋಲೋಕ. ಸನಕ ಸನಂದನಾದಿ ಮಹಾಮುನಿಗಳು ಇರುವದು ಇದೇ ಜನೋಲೋಕದಲ್ಲಿ. ಆದರ ಮೇಲೆ ನಾಲ್ಕು ಕೋಟಿ ಯೋಜನದ ಊರ್ಧ್ವಾವಕಾಶದಲ್ಲಿ ತಪೋಲೋಕವಿರುತ್ತದೆ. ಇಲ್ಲಿ ವೈರಾಜ ಎಂಬ ಹೆಸರಿನ ದೇವತಾಗಣವು ಆನಂದದಿಂದ ಸ್ವಚ್ಛಂದ ವಿಹಾರ ಗೈಯುತ್ತ ನೆಲಿಸಿದೆ.

ತಪೋಲೋಕದ ಆರು ಪಟ್ಟು ವಿಸ್ತಾರ ಸತ್ಯಲೋಕ. ಸಾವಿನ ಗಡಿಯನ್ನು ಮೀರಿನಿಂತ ಮಹಾಮಹಿಮರು ನೆಲಿಸುವದು ಈ ಬ್ರಹ್ಮದೇವನ ಪುಣ್ಯಧಾಮದಲ್ಲಿಯೇ. ಇಲ್ಲಿಗೆ ಬಂದ, ಸಂಸಾರಬಂಧನದಿಂದ ಮುಕ್ತರಾದ ಸುಜೀವರೆಲ್ಲರೂ ಕಲ್ಪಾಂತಕಾಲದವರೆಗೆ ಸಾಧನಾನುಷ್ಠಾನ ಮಾಡುತ್ತ ಇದ್ದು ಕೊನೆಗೆ ಬ್ರಹ್ಮದೇವರೊಟ್ಟಿಗೆ ಮೋಕ್ಷಮಂದಿರವನ್ನು ಪ್ರವೇಶಿಸುವರು. ಬ್ರಹ್ಮದೇವರಿಗೂ ಇದೇ ಜನ್ಮಭೂಮಿ. ಕರ್ಮ ಭೂಮಿಯೂ ಆಗಿದೆ. ಈ ಕಾರಣದಿಂದ ಇದನ್ನು ಬ್ರಹ್ಮಲೋಕ ಎಂದೂ ಕರೆಯುವರು.

ಇದರ ಮೇಲೆ ಹದಿನೆಂಟು ಕೋಟಿ ಐವತ್ತು ಲಕ್ಷ ಯೋಜನೆಗಳ ಆಚೆಗೆ ಭಗವಂತನ ಅನುಪಮವಾದ ಕಲ್ಯಾಣಧಾಮವಿದೆ. ಭೂಲೋಕ ಭುವರ್ಲೋಕ ಸ್ವರ್ಲೋಕಗಳಿಗೆ ತ್ರೈಲೋಕ್ಯ ಎಂದು ಕರೆಯುವರು. ಇದರ ಮೇಲೆ ಹದಿನೆಂಟು ಕೋಟಿ ಐವತ್ತು ಲಕ್ಷ ಯೋಜನಗಳ ಆಚೆಗೆ ಭಗವಂತನ ಅನುಪಮವಾದ ಕಲ್ಯಾಣಧಾಮವಿದೆ.

ಭೂಲೋಕ ಭುವರ್ಲೋಕ ಸ್ವರ್ಲೋಕಗಳಿಗೆ ತ್ರೈಲೋಕ್ಯ ಎಂದು ಕರೆಯುವರು. ಇವೆಲ್ಲವೂ ಕೃತಕ (ಅನಿತ್ಯ). ಇವುಗಳ ಮೇಲಿನ ಜನೋಲೋಕ, ತಪೋಲೋಕ ಮತ್ತು ಸತ್ಯಲೋಕಗಳು ಮಾತ್ರ ಅಕೃತಕ ಅರ್ಥಾತ್ ನಿತ್ಯವಾಗಿವೆ. ಈ ಕೃತಕ ಅಕೃತಕ ಲೋಕಗಳ ನಟ್ಟ ನಡುವೆ ಮಹರ್ಲೋಕದ ಸ್ಥಿತಿ. ಕಲ್ಪಾಂತ ಕಾಲದಲ್ಲಿ ನಡೆಯುವ ಮಹಾ ಪ್ರಳಯದಲ್ಲಿ ಭೂಃ ಭುವಃ ಸ್ವಃ ಎಂಬ ಹೆಸರಿನ ಮೂರು ಲೋಕಗಳು ನಷ್ಟವಾಗುತ್ತವೆ. ಮಹರ್ಲೋಕಕ್ಕೆ ಮಾತ್ರ ಅತ್ಯಂತಿಕ ವಿನಾಶವಿಲ್ಲ. ಅಲ್ಲಿರುವ ಜನರು ಮಾತ್ರ ನಾಶ ಹೊಂದುತ್ತಾರೆ. ಈ ಏಳು ಲೋಕಗಳು ಪುಣ್ಯ ಕರ್ಮಗಳಿಂದ ಮಾತ್ರ ಲಭ್ಯ. ವೇದೋಕ್ತವಾದ ಯಜ್ಞ, ದಾನ, ತಪ, ಜಪ, ಹೋಮ, ತೀರ್ಥ ಮತ್ತು ವ್ರತಾನುಷ್ಠಾನ ಮುಂತಾದ ವಿಹಿತ ಕರ್ಮಾಣುಷ್ಠಾನ ಗೈಯುವವರು ಈ ಸಪ್ತ ಲೋಕಗಳನ್ನು ಹೊಂದುತ್ತಾರೆ. ಈ ಏಳೂ ಲೋಕಗಳ ಮೇಲೆ ಬ್ರಹ್ಮಾಂಡದ ಮೇಲ್ಭಾಗದಿಂದ ಶೀತಲವಾದ ಪುಣ್ಯಮಯ ಜಲಧಾರೆಯ ರೂಪದಿಂದ ಹರಿದು ಗಂಗೆಯು ದಾರಿಯಲ್ಲಿ ಅನೇಕ ಶಿಖರದ ಮೇಲೆ ಬಿದ್ದು ಎಲ್ಲ ಲೋಕಗಳನ್ನೂ ಪಾವನಗೊಳಿಸುತ್ತ ಭೂಲೋಕವನ್ನು ತೋಯಿಸಿ ಪಾತಾಳ ಲೋಕವನ್ನು ಪ್ರವೇಶಿಸುತ್ತಾಳೆ. ಅನೇಕ ದೇವಿಯರಿಂದಲೂ, ಪಿಂಗಲನೆಂಬ ರುದ್ರನಿಂದಲೂ ಪರಿವೃತಳಾದ ಈ ಗಂಗೆಯು ದುಷ್ಟರನ್ನು ಸಂಹರಿಸಿ ಬ್ರಹ್ಮಾಂಡವನ್ನು ರಕ್ಷಿಸುತ್ತಾಳೆ.

ಅರ್ಜುನ ! ಖಗೋಲದ ಚಲನವಲನ, ಸ್ಥಿತಿಗತಿ ವ್ಯಾಪಾರಗಳೆಲ್ಲವೂ ವಾಯುದೇವನಿಂದ ನಿಯಂತ್ರಿತವಾಗಿದೆ. ವಿಶ್ವವ್ಯಾಪಾರವನ್ನು ನಿಯಮಿಸುವ ವಾಯು ಏಳು ಬಗೆಯದಾಗಿದೆ. ಪೃಥ್ವಿಯನ್ನು ದಾಟಿ ಮೇಘ ಮಂಡಲದ ವರೆಗೆ ಸಂಚರಿಸುವ ವಾಯು 'ಪ್ರವಹ' ಎನಿಸುತ್ತದೆ. ಹೊತೆ ಮತ್ತು ಕಾವು ಆವಿಯಿಂದ ರೂಪಗೊಳ್ಳುವ ಈ ಮೋಡ ಪಡೆಗಳನ್ನು ಸಮರ್ಥವಾದ ಈ ಪ್ರವಹ ವಾಯುವೇ ಆಚೀಚೆ ಚಲಿಸುವಂತೆ ಮಾಡಿ ವೃಷ್ಟಿಗೆ ಕಾರಣವಾಗುವದು. ಸಮುದ್ರದ ನೀರನ್ನು ತುಂಬಿಕೊಂಡು ಮೇಘಗಳು ದೇಶದ ತುಂಬ ಮಳೆಗರೆದು ಹೊಳೆಹಳ್ಳಗಳನ್ನು, ಕೆರೆಬಾವಿಗಳನ್ನು ತುಂಬಿ ಜನರಿಗೆ ನೀರನ್ನು ಒದಗಿಸಿ ಬೆಳೆಕಾಳುಗಳಿಂದ ಅನ್ನವನ್ನೂ ನೀಡುವಂತೆ ಮಾಡುತ್ತವೆ.

ವಾಯುವಿನ ಎರಡನೆಯ ಸುಳಿಗೆ ಆವಹ ಎನ್ನುವರು. ಈ ಆವಹ ವಾಯುವಿನಿಂದಲೇ ಧ್ರುವ ಮಂಡಲವು ಸೂರ್ಯಮಂಡಲದಿಂದ ಆಬದ್ಧವಾಗಿ ನಿಯಮಿತ ಕಕ್ಷೆಯಲ್ಲಿ ಭ್ರಮಿಸುತ್ತದೆ. ವಾಯುವಿನ ಮೂರನೆಯ ಸುಳಿಯು ಚಂದ್ರಲೋಕದಲ್ಲಿ ಪ್ರತಿಷ್ಠಿತವಾಗಿದೆ. ಉದ್ವಹ ಎಂದು ಅದಕ್ಕೆ ಹೆಸರು. ಇದೇ

ವಾಯುವಿನಿಂದಲೇ ಚಂದ್ರಮಂಡಲವು ಧ್ರುವಮಂಡಲದಿಂದ ಸಂಬದ್ಧವಾಗಿ ತನ್ನ ಪಥದಲ್ಲಿ ಚಲಿಸುತ್ತದೆ. ನಾಲ್ಕನೆಯದಾದ ಸಂವಹ ವಾಯು ಚಂದ್ರಮಂಡಲದಲ್ಲಿದೆ. ಇದರಿಂದ ನಕ್ಷತ್ರ ಮಂಡಲವು ಧ್ರುವಸಂಬದ್ಧವಾಗಿ ಪರಿಭ್ರಮಿಸುವದು. ಆರನೆಯ ವಾಯುಶಾಖೆಯಾದ ಪರಿವಹದ ದ್ವಾರಾ ಸಪ್ತರ್ಷಿ ಮಂಡಲವು ಧ್ರುವಾಬದ್ಧವಾಗಿ ಅಂತರಿಕ್ಷ ಪಥದಲ್ಲಿ ಸುತ್ತುತ್ತದೆ. ಏಳನೆಯ ವಾಯುವೇ ಪರಾವಹ. ಉಳಿದೆಲ್ಲ ಗಗನಚಾರಿ ಗ್ರಹ ನಕ್ಷತ್ರ ನೀಹಾರಿಕೆಗಳೂ ಧ್ರುವ ಮಂಡಲ ನಿಯಮಿತವಾಗಿ ತಮ್ಮ ತಮ್ಮ ಕಕ್ಷಾಪರಿಘವನ್ನು ಅತಿಕ್ರಮಿಸದೇ ಸ್ವಪರಿವೇಷದಲ್ಲಿಯೇ ಈ ಪರಾವಹ ವಾಯುವಿನಿಂದ ಸಂಚರಿಸುತ್ತ ಸ್ಥಿತಿಗತಿಗಳನ್ನು ಹೊಂದುತ್ತವೆ.

ಧ್ರುವನಕ್ಷತ್ರದ ಮೇಲಿನ ಭಾಗದಲ್ಲಿ ಸೂರ್ಯನ ಬೆಳಕು ಹೋಗುವುದಿಲ್ಲ. ಚಂದ್ರನ ಕಾಂತಿ ಚಿಮ್ಮುವದಿಲ್ಲ. ಅಲ್ಲಿ ಯಾವ ಚಿಕ್ಕೆ ಚಂದ್ರಾಮಗಳೂ ಮೂಡುವದೂ ಇಲ್ಲ. ಮುಳುಗುವದೂ ಇಲ್ಲ. ಅಲ್ಲಿರುವ ಜನ ಎಲ್ಲರೂ ಸ್ವಯಂ ಪ್ರಕಾಶಕರು. ತಮ್ಮ ತೇಜ ಹಾಗೂ ಶಕ್ತಿಗಳಿಂದಲೇ ಸ್ಥಿರತೆ ಪಡೆದವರು.

ಇನ್ನು ಪಾತಾಳದ ಬಗೆಗೆ ಹೇಳುತ್ತೇನೆ ಕೇಳು. ಈ ಪೃಥ್ವೀ ಮಂಡಲದ ಎತ್ತರ ಹತ್ತು ಸಾವಿರ ಯೋಜನ. ಇದರ ಕೆಳಗೆ ಪಾತಾಳದ ಏಳು ಲೋಕಗಳು. ಆ ಎಲ್ಲ ಅಧೋಲೋಕಗಳು ಒಂದಕ್ಕೊಂದು ಹತ್ತು ಸಾವಿರ ಯೋಜನ ದೂರದಲ್ಲಿವೆ. ಅತಲ, ವಿತಲ, ನಿತಲ, ರಸಾತಲ, ತಲಾತಲ, ಸುತಲ, ಪಾತಾಲ, ಎಂದು ಆ ಕೆಳಗಿನ ಏಳು ಲೋಕಗಳ ಹೆಸರು. ಅಲ್ಲಿಯ ಭೂಮಿಯೆಲ್ಲ ಸುಂದರ ಮಂದಿರಗಳಿಂದ ಸುಶೋಭಿತ. ಅಲ್ಲಿಯ ಭೂಮಿಯು ಕ್ರಮವಾಗಿ ಕರಿ, ಬಿಳಿ, ಕೆಂಪು, ಹಳದಿ, ಕಂದು, ಶಿಲಾಮಯ, ಸುವರ್ಣಮಯ ಆಗಿದೆ. ಈ ಎಲ್ಲ ಕೆಳಗಿನ ಲೋಕಗಳಲ್ಲಿ ದೈತ್ಯರೂ, ದಾನವರೂ, ಹಾವುಗಳೂ ಅಸಂಖ್ಯ ಪ್ರಮಾಣದಲ್ಲಿ ನೆಲೆಸಿವೆ. ಅಲ್ಲಿ ಬಿಸಿಲು ಶಕೆ ಮಳೆ ಚಳಿ ಯಾವದೂ ಇಲ್ಲ. ಅಲ್ಲಿರುವವರಿಗೆ ಯಾವ ದುಃಖವೂ ಬಾಧಿಸಲಾರದು.

ಏಳನೆಯದಾದ ಪಾತಾಳ ಲೋಕದಲ್ಲಿ ಹಾಟಕೇಶ್ವರ ಎಂಬ ಶಿವಲಿಂಗವಿದೆ. ಅದನ್ನು ಪ್ರತಿಷ್ಠಾಪಿಸಿದವ ಸಾಕ್ಷಾತ್ ಪರಮೇಷ್ಠಿ. ಅನೇಕಾನೇಕ ನಾಗಧುರೀಣರಿಂದ ನಿತ್ಯವೂ ಆ ಶಿವಲಿಂಗಕ್ಕೆ ಸಂಭ್ರಮದ ಪೂಜೆ. ಪಾತಾಳದಲ್ಲಿ ನೀರಿನ ಬಾಹುಲ್ಯ. ಈ ಪಾತಾಳ ಲೋಕಗಳ ಕೆಳಗೆ ನರಕ ಲೋಕ. ಪಾಪಿಗಳು ಬೀಳುವದು ಈ ನರಕ ಲೋಕದಲ್ಲಿಯೇ. ಈ ನರಕಗಳ ಸಂಖ್ಯೆ ಅನೇಕ ಕೋಟಿ. ಅವುಗಳಲ್ಲಿ ಮುಖ್ಯ ಇಪ್ಪತ್ತು ನಾಲ್ಕು ನರಕಗಳ ಹೆಸರನ್ನು ಮಾತ್ರ ಇಲ್ಲಿ ಹೇಳುತ್ತೇನೆ.

ರೌರವ, ಶೂಕರ, ರೋಧ, ತಾಲ, ವಿಶಸನ, ಮಹಾಜ್ವಾಲ, ತಪ್ತಕುಂಭ, ಲವಣ, ವಿಮೋಹಕ, ರುಧಿರಾಂಧ, ವೈತರಣೀ, ಕೃಮಿಶ, ಕೃಮಿಭೋಜನ, ಅಸಿಪತ್ರವನ, ತೃಷ್ಣೆ ಭಯಂಕರ, ಲಾಲಾಭಕ್ಷ, ಪಾಪಮಯಪೂಯವಹ, ವನ್ಹಿಜ್ವಾಲ, ಅಧಃಶಿರ, ಸಂದಂಶ, ಕಾಲಸೂತ್ರ, ತಮೋಮಯ ಅವೀಚಿ, ಶ್ವಭೋಜನ, ಪ್ರತಿಭಾ ಶೂನ್ಯ, ಅಪರಅವೀಚಿ - ಎಂದು ಇಪ್ಪತ್ತನಾಲ್ಕು ಬಗೆಯಾಗಿವೆ. ಇವಲ್ಲದೇ ಇನ್ನೂ

ನಾನಾಬಗೆಯ ಭೀಕರ ನರಕಗಳೂ ಬೇರೆ ಇವೆ. ಸುಳ್ಳು ಸಾಕ್ಷಿ ಹೇಳಿದವ ರೌರವ ನರಕಕ್ಕೆ ಬೀಳುತ್ತಾನೆ. ಸೆರೆಕುಡಿಯುವ ಪಾಪಿಯು ಶೂಕರ ನರಕದಲ್ಲಿ ಕೊಳೆಯುವನು. ಬ್ರಾಹ್ಮಣ ಹಾಗೂ ಗೋವುಗಳನ್ನು ಬಂಧನದಲ್ಲಿ ಇಟ್ಟವನಿಗೆ ರೋಧ ಎಂಬ ನರಕ. ಸೆರೆಸೇಂದಿ ಕುಡಿಯುವವನಿಗೂ ರೋಧ ಎಂಬ ನರಕ. ನರಹತ್ಯಾಕಾರಿಯಾದ ಹಂತಕನಿಗೆ ತಾಲ, ಗುರುಪತ್ನಿಯೊಡನೆ ಸರಸಾಟವಾಡುವವನಿಗೆ ತಪ್ತಕುಂಭ, ನಂಬಿದವರ ಕುತ್ತಿಗೆ ಕೊಯ್ಯುವವನಿಗೆ ತಪ್ತಲೋಹ, ಗುರುವನ್ನು ಅಪಮಾನಿಸುವವನಿಗೆ ಮಹಾಜ್ವಾಲ, ವೇದ ಶಾಸ್ತ್ರಗಳನ್ನು ನಾಶಗೈಯುವವನಿಗೆ ಲವಣ, ಧರ್ಮದ ಆಜ್ಞೆಯನ್ನು ಮೀರಿ ಉಚ್ಛ್ರುಂಖಲತೆಯಿಂದ ವರ್ತಿಸಿದರೆ ವಿಮೋಹಕ ದೇವತಾದ್ವೇಷದಿಂದ ಕ್ರಮಿಭಕ್ಷ, ಶಾಸ್ತ್ರಕ್ಕೆ ವಿಪರೀತವಾಗಿ ಯಜ್ಞಾದಿ ಕರ್ಮಗಳನ್ನು ಮಾಡಿದರೆ ಕೃಮಿಶ, ದೇವತೆಗಳಿಗೂ ಪಿತೃಗಳಿಗೂ ಅರ್ಪಿಸದೆ ಊಟಮಾಡಿದರೆ ಲಾಲಾಭಕ್ಷ, ಎಲ್ಲರ ಮೇಲೆಯೂ ವೈರವನ್ನು ಸಾಧಿಸಿದರೆ ಅಥವಾ ಹಟದಿಂದ ಮಾರಕ ಶಸ್ತ್ರಾಸ್ತ್ರಗಳನ್ನು ನಿರ್ಮಿಸಿದರೆ ವಿಶಸನ, ದುಷ್ಟರಿಂದ ದಾನ ತೆಗೆದುಕೊಂಡರೆ ಅಧೋಮುಖ, ಯಾರಿಗೂ ಕೊಡದೇ ಒಬ್ಬನೇ ಮೃಷ್ಟಾನ್ನವನ್ನು ಉಂಡರೆ ಪೂಯವಹ. ಕುರಿ, ಕೋಳಿ, ಬೆಕ್ಕು. ಮುಂತಾದವನ್ನು ತಾನು ಕೊಂದು ಅಥವಾ ಅವುಗಳನ್ನು ಬೇರೆಯವರಿಗೆ ಮಾರಿ ಹೊಟ್ಟೆ ಹೊರೆದುಕೊಳ್ಳುವವನಿಗೂ ಪೂಯವಹ ಎಂಬ ನರಕವೇ ಆಗುವದು. ಎರಡನೆಯವರ ಫಲ, ಹುಲ್ಲು, ಮೇವಿನ ಬಣಿವೆ, ಕಾಳಿನ ರಾಶಿಗಳಿಗೆ ಬೆಂಕಿ ಹಚ್ಚಿ ಸುಟ್ಟು ಬಿಡುವ ಪಾಪಿಯು ರುಧಿರಾಂಧ ಎಂಬ ನರಕದಲ್ಲಿ ಬೀಳುವನು. ಜ್ಯೋತಿಷ್ಯ, ನಾಟ್ಯ, ಕುಸ್ತಿಯ ಆಟ ಮುಂತಾದವುಗಳನ್ನು ಉದ್ಯೋಗವನ್ನಾಗಿ ಮಾಡಿಕೊಂಡು ಹೊಟ್ಟೆ ತುಂಬಿಸಿಕೊಳ್ಳುವವನು ವೈತರಣಿ ಎಂಬ ನರಕದಲ್ಲಿ ನರಳುವನು. ಐಶ್ವರ್ಯ ಮತ್ತು ತಾರುಣ್ಯ ಮದದಿಂದ ಉನ್ಮತ್ತನಾಗಿ ಹೆರವರ ಹಣವನ್ನು ದೋಚಿದರೆ ತೃಷ್ಣೆ ಎಂಬ ನರಕ. ವ್ಯರ್ಥವಾಗಿ ಗಿಡಗಳನ್ನು ಕಡಿದರೆ ಅಸಿಪತ್ರವನ, ಕಪಟ ವೃತ್ತಿಯಿಂದ ಇನ್ನೊಬ್ಬರನ್ನು ವಂಚಿಸಿ ಜೀವನವನ್ನು ಸಾಗಿಸಿದರೆ ವಹ್ನಿಜ್ವಾಲ. ಪರಸ್ತ್ರೀ ಪರಾನ್ನ ಲಂಪಟನಿಗೆ ಸಂದಂಶ. ಹಗಲು ನಿದ್ದೆ ಮಾಡಿ ವ್ರತ ಅನುಷ್ಠಾನ ಲೋಪಮಾಡುವವನಿಗೆ ಶ್ವಭೋಜನ. ದೇವರೇ ಇಲ್ಲ ಎನ್ನುವ ನಾಸ್ತಿಕನಿಗೆ ಅವೀಚಿ, ಶಾಸ್ತ್ರ ನಿಷಿದ್ಧ ಕಾರ್ಯವನ್ನು ಮಾಡುವ ಪಾಪಿಗೆ 'ಘೋರ' ಎಂಬ ನರಕ - ಹೀಗೆ ಬೇರೆ ಬೇರೆ ಪಾಪಗಳನ್ನು ಮಾಡುವ ಪಾತಕಿ ಜನರನ್ನು ಯಮದೂತರು ಅತ್ಯಂತ ದಾರುಣವಾದ ಬೇರೆ ಬೇರೆ ನರಕಗಳಲ್ಲಿ ಹಾಕಿ ವಿಚಿತ್ರ ಹಿಂಸೆ ಕೊಟ್ಟು ಪೀಡಿಸುತ್ತಾರೆ.

ಆದುದರಿಂದ ಈ ಎಲ್ಲ ನರಕಗಳ ಯಾತನೆಯನ್ನು ಹೊಂದಬಾರದು ಎಂದು ಬಯಸುವ ಮನುಷ್ಯನು ವೇದ ಮಾರ್ಗವನ್ನು ಅನುಸರಿಸಬೇಕು. ವಿಷ್ಣು ಹಾಗೂ ಶಿವ ಇವರಿಬ್ಬರನ್ನೂ ಭಕ್ತಿಯಿಂದ ಆರಾಧಿಸಬೇಕು. ಈ ನರಕ ಲೋಕದ ಕೆಳಗೆ ಕಾಲಾಗ್ನಿ ಕಾಲಾಗ್ನಿಯ ಕೆಳಗೆ ಮಂಡೂಕ. ಮಂಡೂಕದ ಕೆಳಗೆ ನಾಗ ಇರುತ್ತವೆ. ಅನಂತನಾಮಕನಾದ ಈ ಆದಿಶೇಷನ ಮಸ್ತಕದ ಮೇಲೆ ಒಂದು ಸಾಸಿವೆ ಕಾಳನ್ನು ಇಟ್ಟಂತೆ ತೋರುತ್ತದೆ ಈ ಎಲ್ಲ ವಿಶ್ವ. ಅನಂತನಾಮಕನಾದ ಶ್ರೀಹರಿಯ

ಪ್ರಭಾವದಿಂದ ಅವನಿಗೆ ಅನಂತ ಎಂಬ ಹೆಸರು ಬಂದಿದೆ. ಪದ್ಮ, ಕುಮುದ, ಅಂಜನ, ವಾಮನ ಎಂಬ ನಾಲ್ಕು ದಿಗ್ಗಜಗಳೂ ಅಲ್ಲಿಯೇ ಇರುತ್ತವೆ. ಅದರ ಕೆಳಗೆ ಇದ್ದದ್ದೇ ಅಂಡ ಕಟಾಹ. 'ಏಕವೀರಾ' ಎಂಬ ದೇವಿಯು ಇರುವದು ಆ ಅಂಡ ಕಟಾಹದಲ್ಲಿಯೇ ಕಪಾಲೀಶಾ ದೇವಿಯೂ ತನ್ನ ಅಸಂಖ್ಯ ಸಹಚರಿಯೊಂದಿಗೆ ಕೈಯಲ್ಲಿ ದಂಡ ಹಿಡಿದು ಅಲ್ಲಿ ಗಸ್ತು ತಿರುಗುತ್ತಾಳೆ. ಅನಂತ ಎಂಬ ಹೆಸರಿರುವ ಭಗವಾನ್ ಸಂಕರ್ಷಣ ರೂಪಿ ಪರಮಾತ್ಮನ ಉಸಿರಿನಿಂದ ಪ್ರೇರಿತವಾದ ದಾಹಕ ಅಗ್ನಿಯು ಪ್ರಜ್ವಲಿತವಾಗಿ ಉರಿದೇಳುತ್ತದೆ ಕಲ್ಪಾಂತ ಕಾಲದಲ್ಲಿ. ವಿಶ್ವವನ್ನೇ ದಹಿಸುವ ಕಾಲಾಗ್ನಿಯು ಈ ಸಂಕರ್ಷಣನಿಂದಲೇ ಪ್ರೇರಿತವಾಗಿ ಪ್ರಪಂಚವನ್ನೆಲ್ಲ ಸುಟ್ಟು ಹಾಕುತ್ತದೆ ಪ್ರಳಯಕಾಲ ಬಂದಾಗ. ಈ ರೀತಿಯಾಗಿ ಪಾತಾಳದ ಅಧೋಭಾಗದಲ್ಲಿ ಇರುವ ಬೇರೆ ಬೇರೆ ಸ್ಥಾನಗಳ ವಿವರಣೆಯನ್ನು ನಾನು ತಿಳಿಸಿದೆ. ಈ ಎಲ್ಲ ಅತ್ಯಾಶ್ಚರ್ಯಕರವಾದ ಬ್ರಹ್ಮಾಂಡವನ್ನು ನಿರ್ಮಿಸಿದ ಬ್ರಹ್ಮ, ವಿಷ್ಣು ಮಹಾದೇವ ಈ ತ್ರಿಮೂರ್ತಿಗಳಿಗೆ ನನ್ನ ಅನಂತ ನಮಸ್ಕಾರ. ವಿಷ್ಣು ಲೋಕ, ರುದ್ರಲೋಕಗಳು ಈ ಬ್ರಹ್ಮಾಂಡದ ಹೊರಗೆ ಇರುತ್ತವೆ. ಭಗವದ್ಭಕ್ತರು ಮಾತ್ರ ಅಲ್ಲಿ ಹೋಗಬಲ್ಲರು. ಆ ದಿವ್ಯ ಧಾಮಗಳ ಬಣ್ಣನೆಯನ್ನು ಮಾಡಲು ಚತುರ್ಮುಖನೊಬ್ಬನೇ ಚತುರ. ಈ ಎಲ್ಲ ಬ್ರಹ್ಮಾಂಡವು ಸುತ್ತಕಡೆಯಿಂದಲೂ ಬಳುವಲಕಾಯಿಯ ಬೀಜವು ಮೇಲಿನ ದುಂಡು ಪರಟೆಯಿಂದ ಆಚ್ಛಾದಿಸಲ್ಪಟ್ಟಂತೆ ಕಟಾಹದಿಂದ ಆವರಿಸಲ್ಪಟ್ಟಿದೆ. ಆ ಬ್ರಹ್ಮಾಂಡದ ಮೇಲಿನ ಕಟಾಹ ಅಥವಾ ಮುಚ್ಚಳದ ಆವರಣವು ತನಗಿಂತ ಹತ್ತು ಪಾಲು ಮಿಗಿಲಾದ ಜಲಾವರಣದಿಂದ ಸುತ್ತುವರೆಯಲ್ಪಟ್ಟಿದೆ. ಆ ನೀರು ತನಗಿಂತ ಹತ್ತು ಮಡಿ ಮಿಗಿಲಾದ ತೇಜಸ್ಸಿನಿಂದ, ತೇಜಸ್ಸು ವಾಯುವಿನಿಂದ, ವಾಯು ಆಕಾಶದಿಂದ, ಆಕಾಶವು ಅಹಂಕಾರ ತತ್ವದಿಂದ, ಅಹಂಕಾರವು ಮಹತ್‌ತತ್ವದಿಂದ ಆವೃತವಾಗಿವೆ. ಈ ಮಹತ್‌ತತ್ವವನ್ನು ಸರ್ವಪ್ರಧಾನವಾದ ಪ್ರಕೃತಿಯು ಆವರಿಸಿಕೊಂಡಿದೆ. ಮೊದಲಿನ ಆರು ಆವರಣಗಳು ಉತ್ತರೋತ್ತರ ಹತ್ತತ್ತು ಪಟ್ಟು ಅಧಿಕವಾಗಿರುತ್ತವೆ. ಏಳನೆಯ ಪ್ರಕೃತಿಯ ಆವರಣವು ಮಾತ್ರ ಅನಂತ. ಈ ಪ್ರಕೃತಿಯ ಆವರಣದ ಒಳಗೆ ಕೋಟಿ ಕೋಟಿ ಸಂಖ್ಯೆಯ ಇಂಥ ಬ್ರಹ್ಮಾಂಡಗಳು ಇರುತ್ತವೆ.

ಇಂಥ ಅನಂತ ಕೋಟಿ ಬ್ರಹ್ಮಾಂಡಗಳ ನಾಯಕನೂ ನಿಯಾಮಕನೂ ನಿರ್ಮಾಪಕನೂ ಆದ ಸದಾಶಿವನಿಗೆ ನಾನು ನಮಸ್ಕರಿಸುತ್ತೇನೆ. ಇದೇ ಆ ಪರಮೇಶ್ವರನ ಮಹಾ ಐಶ್ವರ್ಯ. ಇಂಥ ಪರಮೇಶ್ವರನನ್ನು ಭಜಿಸದ ಮಾನವನಿಗಿಂತ ಮಿಗಿಲಾದ ಮೂರ್ಖರು ಯಾರಾದರೂ ಉಂಟೇ ಈ ಭೂತಳದಲ್ಲಿ ! ಅಂಥ ಮೂಢನು ಮಹಾ ಪಾಪಿಷ್ಠ. ಪ್ರಾಣಿಗಳಲ್ಲಿಯೇ ಅವನು ಅತ್ಯಂತ ಕನಿಷ್ಠ.



ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತಾರನೇ ಅಧ್ಯಾಯ ಮುಗಿದುದು

# ಕಾಲಮಾನದ ವಿವರಣೆ

ಅಧ್ಯಾಯ -27

ಈಗ ನಾನು ನಿನಗೆ ಕಾಲಮಾನವನ್ನು ಹೇಳುತ್ತೇನೆ ಕೇಳು. ಬಲ್ಲವರು ಹದಿನೈದು ನಿಮಿಷಗಳಿಗೆ ಕಾಷ್ಠಾ ಎನ್ನುವರು. ಮೂವತ್ತು ಕಾಷ್ಠಾ ಎಂದರೆ ಒಂದು ಕಲೆ. ಮೂವತ್ತು ಕಲೆಗಳು ಒಂದು ಮುಹೂರ್ತ. ಮೂವತ್ತು ಮುಹೂರ್ತಗಳು ಕೂಡಿದರೆ ಒಂದು ಹಗಲು ರಾತ್ರಿ ಆಗುತ್ತದೆ. ಒಂದು ದಿನದಲ್ಲಿ ಎಂದರೆ, ಹಗಲಿನಲ್ಲಿ ಮೂರು ಮುಹೂರ್ತಗಳ ಐದು ಕಾಲಗಳು ಇರುತ್ತವೆ. ಪ್ರಾತಃಕಾಲ, ಸಂಗಮಕಾಲ, ಮಧ್ಯಾಹ್ನಕಾಲ, ಅಪರಾಹ್ನಕಾಲ, ಸಾಯಾಹ್ನಕಾಲದ, ಈ ಐದು ಕಾಲಗಳು ಮೂರು ಮೂರು ಮುಹೂರ್ತ ಉಳ್ಳವುಗಳು ಇರುತ್ತವೆ. ಮೂರು ಮುಹೂರ್ತದ ಈ ಐದು ಕಾಲಗಳು ಕೂಡಿ ಹದಿನೈದು ಮೂಹೂರ್ತದ ಒಂದು ಹಗಲು ಆಗುವದು. ಉಳಿದ ಹದಿನೈದು ಮೂಹೂರ್ತ ರಾತ್ರಿ ಕಾಲ ಎನಿಸುವದು. ಈ ಹಗಲಿರುಳು ಕೂಡಿ ಮೂವತ್ತು ಮೂಹೂರ್ತಗಳು ಕಳೆದರೆ, ಒಂದು ಪೂರ್ಣದಿವಸ ಎನಿಸುವದು. ಇಂಥ ಹದಿನೈದು ಹಗಲಿರುಳು ಕೂಡಿದರೆ, ಒಂದು ಪಕ್ಷ ಎನ್ನುವರು. ಎರಡು ಪಕ್ಷಗಳು ಕೂಡಿದರೆ, ಒಂದು ಮಾಸ. ಎರಡು ಸೌರಮಾಸಗಳಿಗೆ ಒಂದು ಋತು. ಮೂರು ಋತು ಅಥವಾ ಆರು ತಿಂಗಳಗಳಿಗೆ ಒಂದು ಅಯನ ಎನ್ನುವರು. ಇಂಥ ಎರಡು ಅಯನಗಳು- ಉತ್ತರಾಯಣ, ದಕ್ಷಿಣಾಯಣ ಕೂಡಿದರೆ, ಒಂದು ವರ್ಷ, ಎಂದು ಹೇಳುವರು. ಈ ತಿಂಗಳು ಅಥವಾ ಮಾಸಗಳು 'ಸೌರಮಾಸ' 'ಚಾಂದ್ರ,' ಮಾಸ, ನಕ್ಷತ್ರ ಮಾಸ, ಸಾವನ ಮಾಸ, ಎಂದು ನಾಲ್ಕು ಬಗೆಯಾಗಿವೆ. ಸೌರಮಾಸದ ಆರಂಭವು ಸೂರ್ಯ ಸಂಕ್ರಾಂತಿಯಿಂದ ಮೊದಲಾಗುವುದು. ಸೂರ್ಯನು ಒಂದು ಸಂಕ್ರಾಂತಿಯಿಂದ ಇನ್ನೊಂದು ಸಂಕ್ರಾಂತಿಯವರೆಗೆ ಇರುವುದೇ ಸೌರಮಾಸ ಎಂದು ಕರೆಯಲ್ಪಡುವದು. ಈ ಮಾಸವು ಬಹುಶಃ ಮೂವತ್ತು ಅಥವಾ ಮೂವತ್ತೊಂದು ದಿನಗಳದು ಇರುವದು. ಒಮ್ಮೊಮ್ಮೆ ಸೌರಮಾಸದಲ್ಲಿ ಇಪ್ಪತ್ತೊಂಬತ್ತು ದಿನಗಳೂ ಬರುವದುಂಟು. ಚಂದ್ರನ ಕಲೆಯ ವೃದ್ಧಿ ಹ್ರಾಸಗಳ ಮೇಲೆ ಆಗುವ ಎರಡು ಪಕ್ಷಗಳ ಒಂದು ತಿಂಗಳಿಗೆ ಚಂದ್ರಮಾಸ ಎನ್ನುವರು. ಈ ಚಾಂದ್ರಮಾಸವು ಎರಡು ಪ್ರಕಾರದ್ದು ಇರುತ್ತದೆ ಶುಕ್ಲಪಕ್ಷದ ಪ್ರತಿಪದೆಯಿಂದ ಆರಂಭಿಸಿ ಅಮಾವಾಸ್ಯೆಯವರೆಗೆ ಆಗುವ ಅಮಾಂತ ಮಾಸಕ್ಕೆ ಮುಖ್ಯ ಚಾಂದ್ರಮಾಸ ಎನ್ನುವರು. ತಿಂಗಳಿನ ಕೃಷ್ಣ ಪಕ್ಷ ಪ್ರತಿಪದೆಯಿಂದ ಪೂರ್ತಿಗೊಳ್ಳುವ ಅವಧಿಗೆ ಗೌಣ ಚಾಂದ್ರಮಾಸ ಎನ್ನುವರು. ಈ ಚಾಂದ್ರ ಮಾಸದ ದಿನಗಳು ತಿಥಿಗಳ ವೃದ್ಧಿಹ್ರಾಸಗಳನ್ನು ಅನುಸರಿಸಿ 29,30, ಮತ್ತು 28,27 ದಿನಗಳುಳ್ಳವು ಆಗುತ್ತವೆ.

ನಕ್ಷತ್ರ ಮಾಸ ಎಂದರೆ ಚಂದ್ರನು ಅಶ್ವಿನೀ ನಕ್ಷತ್ರದಿಂದ ಆರಂಭಿಸಿ ರೇವತಿ ನಕ್ಷತ್ರದ ವರೆಗೆ ಸಂಚರಿಸಲು ಎಷ್ಟು ಸಮಯ ತಗುಲುವುದೋ ಆ ಸಮಯವು ನಕ್ಷತ್ರ ಮಾಸ ಎಂದು ಹೇಳಲ್ಪಡುವದು. ಇದು ಬಹುಶಃ ಇಪ್ಪತ್ತೇಳು ದಿನಗಳ ಒಂದು ಮಾಸ ಆಗುತ್ತದೆ. ನಾಲ್ಕನೆಯದಾದ ಸಾವನ ಮಾಸವು ಸರಿಯಾಗಿ ಮೂವತ್ತು ದಿನದ್ದು ಇರುತ್ತದೆ. ಇದರಲ್ಲಿಯೂ ಸೌರ ಸಾವನ ಮಾಸ ಚಾಂದ್ರ ಸಾವನ ಮಾಸ

ಎಂದು ಎರಡು ಪ್ರಕಾರ ಇದೆ. ಸೌರ ಮಾಸವು ಸೌರ ಮಾಸದ ಯಾವುದಾದರೂ ಒಂದು ತಿಥಿಯಿಂದ ಪ್ರಾರಂಭವಾಗಿ ಮೂವತ್ತನೆಯ ದಿನ ಪೂರ್ಣವಾಗುವದು. ಚಾಂದ್ರ ಸಾವನ ಮಾಸವು ಚಾಂದ್ರ ಮಾಸದ ಯಾವುದಾದರೂ ಒಂದು ತಿಥಿಯಿಂದ ಪ್ರಾರಂಭವಾಗಿ ಮೂವತ್ತನೆಯ ದಿನ ಸಮಾಪ್ತವಾಗುವದು.

ಪ್ರತ್ಯೇಕ ಸಂವತ್ಸರದಲ್ಲಿ ಹನ್ನೆರಡು ಸೌರ ಮಾಸಗಳೂ ಹನ್ನೆರಡು ಚಾಂದ್ರ ಮಾಸಗಳೂ ಇರುತ್ತವೆ. ಆದರೆ, ಸೌರವರ್ಷವು 365 ದಿನಗಳದು, ಚಾಂದ್ರ ವರ್ಷವು 355 ದಿನಗಳದೂ ಆಗುತ್ತದೆ. ಇದರಿಂದ ಎರಡರಲ್ಲಿಯೂ ಪ್ರತಿವರುಷ ಹತ್ತು ದಿನದ ಅಂತರ ಬೀಳುವದು. ಈ ವೈಷಮ್ಯವನ್ನು ದೂರ ಮಾಡಲಿಕ್ಕಾಗಿ ಪ್ರತಿ ಮೂರು ವರುಷಕ್ಕೊಮ್ಮೆ ಹನ್ನೆರಡರ ಬದಲು ಹದಿಮೂರು ಚಾಂದ್ರ ಮಾಸಗಳನ್ನು ಹಿಡಿಯುತ್ತಾರೆ. ಈ ಹೆಚ್ಚಿನ ಮಿಗಿಲಾದ ಮಾಸಕ್ಕೆ ಅಧಿಕ ಮಾಸ ಮಲಮಾಸ ಎಂದು ಕರೆಯುತ್ತಾರೆ. ವರ್ಷಗಳೂ ಕೂಡ ಐದು ವಿಧವಾಗಿರುತ್ತವೆ. ಸಂವತ್ಸರ, ಪರಿವತ್ಸರ, ಇಡಾತ್ಸರ, ಅನುವತ್ಸರ, ಯುಗವತ್ಸರ ಎಂದು. ಗುರುಗ್ರಹದ ಗತಿಯನ್ನು ಅನುಸರಿಸಿ ಪ್ರಭವ ವಿಭವ ಮುಂತಾಗಿ ಅರವತ್ತು ಸಂವತ್ಸರಗಳಲ್ಲಿ ಹನ್ನೆರಡು ಯುಗಗಳು ಆಗುತ್ತವೆ. ಈ ಒಂದೊಂದು ಯುಗದಲ್ಲಿಯೂ ಐದು ಐದು ವತ್ಸರಗಳು ಇರುತ್ತವೆ. ಈ ಹನ್ನೆರಡು ಯುಗಗಳ ಹೆಸರುಗಳು ಹೀಗೆ ಇರುತ್ತವೆ. ಪ್ರಜಾಪತಿ, ಧಾತಾ, ವೃಕ್ಷ, ವ್ಯಯಖರ, ದುರ್ಮುಖ, ಪ್ಲವ, ಪರಾಭವ, ರೋಧಕೃತ, ಅಸಲ, ದುರ್ಮತಿ, ಕ್ಷಯ, ಈ ಹನ್ನೆರಡು ಯುಗಗಳಲ್ಲಿ ಒಂದೊಂದು ಯುಗದಲ್ಲಿ ಐದೈದು ವತ್ಸರಗಳು ಇರುತ್ತವೆ. ಅವುಗಳಲ್ಲಿ ಮೊದಲನೆಯ ವತ್ಸರಕ್ಕೆ ಸಂವತ್ಸರ ಎನ್ನುವರು. ಎರಡನೆಯದು ಪರಿವತ್ಸರ, ಮೂರನೆಯದು ಇಡಾತ್ಸರ. ನಾಲ್ಕನೆಯದು ಅನುವತ್ಸರ, ಐದನೆಯದು ಯುಗವತ್ಸರ. ಈ ಐದು ಬಗೆಯಾದ ವತ್ಸರ ಅಥವಾ ವರ್ಷಗಳಿಗೆ ಬೇರೆ ಬೇರೆ ಅಭಿಮಾನಿ ದೇವತೆಗಳು ಇರುತ್ತಾರೆ. ಮಾನವನ ಒಂದು ತಿಂಗಳು ಪಿತೃಗಳಿಗೆ ಹಗಲು ರಾತ್ರಿ ಕೂಡಿದ ಒಂದು ದಿನ ಎನಿಸುತ್ತದೆ. ಕೃಷ್ಣ ಪಕ್ಷವೂ ಪಿತೃಗಳ ಹಗಲು, ಶುಕ್ಲ ಪಕ್ಷವು ಅವರಿಗೆ ರಾತ್ರಿ. ಮನುಷ್ಯರ ಒಂದು ವರ್ಷವು ದೇವತೆಗಳ ಒಂದು ಹಗಲು ಎನಿಸುವದು. ಉತ್ತರಾಯಣವು ದೇವತೆಗಳ ಒಂದು ಹಗಲು ದಕ್ಷಿಣಾಯಣ ಒಂದು ರಾತ್ರಿ.

ದೇವತೆಗಳ ಒಂದು ವರ್ಷವು ಪೂರ್ಣವಾದರೆ. ಸಪ್ತರ್ಷಿಗಳಿಗೆ ಒಂದು ದಿನವಾಗುವದು. ಸಪ್ತರ್ಷಿಗಳ ಒಂದು ವರ್ಷವು ಧ್ರುವನ ಒಂದು ದಿವಸ ಎನಿಸುವದು. ಮನುಷ್ಯನ ಮಾನವನ್ನು ಅನುಸರಿಸಿ ಹದಿನೇಳು ಲಕ್ಷ ಇಪ್ಪತ್ತೆಂಟು ಸಾವಿರ ವರ್ಷಗಳು ಸತ್ಯಯುಗದಲ್ಲಿ ಇರುತ್ತವೆ. ತ್ರೇತಾಯುಗದಲ್ಲಿ ಹನ್ನೆರಡು ಲಕ್ಷ, ತೊಂಬತ್ತಾರು ಸಾವಿರ ಮಾನವ ವರ್ಷಗಳು ಪೂರ್ತಿಗೊಳ್ಳುತ್ತವೆ. ಮಾನವ ಮಾನದಿಂದ ಎಂಟು ಲಕ್ಷ ಅರವತ್ನಾಲ್ಕು ಸಾವಿರ ವರ್ಷಗಳಾದರೆ, ದ್ವಾಪರಯುಗವು ಪೂರ್ಣವಾಗುವುದು. ನಾಲ್ಕು ಲಕ್ಷ ಮೂವತ್ತೆರಡು ಸಾವಿರ ವರ್ಷಗಳಿಂದ ಕಲಿಯುಗವು ಪೂರ್ತಿಯಾಗುವದು.

ಈ ನಾಲ್ಕು ಮನುಷ್ಯ ಮಾನದ ಯುಗಗಳು ಕೂಡಿದರೆ, ದೇವತೆಗಳ ಒಂದು ಯುಗವಾಗುವದು. ಇಂಥ ಎಪ್ಪತ್ತೊಂದು ಯುಗಳ ಮೇಲೆ ಕಿಂಚಿತ್ ಕಾಲ ಒಂದು ಮನ್ವಂತರ ಎನಿಸುವದು. ಇಂಥ ಹದಿನಾಲ್ಕು ಮನ್ವಂತರಗಳು ಪೂರ್ತಿಯಾಗಿ ಕಳೆದ

ಬಳಿಕ ಬ್ರಹ್ಮದೇವರ ಒಂದು ಹಗಲು ಪೂರ್ಣ ಮುಗಿಯುವದು. ಒಂದು ಸಾವಿರ ಚತುರ್ಯುಗಗಳು ಎಂದರೆ ಒಂದು ಕಲ್ಪ. ಇಂಥ ಮೂವತ್ತು ಕಲ್ಪಗಳಾದರೆ. ಬ್ರಹ್ಮದೇವರ ಒಂದು ತಿಂಗಳಾಗುವದು. ಈ ಮೂವತ್ತು ಕಲ್ಪಗಳ ಹೆಸರು ಇಂತಿವೆ. ಭವೋದ್ಭವ , ತಪೋಭವ್ಯ, ಋತು, ವನ್ಹಿ, ವರಾಹ, ಸಾವಿತ್ರ, ಔಸಿಕ, ಗಾಂಧಾರ, ಕುಶಿಕ, ಋಷಭ, ಥಂಗ, ಗಾಂಧಾರೀಯ, ಮಧ್ಯಮ, ವೈರಾಜ, ನಿಷಾದ, ಮೇಷವಾಹನ, ಪಂಚಮ, ಚಿತ್ರಕಜ್ಞಾನ, ಆಕೃತಿ, ಮೀನ, ದಂಶ, ಭೃಂಹಕ, ಶ್ವೇತ, ಲೋಹಿತ, ರಕ್ತ, ಪೀತವಾಸಾ, ಶಿವ, ಪ್ರಭು, ಸರ್ವರೂಪ. ಇವು ಮೂವತ್ತು ಕಲ್ಪಗಳು ಕೂಡಿ ಬ್ರಹ್ಮದೇವರ ಒಂದು ಮಾಸ ಎನಿಸುವುದು. ಇಂಥ ಹನ್ನೆರಡು ಮಾಸಗಳಿಂದ ಒಂದು ವರ್ಷವಾಗುವದು. ಇಂಥ ನೂರು ವರ್ಷಗಳು ಕಳೆದರೆ ಬ್ರಹ್ಮದೇವರ ಆಯುಷ್ಯದ ಪೂರ್ವಾರ್ಧವಾಗುವುದು. ಇದರಷ್ಟೇ ನೂರು ವರ್ಷದ ಅಪರಾರ್ಧವು ಪೂರ್ತಿಯಾದರೆ ಬ್ರಹ್ಮದೇವರ ಪೂರ್ಣಾಯುಷ್ಯ ಮುಗಿದಂತಾಗುವದು. ಬ್ರಹ್ಮದೇವರ ಈ ಆಯುರ್ಮಾನವು ಮುಗಿದ ಬಳಿಕ ಮಹಾ ಪ್ರಳಯ ಆಗುವದು. ಆ ಪ್ರಳಯಾನಂತರ ಮತ್ತೆ ಸೃಷ್ಟಿ ಇದು ಬ್ರಹ್ಮಮಾನದ ಸಮಾಚಾರ, ಇನ್ನು ಹರಿಹರರ ಆಯುರ್ಮಾನವನ್ನು ವರ್ಣಿಸಲು ಯಾರು ಸಮರ್ಥರು ?

**ನಾರದ :** ಮಧ್ಯಮಪಾಂಡವನೇ, ನಾಭಿರಾಜನ ಮಗ ಋಷಭ ಎಂಬ ಹೆಸರಿನಿಂದ ಪ್ರಸಿದ್ಧನಾದ ಎಂದು ಹಿಂದೆ ಹೇಳಿದೆಯಷ್ಟೆ ? ಈ ಋಷಭನ ಹೆಸರಿನ ಮೇಲಿನಿಂದ ಕಲಿಯುಗದಲ್ಲಿ ಬಗೆ ಬಗೆಯ ಪಾಖಂಡವಾದಗಳೂ ನಾಸ್ತಿಕಮತಗಳೂ ಕಲ್ಪಿಸಲ್ಪಡುವವು. ಅವುಗಳಿಂದ ಜನಮನವೆಲ್ಲವೂ ಮೋಹಮುಗ್ಧ. ಆ ಋಷಭರಾಜನ ಮಗನೇ ಭರತಮಹಾರಾಜ, ಭರತರಾಜನ ಹಿರಿಯ ಮಗ ಶತಶೃಂಗ. ಇವನಿಗೆ ಎಂಟು ಗಂಡು ಒಂದು ಹೆಣ್ಣು ಮಗಳು. ಇಂದ್ರದ್ವೀಪ, ಕಸೇರು, ತಾಮ್ರದ್ವೀಪ, ಗಭಸ್ತಿಮಾನ, ನಾಗ, ಸೌಮ್ಯ, ಗಂಧರ್ವ, ವರಣ, ಎಂದು ಆ ಎಂಟು ರಾಜಪುತ್ರರ ಹೆಸರು, ಈ ಶತಶೃಂಗ ರಾಜನಿಗೆ ಮಗಳು ಮಾತ್ರ ಒಬ್ಬಳು. ಅವಳ ಮುಖವು ಕೂಡ ಆಡಿನ ಮುಖದಂತಿತ್ತು. ರಾಜಕುಮಾರಿಗೆ ಆಡಿನ ಮುಖವು ಬರಲು ಒಂದು ಕೌತುಕದ ಕಾರಣವಿದೆ. ಹೇಳುತ್ತೇನೆ ಕೇಳು.

ಮಹೀಸಾಗರ ಸಂಗಮತೀರ್ಥದ ತೀರದಲ್ಲಿ ಸ್ತಂಭತೀರ್ಥ ಇದೆಯಷ್ಟೇ ! ಅದರ ಸಮೀಪದ ದುರ್ಗಮ ಪ್ರದೇಶದಲ್ಲಿ ಸಂಚರಿಸುವ ಕುರಿಹಿಂಡಿನಿಂದ ಒಂದು ಮೇಕೆಯು ತಪ್ಪಿಸಿಕೊಂಡು ಹೋಯಿತು. ಬಾಯಾರಿಕೆಯಿಂದ ಬಳಲಿದ ಆ ಮೇಕೆಯು ನೀರನ್ನು ಅರಸುತ್ತ ಆ ಗೊಂಡಾರಣ್ಯದಲ್ಲಿ ನುಗ್ಗಿತು. ಗಿಡಬಳ್ಳಿಗಳು ನಿಬಿಡವಾಗಿ ಹೆಣೆದುಕೊಂಡಿದ್ದವು ಆ ವನಾಂತರದಲ್ಲಿ. ನೀರಡಿಸಿ ಓಡುವ ಆ ಮೇಕೆಯು ಒಂದು ಬಳ್ಳಿವಾಡದಲ್ಲಿ ಬಿದ್ದು ಬಿಡಿಸಿಕೊಳ್ಳಲಾಗದೇ ಒದ್ದಾಡಿ ಸತ್ತು ಹೋಯಿತು.

ಕೆಲಸಮಯದ ನಂತರ ಆ ಮೇಕೆಯ ತಲೆಯ ಕೆಳಗಿನ ದಡವು ಕತ್ತರಿಸಿ ಮಹೀಸಾಗರ ಸಂಗಮದಲ್ಲಿಯೇ ಕಡಿದು ಬಿದ್ದಿತು, ಅಂದು ಶನೈಶ್ಚರ ಹಾಗೂ ಅಮಾವಾಸ್ಯಾ ತಿಥಿಯ ಯೋಗವಿದ್ದಿತು. ದಡವು ಜಾರಿ ತೀರ್ಥಜಲದಲ್ಲಿ ಬಿದ್ದರೂ

ಆ ಮೇಕೆಯ ತಲೆಯು ಮಾತ್ರ ಲತಾಜಾಲದಲ್ಲಿ ಸಿಕ್ಕು ನೀರಿನಲ್ಲಿ ಬೀಳದೇ ಅಲ್ಲಿಯೇ ಉಳಿಯಿತು. ಆ ಮೇಕೆಯ ಉಳಿದ ದೇಹವು ಮಾತ್ರ ನೀರಿನಲ್ಲಿ ಬಿದ್ದುದರಿಂದ ಆ ತೀರ್ಥದ ಪ್ರಭಾವದಿಂದ ಮೇಕೆಯು ಜನ್ಮಾಂತರದಲ್ಲಿ ಸಿಂಹಳ ದೇಶದ ಆರಸನ ಮಗಳಾಗಿ ಹುಟ್ಟಿತು. ಆದರೆ ಆ ರಾಜಕುಮಾರಿಯ ಮುಖವು ಮಾತ್ರ ಮೇಕೆಯ ಮುಖದಂತಿದ್ದಿತು. ಆದರೆ ಅವಳ ಉಳಿದ ಅವಯವಗಳೆಲ್ಲ ಮಾನವೀ ಕಾಂತಿಯನ್ನು ಹೊಂದಿ ಹೊಳೆಯುತ್ತಿದ್ದವು. ಶತಶೃಂಗ ಮಹಾರಾಜನಿಗೆ ಬಹುಕಾಲದವರೆಗೆ ಮಕ್ಕಳೇ ಆಗಿರಲಿಲ್ಲ. ಆದ್ದರಿಂದ ಕನ್ಯಾರತ್ನ ಜನಿಸಿದರೂ ನೂರು ಗಂಡುಮಕ್ಕಳು ಜನಿಸಿದ್ದಕ್ಕಿಂತ ಹೆಚ್ಚಿಗೆ ಆನಂದವಾಯಿತು ಆ ರಾಜರ್ಷಿಗೆ. ಆದರೆ ರಾಜಕನ್ಯೆಯ ಈ ಆಡಿನ ಮುಖವನ್ನು (ಅಜಾ) ಕಂಡು ಎಲ್ಲ ರಾಜಪರಿವಾದವರಿಗೂ ಅತ್ಯಾಶ್ಚರ್ಯ. ರಾಜನಿಗೂ ಅಪರೂಪವಾಗಿ ಹುಟ್ಟಿದ ಮಗಳ ಮುಖ ಮೇಕೆಯಂತಿರುವದು ಕಂಡು ಕಡು ದುಃಖವಾಯಿತು. ಮಹಾರಾಣಿಯದೂ ಇದೇ ಅವಸ್ಥೆ. ಆದಕ್ಕೇನೂ ಉಪಾಯವಿರಲಿಲ್ಲ. ಈ ವರೆಗೆ ಮಕ್ಕಳ ಮುಖವನ್ನೇ ಕಾಣದ ರಾಜದಂಪತಿಗಳು ಮೇಕೆಯಂತಿದ್ದ ಮಗಳನ್ನೇ ಮುದ್ದು ಮಾಡಿ ಬೆಳಿಸಿದರು. ಅರಮನೆಯಲ್ಲಿ ಆನಂದದಿಂದ ಬೆಳೆದಳು ಅಜಾಮುಖಿ ಕನ್ಯೆ. ಅವಳು ದೊಡ್ಡವಳಾದಳು. ನವತಾರುಣ್ಯದಿಂದ ಅವಳ ಅಂಗಾಂಗಗಳಲ್ಲಿ ಕಾಂತಿ ಚಿಮ್ಮಿತು. ಒಂದು ದಿನ ಅವಳು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡಳು. ಇದೇನು ಮೇಕೆಯ ಮುಖ ! ಅದನ್ನು ಕಂಡ ಕೂಡಲೇ ಅವಳಿಗೆ ಒಮ್ಮೆಲೇ ನೆನಪಾಯಿತು ತನ್ನ ಜನ್ಮಾಂತರದ ವೃತ್ತಾಂತ. ತಾಯಿ ತಂದೆಯರ ಬಳಿಗೆ ಬಂದಳು. ಬಂದು ತನ್ನ ಜನ್ಮಾಂತರದ ಕತೆಯನ್ನೆಲ್ಲ ಬಿತ್ತರಿಸಿದಳು. ಅವರೆದುರು ಸಾದ್ಯಂತವಾಗಿ.

ಜನ್ಮಾಂತರದಲ್ಲಿ ತನ್ನ ದೇಹಪಾತವಾದ ಸ್ಥಳಕ್ಕೆ ಹೋಗಬೇಕೆಂದು ನಿರ್ಧರಿಸಿದಳು. ತಾಯಿತಂದೆಗಳ ಆಜ್ಞೆ ಪಡೆದಳು. ನೌಕೆಯನ್ನು ಏರಿದಳು. ಸ್ತಂಭ ತೀರ್ಥಕ್ಕೆ ಬಂದು ತಲುಪಿದಳು. ಆ ಪುಣ್ಯ ತೀರ್ಥದಲ್ಲಿ ಸ್ನಾನ ಮಾಡಿದಳು ವಿಧಿಪೂರ್ವಕವಾಗಿ, ಶಿವನನ್ನು ಪೂಜಿಸಿ ರಾಜಕುಮಾರಿಯು ತನ್ನ ಸಂಪತ್ ಸರ್ವಸ್ವವನ್ನೂ ಯೋಗ್ಯ ತಪಸ್ವಿಗಳಿಗೆ ದಕ್ಷಿಣಾರೂಪವಾಗಿ ಕೊಟ್ಟು ಸಂತೋಷಪಡಿಸಿದಳು ಜ್ಞಾನಿಗಳನ್ನು. ನಂತರ ಆ ಲತಾಗುಲ್ಮಗಳ ಜಾಲದಲ್ಲಿ ಹುಡುಕಿದಳು. ಹಿಂದಿನ ಜನ್ಮದ ನೆನಹು ಅವಳಿಗೆ ಅಚ್ಚಳಿಯದೇ ಇದ್ದಿತು. ಆದರಿಂದ ಜನ್ಮಾಂತರದಲ್ಲಿ ತನ್ನ ತಲೆ ಸಿಕ್ಕು ಹಾಕಿಕೊಂಡ ನಿಬಿಡವನಾಂತರದ ಗಹನ ಗುಟ್ಟಿನಲ್ಲಿದ್ದ ದಟ್ಟ ಲತಾಬಳ್ಳಿಗಳ ಎಸಳು ಎಳೆಗಳ ಪಾಶರಾಶಿಯುಳ್ಳ ಆ ತಾಣವು ಕೂಡಲೇ ಆವಳಿಗೆ ದೊರಕಿತು. ಅಲ್ಲಿಯೇ ಅವಳ ಜನ್ಮಾಂತರದ ಮೇಕೆಯ ದೇಹದ ತಲೆಯು ಲತಾಪಾಶಬದ್ಧವಾಗಿ ಜೋತಾಡುತ್ತಿರುವುದು ಕಾಣಿಸಿತು. ಅವಳು ತನ್ನದೇ ಆದ ಆ ಜನ್ಮಾಂತರದ ತಲೆಯನ್ನು ತಂದು ಸಂಗಮದ ತೀರದಲ್ಲಿ ಚಿತೆಯನ್ನು ತಯಾರು ಮಾಡಿಸಿ ಆ ಮೇಕೆಯ ಮುಖವನ್ನು ದಹನ ಮಾಡಿದಳು. ಅದರಲ್ಲಿ ಉಳಿದ ಮೂಳೆಗಳನ್ನು ಮಹೀಸಾಗರ ಸಂಗಮ ತೀರ್ಥದಲ್ಲಿ ಬಿಸಾಕಿದಳು. ಆ ತೀರ್ಥೋದಕದ ಪ್ರಭಾವದಿಂದ ಅವಳ ಮುಖವು ಕೂಡಲೇ ಚಂದ್ರನಂತೆ ಸುಂದರ ಕಾಂತಿಯುಕ್ತವಾಯಿತು. ದೇವತೆಗಳೂ, ದಾನವರೂ, ಮಾನವರೂ ಅವಳ ಅಪ್ರತಿಮ ರೂಪದಿಂದ ಚಕಿತರಾದರು. ಅದರಲ್ಲಿಯೂ ಅಪ್ರತಿಮೆ ಕಾಂತಿಯಿಂದ

ಕಂಗೊಳಿಸವ ಅವಳ ಮುಖ ಸೌಂದರ್ಯವನ್ನು ಕಂಡು ರಾಜಮಹಾರಾಜರೆಲ್ಲರೂ ಮುಗ್ಧರಾದರು. ಅವಳನ್ನು ಪಡೆಯಬೇಕೆಂದು ಶತಶೃಂಗ ರಾಜನಿಗೆ ಕನ್ಯಾಯಾಚನೆ ಮಾಡಿದರು. ಆದರೆ ಆ ರಾಜಕುಮಾರಿಗೆ ಮಾತ್ರ ಅಲ್ಲಿ ಬಂದ ಯುವ ರಾಜಕುಮಾರನೂ ತನಗೆ ಪತಿ ಆಗಲು ಯೋಗ್ಯವೆಂದು ಅನಿಸಲಿಲ್ಲ. ಅದ್ದರಿಂದ ಅವಳು ಯಾರನ್ನೂ ವರಿಸಲಿಲ್ಲ. ಅನಂತರ ಆ ನೃಪ ನಂದಿನಿಯು ಆನಂದದಿಂದ ಪ್ರಸನ್ನ ಮನದಿಂದ ಕಠೋರವಾದ ತಪೋನುಷ್ಠಾನವನ್ನು ಆರಂಭಿಸಿದಳು.

ತಪಶ್ಚರ್ಯೆ ಒಂದು ವರ್ಷ ಪೂರ್ತಿ ಮುಗಿಯಿತು. ತಪಸ್ಸನ್ನು ಅತ್ಯುಗ್ರವಾಗಿ ಆಚರಿಸಿದಾಗ ಪ್ರತ್ಯಕ್ಷನಾದ ಪರಮೇಶ್ವರ ಪ್ರೀತಿಯಿಂದ ನುಡಿದ - ''ನಾನು ನಿನಗೆ ವರ ಕೊಡಲೆಂದೇ ಬಂದಿದ್ದೇನೆ. ಬೇಕಾದ್ದನ್ನು ಕೇಳು.'' ರಾಜಕುಮಾರಿಗೆ ಹೃದಯತುಂಬ ಹಿಗ್ಗು. ಭಕ್ತಿಯಿಂದ ಪೂಜಿಸಿದಳು ಪಾರ್ವತಿಪತಿಯನ್ನು. ಕೈ ಮುಗಿದು ನುಡಿದಳು - ''ದೇವ ದೇವ ! ನೀನು ನನ್ನ ಮೇಲೆ ಪ್ರಸನ್ನನಾಗಿರುವೆಯಷ್ಟೇ ! ನನಗೆ ವರ ಕೊಡುವ ಅಪೇಕ್ಷೆ ಇದ್ದರೆ ನೀನು ಈ ತೀರ್ಥದಲ್ಲಿ ನಿರಂತರವೂ ವಾಸಮಾಡು.''

ಅವಳ ಪ್ರಾರ್ಥನೆಯನ್ನು ಸಂತಸದಿಂದ ಅಂಗೀಕರಿಸಿದ ಆ ಸದಾಶಿವ. ಇದರಿಂದ ಆ ರಾಜಕುಮಾರಿಗೂ ಪರಮಾನಂದ. ತಾನು ಮೇಕೆಯ ಮಸ್ತಕವನ್ನು ದಹನ ಮಾಡಿದ ಸ್ಥಳದಲ್ಲಿಯೇ 'ವರ್ಕರೇಶ' ಎಂಬ ಹೆಸರಿನ ಶಿವಲಿಂಗವನ್ನು ಸ್ಥಾಪಿಸಿದಳು. ಲೋಕದಲ್ಲಿ ಎಲ್ಲ ಕಡೆಗೂ ಪಸರಿಸಿತು ಈ ವರ್ಕರೇಶನ ಪ್ರತಿಷ್ಠಾಪನದ ಸಮಾಚಾರ. ಲೋಕ ಲೋಕದಿಂದ ಜನ ಬಂದರು ಈ ವರ್ಕರೇಶನ ಸಂದರ್ಶನಕ್ಕಾಗಿ. ಪಾತಾಲ, ಅತಲ, ವಿತಲ, ಸುತಲ, ತಲಾತಲ, ಮುಂತಾದ ಲೋಕಗಳವರೆಗೂ ಹೋಯಿತು. ಈ ಶಿವಲಿಂಗ ಪ್ರತಿಷ್ಠಾಪನೆಯ ಸುದ್ದಿ ಸಮಾಚಾರ. ತಲಾತಲದಲ್ಲಿರುವ ನಾಗರಾಜನಾದ ಸ್ವಸ್ತಿಕನ ಕಿವಿಗೂ ಬಿದ್ದಿತು ರಾಜ ಕುಮಾರಿಯ ಈ ಕೌತುಕ ಕಾರ್ಯದ ಕೀರ್ತಿ. ಅವಳನ್ನು ನೋಡಲೆಂದೇ ಸ್ವಸ್ತಿಕ ನಾಗೇಂದ್ರನು ತಲಾತಲ ಲೋಕದಿಂದ ಪೃಥ್ವಿಯನ್ನು ಸೀಳಿಕೊಂಡು ಮೇಲೆ ಎದ್ದು ಬಂದ. ತನ್ನ ಹೆಡೆಯಿಂದ ನೆಲದ ಒಳಗಿನ ಪದರುಗಳನ್ನು ಹೊಡೆದು ಪುಡಿಗೈದು, ವಿವರ ರಂಧ್ರಗೈದು ಆ ಸ್ವಸ್ತಿಕ ನಾಗೇಂದ್ರನು ಎದ್ದು ಬಂದ. ಆ ಸ್ಥಳದಲ್ಲಿ ಒಂದು ದೊಡ್ಡ ಬಾವಿಯೇ ನಿರ್ಮಾಣವಾಯಿತು ! ಅದಕ್ಕೆ ಈಗಲೂ ಸ್ವಸ್ತಿಕ ಕೂಪ ಎನ್ನುವರು.

ವರ್ಕರೇಶ್ವರನ ಈಶಾನ ಕೋಣೆಯಲ್ಲಿ ಇದೇ ಆ ಸ್ವಸ್ತಿಕ ಕೂಪ. ಆ ನಾಗವು ಕೊರೆದ ತಲಾತಲದವರೆಗಿನ ಆ ಸುರಂಗ ಬಾವಿಯನ್ನು ಗಂಗಾದೇವಿಯು ಪೂರ್ಣವಾಗಿ ತುಂಬಿದಳು ತನ್ನ ತೋಯರಾಶಿಯಿಂದ. ಅಲ್ಲಿ ಸ್ನಾನದಿಂದ ಎಲ್ಲ ತೀರ್ಥಗಳ ಅವಗಾಹನೆಯ ಫಲ. ಅಲ್ಲಿ ಮಾಡಿದ ಈ ಶಿವಲಿಂಗ ಪ್ರತಿಷ್ಠಾಪನೆಯಿಂದ ಮುಖ್ಯವಾಗಿ ಮಹಾದಾನಂದವು ಆದದ್ದು ಭಗವಾನ್ ಭವಾನೀಪತಿಗೆ. ಪ್ರಸನ್ನ ಮನದಿಂದ ಅವನು ವರನೀಡಿದ. ''ಈ ಪವಿತ್ರವಾದ ಸ್ವಸ್ತಿಕ ತೀರ್ಥದಲ್ಲಿ ಪುಣ್ಯ ದಿನಗಳಲ್ಲಿ ಮೀಯುವವರು ಇಲ್ಲಿ ಸಾಯುವವರು, ನನ್ನ ಕೈಲಾಸಲೋಕವನ್ನು ಸೇರುವರು. ಯಾರ ಶವವನ್ನು ಈ ತೀರ್ಥದ ತೀರದಲ್ಲಿ ದಹನ ಮಾಡಿ ಮೂಳೆಗಳನ್ನು

ಮಹೀಸಾಗರ ಸಂಗಮದಲ್ಲಿ ಚೆಲ್ಲುವರೋ ಆ ಮಾನವನು ಸ್ವರ್ಗಲೋಕದಲ್ಲಿ ಬಹುಕಾಲ ನೆಲೆಸುವನು. ಅಲ್ಲಿಂದ ಮರಳಿ ಬಂದು ಬಳಿಕ ವೈಭವ ಪರಿಪೂರ್ಣವಾದ ಸಮ್ರಾಟ್ ಪದವಿಯನ್ನು ಹೊಂದುವನು. ಮಹೀಸಾಗರ ಸಂಗಮದ ನೀರಿನಲ್ಲಿ ಸ್ನಾನ ಮಾಡಿ ಭಕ್ತಿಯಿಂದ ವರ್ಕರೇಶ್ವರನ ಪೂಜೆಗೈಯುವವರ ಮನೋರಥಗಳೆಲ್ಲವೂ ಪೂರ್ಣವಾಗುವವು. ಕಾರ್ತೀಕ ಕೃಷ್ಣ ಚತುರ್ದಶೀ ದಿನದಂದು ಈ ತೀರ್ಥದಲ್ಲಿ ಮಿಂದು ಪಿತೃಗಳ ತರ್ಪಣ, ವರ್ಕರೇಶ್ವರನ ಪೂಜನಗೈಯುವ ಮಾನವರ ಪಾಪಗಳೆಲ್ಲವೂ ಲೋಪ ಆಗುವವು. ಅದರ ಮೇಲೆ ಅವರಿಗೆ ಬರುವ ಪುಣ್ಯ ಅಗಣ್ಯ.''

ಸಾಕ್ಷಾತ್ ಶಂಭುದೇವನಿಂದ ಇಷ್ಟು ವರಗಳನ್ನು ಪಡೆದ ರಾಜಕುಮಾರಿಗೆ ಮೇರೆ ಇಲ್ಲದ ಸಂತೋಷ. ಆನಂದದಿಂದ ಅವಳೂ ಮರಳಿ ಬಂದಳು ತನ್ನ ಸಿಂಹಳದೇಶಕ್ಕೆ. ಸರ್ವ ಸಮಾಚಾರವನ್ನು ತನ್ನ ತಂದೆಗೆ ತಿಳಿಸಿದಳು. ಅದನ್ನು ಕೇಳಿ ಶತಶೃಂಗ ರಾಜನಿಗೆ ಪರಮ ಆಶ್ಚರ್ಯ. ಉಳಿದೆಲ್ಲ ಪರಿವಾರದವರಿಗೆ ಮಹಾ ಕೌತುಕ. ಎಲ್ಲರೂ ಅವಳನ್ನು ಹೊಗಳುವವರೇ. ಅವಳ ಮೇಲಿನ ಆದರ ಹಾಗೂ ವರ್ಕರೇಶ್ವರನ ಮೇಲೆ ಭಕ್ತಿ ಇವೆರಡನ್ನು ಹೃದಯದಲ್ಲಿ ತುಂಬಿಕೊಂಡು ಎಲ್ಲ ಜನರೂ ಆ ತೀರ್ಥಕ್ಕೆ ಬಂದರು. ಸ್ವಸ್ತಿಕ ತೀರ್ಥದಲ್ಲಿ ಮಿಂದರು. ವರ್ಕರೇಶ್ವರನ ದರ್ಶನದಿಂದ ಪರಮಾನಂದ ಹೊಂದಿದರು. ಆ ಕ್ಷೇತ್ರದಲ್ಲಿ ಬಗೆ ಬಗೆಯ ದಾನಗಳನ್ನು ನೀಡಿ ಧನ್ಯರಾದರು.

ಅನಂತರ ಶತಶೃಂಗ ಮಹಾರಾಜನು ಈ ಸಮಗ್ರ ಭಾರತವರ್ಷವನ್ನು ಒಂಭತ್ತು ಭಾಗವಾಗಿ ವಿಭಾಗಿಸಿದನು. ಒಂದು ಭಾಗ ತನಗೆ. ಉಳಿದ ಎಂಟು ಭಾಗ ತನ್ನ ಮಕ್ಕಳಿಗೆ. ಈಗಲೂ ಆ ಭೂಖಂಡಗಳೂ ಸುಪ್ರಸಿದ್ಧವೇ ಆಗಿದೆ. ಅವನ ಹಾಗೂ ಆ ಮಕ್ಕಳ ಹೆಸರಿನಿಂದ, ಇಂದ್ರದ್ವೀಪ ಖಂಡ, ಕಶೇರು ಖಂಡ, ತಾಮ್ರದ್ವೀಪ ಖಂಡ, ಭಸ್ತಿಮತ್ ಖಂಡ, ನಾಗಖಂಡ, ಸೌಮ್ಯಖಂಡ, ಗಂಧರ್ವಖಂಡ, ವರುಣ ಖಂಡ, ಈ ಎಂಟೂ ಖಂಡಗಳನ್ನು ತನ್ನ ಎಂಟು ಗಂಡುಮಕ್ಕಳಿಗೆ ನೀಡಿದ ಆ ರಾಜ. ತನಗಾಗಿ ಇಟ್ಟುಕೊಂಡು ಒಂದು ಭಾಗವನ್ನು ತನ್ನ ಮಗಳಿಗೆ ಕೊಟ್ಟ, ಆದಕ್ಕೆ ಕುಮಾರಿಕಾಖಂಡ ಎಂದು ಹೆಸರಾಯಿತು. ಮಹೇಂದ್ರ ಪರ್ವತದ ಮುಂದಿನ ಭಾಗವೆಲ್ಲವೂ ಇಂದ್ರದ್ವೀಪ. ಪಾರಿಯಾತ್ರ ಪರ್ವತದ ಹಿಂಬದಿಯ ವಿಶಾಲವಾದ ಭೂಖಂಡವೇ ಕೌಮಾರಿಕ ಖಂಡ. ಉಳಿದ ಖಂಡಗಳು - ವಲಯ, ಸಹ್ಯ, ಶಕ್ತಿಮಾನ್, ಋಕ್ಷ, ವಿಂಧ್ಯ ಮುಂತಾದ ಹಿಂದು ಮುಂದಿನ ಸಂಧಿ ಪ್ರದೇಶಗಳಲ್ಲಿ ಸುಪ್ರತಿಷ್ಠಿತ ಈ ನವಖಂಡಗಳೂ ವಿಸ್ತಾರದಲ್ಲಿ ಒಂದೊಂದು ಸಾವಿರ ಯೋಜನ ಪರಿಮಿತ.

ಭಾರತ ದೇಶದ ಮುಖ್ಯವಾದ ನದಿಗಳ ಉಗಮ ಸ್ಥಾನವನ್ನು ಹೇಳುತ್ತೇನೆ ಕೇಳು: ವೇದ ಪುರಾಣಗಳಲ್ಲಿ ಹೇಳಿದ ನದಿಗಳ ಹುಟ್ಟು ಪಾರಿಯಾತ್ರ ಪರ್ವತದಿಂದಲೇ. ನರ್ಮದಾ, ಸುರಸಾ ಮುಂತಾದ ನದಿಗಳು ವಿಂಧ್ಯ ಪರ್ವತದಿಂದ ಹೊರಟು ಹರಿದಿವೆ. ಶತದ್ರು ಮತ್ತು ಚಂದ್ರಭಾಗಾ (ಶತಲಜ ಮತ್ತು ಚನಾಬ) ಮುಂತಾದ ನದಿಗಳು ಋಷಿ ಪರ್ವತದ ಸಂತಾನ. ಋಷಿಕೂಲಾ, ಕುಮಾರಿ ಮುಂತಾದ ತರಂಗಿಣಿಗಳ ಹುಟ್ಟು ಶಕ್ತಿಮಾನ್ ಶೈಲದಿಂದ. ತಾಪೀ, ಪಯೋಷ್ಣೀ, ನಿರ್ವಿಂಧ್ಯಾ, ಕೃಷ್ಣವೇಣೀ

ಭೀಮರಥೀ, ತುಂಗಭದ್ರಾ, ಕಾವೇರಿ ಮುಂತಾದ ನದಿಗಳ ಉದ್ಭವವು ಸಹ್ಯಾದ್ರಿ ಹಾಗೂ ಅದರ ಸಮೀಪದ ಪರ್ವತಾವಳಿಗಳಿಂದ. ಕೃತಮಾಲಾ ಹಾಗೂ ತಾಮ್ರಪರ್ಣಿ ಮೊದಲಾದ ಸರಿತ್ತುಗಳು ಮಲಯ ಪರ್ವತದಿಂದ ಹುಟ್ಟಿ ಹರಿದಿವೆ. ತ್ರಿಸಾಮಾ ಹಾಗೂ ಋಷಿಕುಲ್ಯಾ ಮುಂತಾದ ನದಿಗಳು ಮಹೇಂದ್ರ ಪರ್ವತದಲ್ಲಿ ಉದ್ಭವಗೊಂಡು ದೇಶವನ್ನು ಪಾವನಗೊಳಿಸಿವೆ. ಹೀಗೆ ಶತಶೃಂಗರಾಜನ ನವಖಂಡ ಭೂಖಂಡದ ಸೀಮಾಶೈಲದಂತಿರುವ ಈ ಎಲ್ಲ ಗಿರೀಂದ್ರಗಳಿಂದ ನಾಡಿನ ನಾನಾ ನದಿ, ನಾಲ, ಝರಿಣಿ ಮುಂತಾದ ಪಯಃ ಪ್ರವಾಹಗಳು ಹೊರಟು ಭೂಖಂಡದಲ್ಲಿ ಇರುವ ಜನರಿಗೆಲ್ಲ ಅನ್ನ ನೀರುಗಳನ್ನು ಒದಗಿಸಿ ಪುಣ್ಯಲೋಕವನ್ನು ಪ್ರದಾನ ಮಾಡಿ ಧನ್ಯಪಾವನ ಪಯಸ್ವಿನಿಗಳು ಎನಿಸಿವೆ. ಶತಶೃಂಗರಾಜನು ತನ್ನ ಎಲ್ಲ ಮಕ್ಕಳು ಹಾಗೂ ಒಬ್ಬಳೇ ಒಬ್ಬಳಾದ ಮಗಳಿಗೂ ಈ ಭಾರತವರ್ಷದ ಭಿನ್ನ-ಭಿನ್ನ ಭೂಮಿಭಾಗಗಳನ್ನು ವಿಭಾಗಿಸಿ ಹಂಚಿ ಕೊಟ್ಟು ತಾನು ತಪೋನುಷ್ಠಾನಕ್ಕೆಂದು ಅರಣ್ಯಕ್ಕೆ ತೆರಳಿದನು. ಮತ್ತು ಆ ಶತಶೃಂಗ ಶೈಲದ ಉತ್ತುಂಗವಾದ ಶೃಂಗಾಂಗಣದಲ್ಲಿ ಎಲೆಮನೆಯನ್ನು ಕಟ್ಟಿಕೊಂಡು ಉಗ್ರತಪಸ್ಸಿಗೆ ತೊಡಗಿದನು. ತನ್ನ ನಿರಂತರ ಧ್ಯಾನೋಪಾಸನೆಯ ಬಲದಿಂದ ಸತ್ಯಲೋಕವನ್ನು ಹೊಂದಿದನು. ತಂದೆಯು ತಪಶ್ಚರ್ಯೆಗೆ ತೆರಳಿದ ಬಳಿಕ ಭಾಗ್ಯಶಾಲಿನಿಯಾದ ರಾಜಕುಮಾರಿಯು ಸ್ತಂಭ ತೀರ್ಥದ ತೀರದಲ್ಲಿ ನಿಂತುಕೊಂಡಳು. ಅವಿಚ್ಛಿನ್ನವಾಗಿ ನಡೆಸಿದಳು ತಪೋನುಷ್ಠಾನವನ್ನು, ಸಮೃದ್ಧವೂ ಸಂಪನ್ನವೂ ಆಗಿತ್ತು ಅವಳಿಗೆ ತಂದೆಯು ಕೊಡ ಮಾಡಿದ ಕುಮಾರಿಕಾ ಖಂಡದ ಸಾಮ್ರಾಜ್ಯ.

ಅವಳು ಒಮ್ಮೆಯೂ ರಾಜ್ಯಕ್ಕೆ ಬಾರದಿದ್ದರೂ ಅವಳ ಹೆಸರಿನಿಂದಲೇ ಮಂತ್ರಿಗಳ ಮುಖಾಂತರ ಅತ್ಯುತ್ತಮವಾಗಿ ನಡೆಯುತ್ತಿತ್ತು ಆ ಸಾಮ್ರಾಜ್ಯದ ಶಾಸನ. ಎಲ್ಲ ಜನರೂ ಅವಳು ಇದ್ದಲ್ಲಿಯೇ ತಪ್ಪದೇ ತಂದು ಒಪ್ಪಿಸುತ್ತಿದ್ದರು ತಮ್ಮ ಕಪ್ಪು ಕಾಣಿಕೆಗಳನ್ನು. ಆ ಕುಮಾರಿಯ ದಯಾ ದೃಷ್ಟಿ ಇದ್ದರೆ ಸಾಕು, ತಾವು ಧನ್ಯರು ಎಂದುಕೊಳ್ಳುತ್ತಿದ್ದರು ಪ್ರಜಾವರ್ಗ. ಪ್ರಜೆಗಳು ಹಾಗೂ ಮಂತ್ರಿಸೇನಾಪತಿಗಳು ತನಗೆ ತಂದು ಕೊಟ್ಟ ಅಪಾರ ಉಪಾಯನ ಕಪ್ಪು ಕಾಣಿಗೆ, ಧನ, ಕನಕ, ನಗ, ನಾಣ್ಯಗಳಲ್ಲಿ ಒಂದು ಬಿಡಿ ಕಾಸನ್ನೂ ತನಗೆಂದು ಇಟ್ಟುಕೊಳ್ಳುತ್ತಿದ್ದಿಲ್ಲ ಆ ರಾಜಕುಮಾರಿ. ತನಗೆಂದು ತಂದುದನ್ನೂ ಬಂದುದನ್ನೂ ಯೋಗ್ಯರಾದ ಜ್ಞಾನಿಗಳಿಗೂ ಋಷಿಮುನಿಗಳಿಗೂ, ದೀನದಲಿತರಿಗೂ, ಊನಹೀನರಿಗೂ ದಾನ ನೀಡಿ ಕೈ ತೊಳೆದುಕೊಳ್ಳುತ್ತಿದ್ದಳು. ಅವಳ ಔದಾರ್ಯ ಹಾಗೂ ತಪಶ್ಚರ್ಯ ಹಾಗೂ ಶಿವಭಕ್ತಿಗಳು ರಾಷ್ಟ್ರದ ಎಲ್ಲ ಜನರ ಹೃದಯದಲ್ಲಿ ಆ ಕುಮಾರಿಯ ಬಗ್ಗೆ ಪೂಜ್ಯ ಭಾವನೆಯನ್ನು ನಿರ್ಮಾಣ ಮಾಡಿದವು.

ಇತ್ತ ಅವಳ ಸೋದರರಾದ ಎಂಟು ಜನ ರಾಜಕುಮಾರರು ತಮ್ಮ ತಮ್ಮ ರಾಜ್ಯಗಳಲ್ಲಿ ಧರ್ಮಶಾಸನ ನಡೆಸಿದರು. ಅವರೆಲ್ಲರಿಗೂ ಸಂತಾನ, ಸಂಪತ್ತು ಸದ್ಗುಣ, ಪ್ರಜಾಜನರ ಅನುರಾಗ ಮುಂತಾದವು ಹಿರಿಯರಿಂದಲೇ ಬಳುವಳಿಯಾಗಿ ಬಂದಿದ್ದವು. ಆ ಎಂಟು ಜನ ರಾಜಪುತ್ರರಿಗೆ ಒಬ್ಬೊಬ್ಬರಿಗೂ ಒಂಬತ್ತು (9) ಜನ ಪುತ್ರರು. ಎಲ್ಲರೂ ಶೂರರು, ಎಲ್ಲರೂ ಧೀರರು, ಸರ್ವಗುಣ ಸಂಪನ್ನರು. ಉತ್ಸಾಹವೇ ಅವರ

ಮೂಲ ಧನ. ಬಾಹುಬಲವೇ ಅವರ ಸಂಪತ್ತು. ವಿನಯವೇ ಆಭರಣ. ಅವರೆಲ್ಲರಿಗೂ ಕುಮಾರಿಯ ಮೇಲೆ ನಿಸ್ಸೀಮ ಭಕ್ತಿ, ಅಪರಿಮಿತ ಆದರ. ಒಂದು ದಿನ ಅವರೆಲ್ಲರೂ ಕುಮಾರಿ ಇದ್ದಲ್ಲಿಗೆ ಐತಂದರು. ಸ್ತಂಭತೀರ್ಥದ ಅಡಿಯಲ್ಲಿ ಕೈ ಜೋಡಿಸಿ ನಿಂತರು ಅವಳೆದುರು. ನಮ್ರತೆಯಿಂದ ನುಡಿದರು - ''ದೇವಿ, ನೀನು ನಮ್ಮ ಕುಲದೇವತೆ. ನಮ್ಮ ಮೇಲೆ ದಯೆದೋರು. ನೀನು ನಮ್ಮ ಸೋದರತ್ತೆ ಆದುದು ನಮ್ಮ ಮಹಾ ಸೌಭಾಗ್ಯ. ನಿನ್ನ ದೈಹಿಕ ಸಂಬಂಧದ ಸಾಮೀಪ್ಯದಿಂದಲೇ ನಾವೆಲ್ಲರೂ ಧನ್ಯ ಧನ್ಯ. ನಿನ್ನ ಕೃಪಾದೃಷ್ಟಿ ಬಿದ್ದ ಬುದ್ದು ಕೂಡ ಜಗನ್ಮಾನ್ಯ. ನಿನ್ನ ಅಡಿದಾವರೆಗೆ ನಮ್ಮ ಅನಂತ ನಮನ. ದೇವಿ, ಈಗ ನೀನು ನಿನ್ನ ಕುಲದ ಅರ್ಥಾತ್ ನಮ್ಮ ಮನೆತನದ ಒಂದು ಸಮಸ್ಯೆಯನ್ನು ಬಿಡಿಸಬೇಕು. ನಾವು ಈಗ ನಿನ್ನ ಎಂಟು ಸೋದರರಿಂದ ಜನಿಸಿದ ರಾಜಪುತ್ರರು ಒಟ್ಟು ಎಪ್ಪತ್ತೆರಡು ಜನ. ಸಮಗ್ರ ಸಾಮ್ರಾಜ್ಯವನ್ನು ಈ ಎಪ್ಪತ್ತೆರಡು ಜನ ಸರಿಯಾಗಿ ಹಂಚಿಕೊಳ್ಳಬೇಕಾಗಿದೆ. ಯಾರಿಗೂ ಮಿಕ್ಕಬಾರದು, ಕಡಿಮೆಯಾಗಬಾರದು. ಈ ಇಡೀ ನಾಡನ್ನು ನಮ್ಮೆಲ್ಲ ಸೋದರರಿಗೂ ಸಮನಾಗಿ ಹಂಚುವ ಕಾರ್ಯ ದುಷ್ಕರ. ಉಳಿದವರಾರೂ ಈ ಕಾರ್ಯ ಮಾಡಲು ಸಮರ್ಥರಲ್ಲ. ನೀನೊಬ್ಬಳೇ ಸಮರ್ಥಳು ಈ ವಿಷಯದಲ್ಲಿ. ಎಲ್ಲರಿಗೂ ಸಮಾಧಾನವಾಗುವಂತೆ ನೀನೇ ಹಂಚಿಕೊಡು ಈ ಸಮಗ್ರ ಸಾಮ್ರಾಜ್ಯವನ್ನು. ನಿನ್ನ ನುಡಿ ಹಾಗೂ ನ್ಯಾಯವಾದ ವಿಭಾಗ ನಮ್ಮೆಲ್ಲರಿಗೂ ಶಿರೋಮಾನ್ಯ. ನಮ್ಮ ನಮ್ಮಲ್ಲಿ ವೈರತ್ವ ಮೂಡದಂತೆ ಸ್ನೇಹ ಸಾಮರಸ್ಯಕ್ಕೆ ಚ್ಯುತಿ ಬಾರದಂತೆ ವಿಭಾಗವನ್ನು ಮಾಡಿಕೊಡು.''

ತನ್ನ ಸೋದರ ಪುತ್ರರ ಈ ಒಮ್ಮತದ ಬಿನ್ನಹವನ್ನು ಕುಮಾರಿಯು ಸಂತಸದಿಂದ ಮನ್ನಿಸಿದಳು. ಭರತಖಂಡ ನವಖಂಡ ಪೃಥ್ವಿಯನ್ನೆಲ್ಲ ಸರಿಯಾಗಿ ಎಪ್ಪತ್ತೆರಡು ವಿಭಾಗಮಾಡಿದಳು. ಅವಳಿಗೆ ಪೃಥ್ವೀ ಮಂಡಳದ ಭೂಗೋಲದ ವಿವರಗಳೆಲ್ಲವೂ ಸುವಿದಿತ. ಲಕ್ಷ ಕೋಟಿ ಹಳ್ಳಿ, ನಗರ , ನದಿ, ಗುಡ್ಡ, ಹೊಲ, ಕಾಡು, ಬೀಡು, ನಾಡು, ಮರ, ಸರೋವರ, ಜನಪದ, ಪಶುಪಕ್ಷೀ, ಸ್ತ್ರೀ ಪುರುಷರಿಂದ ಒಡಗೂಡಿದ ಸಮಗ್ರ ಭಾರತ ದೇಶದ ಚಿತ್ರವೇ ಅವಳಿಗೆ ತನ್ನ ಚಿತ್ತಪಟಲದಲ್ಲಿ ಬರೆದಂತಿತ್ತು. ಕಣ್ಣೆದುರು ಕಟ್ಟಿತ್ತು. ಆದ್ದರಿಂದ ಅವಳು ಕೂಡಲೇ ಇಡೀ ಅಖಂಡ ಭಾರತ ರಾಷ್ಟ್ರವನ್ನು ಎಪ್ಪತ್ತೆರಡು ಬಗೆಯಾಗಿ ವಿಂಗಡಿಸಿದಳು. ನದಿ,ಗುಡ್ಡ, ಭಾಷೆ, ಧರ್ಮ, ಆಚಾರ, ಸಂಪ್ರದಾಯಗಳನ್ನು ನೋಡಿಕೊಂಡು ಅವುಗಳಿಗೆ ಅನುಗುಣವಾಗುವಂತೆ ಗ್ರಾಮಗಳನ್ನು ಮಂಡಲಗಳನ್ನು ವಿಂಗಡಿಸಿ, ಅನುಕೂಲವಾದ ದೇಶವಿಭಾಗಗಳಲ್ಲಿ ಸೇರ್ಪಡೆ ಮಾಡಿದಳು.

ನಾಲ್ಕು ಕೋಟಿ ಹಳ್ಳಿಗಳನ್ನು ಕೂಡಿಸಿ ಒಂದು ಮಂಡಲ ಪ್ರದೇಶವನ್ನು ನಿರ್ಮಿಸಿದಳು. ಎರಡೂವರೆ ಕೋಟಿ ಗ್ರಾಮಗಳಿಗೆ ಒಂದು 'ಬಾಲಾಕಾ' ಎಂದು ಹೆಸರಿಟ್ಟಳು. 'ಖಿರಾಸಾಹಣಕ' (ಖಿರಾಸಾನ) ಎಂಬ ದೇಶದಲ್ಲಿ ಒಂದ ಕಾಲೂ ಕೋಟಿ ಗ್ರಾಮಗಳನ್ನು ಸೇರ್ಪಡೆ ಮಾಡಿದಳು. ಅಂಧಲದಲ್ಲಿ ನಾಲ್ಕು ಲಕ್ಷ ಹಳ್ಳಿ, ನೇಪಾಳದಲ್ಲಿ ಒಂದು ಲಕ್ಷ ಹಳ್ಳಿಗಳನ್ನು ಕೂಡಿಸಿದಳು. ಮೂವತ್ತಾರು ಲಕ್ಷ ಹಳ್ಳಿಗಳನ್ನು ಕೂಡಿಸಿ ಕಾನ್ಯಕುಬ್ದ ದೇಶವನ್ನು ನಿರ್ಮಿಸಿದಳು. ಎಪ್ಪತ್ತೆರಡುಲಕ್ಷ ಹಳ್ಳಿಗಳಿಂದ ಮಿಥಿಲಾ ರಾಜ್ಯವು ರೂಪಗೊಂಡಿತು. ಗೌಡ ದೇಶದಲ್ಲಿ ಹದಿನೆಂಟು ಲಕ್ಷ ಹಳ್ಳಿಗಳ ಸೇರ್ಪಡೆ. ಕಾಮರೂಪ,

ಲಾಹರ್ವ, ಮಾಲವ, ಕಾಂತೀಪುರ, ಮಾಚಿಪುರ, ಲೋಹಪುರ, ಮುಂತಾದ ಹಲವಾರು ದೇಶಗಳನ್ನು ಮಾಡಿ ಪ್ರತಿಯೊಂದು ಪ್ರಾಂತಗಳನ್ನು ಮಾಡಿ ಪ್ರತಿಯೊಂದು ದೇಶದಲ್ಲಿಯೂ ಒಂಭತ್ತು ಲಕ್ಷ ಗ್ರಾಮಗಳನ್ನು ಜೋಡಿಸಿದಳು.

ಇದರಂತೆ ಪಾಂಬೀಪುರ ದೇಶದಲ್ಲಿ ಏಳು ಲಕ್ಷಗ್ರಾಮಗಳನ್ನು, ಹರಿಯಾಣಾದಲ್ಲಿ ಐದು ಲಕ್ಷ, 'ಇಡ್'ದೇಶದಲ್ಲಿ ಮೂರುವರೆ ಲಕ್ಷ, ಶಾಂಭಣವಾಹಕ ನಾಡಿನಲ್ಲಿ ಮೂರುವರೆ ಲಕ್ಷ, ನೀಲಪುರದಲ್ಲಿ ಇಪ್ಪತ್ತೊಂದು ಲಕ್ಷ, ಆಮ್ಲ ದೇಶದಲ್ಲಿ ಒಂದು ಲಕ್ಷ, ನರೇಂದು ದೇಶದಲ್ಲಿ ಒಂದುಕಾಲು ಲಕ್ಷ, ತೈಲಂಗ ದೇಶದಲ್ಲಿ ಒಂದುಕಾಲು ಲಕ್ಷ, ಸಯಂಭರ, ಮೇವಾಡ ದೇಶಗಳಲ್ಲಿಯೂ ಒಂದುಕಾಲು ಲಕ್ಷ, ಬಾಬುರಿ ದೇಶದಲ್ಲಿ ಎಂಭತ್ತು ಸಾವಿರ, ಗುರ್ಜರ ದೇಶದಲ್ಲಿ ಎಪ್ಪತ್ತು ಸಾವಿರ, ಪಾಂಡು ದೇಶದಲ್ಲಿ ಎಪ್ಪತ್ತು ಸಾವಿರ, ತೇಜಾಕುತಿಯಲ್ಲಿ ನಲವತ್ತೆರಡು ಸಾವಿರ. ಕಾಶ್ಮೀರ ಮಂಡಲದಲ್ಲಿ ಅರವತ್ತೆಂಟು ಸಾವಿರ, ಕೊಂಕಣದೇಶದಲ್ಲಿ ಮೂವತ್ತಾರು ಸಾವಿರ, ಸೌರಾಷ್ಟ್ರದಲ್ಲಿ ಐವತ್ತೈದು ಸಾವಿರ, ತಾಡ ದೇಶದಲ್ಲಿ ಇಪ್ಪತ್ತೊಂದು ಸಾವಿರ, ಗ್ರಾಮಗಳನ್ನು ಜೋಡಿಸಿದಳು. ಇದರಂತೆ ಅತಿಸಿಂಧು ದೇಶದಲ್ಲಿ ಹತ್ತು ಸಾವಿರ ಹಳ್ಳಿಗಳನ್ನು ಕೂಡಿಸಿದಳು.

ಇದೇ ರೀತಿಯಾಗಿ ಅಶ್ವಮುಖ, ಸಜಾನುಹೂತಿ, ವೇಣುದೇಶ, ಕಲಹಜದೇಶ, ದ್ರವಿಡದೇಶ ಭದ್ರಾಶ್ವ ಹಾಗೂ ದೇವಭದ್ರಾಶ್ವ ಮುಂತಾದ ನಾಡುನುಡಿಗಳಲ್ಲಿಯೂ ಹತ್ತು ಸಾವಿರ ಗ್ರಾಮಗಳನ್ನು ಸೇರ್ಪಡೆ ಮಾಡಲಾಯಿತು.

ಚಿರಾಯುಷ, ಯಮಕೋಟಿ ದೇಶಗಲ್ಲಿ ಮೂವತ್ತಾರು ಸಾವಿರ, ಕಾಮರೂಪ, ಕರ್ನಾಟಕ, ಜಾಂಗಲ ನಾಡುಗಳಲ್ಲಿ ಒಂದೂಕಾಲು ಲಕ್ಷ, ಬಾಲ್ಹೀಕದಲ್ಲಿ ನಾಲ್ಕು ಲಕ್ಷ, ಲಂಕಾರಾಜ್ಯದಲ್ಲಿ ಮೂವತ್ತಾರುಸಾವಿರ, ವರ್ಧಮಾನದಲ್ಲಿ ಅರವತ್‌ನಾಲ್ಕು ಸಾವಿರ, ಸಿಂಹಳದಲ್ಲಿ ಹತ್ತುಸಾವಿರ, ಪಾಂಡ್ಯದೇಶದಲ್ಲಿ ಮೂವತ್ತಾರುಸಾವಿರ, ಭಯಾನಕದಲ್ಲಿ ಒಂದು ಲಕ್ಷ,. ಮಗಧದಲ್ಲಿ ಅರವತ್ತಾರುಸಾವಿರ, ಪಂಗುದಲ್ಲಿ ಅರವತ್ತುಸಾವಿರ, ವರೇಂದಕದಲ್ಲಿ ಮೂವತ್ತುಸಾವಿರ, ಮೂಲಸ್ಥಾನದಲ್ಲಿ ಐವತ್ತುಸಾವಿರ, ಯವನ ದೇಶದಲ್ಲಿ ಮೂವತ್ತುಸಾವಿರ , ಪಕ್ಷಬಾಹು ರಾಜ್ಯದಲ್ಲಿ ನಾಲ್ಕುಸಾವಿರ ಹಳ್ಳಿಗಳನ್ನು ಕೂಡಿಸಿ ಒಂದೊಂದು ರಾಜ್ಯಗಳನ್ನಾಗಿ ಮಾಡಿ ಎಪ್ಪತ್ತೆರಡು ಸಾಮ್ರಾಜ್ಯಗಳನ್ನು ಆ ಎಲ್ಲ ಅಣ್ಣತಮ್ಮಂದಿರಿಗೂ ಸಮನಾಗಿ ಹಂಚಿ ಕೊಟ್ಟಳು. ಒಂದೊಂದು ರಾಜ್ಯದಲ್ಲಿ ಗ್ರಾಮಗಳನ್ನು ಹಂಚಿ ಇಡುವಾಗ ಆ ಊರುಗಳ ಸಂಖ್ಯೆಯನ್ನು ಮಾತ್ರ ನೋಡದೇ ಅಲ್ಲಿಯ ಹೊಲ, ಗದ್ದೆ, ವನ, ಉಪವನ, ನದಿ, ಬೆಟ್ಟ, ಬಯಲು, ಸಾನು, ಕಾನು, ಗಣಿ, ಮಣಿ, ನಿಕ್ಷೇಪ - ಮುಂತಾದ ಸಂಪನ್ಮೂಲಗಳನ್ನು ನೋಡಿಕೊಂಡು, ಎಲ್ಲರಿಗೂ ಸಮನಾಗಿ ಆದಾಯ ಬರುವಂತೆ, ಆಡಳಿತಕ್ಕೆ ಅನುಕೂಲ ಆಗುವಂತೆ, ಸರಿಯಾದ ವಿಭಾಗ ಮಾಡಿ ಹಂಚಿಕೊಟ್ಟಳು. ಈ ಭೂಲೋಕದಲ್ಲಿ ಒಟ್ಟು ಗ್ರಾಮಗಳ ಸಂಖ್ಯೆ ತೊಂಬತ್ತಾರು ಕೋಟಿ ಎಪ್ಪತ್ತೆರಡು ಲಕ್ಷ ಮೂವತ್ತಾರು ಸಾವಿರ ಇರುತ್ತದೆ.

ಇವುಗಳನ್ನೆಲ್ಲ ಸಮುದ್ರದವರೆಗೆ ಇರುವ ಭೂಮಂಡಲದ ಒಂಬತ್ತು ಖಂಡಗಳಲ್ಲಿ ಸಮನಾಗಿ ಹರಿದು ಹಂಚಿ ತನ್ನ ಸೋದರ ಪುತ್ರರಿಗೆ ವಿಭಾಗಮಾಡಿಕೊಟ್ಟಳು ಆ ಕುಮಾರಿ ದೇವಿ.

ತನ್ನ ಪಾಲಿನ ಕುಮಾರಿಕಾ ಖಂಡವನ್ನು ಕೂಡ ಅದರಲ್ಲಿ ಸೇರಿಸಿ ಆ ರಾಜಪುತ್ರರೆಲ್ಲ ಬೇಡವೆಂದರೂ ಕೇಳದೇ ಹಂಚಿಕೊಟ್ಟಳು. ಒಂದಾನೊಂದು ಕಾಲದಲ್ಲಿ ಆ ಕುಮಾರಿಕಾ ಖಂಡವು ಕುಮಾರಿ ದೇವಿಯ ಸಾಕ್ಷಾತ್ ಧರ್ಮಶಾಸನಕ್ಕೆ, ನ್ಯಾಯಬದ್ಧವಾದ ಆಡಳಿತ ವೈಖರಿಗೆ ಒಳಪಟ್ಟಿದ್ದರಿಂದ ಅಖಂಡ ಭಾರತಖಂಡದ ಭೂಖಂಡದಲ್ಲಿ ಈ ಕುಮಾರಿಕಾ ಖಂಡವು ಸರ್ವಶ್ರೇಷ್ಠವೆಂದು ಮನ್ನಿಸಲ್ಪಟ್ಟಿದೆ. ಅದರಲ್ಲಿಯೂ ಮಹೀಸಾಗರ ಸಂಗಮವು ಅತ್ಯಂತ ಗುಪ್ತಕ್ಷೇತ್ರ ಎನಿಸಿದೆ. ಈ ಗುಪ್ತಕ್ಷೇತ್ರದಲ್ಲಿ ಭಗವಾನ್ ಕುಮಾರೇಶ್ವರನ ಪೂಜೆಯನ್ನು ಮಾಡುತ್ತ ಕುಮಾರಿ ದೇವಿಯು ವ್ರತಾನುಷ್ಠಾನ, ತಪಶ್ಚರಣ ಹಾಗೂ ಭಗವದ್ಧ್ಯಾನದಲ್ಲಿ ಅತ್ಯಾಸಕ್ತಿಯಿಂದ ತೊಡಗಿದಳು. ಹೀಗೆ ನಿರಂತರವೂ ನಿರಾತಂಕವಾಗಿ ನಡೆಯಿತು ಆ ಕುಮಾರಿಯ ತೀಕ್ಷ್ಣತರವಾದ ತಪಶ್ಚರ್ಯೆ. ಆ ಕ್ಷೇತ್ರತೀರದಲ್ಲಿಯೇ ನಿಂತು ತಪಂಗೈಯುತ್ತಿದ್ದಳು. ಹೀಗೆ ಹಲವಾರು ವರ್ಷಗಳು ಕಳೆದ ಬಳಿಕ ಭಗವಾನ್ ಸ್ಕಂದಸ್ವಾಮಿಯು ನಿರ್ಮಿಸಿದ ಕುಮಾರೇಶ್ವರನ ಮಂದಿರವು ಜೀರ್ಣಶೀರ್ಣವಾಯಿತು. ಅದನ್ನು ನೋಡಿ ಕುಮಾರಿ ದೇವಿಯು ಅದಕ್ಕೊಂದು ಹೊಚ್ಚ ಹೊಸದಾದ ಬಂಗಾರದ ಪ್ರಾಸಾದವನ್ನು ನಿರ್ಮಿಸಿದಳು.

ಅವಳ ಈ ನವೀನ ಪ್ರಾಸಾದ ನಿರ್ಮಾಣದಿಂದ ನಿತರಾಂ ಸಂತುಷ್ಟನಾದ ನೀಲಕಂಠ. ಕುಮಾರೇಶ್ವರ ಲಿಂಗದಿಂದಲೇ ಆ ಗಂಗಾಧರನು ಪ್ರಕಟನಾಗಿ ಅವಳಿಗೆ ಪ್ರತ್ಯಕ್ಷ ದರ್ಶನ ನೀಡಿ ನುಡಿದ - ''ಶುಭಾಂಗಿಯೇ ! ನಿನ್ನ ಭಕ್ತಿಯಿಂದ ನಾನು ಸುಪ್ರಸನ್ನ. ನೀನು ಈ ಜೀರ್ಣವಾದ ಶುಭಮಂದಿರವನ್ನು ಪುನರುದ್ಧಾರ ಮಾಡಿರುವಿ. ಆದ್ದರಿಂದ ನಾನು ಇನ್ನು ಮುಂದೆ ನಿನ್ನ ಹೆಸರಿನಿಂದಲೇ ಕುಮಾರೀಶ್ವರ ಎಂದೇ ಪ್ರಸಿದ್ಧಿಯನ್ನು ಪಡೆಯುವೆ. ಇಷ್ಟು ದಿನ ಕುಮಾರೇಶ್ವರನಾದ ನಾನು ಇನ್ನು ಮುಂದೆ ಕುಮಾರೀಶ್ವರ.

ಈಗ ನಿನಗೆ ಮುಪ್ಪಿನ ಕಾಲ. ಮರಣ ಕಾಲವೂ ಇನ್ನು ನಿನಗೆ ದೂರವಿಲ್ಲ. ಆದರೆ ಮಹಿಳೆಯರಿಗೆ ಮಾಂಗಲ್ಯ ಬಂಧನ ಪತಿಯಿಂದ ಆಗದೆ ಮುಕ್ತಿಯಿಲ್ಲ. ಮದುವೆಯಾಗದ ಮಾನಿನಿಗೆ ಮೋಕ್ಷವೂ ಇಲ್ಲ, ಸ್ವರ್ಗವೂ ಇಲ್ಲ, ಯಾವ ಸದ್ಗತಿಯೂ ದೊರಕಲಾರದು. ಆದ್ದರಿಂದ ನೀನು ಈಗ ಯಾರನ್ನಾದರೂ ಮದುವೆಯಾಗಿ ನಿನ್ನ ಕೊರಳಲ್ಲಿ ಮಾಂಗಲ್ಯವನ್ನೂ ಕಟ್ಟಿಸಿಕೊ. ಅಂದರೆ ಮಾತ್ರ ನಿನ್ನ ಉದ್ಧಾರ. ಇಲ್ಲದಿದ್ದರೆ ನೀನು ನಿರಾಧಾರ .

ಶಿವನ ಈ ನುಡಿ ಕೇಳಿ ಕುಮಾರಿ ದೇವಿಯ ಹೃದಯಕ್ಕೆ ಒಮ್ಮೆಲೇ ಆಘಾತ. ಈ ಮಾತನ್ನು ಹೇಳಿದವ ಅವಳ ಇಷ್ಟದೇವ, ಪ್ರಪಂಚದ ಶ್ರೇಷ್ಠದೇವ, ಅವನ

ಮಾತಿಗೆ ಎದುರಿಲ್ಲ. ಅದು ನಿತ್ಯ ಸತ್ಯ. ಅದರ ಮೇಲೆ ವಿಚಾರವಿಲ್ಲ. ಮದುವೆಯಾಗಲೇ ಬೇಕೆಂದು ಆ ದೇವ ದೇವನ ಕಟ್ಟಪ್ಪಣೆ, ಆಗ್ರಹ. ಹಾಗಾದರೆ ಮಾತ್ರ ಅವನ ಅನುಗ್ರಹ. ಆಗದಿದ್ದರೆ ಅರ್ಥಾತ್ ನಿಗ್ರಹ. ಈಗ ನಾನು ಏನು ಮಾಡಬೇಕು? ಹೇಗೆ ಮಾಡಬೇಕು? ಎಲ್ಲಿಗೆ ಹೋಗಬೇಕು? ಯಾರನ್ನು ಒಲಿಸಬೇಕು? ನೂರು ಚಿಂತೆಗಳು. ಮಿದುಳಿನ ತುಂಬ ಕೊರೆತ. ಹೃದಯದ ತುಂಬ ಗಾಯ, ಮನದ ತುಂಬ ಉದ್ವೇಗ. ಏನು ಮಾಡಬೇಕು? ತಿಳಿಯದಾಯಿತು ಆ ಕುಮಾರಿದೇವಿಗೆ. ಶಿವನ ಚರಣವೇ ಶರಣು ಎಂದಿತು ಅವಳ ಒಳಮನಸ್ಸು. ಎದುರು ನಿಂತ ಶ್ರೀಕಂಠನ ಅಡಿದಾವರೆಗಳಿಗೆ ತನ್ನ ಸಿರಿಮುಡಿ ಚಾಚಿದಳು. ಕರ ಜೋಡಿಸಿ ಕೇಳಿಕೊಂಡಳು.

**ಕುಮಾರಿ :** ಕುಮಾರೇಶ್ವರ ! ಮದುವೆ ಇಲ್ಲದೆ ಮಹಿಳೆಗೆ ಸದ್ಗತಿ ಇಲ್ಲ ಅದಕ್ಕಾಗಿ ವಿವಾಹವಾಗು ಎಂದು ನಿನ್ನ ಆದೇಶ. ನಿನ್ನ ಅಪ್ಪಣೆ ನನಗೆ ಒಪ್ಪಿಗೆ. ಆದರೆ ನನಗೆ ಈಗ ಮುಪ್ಪು. ಮೃತ್ಯುವೂ ಬಹಳ ದೂರವಿಲ್ಲ. ಮೈಯ್ಯಲ್ಲಿ ನಡುಕ. ಕೂದಲು ಹಂಜಿಬುಟ್ಟಿ. ಬಚ್ಚಬಾಯಿ, ಪೆಚ್ಚು ಮುಖ. ಇಂಥ ಮುಪ್ಪಿನ ಮುದುಕಿಯನ್ನು ಮದುವೆ ಆಗುವವರಾರು? ವರಕೊಡುವ ನೀನು ನನಗೆ ಮದುವೆ ಆಗಲಿಕ್ಕೆ ಓರ್ವ ವರನನ್ನೂ ತಂದುಕೊಡು. ವಧು ಆಗಲು ನಾನು ಈಗಲೇ ಸಿದ್ಧ.

**ಶಂಕರ :** ನಾನು ಅದರ ವ್ಯವಸ್ಥೆಯನ್ನು ಮಾಡಿಬಿಟ್ಟಿದ್ದೇನೆ ಈ ಮೊದಲೇ ನಿನಗಾಗಿ. ಈ ತೀರ್ಥದ ತೀರದಲ್ಲಿ ನಿಂತು ಪೂರ್ವಕಾಲದಲ್ಲಿ ಮಹಾಕಾಲನು ತಪಸ್ಸು ಮಾಡಿ ಸಿದ್ಧಿಯನ್ನು ಪಡೆದನು. ಅವನು ನನ್ನ ಪರಮ ಭಕ್ತ. ಮಹಾ ತಪಸ್ವಿ ಆವನನ್ನು ನೀನು ವಿವಾಹವಾಗು. ಅವನು ನಿನ್ನ ಕೊರಳಿಗೆ ಮಂಗಳ ಸೂತ್ರವನ್ನು ಕಟ್ಟುವನು. ಪರಮೇಶ್ವರನ ಆಜ್ಞೆಯನ್ನು ಮಹಾಕಾಲನಂಥ ಶಿವಭಕ್ತನು ಹೇಗೆ ಮೀರುವನು! ಭಗವಂತನ ಆದೇಶವನ್ನು ತಲೆಯ ಮೇಲೆ ಹೊತ್ತು ನಡೆಯುವ ಉತ್ತಮ ಶಿವಭಕ್ತ ಆ ಮಹಾಕಾಲ. ಶಿವನ ಆಣತಿಯಂತೆ ಕುಮಾರಿಯ ಪಾಣಿಗ್ರಹಣವನ್ನು ಸಂತೋಷದಿಂದ ಮಾಡಿದ ಆ ಮಹಾ ತಪಸ್ವಿ ಬದುಕಿ ಇರುವವರೆಗೆ ಇಬ್ಬರೂ ಶಿವಧ್ಯಾನಗೈದರು. ಆ ಇಬ್ಬರು ಶಿವಶರಣರಿಗೂ ಸಕಾಲದಲ್ಲಿ ಮರಣ. ಅದೂ ಕೂಡ ಏಕ ಕಾಲಾವಚ್ಛೇದೇನನ್ನೆವ ಇಬ್ಬರೂ ಕೂಡಿಯೇ ಕೈಲಾಸ ಲೋಕಕ್ಕೆ ಪಯಣ. ರುದ್ರಲೋಕದಲ್ಲಿ ಆ ದಂಪತಿಗಳಿಗೆ ಸಂಭ್ರಮದ ಸ್ವಾಗತ.

ಗಣಾಧೀಶರಿಂದ ಆದರದ ಉಪಚಾರ. ಪರಮೇಶ್ವರನ ಪ್ರಾಣವಲ್ಲಭೆಯಾದ ಪಾರ್ವತೀದೇವಿಯು ದೂರದಿಂದಲೇ ನೋಡಿದಳು ಆ ನರ ಲೋಕದ ನಾರಿಯನ್ನು, ಇದೀಗ ಬಂದ ಕುಮಾರಿಯನ್ನು. ಸತೀದೇವಿಗೆ ಹರ್ಷ ಉಕ್ಕಿ ಬಂದಿತು. ಎದ್ದು ಬಂದು ರಾಜಕುಮಾರಿಯನ್ನು ಭರದಿಂದ ಬಿಗಿದಪ್ಪಿದಳು. ನಲುಮೆಯಿಂದ ನುಡಿದಳು.

''ಶುಭಾಂಗಿ ! ಇಂದಿನಿಂದ ನೀನು ನನ್ನ ಪ್ರಾಣಸಖಿ. ಇದೇನು ಆಶ್ಚರ್ಯ! ಭೂಲೋಕದಲ್ಲಿ ಶತಶೃಂಗರಾಜನ ಮೊಮ್ಮಕ್ಕಳಿಗೆಲ್ಲ ನೀನು ಸರಿಯಾಗಿ

ಮಹೀಮಂಡಲವನ್ನೆಲ್ಲ ಹಂಚಿಕೊಟ್ಟೆ. ಚರಾಚರ ಪ್ರಪಂಚವೆಲ್ಲವೂ ನಿನ್ನ ಚಿತ್ತಪಟಲದಲ್ಲಿ ನಿಚ್ಚಳವಾಗಿ ಚಿತ್ರದಂತೆ ಚಿತ್ರಿತವಾಗಿದೆ. ಆದುದರಿಂದ ನಾನು ನಿನಗೆ ಚಿತ್ರಲೇಖೆಯೆಂದು ಹೊಸ ಹೆಸರನ್ನು ಇತ್ತಿದ್ದೇನೆ. ನನ್ನ ಗೆಳತಿಯಾಗಿ ನೀನು ಇಂದಿನಿಂದ ಇಲ್ಲಿಯೇ ಕೈಲಾಸ ಶೈಲದಲ್ಲಿ ನನ್ನ ಬಳಿಯಲ್ಲಿಯೇ ನೆಲಸಿ ನಿಲ್ಲು.'' ಮಹಾದೇವಿಯ ಮಾತು ಹಿಂದಿನ ಕುಮಾರಿಗೆ, ಅಂದಿನ ಚಿತ್ರಲೇಖೆಯ ಹೃದಯಕ್ಕೆ ಪರಮ ಆಪ್ಯಾಯನ. ಆ ಕ್ಷಣದಲ್ಲಿಯೇ ಸಂತೋಷದಿಂದ ಸಿದ್ಧಳಾದಳು ಅವಳು ಮಹಾದೇವಿಯ ಕೈಂಕರ್ಯಕ್ಕೆ. ಮುಂದೆ ಇದೇ ಚಿತ್ರಲೇಖೆಯೇ ಬಾಣಾಸುರನ ಮುದ್ದಿನ ಮಗಳಾದ ಉಷಾಸುಂದರಿಗೆ ಅವಳ ಕನಸಿನ ಮನದನ್ನನಾದ ಕೃಷ್ಣನ ಮೊಮ್ಮಗನನ್ನು ಚಿತ್ರದಿಂದಲೇ ಗುರುತಿಸಿ ಪರಿಚಯಿಸಿದಳು. ಈ ಯೋಗಿನಿಯು ಪೂರ್ವಜನ್ಮ ಹಾಗೂ ಈ ಜನ್ಮಗಳಲ್ಲಿ ಮಾಡಿದ ಶಿವಾರಾಧನೆಯ ಪ್ರಭಾವದಿಂದ ಯೋಗಿನಿಯರ ಗುಂಪಿಗೇ ಒಂದು ಭೂಷಾಮಣಿ ಎನಿಸಿದಳು. ಪರಮಶಿವಭಕ್ತ ಮಹಾಕಾಲನಿಗಂತೂ ಎದೆಯ ಅರಸಿ, ಪ್ರಾಣಪ್ರೇಯಸಿ, ಹೀಗೆ ರಾಜಕುಮಾರಿಯು ಕುಮಾರೇಶ್ವರ ಮತ್ತು ವರ್ಕರೇಶ್ವರ ಲಿಂಗ ಪ್ರತಿಷ್ಠೆ ಪೂಜೆಗಳಿಂದ ಶಿವಲೋಕದಲ್ಲಿ ಪ್ರತಿಷ್ಠೆಯನ್ನೂ ಶಿವಭಕ್ತರಿಂದ ಪೂಜೆಯನ್ನೂ ಹೊಂದಿದಳು.

**ನಾರದ :** ಬಹು ಹಿಂದಿನ ಘಟನೆ. ಕಾಶೀ ಪಟ್ಟಣದಲ್ಲಿ ಒಬ್ಬ ಬ್ರಾಹ್ಮಣ. 'ಮಾಂಟೀ' ಎಂಬ ಹೆಸರಿನಿಂದ ಅವನ ಪ್ರಸಿದ್ಧಿ. ಜಪಾನುಷ್ಠಾನದಲ್ಲಿ ಅವನಿಗೆ ಒಳ್ಳೆ ಜಾಣ್ಮೆ. ತಪಸ್ಸಿನ ಕಾಯಕ್ಲೇಶವನ್ನು ಸಹಿಸುವಲ್ಲಿ ನಿಸ್ಸೀಮ ಅವನು ತಾಳ್ಮೆ. ಅದರಲ್ಲಿಯೂ ಆ ಮಾಂಟಿ ಮುನಿಯು ರುದ್ರ ಮಂತ್ರ ಜಪದಲ್ಲಿ ಎತ್ತಿದ ಕೈ. ಅವನಿಗೆ ಸಂತಾನವಿಲ್ಲ. ಅದಕ್ಕಾಗಿ ಅವನು ಮೊದಲು ಭಕ್ತಿಯಿಂದ ಪ್ರಾರಂಭ ಮಾಡಿದ ರುದ್ರಮಂತ್ರಗಳನ್ನು ಜಪಿಸಲು. ಅದಕ್ಕಾಗಿ ಅನುದಿನವೂ ಸಮಾಧಿಸ್ಥನಾಗಿ ಜಪಿಸುತ್ತಲೇ ಇದ್ದ. ಮಂತ್ರರೂಪದಿಂದ ಕಠೋರವಾದ ಜಪವನ್ನು ನಿರ್ವಿಕಾರ ಚಿತ್ತದಿಂದ ಜಪಿಸುತ್ತಲೂ ಇದ್ದ. ಈ ವ್ರತದಲ್ಲಿ ಮಾಸಗಳು ಉರುಳಿದ್ದೂ ಅವನಿಗೆ ಅರಿವಾಗಲಿಲ್ಲ. ವರ್ಷಗಳು ಕಳೆದದ್ದೂ ಅವನಿಗೆ ತಿಳಿಯಲಿಲ್ಲ. ಮಂತ್ರ ಜಪದಲ್ಲಿಯೆ ಅವನ ಎಲ್ಲ ಯೌವನ ಕಳೆಯಿತು. ತಾರುಣ್ಯದ ಶಕ್ತಿ ಅಳಿಯಿತು. ನೂರು ವರ್ಷ ಉರುಳಿದವು. ಈ ಘೋರ ತಪೋನುಷ್ಠಾನದಿಂದ ಭಗವಾನ್ ಶಂಕರನ ವಾತ್ಸಲ್ಯಮಯ ಹೃದಯದ ಹೊಂದಾವರೆಯು ಅರಳಿತು. ಹೃದಯದ ಪ್ರಸನ್ನತೆಯೇ ಶಂಕರನ ಮುಖದಿಂದ ಮಾತಾಗಿ ಹೊಮ್ಮಿತು.

''ಮಾಂಟೀ, ನಿನ್ನ ಅಪೇಕ್ಷೆಯನ್ನು ನಾನು ಚೆನ್ನಾಗಿ ಬಲ್ಲೆ. ನಿನಗೊಬ್ಬ ಗಂಡು ಮಗ ಜನಿಸುವ. ಅವನಲ್ಲಿ ಬುದ್ಧಿಯ ಸಮೃದ್ಧಿ, ಪ್ರಭಾವ, ಪರಾಕ್ರಮಗಳಂತೂ ನನ್ನ ಸಮಾನ. ಅವನಿಂದ ನಿನ್ನ, ಕುಲದ ಉದ್ಧಾರ. ನಿನ್ನ ಸಕಲ ಚಿಂತಾಪರಿಹಾರ.'' ಶಂಕರನ ಈ ನುಡಿಗಳು ಮಾಂಟಿಗೆ ಅತ್ಯಂತ ಪ್ರಿಯಂಕರ. ಹೃದಯದ ತುಂಬ ಆನಂದಾಂಕುರ. ಸುಳ್ಳಾದೀತೇ ಶಿವನ ನುಡಿ ! ಮಾಂಟಿಯ ಮಡದಿಗೆ ಗರ್ಭದಾರಣೆ. ಮಾಂಟಿಯ ಮನದಲ್ಲಿ ಆನಂದ ತರಂಗಗಳು. ಆದರೆ ಮಾಂಟಿಯ ಕುಟುಂಬಿನಿಯು ನವಮಾಸ ತುಂಬಿದರೂ ಹಡೆಯಲಿಲ್ಲ. ತುಂಬ ಬಸಿರನ್ನು ಹೊತ್ತುಕೊಂಡೇ ನಾಲ್ಕು ವರ್ಷ ಕಾಲ

ಹಾಕಿದಳು. ಮಗು ಹೊಟ್ಟೆ ಬಿಟ್ಟು ಹೊರಗೇ ಬರಲಿಲ್ಲ. ತಾಯಿಗೆ ಗರ್ಭಧಾರಣೆ ದುಃಖಕಾರಣವಾಯಿತು, ಹಡೆಯುವ ಉಪಾಯವೇ ತೋಚದು ಆ ಸಾಧ್ವೀ ಮಣಿಗೆ. ಮಾಂಟಿಗೂ ದೊಡ್ಡ ಚಿಂತೆ, ಏನು ಮಾಡಲು ತಿಳಿಯದೇ ಅವನು ತಾಯಿಯ ಗರ್ಭವನ್ನು ಬಿಡದೇ ಗಟ್ಟಿಯಾಗಿ ಕುಳಿತ ಆ ಅಂತಸ್ಥ ಶಿಶುವನ್ನು ಸಂಬೋಧಿಸಿ ಕೇಳಿದ.

**ಮಾಂಟಿ :** ಮಗೂ, ಬೇರೆ ಬೇರೆ ಜೀವಯೋನಿಗಳಲ್ಲಿ ಬಿದ್ದ ಚೇತನಗಳು ನಾನು ಎಂದು ಮನಷ್ಯ ಯೋನಿಯಲ್ಲಿ ಜನ್ಮ ತಳೆಯುವೆನು' ಎಂದು ಯೋಚಿಸುತ್ತಿರುತ್ತವೆ. ಅದಕ್ಕಾಗಿಯೇ ಹಾತೊರೆಯುತ್ತವೆ. ಅದಕ್ಕೆ ಕಾರಣವೂ ಉಂಟು. ಧರ್ಮ, ಅರ್ಥ, ಕಾಮ, ಮೋಕ್ಷ, ನಾಲ್ಕು ಪುರುಷಾರ್ಥಗಳೂ ಕೈಗೆ ಎಟಕುವ ಜನ್ಮ ಎಂದರೆ ಮಾನವ ಜನ್ಮ ಒಂದೇ. ಪಿತೃಗಳನ್ನು ಸಂತೋಷಪಡಿಸುವದು ಮಾನವ ಜನ್ಮದಲ್ಲಿ ಮಾತ್ರ ಸುಲಭ. ದೇವತೆಗಳನ್ನು ಮೆಚ್ಚಿಸುವದು ನರಜನ್ಮದಲ್ಲಿ ಮಾತ್ರ ಸಾಧ್ಯ. ಧರ್ಮಾನುಷ್ಠಾನವು ಬೇರೆ ಯಾವ ಜನ್ಮದಿಂದ ಸಾಧ್ಯ? ದೇವತೆಗಳು ಕೂಡ ಮರ್ತ್ಯರಾಗಿ ಅವತರಿಸುವುದು ಇದಕ್ಕಾಗಿಯೇ. ಇದು ವಸ್ತು ಸ್ಥಿತಿ. ಆದರೆ ನಿನ್ನ ಚರ್ಯೆ ಮಾತ್ರ ಇದಕ್ಕೆ ವಿಪರೀತ. ನಾಲ್ಕು ವರ್ಷ ಆದರೂ ಸಾಕಾಗಲಿಲ್ಲವೇ ನಿನಗೆ ಈ ಗರ್ಭವಾಸ? ಹೊರಗೆ ಏಕೆ ಬರಲೊಲ್ಲಿ? ಮಾಂಟಿಯ ಮಗ ತಾಯಿಯ ಒಡಲಿಗೆ ಅಂಟಿಕೊಂಡು ಕುಳಿತದ್ದು ಏಕೆ?

**ಗರ್ಭಸ್ಥ ಶಿಶು :** ಪೂಜ್ಯ ತಂದೆಯೇ ! ನೀನು ಹೇಳಿದ್ದೆಲ್ಲವೂ ಸರಿ. ಇದೆಲ್ಲವನ್ನೂ ನಾನು ಚೆನ್ನಾಗಿ ಬಲ್ಲೆನು. ಮಾನವ ಜನ್ಮ ದುರ್ಲಭ. ಆದರೆ ನಾನು ಕಲಿ ಕಾಲದಲ್ಲಿ ಈಗ ಪ್ರಚಲಿತವಾದ ದುರ್ಮಾರ್ಗಗಳನ್ನು ತಿಳಿದು ಹೆದರಿ ಹೌಹಾರಿ ಹೋಗಿದ್ದೇನೆ. ಕಾಲ ಪ್ರಭಾವದಿಂದ ನನ್ನ ಮನ ಮೆಲ್ಲಮೆಲ್ಲನೇ ದೂಷಿತವಾದರೆ ಹೇಗೆ? ನನ್ನ ಮನಸ್ಸು ದೂಷಿತವಾಗುವ ಭಯವಿಲ್ಲದಿದ್ದರೆ ಮಾತ್ರ ನಾನು ನನ್ನ ಈ ತಾಯಿಯ ಉದರದ ಹೊದರಿನಿಂದ ಹೊರಬರುವೆ.'' ತಂದೆ ಮಾಂಟಿಗೆ ಗರ್ಭಸ್ಥ ಶಿಶುವಿನ ಈ ಆಶ್ಚರ್ಯಕಾರಕವಾದ ನುಡಿಗಳನ್ನು ಆಲಿಸಿ ಕೌತುಕದ ಮೇಲೆ ಕೌತುಕ, ಅವನು ಏನೂ ತಿಳಿಯದೇ ಕೊನೆಗೆ ಕಾಲ ನಿಯಾಮಕನಾದ , ಕಾಲಕೂಟನನ್ನು ಭಕ್ಷಿಸಿದ ಮಹಾಕಾಲ ಎಂದು ಕರೆಯಲ್ಪಡುವ ಪರಮೇಶ್ವರನಿಗೇ ಶರಣು ಹೋದ. ಭಕ್ತಿಯಿಂದ ಬೇಡಿಕೊಂಡ.

ದೇವೋತ್ತಮ, ರಕ್ಷಿಸು ಈ ನಿನ್ನ ಭಕ್ತನನ್ನು. ನೀನೇನೋ ನನ್ನ ಮೇಲೆ ದಯೆತೋರಿ ಪುತ್ರನನ್ನು ಕರುಣಿಸಿದೆ. ಆದರೆ ಆ ಮಗು ನಾಲ್ಕು ವರ್ಷ ಕಳೆದರೂ ತಾಯಿಯ ಉದರಗುಹೆಯಿಂದ ಹೊರಗೆ ಬರಲೊಲ್ಲದು. ನೆಲವನ್ನು ಮುಟ್ಟಲೂ ನಿರಾಕರಿಸುತ್ತದೆ. ಆದ್ದರಿಂದ ಗರ್ಭವನ್ನು ಕರಿಣಿಸಿದ ನೀನು ಅದು ಗರ್ಭದಿಂದ ಬಹಿರ್ಭೂತವಾಗಿ ಭೂಮಿಯಲ್ಲಿ ಜನಿಸುವಂತೆ ಮಾಡು.'' ಅತ್ಯಾಶ್ಚರ್ಯವಾಯಿತು ಮಾಂಟಿಯ ಮಾತನ್ನು ಕೇಳಿ ಮಹೇಶ್ವರನಿಗೆ. ಆದರೆ ಇವನು ಮಾಡಿದ ಕೈಂಕರ್ಯ ಭಕ್ತಿಯಿಂದ ಸಂತಸವೂ ಆಯಿತು. ಆಗ ಅವನು ತನ್ನ ವಿಭೂತಿ ರೂಪಗಳನ್ನು ಕುರಿತು ಹೇಳಿದನು.

''ಜ್ಞಾನ, ಧರ್ಮ, ವೈರಾಗ್ಯ, ಐಶ್ವರ್ಯ, ಅಜ್ಞಾನ, ಅಧರ್ಮ, ಅವೈರಾಗ್ಯ, ಅನೈಶ್ವರ್ಯಗಳೇ, ನೀವು ಬೇಗ ಹೋಗಿರಿ. ನೀವೆಲ್ಲರೂ ಕೂಡಿ ಮಾಂಟಿಯ ಮಗನಿಗೆ ತಿಳಿಸಿ ಹೇಳಿರಿ'' ಆಗ ಆ ಭಗವದ್ಭೂತಗಳೆಲ್ಲ ಅಲ್ಲಿಗೆ ಬಂದವು. ತಾಯಿಯ ಗರ್ಭಾಗಾರದಲ್ಲಿ ಗುಟ್ಟಾಗಿ ಗಟ್ಟಿಯಾಗಿ ತಳವೂರಿದ ಆ ಕಂದಮ್ಮನನ್ನು ಸಮಾಧಾನಪಡಿಸುತ್ತ ನುಡಿದರು - ''ಬುದ್ಧಿವಂತನಾದ ಮಾಂಟಿ ಕುಮಾರ, ನೀನು ಹೆದರಬೇಡ, ಧರ್ಮ ಜ್ಞಾನ ವೈರಾಗ್ಯ, ಐಶ್ವರ್ಯಗಳೆಂಬ ನಾವು ನಿನ್ನ ಮನದಿಂದ ಎಂದೂ ದೂರವಾಗುವದಿಲ್ಲ.'' ಅನಂತರ ಅಧರ್ಮವು ಹೇಳಿತು - ''ನಾನು ನಿನ್ನ ಹತ್ತಿರ ಬರುವದಿಲ್ಲ. ನಿನಗೆ ನಮಸ್ಕಾರ. ನನ್ನಿಂದ ನಿನಗೆ ಯಾವ ಭಯಾಪಾಯವೂ ಉಂಟಾಗಲಾರದು .''

ಮಹಾವಿಭೂತಿಗಳ ಈ ಆಶ್ವಾಸನೆಯನ್ನು ಕೇಳಿ ಆ ಗರ್ಭದಲ್ಲಿರುವ ಶಿಶು ತಾನಾಗಿ ಸಲೀಸಾಗಿ ಸವಿತ್ರಿಯ ಉದರದಿಂದ ಸರಿದು ಹೊರಬಂದಿತು. ನೆಲದ ಮೇಲೆ ಬಿದ್ದ ಕೂಡಲೇ ಕೂಸಿನ ಮೈಯಲ್ಲಿ, ನಡುಕ, ಕಣ್ಣಿನಲ್ಲಿ ಅಳುಕ, ತುಸು ಅವಧಿಯಲ್ಲಿಯೇ ಮಗು ಅಳತೊಡಗಿತು.

**ವಿಭೂತಿ :** ಮಾಂಟಿ ಮಹನೀಯನೆ, ನಿನ್ನ ಮಗನು ಕಾಲಮಾರ್ಗದ ಭಯದಿಂದ ಕಂಗೆಟ್ಟಿದ್ದಾನೆ. ಅದರಿಂದಲೇ ಕಾಲಭೀತಿ ಎಂದು ದೇಶದಲ್ಲಿ ಪ್ರಸಿದ್ಧಿ ಪಡೆಯುವನು.'' ಹೀಗೆ ಅವನಿಗೆಲ್ಲ ವರ ನೀಡಿ ಆ ಎಲ್ಲ ವಿಭೂತಿಗಳೂ ಮಹಾದೇವರ ಬಳಿಗೆ ಹೋದರು. ಇತ್ತ ಆ ಹುಡುಗನು ಶುಕ್ಲಪಕ್ಷದ ಚಂದ್ರನಂತೆ ಪ್ರತಿದಿನ ಬೆಳೆಯುತ್ತ ನಡೆದ. ಉಪನಯನ ಸಂಸ್ಕಾರ ಆದ ಬಳಿಕ ಆ ಮಗು ಅಧ್ಯಯನ ಮಾಡಿ ದಿವ್ಯಜ್ಞಾನವನ್ನು ಸಂಪಾದಿಸಿ, ಪಶುಪತಿ ಮಂತ್ರದ ದೀಕ್ಷೆಯನ್ನು ತೆಗೆದುಕೊಂಡನು, ಸದ್ಯೋಜಾತಾದಿ ಐದು ಮಂತ್ರಗಳನ್ನು ಜಪ ಮಾಡುತ್ತ ತೀರ್ಥಯಾತ್ರೆಯಲ್ಲಿ ತತ್ಪರನಾದನು. ಈ ಮಹೀಸಾಗರ ಸಂಗಮ ಎಂಬ ಹೆಸರಿನ ಉತ್ತಮ ಕ್ಷೇತ್ರದ ಮಹಿಮೆಯನ್ನು ತಿಳಿದು ಕಾಲಭೀತಿಯು ಈ ಕ್ಷೇತ್ರಕ್ಕೆ ಆಗಮಿಸಿದನು.

ಇಲ್ಲಿಯ ತೀರ್ಥ ಜಲದಲ್ಲಿ ಸ್ನಾನಮಾಡಿ ಒಂದು ಕೋಟಿ ಮಂತ್ರ ಜಪ ಮಾಡಿದನು. ತನ್ನ ಜಪ ತಪೋನುಷ್ಠಾನಗಳನ್ನು ಮುಗಿಸಿ ಎದುರಿಗೆ ಇರುವ ಒಂದು ಬಿಲ್ವವೃಕ್ಷದ ಬಳಿಗೆ ಬಂದು ಕುಳಿತುಕೊಂಡನು. ತನ್ನ ಎಲ್ಲ ಇಂದ್ರಿಯಗಳ ಮೇಲೆ ಅವನಿಗೆ ಸಂಪೂರ್ಣ ಪ್ರಭುತ್ವವು ಪ್ರಾಪ್ತವಾಗಿದ್ದಿತು. ಎರಡು ಗಳಿಗೆ ಅವನಿಗೆ ಬ್ರಹ್ಮಾನಂದದ ಅನುಭೂತಿ. ಬಾಹ್ಯ ಪ್ರಜ್ಞೆಯೇ ಇರಲಿಲ್ಲ. ಅವನ ಆತ್ಮವು ಪರಮಾನಂದ ತುಂದಿಲವಾಗಿ ಮೋಕ್ಷಾನಂದದ ತುದಿಯಲ್ಲಿಯೇ ತೂಗಾಡುತ್ತಿತ್ತು. ಅದೊಂದು ಬಗೆಯ ಬ್ರಹ್ಮಸಮಾಧಿ. ಸ್ವರ್ಗ ಸುಖವು ಅದಕ್ಕೆ ಸಾಟಿಯಲ್ಲ. ಇಂಥ ಮೌಕ್ತಿಕ ಆನಂದವನ್ನೂ ತನ್ನ ಮಂತ್ರ ಜಪ ಪ್ರಭಾವದಿಂದ ಎರಡು ಘಳಿಗೆ ಅನುಭವಿಸಿ ಅವನು ಮತ್ತೆ ಮರಳಿ ಪೂರ್ವಾವಸ್ಥೆಗೆ ಬಂದನು.

ಇದನ್ನು ಕಂಡು ಕಾಲಭೀತಿಗೆ ಅತ್ಯಾಶ್ಚರ್ಯ. ತನ್ನ ಮನಸ್ಸಿನಲ್ಲಿಯೇ ಅವನು ಕೌತುಕದ ಕೊನೆ ಏರಿನಿಂತ. ತನ್ನಷ್ಟಕ್ಕೇ ತಾನೇ ಹೇಳಿಕೊಂಡ - ''ಇಂಥ ಆನಂದ ನನಗೆ ಕಾಶಿಯಲ್ಲಿ ಆಗಲಿಲ್ಲ. ನೈಮಿಷಾರಣ್ಯದಲ್ಲಿ ದೊರಕಲಿಲ್ಲ. ಪ್ರಭಾಸ, ಕೇದಾರ,

ಅಮರ ಕಂಟಕ ಮುಂತಾದ ಕ್ಷೇತ್ರಗಳಲ್ಲಿ ನಾನು ಮಂತ್ರಗಳನ್ನು ಜಪಿಸಿದಾಗಲೂ ಇಂಥ ದಿವ್ಯಾನಂದವು ಆ ನನ್ನ ಅನುಭೂತಿಗೆ ಗೋಚರವಾಗಿರಲಿಲ್ಲ. ಇದೆಲ್ಲವೂ ಈ ಮಹೀಸಾಗರ ಸಂಗಮ ತೀರ್ಥದ ಪ್ರಭಾವವೇ ಸರಿ. ಆದುದರಿಂದಲೇ ಈ ತೀರ್ಥವು ಕಾಶಿ, ಪ್ರಯಾಗ, ಪುಷ್ಕರ ಮುಂತಾದ ಎಲ್ಲ ತೀರ್ಥಗಳಿಗಿಂತ ಶ್ರೇಷ್ಠವಾಗಿದೆ. ಆದುದರಿಂದ ನಾನು ಇಲ್ಲಿಯೇ ನಿಂತು ತಪೋನುಷ್ಠಾನವನ್ನು ಕೈಕೊಳ್ಳುವೆನು.''

ಹೀಗೆ ವಿಚಾರ ಮಾಡಿ ಕಾಲಭೀತಿಯು ಒಂಟಿ ಕಾಲಿನ ಹೆಬ್ಬೆರಳಿನ ತುದಿಯ ಮೇಲೆ ನಿಂತುಕೊಂಡು ಅದೇ ಬಿಲ್ವ ವೃಕ್ಷದ ಅಡಿಯಲ್ಲಿ ಅಖಂಡ ಮಂತ್ರ ಜಪವನ್ನು ಮಾಡತೊಡಗಿದನು. ಪ್ರತಿನಿತ್ಯವೂ ಒಂದು ಒಂದು ಬಿಂದು ಮಾತ್ರ ನೀರನ್ನು ಕುಡಿದು ಸಾಗಿತು ಅವನ ಅಪರೂಪ ತಪೋನುಷ್ಠಾನ. ಹೀಗೆ ಒಂದು ನೂರು ವರುಷ ಉರುಳಿತು. ಹೀಗೆಯೇ ಒಂದು ಹನಿ ನೀರಿನ ಮೇಲೆ ನೂರು ವರುಷ ಮಂತ್ರ ಜಪರೂಪವಾದ ತಪಶ್ಚರ್ಯವನ್ನು ಮಾಡಿ ಮುಗಿಸಿದ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತೇಳನೇ ಅಧ್ಯಾಯ ಮುಗಿದುದು.**

## ಕಾಲಭೀತಿ ಆಗುಂತಕರ ಸಂಭಾಷಣೆ

ಅಧ್ಯಾಯ -28

ಒಂದು ದಿನ ಒಬ್ಬ ಮನುಷ್ಯನು ನೀರು ತುಂಬಿದ ಒಂದು ಕೊಡವನ್ನು ತುಂಬಿಕೊಂಡು ಕಾಲಭೀತಿಯ ಬಳಿಗೆ ಬಂದನು. ಇವನಿಗೆ ನಮಿಸಿ ಆನಂದದಿಂದ ನುಡಿದನು.

''ಮಹಾತ್ಮನೆ, ಇಂದು ನಿಮ್ಮ ನಿಯಮವು ಪೂರ್ತಿಯಾಯಿತಲ್ಲವೆ! ಒಂದೊಂದೇ ಹನಿಯನ್ನು ಕುಡಿದು ನೀವು ನೂರು ವರ್ಷ ಮಂತ್ರವನ್ನು ಜಪಿಸಿದಿರಿ. ಘೋರ ತಪವನ್ನು ತಪಿಸಿದಿರಿ. ಘೋರ ಅನುಷ್ಠಾನವನ್ನು ಮಾಡಿದಿರಿ. ಶಿವನ ದಯೆಯಿಂದ ನಿರ್ವಿಘ್ನವಾಗಿ ಯಶಸ್ವಿಯಾಗಿ ಮುಕ್ತಾಯವಾಗಿದೆ ಈ ನಿಮ್ಮ ಶತಸಂವತ್ಸರದ ಅತ್ಯುಗ್ರ ಮಂತ್ರಜಪರೂಪ ತಪೋನುಷ್ಠಾನ. ಇನ್ನು ಯಥೇಷ್ಟವಾಗಿ ಜಲಪಾನ ಮಾಡಲು ಯಾವ ಅಭ್ಯಂತರವೂ ಇಲ್ಲವಷ್ಟೆ ! ತಮಗೆ ಕುಡಿಯಲಿಕ್ಕೆಂದು ಈ ತಿಳಿಯಾದ ಸಿಹಿನೀರನ್ನು ತೆಗೆದುಕೊಂಡು ಬಂದಿದ್ದೇನೆ. ತಾವು ಜಲಪಾನ ಮಾಡಿರಿ. ನನ್ನನ್ನು ಕೃತಾರ್ಥನನ್ನಾಗಿ ಮಾಡಿರಿ.

**ಕಾಲಭೀತಿ :** ''ನಿನ್ನ ವರ್ಣ ಯಾವುದು ? ಆಚಾರ ಎಂಥದು? ವ್ಯವಹಾರ ಯಾವ ಬಗೆಯದು? ಇದೆಲ್ಲವನ್ನು ಸರಿಯಾಗಿ ಹೇಳು. ನಿನ್ನ ಜನ್ಮ ಆಚಾರಗಳನ್ನು ತಿಳಿದ ಬಳಿಕವೇ ನಿನ್ನ ನೀರನ್ನು ನಾನು ಗ್ರಹಣ ಮಾಡುವೆನು. ಇಲ್ಲದಿದ್ದರೆ, ಇಲ್ಲ.''

**ಆಗಂತುಕ :** ''ನನ್ನ ತಾಯಿ ಯಾರೋ? ತಂದೆ ಯಾರೋ ? ನನಗೆ ಯಾವುದೂ ಗೊತ್ತಿಲ್ಲ. ನಾನು ಎಂದಿನಿಂದಲೂ ಹೀಗೆಯೇ ಇದ್ದಂತೆಯೇ ಇದ್ದ ನೆನಪು. ಧರ್ಮ ಆಚಾರಗಳಿಂದ ನನಗೇನು ಪ್ರಯೋಜನ ?''

**ಕಾಲಭೀತಿ :** ''ಹಾಗಿದ್ದರೆ, ನಾನು ಮುಟ್ಟಲಾರೆ ಎಂದೆಂದಿಗೂ ನಿನ್ನ ನೀರನ್ನು. ಈ ವಿಷಯದಲ್ಲಿ ನನ್ನ ಗುರುಗಳು ಕಟ್ಟುನಿಟ್ಟಾಗಿ ನನಗೆ ಉಪದೇಶ ನೀಡಿದ್ದಾರೆ. ನನ್ನ ಗುರುಗಳ ಉಪದೇಶ ನನಗೆ ವೇದದ ಆದೇಶ. ಅದೇ ನನಗೆ ಶಾಸ್ತ್ರಗಳ ಸಂದೇಶ. ಅದನ್ನು ಕೇಳು.''

**''ನ ಜ್ಞಾಯತೇ ಕುಲಂ ಯಸ್ಯ ಬೀಜಶುದ್ಧಿ ಸ್ತಥೈವ ಚ ॥**
**ತಸ್ಯ ಖಾದನ್ ಪಿಬನ್ ವಾಪಿ ಸಾಧುಃ ಸೀದತಿ ತತ್ಕ್ಷಣಾತ್ ॥**

ಯಾವನ ಕುಲವು ತಿಳಿದಿಲ್ಲವೋ, ಮತ್ತು ಯಾರ ಜನ್ಮವು ಪರಿಶುದ್ಧವಾಗಿಲ್ಲವೋ ಅಂಥ ಮನುಷ್ಯರ ಅನ್ನವನ್ನು ಉಂಡು ನೀರನ್ನು ಕುಡಿದರೆ, ತಕ್ಷಣದಲ್ಲಿಯೇ ಸತ್ಪುರುಷನು ದುಃಖಿತನಾಗುತ್ತಾನೆ. ಯಾವನು ವರ್ಣದಿಂದ ಹೀನನೋ ಮತ್ತು ಶಿವನಲ್ಲಿ ಭಕ್ತಿ ಮಾಡುವದಿಲ್ಲವೋ ಅವನಿಂದ ದಾನವನ್ನು ಸ್ವೀಕರಿಸಬಾರದು. ಅಂಥ ಜಾತಿಹೀನ, ಆಚಾರ ಹೀನನಾದ ದುರ್ಜನನಿಗೆ ಯಾವ ದಾನವನ್ನೂ ಕೊಡಬಾರದು. ಇದು ನನ್ನ ಗುರುವಿನ ಕಟ್ಟಪ್ಪಣೆ.

**ಆಗಂತುಕ :** ''ನಿನ್ನ ಈ ಮಾತುಗಳನ್ನು ಕೇಳಿದಾಗ ನನಗೆ ನಗು ಬರುತ್ತಿದೆ. ಅಯ್ಯಾ! ನೀನೆಂಥ ಅವಿವೇಕಿ ! ಎಲ್ಲ ಪ್ರಾಣಿಗಳಲ್ಲಿಯೂ ಆ ಸದಾಶಿವನು ಸದಾವಾಸ ಮಾಡುವನಷ್ಟೇ! ಆದುದರಿಂದ ಯಾರನ್ನೂ ನಿಂದಿಸಕೂಡದು. ಧಿಕ್ಕರಿಸಕೂಡದು. ನೀನು ಮಾಡಿದ ಧಿಕ್ಕಾರ, ನಿಂದೆ ಎಲ್ಲವೂ ಶಿವನಿಂದೆಯೇ ಆಗುವದು. ತಾನು ಬೇರೆ, ತನ್ನೆದುರು ನಿಂತ ಮನುಷ್ಯನು ಬೇರೆ ಎಂದು ಜೀವಜೀವರಲ್ಲಿ ಭೇದವನ್ನು ಎಣಿಸುವವನು ಅಜ್ಞಾನಿ. ಭೇದದರ್ಶಿಗೆ ಮೃತ್ಯುಭಯ ತಪ್ಪಿದ್ದಲ್ಲ.

ಶುದ್ಧಾಶುದ್ಧತೆಯ ಬಗೆಗೆ ನಿನ್ನ ವಿಚಾರವಾದರೂ ಏನಿದೆ? ನಾನು ಹೊತ್ತು ತಂದೆ ಈ ಕೊಡವು ಮಣ್ಣಿನಿಂದ ಮಾಡಲ್ಪಟ್ಟಿದೆ, ಬೆಂಕಿಯಲ್ಲಿ ಸುಡಲ್ಪಟ್ಟಿದೆ. ನೀರಿನಿಂದ ಪರಿಶುದ್ಧವಾಗಿದೆ. ಇದರಲ್ಲಿ ಅಶುದ್ಧಿ ಎಲ್ಲಿ ಬಂತು ? ಪೃಥ್ವಿ, ಅಗ್ನಿ, ಜಲ, ಇವು ಮೂರರಲ್ಲಿ ಯಾವುದು ಅಶುದ್ಧ? ಇನ್ನು ಅದನ್ನು ಹೊತ್ತು ತಂದ ನನ್ನ ಸಂಪರ್ಕದಿಂದ ಆ ನೀರು ಅಶುದ್ಧವಾಗಿದೆ ಎಂದು ನೀನು ಎನ್ನಬಹುದು. ಆದರೆ ವಿಚಾರ ಮಾಡು. ನನ್ನ ಸಂಸರ್ಗದಿಂದ ಮಣ್ಣಿನ ಕೊಡ ಮೈಲಿಗೆ ಆಗುವದಾದರೆ. ನಿನಗೂ ಮೈಲಿಗೆ. ನಾನು ನಿಂತ ನೆಲದಲ್ಲಿಯೇ ನೀನು ನಿಂತಿರುವೆಯಲ್ಲವೆ? ನಾನು ಮುಟ್ಟಿದ ನೆಲವನ್ನೇ ನೀನು ಮೆಟ್ಟಿದರೆ, ನಿನಗೆ ಮೈಲಿಗೆ ಹೇಗೆ ಆಗುವದಿಲ್ಲ ? ಸರ್ವಾತ್ಮನಾ ನನ್ನ ಸಂಪರ್ಕವೇ ಆಗಬಾರದು ಎಂದು ನಿನ್ನ ಅಪೇಕ್ಷೆ ಇದ್ದರೆ, ನಾನು ಮುಟ್ಟಿದ ನೆಲವನ್ನು ಕೂಡ ನೀನು ಸ್ಪರ್ಶಿಸಬಾರದು. ನಾನು ನೆಲದಲ್ಲಿ ನಿಂತಾಗ ನೀನು ಮುಗಿಲಲ್ಲಿ ಹಾರಾಡು. ಹೀಗೆಲ್ಲ ವಿಚಾರ ಮಾಡುತ್ತ ಹೋದರೆ, ನಿನಗೆ ಮೂರ್ಖನೆನ್ನದೆ ನಾನು ಏನೆಂದು ಕರೆಯಲಿ?''

**ಕಾಲಭೀತಿ :** ''ನಿನ್ನದು ವೊಂಡು ವಾದ. ಪಾಖಂಡಿ ವಿಚಾರ. ಎಲ್ಲ ಪ್ರಾಣಿಗಳಲ್ಲಿಯೂ ಶಿವನೇ ಇರುತ್ತಾನೆ ಎಂದು ಒಪ್ಪಿಕೊಂಡ ಮಾತ್ರಕ್ಕೆ ಮಡಿ ಮೈಲಿಗೆ, ಶುದ್ಧಿ, ಅಶುದ್ಧಿ, ಎಲ್ಲ ವಿಚಾರವನ್ನೂ ಬಿಟ್ಟು ಬಿಡಬೇಕೆ ? ಶಿವ ಸರ್ವಾಂತರ್ಯಾಮಿ

ಇರುವದರಿಂದ ಎಲ್ಲರೂ ಪವಿತ್ರ ಎಂದು ನೀವು ಹೇಳುವಿರಷ್ಟೇ! ಹಾಗಾದರೆ, ಶಿವನು ಮೃಷ್ಟಾನ್ನದಲ್ಲಿ ಇರುತ್ತಾನೆ. ಮಣ್ಣಿನಲ್ಲಿ ಇರುತ್ತಾನೆ. ಭಕ್ಷ ಭೋಜ್ಯಗಳಣ್ಣು ಬಿಟ್ಟು ನೀವು ಮಣ್ಣನ್ನೆ ಏಕೆ ಮುಕ್ಕುವುದಿಲ್ಲ ? ಸಿಹಿ ನೀರಿನಲ್ಲೂ ಶಿವ, ರಾಡಿ ನೀರಿನಲ್ಲಿಯೂ ಶಿವ, ಸಿಹಿ ನೀರನ್ನು ಬಿಟ್ಟು ರಾಡಿ ನೀರನ್ನೇ ಏಕೆ ಕುಡಿಯುವುದಿಲ್ಲ? ಈ ತರಹದ ವಿಚಾರ ಅವ್ಯವಹಾರ್ಯ. ಸಂಸಾರದ ಈ ವ್ಯವಹಾರ ಸಿದ್ಧಿಗಾಗಿ ಒಂದು ಮರ್ಯಾದೆಯನ್ನು ನಿಗದಿ ಮಾಡಿದ್ದಾರೆ ಶಾಸ್ತ್ರಕಾರರು. ಆ ಶಾಸ್ತ್ರ ಮರ್ಯಾದೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಬ್ರಹ್ಮದೇವರು ಈ ಎಲ್ಲ ಪಾಂಚಭೌತಿಕ ಜಗತ್ತನ್ನು ಸೃಷ್ಟಿ ಮಾಡಿ ಅದನ್ನೆಲ್ಲ ನಾಮರೂಪಾತ್ಮಕ ಪ್ರಪಂಚದ ಕಟ್ಟಿನಲ್ಲಿ ಬದ್ಧವನ್ನಾಗಿ ಮಾಡಿದ್ದಾರೆ. ಈ ನಾಮ ಪ್ರಪಂಚವು ನಾಲ್ಕು ವಿಧವಾಗಿದೆ. ಧ್ವನಿ, ವರ್ಣ, ಪದ, ವಾಕ್ಯ, ಇದೇ ನಾಮಾತ್ಮಕ ಪ್ರಪಂಚದಲ್ಲಿ ನಾಲ್ಕು ಆಧಾರ ಸ್ಥಾನಗಳು. ಇವುಗಳಲ್ಲಿ ಧ್ವನಿ ನಾದಸ್ವರೂಪ. ಓಂಕಾರ ಪೂರ್ವಕವಾದ ಸಂಪೂರ್ಣ ಅಕ್ಷರವೇ ವರ್ಣ ಎನಿಸಲ್ಪಡುವದು. 'ಶಿವಂ' ಎಂಬ ಸುಬಂತ ಶಬ್ದವು ಪದ ಎನಿಸುತ್ತದೆ. 'ಶಿವಂ ಭಜೇತ್ ' ಎಂಬ ವಿಧಿಯು ತಿಜಂತ ಕ್ರಿಯೆಯಿಂದ ಅನ್ವಿತವಾದ್ದರಿಂದ ವಾಕ್ಯ ಎಂದು ಕರೆಯಲ್ಪಡುವದು.

ಶಾಸ್ತ್ರ ಸಿದ್ಧಾಂತಕ್ಕೆ ಅನುಗುಣವಾಗಿ ವಾಕ್ಯವು ಕೂಡ ಮೂರು ವಿಧವಾಗಿದೆ. ಪ್ರಭು ಸಮ್ಮಿತ, ಸುಹೃತ್ ಸಮ್ಮಿತ, ಕಾಂತಾ ಸಮ್ಮಿತ ಎಂದು. ಒಡೆಯನು ತನ್ನ ಸೇವಕನಿಗೆ ಈ ಕೆಲಸವನ್ನು ಮಾಡು' ಎಂದು ಕಟ್ಟಪ್ಪಣೆ ಮಾಡುವದಿಲ್ಲವೆ! ಹಾಗೆ ವೇದಶಾಸ್ತ್ರಗಳು ಪ್ರಭುವಿನಂತೆ 'ಸುರಾಪಾನ ಮಾಡಬಾರದು' 'ಸುಳ್ಳು ಹೇಳಬಾರದು', 'ಸೆರೆ ಕುಡಿಯಬಾರದು,' 'ವ್ಯಭಿಚಾರ ಮಾಡಬಾರದು' ಎಂದು ಮುಂತಾಗಿ ಪ್ರಭುವಿನ ಅಧಿಕಾರ ವಾಣಿಯಿಂದ ಕಟ್ಟಪ್ಪಣೆ ಮಾಡುತ್ತವೆ. ಅನುಶಾಸನ ಗೈಯುತ್ತವೆ, 'ನ ಸುರಾಂ ಪಿಬೇತ್' 'ಸತ್ಯಂವದ' ನ ಪರದಾರಾನ್ ಗಚ್ಛೇತ್' ಎಂದು ಮುಂತಾದ ವೇದಶಾಸ್ತ್ರಗಳ ಆದೇಶದ ವಾಕ್ಯಗಳು ಪ್ರಭು ಸಮ್ಮಿತ ಎಂದು ಕರೆಯಲ್ಪಡುತ್ತವೆ. ಇತಿಹಾಸ ಪುರಾಣದ ವಾಕ್ಯಗಳು ಗೆಳೆಯರಂತೆ ಮನುಷ್ಯನಿಗೆ ಸಾಧಕ ಬಾಧಕಗಳನ್ನು ತಿಳಿಸಿ ಹೇಳುವವು. ನೀತಿ ನಿಷ್ಠನಾಗಿ ಸನ್ಮಾರ್ಗದಲ್ಲಿ ನಡೆದರೆ ನಿನಗೆ ಸುಖವಾಗುವದು. ನೀತಿಭ್ರಷ್ಟನಾಗಿ ದುರ್ಮಾರ್ಗವನ್ನು ಹಿಡಿದರೆ ನಿನಗೆ ದುಃಖವಾಗುವುದು. ಆದುದರಿಂದ ನೀನು ಒಳ್ಳೆಯ ದಾರಿ ಹಿಡಿ' ಎಂದು ಪ್ರೀತಿಯ ಗೆಳಯನಂತೆ ಬೋಧಿಸುವವು. ಆದುದರಿಂದ ಇವುಗಳಿಗೆ 'ಸುಹೃತ್ ಸಮ್ಮಿತ ವಾಕ್ಯ' ಎಂದು ಕರೆಯುವರು. ಇದರಂತೆ ಕಾವ್ಯ, ನಾಟಕ ಮುಂತಾದವುಗಳು ಸರಸ ಸುಂದರವಾದ, ವ್ಯಂಗ್ಯ ಭಂಗಿಯ ಚತುರೋಕ್ತಿಯಿಂದ ಕಾಂತೆಯರು ತಮ್ಮ ಪ್ರಿಯಕರನ ಮನಸ್ಸನ್ನು ತಿರುಗಿಸಿ ಪ್ರೀತಿಯ ಬಲದಿಂದಲೇ ಸನ್ಮಾರ್ಗಕ್ಕೆ ಹಚ್ಚುವಂತೆ ಮನಃ ಪರಿವರ್ತನೆಯನ್ನು ಮೃದು ಮಧುರವಾಗಿ ಮಾಡುವದರಿಂದ ಕಾಂತಾ ಸಮ್ಮಿತ ವಾಕ್ಯ ಎನಿಸುವವು.

ಇವುಗಳಲ್ಲಿ ಪ್ರಭುಸಮ್ಮಿತವಾದ ವೇದಶಾಸ್ತ್ರ ವಾಕ್ಯಗಳು ಮಾನವನನ್ನು ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ ಪವಿತ್ರನನ್ನಾಗಿ ಮಾಡುವವು. ಸ್ವರ್ಗ ಮತ್ತು ಅಪವರ್ಗಗಳ ಅಪೇಕ್ಷೆ ಇದ್ದವರು ಈ ಶ್ರುತಿ ಸ್ಮೃತಿಗಳ ಪ್ರಭು ಸಮ್ಮಿತ ನಿದೇಶ, ಉಪದೇಶಗಳನ್ನು ಮನ್ನಿಸಲೇಬೇಕು, ಭೂಲೋಕದಲ್ಲಿರುವ ಮಾನವರು ಪ್ರಭು ಸಮ್ಮಿತ ಹಾಗೂ 'ಸುಹೃತ್' ಸಮ್ಮಿತ ವಾಕ್ಯಗಳನ್ನು ಕೇಳಲೇ ಬೇಕು. ಅವುಗಳ ಆದೇಶಗಳನ್ನೂ ಪಾಲಿಸಲೇಬೇಕು. ಎಂದು ಅವುಗಳ ಕಟ್ಟಪ್ಪಣೆ. ಇದನ್ನು ಮೀರಿದರೆ ಘೋರ ನರಕ. ಈ ಎಲ್ಲ ವೇದ ಶಾಸ್ತ್ರ ವಚನಗಳನ್ನು ಧಿಕ್ಕರಿಸಿ ವ್ಯಾವಹಾರಿಕವಾದ ಸಮಾನತೆಯ ಮಾತನ್ನು ಆಡಿದರೆ ಮನಬಂದಂತೆ ನಡೆಯುವವದಾದರೆ, ಆ ವೇದಶಾಸ್ತ್ರಗಳು ವ್ಯರ್ಥವೆ! ಹಿಂದೆ ಆಗಿ ಹೋದ ವಶಿಷ್ಠ, ವಿಶ್ವಾಮಿತ್ರ, ಮಾಂಧಾತ, ಹರಿಶ್ಚಂದ್ರ ಮುಂತಾದ ಮಹಾಮಹಿಮರಾದ ಬ್ರಹ್ಮರ್ಷಿಗಳು ಮೂರ್ಖರೆ ? ರಾಜರ್ಷಿಗಳು ಹುಚ್ಚರೆ ? ಅವ್ಯವಹಾರ್ಯವಾದ ಅಪಕ್ವ ವಿಚಾರವನ್ನು ತಲೆಯಲ್ಲಿ ತುಂಬಿಕೊಂಡ ನಿಮ್ಮಂಥ ನಾಸ್ತಿಕರು ಮಾತ್ರ ಬುದ್ಧಿವಂತರೊ ? ವೇದ ವೇದಾಂಗ, ವೇದಾಂತಗಳನ್ನು ಅನುಸರಿಸಿ ಸದಾಚಾರ ಸಂಪನ್ನರಾಗಿ ಆ ಶಾಸ್ತ್ರದ ಆದೇಶವನ್ನು ಅನುಷ್ಠಾನಕ್ಕೆ ತರುವ ಸಾತ್ವಿಕರು ಸದ್ಗತಿಯನ್ನು ಹೊಂದುತ್ತಾರೆ. ರಜೋಗುಣವನ್ನು ಗಳಿಸಿಕೊಂಡ ಮಾನವರು ಭೂಲೋಕದಲ್ಲಿ ಇರುತ್ತಾರೆ. ತಮೋಗುಣ ಪ್ರಧಾನರಾದ ನಾಸ್ತಿಕರು ನರಕದಲ್ಲಿ ಬೀಳುತ್ತಾರೆ. ಸಾತ್ವಿಕ ಆಚಾರ ವಿಚಾರಗಳಿಂದ ಮನುಷ್ಯನಿಗೆ ಸ್ವರ್ಗ ನಿಶ್ಚಿತ, ತಾಮಸ, ಆಚಾರವಿಚಾರಗಳಿಂದ ಸ್ವಾರ್ಥ, ವಂಚನೆ, ಮೋಸ, ಪರದ್ರೋಹ, ನರಹತ್ಯೆ, ಸುರಾಪಾನ, ಕಳವು, ವ್ಯಭಿಚಾರ, ಮುಂತಾದ ದುರಾಚಾರಗಳಿಂದ ನರಕವು ನಿಶ್ಚಿತ. ಆದುದರಿಂದ ಮನುಷ್ಯರು ಶಾಸ್ತ್ರ ಆದೇಶದಂತೆ ಸಾತ್ವಿಕರಾಗಬೇಕು. ಸದಾಚಾರಿಗಳಾಗಬೇಕು.

ಎಲ್ಲ ಪ್ರಾಣಿಗಳಲ್ಲಿಯೂ ಎಲ್ಲ ಭೂತಗಳಲ್ಲಿಯೂ ಶಿವನೇ ಇರುತ್ತಾನೆ. ಆದುದರಿಂದ ಬೇಕಾದುದನ್ನು ತಿನ್ನಬಹುದು ಬಯಸಿದ್ದನ್ನು ಕುಡಿಯಬಹುದು. ಯಾರನ್ನಾದರೂ ಯಾವಾಗಲಾದರೂ ಮುಟ್ಟಬಹುದು. ಮಡಿ ಎನ್ನುವದು ಇಲ್ಲ. ಮೈಲಿಗೆ ಎನ್ನುವದೂ ಎಲ್ಲ. ಇದೇ ಅಷ್ಟೇ ನಿನ್ನ ವಾದ ! ಈ ವಿಷಯದಲ್ಲಿ ನಾನು ಒಂದು ದೃಷ್ಟಾಂತ ಹೇಳುತ್ತೇನೆ ಕೇಳು. ಅನೇಕ ವಿಧವಾದ ಬಂಗಾರದ ಆಭರಣಗಳಿರುತ್ತವೆ.

ಕೆಲವು ಚೊಕ್ಕ ಚಿನ್ನದ ಆಭರಣ. ಕೆಲವು ಅಶುದ್ಧ ಚಿನ್ನದ ಆಭರಣ. ಎಲ್ಲವೂ ಬಂಗಾರದ ಆಭರಣಗಳೇ. ಆದರೂ ಕೆಟ್ಟ ಬಂಗಾರದ ಆಭರಣವನ್ನು ಯಾರೂ ಸ್ವೀಕರಿಸುವದಿಲ್ಲ. ಎಲ್ಲ ಆಭರಣಗಳಲ್ಲಿಯೂ ಇದ್ದದ್ದು ಬಂಗಾರವೇ ಆದರೂ ಒಂದು ಶುದ್ಧ ಇನ್ನೊಂದು ಅಶುದ್ಧ. ಶುದ್ಧ ಗ್ರಾಹ್ಯ. ಅಶುದ್ಧ ಅಗ್ರಾಹ್ಯ ಅಲ್ಲವೆ ! ಅದರಂತೆ ಭಗವಾನ್ ಸದಾಶಿವನು ಉಚ್ಚ, ನೀಚ, ದುರ್ಜನ, ಸಜ್ಜನ ಎಲ್ಲರಲ್ಲಿಯೂ ಇರುತ್ತಾನೆ. ಖೊಟ್ಟಿ ಬಂಗಾರವನ್ನು ಶೋಧಿಸಿದರೆ, ಶುದ್ಧ ಬಂಗಾರವಾಗುವಂತೆ ದುಷ್ಟ ಮಾನವನು ಕೂಡ ವೇದ ಶಾಸ್ತ್ರಗಳಲ್ಲಿ ಹೇಳಿದಂತೆ, ಸದಾಚಾರ ವ್ರತ, ನಿಯಮ, ಉಪವಾಸ, ಶಿವಾರಾಧನೆ ಮುಂತಾದವುಗಳಿಂದ ತನ್ನ ಅಶುದ್ಧವಾದ ಶರೀರವನ್ನು ಶುದ್ಧವನ್ನಾಗಿ ಮಾಡಿಕೊಂಡು ಅಚ್ಚ ಅಪರಂಜಿಯನ್ನಾಗಿ ಮಾಡಿಕೊಳ್ಳಬೇಕು.

ಅಪವಿತ್ರವಾದ, ಶಾಸ್ತ್ರ ನಿಷಿದ್ಧವಾದ ಅಶುದ್ಧ ಪದಾರ್ಥಗಳನ್ನು ಮುಟ್ಟಬಾರದು, ತಿನ್ನಬಾರದು, ಕುಡಿಯಬಾರದು. ನಿಷಿದ್ಧ ಪದಾರ್ಥ ಸೇವನೆಯಿಂದ ಮಾನವನ ದೇಹವು ಅಶುದ್ಧವಾಗುವುದು. ಮನಸ್ಸು ಕಲುಷಿತವಾಗುವುದು. ಕಲುಷಿತವಾದ ದುಷ್ಟ ಮನಸ್ಸಿನಲ್ಲಿ ಶಿವನ ಆವಿರ್ಭಾವ ಆಗದು. ಶಿವನು ನಮ್ಮ ಹೃದಯದಲ್ಲಿ ಸದಾ ಸನ್ನಿಹಿತನಾಗಲಿ ಎಂದು ಬಯಸುವವನು ಮನಸ್ಸನ್ನೂ ಪರಿಶುದ್ಧವಾಗಿಟ್ಟುಕೊಳ್ಳಬೇಕು. ಈ ಪರಿಶುದ್ಧಿಗೆ ಆಚಾರ ಶುದ್ಧಿ, ವಿಚಾರ ಶುದ್ಧಿ ಆವಶ್ಯಕ. ಶುದ್ಧ ದೇಹ, ಶುದ್ಧ ಮನಸ್ಸಿನಿಂದ, ಶಾಸ್ತ್ರೋಕ್ತ ರೀತಿಯಿಂದ ಶಿವಾರಾಧನೆ ಮಾಡಿದರೆ, ಶಿವನು ಮೆಚ್ಚುವನು. ಸ್ವರ್ಗ ಮೋಕ್ಷಾದಿ ಸದ್ಗತಿಗಳನ್ನೂ ಕರುಣಿಸುವನು. ಇದಕ್ಕೆಲ್ಲ ಮೂಲ ಕಾರಣವಾದ ಅಂತರಂಗ ಶುದ್ಧಿ ಬಹಿರಂಗ ಶುದ್ಧಿಯನ್ನು ನಾವು ಅವಶ್ಯವಾಗಿ ಕಾಪಾಡಿಕೊಳ್ಳಬೇಕು. ವ್ರತ ಉಪವಾಸ ಜಪತಪಗಳನ್ನು ಮಾಡಿ, ಜಪತಪಗಳಿಂದ ಶುದ್ಧಾತ್ಮನಾದ ಮಾನವನು ವೇದ ಶಾಸ್ತ್ರಗಳ ಆಜ್ಞೆಯನ್ನು ಧಿಕ್ಕರಿಸಿ ಶುದ್ಧಾಶುದ್ಧರತೆಯ ವಿಚಾರವಿಲ್ಲದೆ, ನಾಸ್ತಿಕರಾದ ದುರ್ಜನರಿಂದ ಏನಾದರೂ ದಾನವನ್ನು ತೆಗೆದುಕೊಂಡರೆ ಪತಿತನಾಗಿ ಹೋಗುತ್ತಾನೆ.

**'ಸರ್ವತೋ ಯಃ ಪ್ರತಿಗ್ರಾಹೀ ನಿರಾಹಾರೀ ಚ ಯಃ ಪುಮಾನ್ ।**
**ಶುಚಿಃ ಸ್ಯಾದಲ್ಪದಿವಸಾತ್ ಪತಿತೋಽಸೌ ಭವೇತ್ ಸ್ಫುಟಮ್ ॥**

ಇದು ವೇದದ ಆದೇಶ. ಆಹಾರ ಬಿಟ್ಟು ಇಷ್ಟು ದಿನ ಉಪವಾಸವಿದ್ದು ಶಿವಮಂತ್ರವನ್ನು ಜಪಿಸಿ ತಪಿಸಿದವನು ಕಂಡ ಕಂಡವರ ಕಡೆಯಿಂದ ನೀರನ್ನು ತೆಗೆದುಕೊಂಡರೆ ಆಗ ತಾನೂ ಅಶುದ್ಧನಾಗಿ ಪತಿತನಾಗಿ ಬಿಡುವನು. ಇದರಲ್ಲಿ ಸಂದೇಹವಿಲ್ಲ.

ನಾನು ನಿನಗೆ ಮತ್ತೊಮ್ಮೆ ಸ್ಪಷ್ಟವಾಗಿ ಹೇಳಿಬಿಡುತ್ತೇನೆ. ನಿನ್ನ ವಿಚಾರಗಳು ನಾಸ್ತಿಕ ವಿಚಾರ. ವೇದ ಶಾಸ್ತ್ರಗಳನ್ನು ನೀನು ಮನ್ನಿಸುವದಿಲ್ಲ. ಅವೈದಿಕರಿಂದ ನಾನು ಏನನ್ನೂ ಸ್ವೀಕರಿಸಲಾರೆ. ನನಗೆ ಅದರಿಂದ ಒಳ್ಳೆಯದೇ ಆಗಲಿ, ಕೆಟ್ಟದೇ ಆಗಲಿ, ನನಗೆ ವೇದವು ಪರಮ ಪ್ರಮಾಣ. ಅದರ ಆಜ್ಞೆಯೂ ನನಗೆ ಶಿರಸಾಮಾನ್ಯ. ನೀರಿಲ್ಲದೇ ನನ್ನ ಪ್ರಾಣ ಹೋದರೂ ಚಿಂತೆಯಿಲ್ಲ. ವೇದ ವಿರೋಧಿಯ ನೀರನ್ನು ಮುಟ್ಟಲಾರೆ.''

ಕಾಲಭೀತಿಯ ಈ ನುಡಿಗಳನ್ನು ಕೇಳಿ ಗಹಗಹಿಸಿ ನಗತೊಡಗಿದ ಆ ಕೊಡ ಹೊತ್ತ ಮನುಷ್ಯ. ತನ್ನ ಬಲಗೈ ಹೆಬ್ಬೆರಳಿನಿಂದ ಅವನು ನೆಲವನ್ನು ಬಗೆದು ಅಗೆದ. ದೊಡ್ಡದಾದ ಒಂದು ತಗ್ಗು ಉಂಟಾಯಿತು. ಅದರಲ್ಲಿ ತನ್ನ ಕೊಡದಿಂದ ನೀರನ್ನು ಸುರುವಿದ. ಆ ತಗ್ಗು ನೀರಿನಿಂದ ತುಂಬಿ ದೊಡ್ಡ ಹೊಂಡವಾಯಿತು. ಮತ್ತೆ ಆ ಕೊಡದಲ್ಲಿ ನೀರು ಹಾಗೆ ಉಳಿದಿತ್ತು. ಆಗ ಅವನು ತನ್ನ ಕಾಲಿನ ಉಗುರುಗಳಿಂದ ಮತ್ತೆ ಒಂದು ಕೆರೆಯನ್ನು ತೋಡಿದ. ತನ್ನ ಕೊಡದಲ್ಲಿ ಉಳಿದ ನೀರಿನಿಂದ ಅದನ್ನು ತುಂಬಿದ. ಹೀಗೆ ಕೈಬೆರಳಿನಿಂದ ಒಂದು ಹೊಂಡ, ಕಾಲುಬೆರಳಿನಿಂದ ಒಂದು ಸರೋವರ - ಎರಡನ್ನೂ ತೋಡಿ ತನ್ನ ಒಂದೇ ಕೊಡದಲ್ಲಿಯ ನೀರಿನಿಂದ ಅವೆರಡೂ

ದೊಡ್ಡ ದೊಡ್ಡ ಜಲಾಶಯಗಳು ತುಂಬಿ ತುಳುಕಾಡುವಂತೆ ಮಾಡಿದ. ಅದನ್ನು ನೋಡಿ ಕಾಲಭೀತಿಯು ಅಶ್ಚರ್ಯಚಕಿತನು ಆಗಲಿಲ್ಲ. ಭೂತ ಪ್ರೇತಗಳ ಉಪಾಸನೆಯನ್ನು ಮಾಡುವವರು. ವಾಮಾಚಾರಿಗಳೂ, ಕೆಲವು ಕ್ಷುದ್ರವಾದ ತಾಮಸೀ ಶಕ್ತಿಗಳನ್ನು ವಶಪಡಿಸಿಕೊಂಡು ಇಂಥ ಅನೇಕ ಪವಾಡಗಳನ್ನು ಮಾಡಿ ಜನರ ಕಣ್ಣಿನಲ್ಲಿ ಮಣ್ಣು ಹಾಕಿ ದಿಗ್ಭ್ರಮೆಗೊಳಿಸಿ ತಮ್ಮ ಸ್ವಾರ್ಥವನ್ನು ಸಾಧಿಸುತ್ತಾರೆ. ಇಂಥ ಆಸುರೀ ಶಕ್ತಿಯ ಕ್ಷುದ್ರ ಸಿದ್ಧಿಗಳಿಂದ ಉಂಟಾಗಬಹುದಾದ ತೋರಿಕೆಯ ಚಮತ್ಕಾರಗಳಿಗೆ, ಆಪಾತತಃ ಪ್ರಭಾವಗಳಿಗೆ ಸಾತ್ವಿಕರು ಮರುಳಾಗಬಾರದು.

**ಯತೋ ಬಹುವಿಧಂ ಚಿತ್ರಂ ಭವೇದ್ಭೂತಾದ್ಯುಪಾಸಿಷು**
**ತಚ್ಚಿತ್ರೇಣ ನ ಜಹ್ಯಾಚ್ಚ ಶ್ರುತಿಮಾರ್ಗಂ ಸನಾತನಮ್ ॥**

ಭೂತ ಪ್ರೇತಾದಿ ಉಪಾಸಕರು ಮಾಡುವ ಚಿತ್ರ ವಿಚಿತ್ರವಾದ ಸಿದ್ಧಿ ಆಥವಾ ಚಮತ್ಕಾರಗಳನ್ನು ಕಂಡು ವಿವೇಕಿಗಳಾದವರು ಸನಾತನವಾದ ವೇದ ಮಾರ್ಗವನ್ನು ಎಂದೂ ಬಿಡಬಾರದು ಎಂದು ಪ್ರಮಾಣ ವಚನವಿದೆ. ಈ ವಚನವನ್ನು ನೆನೆದು ಈ ಆಗಂತುಕನು ತನ್ನ ಹಸ್ತಪಾದಾಂಗುಲಿಗಳಿಂದ ಹೊಂಡ ಹೊಕ್ಕರಣೆಗಳನ್ನು ನಿರ್ಮಿಸಿ ಅದರಿಂದ ತನ್ನ ಕೈಯಲ್ಲಿಯ ಕುಂಭದಿಂದಲೇ ನೀರನ್ನು ತುಂಬಿಸಿದ್ದನ್ನು ಕಂಡು ಕೌತುಕ ಪಡದೇ ಪ್ರಶಾಂತ ಮನಸ್ಸಿನಿಂದಲೇ ಕುಳಿತುಕೊಂಡನು.

**ಆಗಂತುಕ :** ''ಬ್ರಾಹ್ಮಣೋತ್ತಮ, ನೀನೊಬ್ಬ ಮಹಾಮೂರ್ಖ. ನಿನ್ನ ಮಾತುಗಳು ಮಾತ್ರ ಪಂಡಿತರ ಮಾತಿನಂತೆ ಇರುತ್ತವೆ. ನಿನ್ನ ಈ ಪ್ರಜ್ಞಾವಾದವನ್ನು ಕೇಳಿ ನನಗೆ ಹುಚ್ಚು ನಗೆ. ಪುರಾಣ ಬಲ್ಲವರ ಬಾಯಿಂದ ಬಂದ ಈ ಪದ್ಯವನ್ನು ನೀನು ಕೇಳಿಲ್ಲವೆ?

**ಕೂಪೋಽನ್ಯಸ್ಯ ಘಟೋಽನ್ಯಸ್ಯ ರಜ್ಜುರನ್ಯಸ್ಯ ಭಾರತ**
**ಪಾಯಯತ್ಯೇಕಃ ಪಿಬತ್ಯೇಕಃ ಸರ್ವೇತೇ ಸಮಭಾಗಿನಃ ॥**

ಯಾರದೋ ಬಾವಿ, ಯಾರದೋ, ಕೊಡ, ಹಗ್ಗ ಬೇರೊಬ್ಬನದು, ಒಬ್ಬನು ಹನಿಸುವನು, ಒಬ್ಬನು ಕುಡಿಯುವನು, ಇವರೆಲ್ಲರೂ ಸಮಭಾಗಿಗಳು, ಅದರಂತೆ, ನನ್ನದು ನೀರು ಇರುತ್ತದೆ. ನೀನು ಧರ್ಮದ ಮರ್ಮವನ್ನು ಚೆನ್ನಾಗಿ ಅರಿತವ. ಅಂದಬಳಿಕ ನನ್ನ ನೀರನ್ನು ಏಕೆ ಕುಡಿಯುವದಿಲ್ಲ?

**ನಾರದ :** ಅರ್ಜುನ, ಆಗಂತುಕ ಹೇಳಿದ ಮೇಲಿನ ಪದ್ಯವು ಕಾಲಭೀತಿಯ ಮನಸ್ಸಿನಲ್ಲಿ ಗೊಂದಲವುಂಟು ಮಾಡಿತು. ಈ ಪುರಾಣ ಶ್ಲೋಕದ ಅರ್ಥದ ಬಗೆಗೆ ಅವನು ವಿಚಾರ ಮಾಡಿಯೇ ಮಾಡಿದ. ಎಲ್ಲರೂ ಫಲಕ್ಕೆ ಸಮನಾಗಿ ಭಾಗೀದಾರರು ಹೇಗೆ ? ಈ ಪ್ರಶ್ನೆಗೆ ಉತ್ತರವೇ ಹೊಳೆಯಲಿಲ್ಲ. ಹಗ್ಗ ಕೊಡ ಮುಂತಾದ, ಸಾಧನಗಳ ಮುಖಾಂತರ ಸಮಾನ ಫಲಭಾಗಿ ಆಗುವ ಬಗೆ ಹೇಗೆ? ಈ ವಿಷಯದಲ್ಲಿ ಅನೇಕ ರೀತಿಯಿಂದ ಆಲೋಚನೆಗೈದು ಅವನು ಆಗಂತುಕನಿಗೆ ಉತ್ತರ ಕೊಟ್ಟ.

**ಕಾಲಭೀತಿ :** ಭದ್ರ ಪುರುಷ, ನೀನೇನೋ ಸರಿಯಾಗಿ ಮಾತನಾಡಿದೆ, ನೀನು ಹೇಳಿದ ಪುರಾಣ ವಚನವು ನನಗೂ ಮಾನ್ಯವೇ. ಬಾವಿ, ಕೆರೆ, ಸರೋವರಗಳ ನೀರನ್ನು ತೆಗೆದುಕೊಳ್ಳುವಲ್ಲಿ ಯಾವ ದೋಷವೂ ಇಲ್ಲ. ಆದರೆ ಈಗ ನೀನು ಈ ಹೊಂಡ ಹಾಗೂ

ಸರೋವರಗಳನ್ನು ನಿನ್ನ ಕೈಯಲ್ಲಿಯ ಬಿಂದಿಗೆಯ ನೀರಿನಿಂದಲೇ ತುಂಬಿರುವೆ. ಇದನ್ನು ನಾನು ಪ್ರತ್ಯಕ್ಷ ನೋಡಿರುತ್ತೇನೆ. ಇದು ತೆರೆದ ಎದೆಯ ಭೂಮಿ ತಾಯಿಯ ವಕ್ಷಸ್ಥಳದಿಂದ ಚಿಮ್ಮಿ ಬಂದ ನೀರು ಅಲ್ಲ, ಅಥವಾ ಮುಗಿಲು ಮಂಟಪದಿಂದ ಸುರಿದು ಬಂದ ಭಗವಂತನ ಕರುಣಾಜಲವೂ ಅಲ್ಲ. ನಿನ್ನ ಕೈಯಿಂದ ಪ್ರತ್ಯಕ್ಷವಾಗಿ, ಈ ಕೆರೆ ಸರಸ್ಸುಗಳಲ್ಲಿ ಹಾಕಿ ತುಂಬಿಸಿದ ನೀರನ್ನು ತಪಸ್ವಿಯಾದ ನಾನು ಹೇಗೆ ಕುಡಿಯಲಿ? ಏನೇ ಆಗಲಿ, ನಿನ್ನ ನೀರು ಶುದ್ಧವೇ ಇರಲಿ, ಅಶುದ್ಧವೇ ಇರಲಿ, ನಾನು ಅದನ್ನು ಮುಟ್ಟಲಾರೆ, ಹಿಡಿಯಲಾರೆ'' ಕಾಲಭೀತಿಯ ದೃಢ ನಿಶ್ಚಯದ ಖಡಾಖಂಡಿತ ಮಾತುಗಳನ್ನು ಕೇಳಿ ಆಗಂತುಕನು ಗಹಗಹಿಸಿ ಅಟ್ಟಹಾಸಗೈದ. ತಕ್ಷಣದಲ್ಲಿಯೇ ಅಲ್ಲಿಂದ ಅದೃಶ್ಯನಾಗಿ ಬಿಟ್ಟ.

ಈಗ ಮಾತ್ರ ಕಾಲಭೀತಿಯು ಕೌತುಕದ ಕೊನೆ ಏರಿ ನಿಂತ. ಅವನಿಗೆ ಅತ್ಯಾಶ್ಚರ್ಯ. ಈಗ ಮಾತ್ರ ಅನಿವಾರ್ಯವೇ ಆಯಿತು. ಇದೇನು ಚಮತ್ಕಾರ ? ಎಂದು ಅವನು ಚಕಿತ ಚಮತ್ಕೃತನಾಗಿ ಆಚೀಚೆ ನೋಡುವಷ್ಟರಲ್ಲಿ ಬಿಲ್ವವೃಕ್ಷದ ಕೆಳಗೆ ಸುಂದರವಾದ ಒಂದು ಶಿವಲಿಂಗವು ಪ್ರಕಟ. ಅದರ ಕಾಂತಿಯಿಂದ ದಶದಿಕ್ಕುಗಳೂ ಪ್ರಕಾಶಿತ. ದಿವ್ಯ ಧೀಧಿತಿಯಿಂದ ಪರಿಸರ ಪ್ರದೇಶವೆಲ್ಲವೂ ಉದ್ಭಾಸಿತ. ಸ್ವರ್ಗಲೋಕದಿಂದ ಆ ಶಿವಲಿಂಗದ ಮೇಲೆ ಪಾರಿಜಾತ ಪುಷ್ಪವೃಷ್ಟಿ. ಸುತ್ತು ಮುತ್ತಲೂ ದೇವತಾ ಮುನಿ ಮಹರ್ಷಿಗಳಿಂದ ಸ್ತೋತ್ರಗಳ ಪುಷ್ಪವೃಷ್ಟಿ. ಅದನ್ನು ಕಂಡು ಕಾಲಭೀತಿಯು ಸಾಷ್ಟಾಂಗ ವಂದನೆಗೈದ. ಕೈಮುಗಿದು ಪ್ರಾರ್ಥನೆಯನ್ನು ಮಾಡಿದ.

''ಮಹಾಕಾಲನಿಗೆ ನಮಸ್ಕಾರ, 'ಕಾಲಯತಿ ಇತಿ ಕಾಲಃ' ಎಂಬ ಅರ್ಥದಲ್ಲಿ ನಿನಗೆ ಮಹಾಕಾಲ ಎಂಬ ಹೆಸರು ಬಂದಿದೆ. ಮಾನವರ ಪಾಪಗಳನ್ನೂ ಸಂಸಾರದ ಪಂಕವನ್ನೂ ನೀನು ನಾಶ ಮಾಡುವದರಿಂದ ನಿನ್ನ ಮಹಾಕಾಲ ಹೆಸರು ಸಾರ್ಥಕ. ವೇದಗಳು ನಿನ್ನನ್ನು ಎಲ್ಲ ವಿದ್ಯೆಗಳ ಅಧೀಶ್ವರ ಎಂದು ಸ್ತೋತ್ರ ಮಾಡುತ್ತವೆ. ತತ್ಪುರುಷ ಎಂಬ ಹೆಸರಿನಿಂದ ಸಂಬೋಧಿಸುತ್ತವೆ. ಸಮಸ್ತ ಪ್ರಾಣಿಗಳಿಗೆ ನೀನೇ ಅಧೀಶ್ವರ, ನಾನು ನಿನಗೇ ಶರಣು ಬಂದಿದ್ದೇನೆ. ನಿನಗೆ ನಮೋ ನಮಃ. ''ಕಾಲ ಭೀತಿಯ ಈ ಸ್ತೋತ್ರವನ್ನು ಕೇಳಿ ಪರಮ ಸಂತುಷ್ಟನಾದ ಪ್ರಭು ಪರಮೇಶ್ವರ'' ಲಿಂಗದಿಂದ ಹೊರಗೆ ಬಂದು ಅವನಿಗೆ ಪ್ರತ್ಯಕ್ಷ ದರ್ಶನ ನೀಡಿದನು. ಆ ಮಹೇಶ್ವರನ ದಿವ್ಯ ದೇಹದ ದೀಪ್ತ ದೀಧಿತಿಗಳಿಂದ ದಶದಿಕ್ಕುಗಳೆಲ್ಲವೂ ಜಗಜಗಿಸುತ್ತಿದ್ದವು.

**ಪರಮೇಶ್ವರ :** ''ಬ್ರಹ್ಮನ್ ! ಈ ತೀರ್ಥದ ದಂಡೆಯಲ್ಲಿ ನಿಂತು ನೀನು ಆರಾಧನೆ ಮಾಡಿದೆ. ಆದ್ದರಿಂದ ನಾನು ಸುಪ್ರಸನ್ನ. ಸುಸಂತುಷ್ಟ. ನಿನ್ನ ಮೇಲೆ ಮೃತ್ಯುವಿನ ಅಧಿಕಾರ ಕೂಡ ನಡೆಯದು. ನಿನ್ನ ಧರ್ಮನಿಷ್ಠೆಯನ್ನು ಪರೀಕ್ಷಿಸಲಿಕ್ಕಾಗಿಯೇ ನಾನು ಮನಷ್ಯನ ರೂಪದಿಂದ ನಿನ್ನ ಬಳಿಗೆ ಬಂದಿದ್ದೆ. ನಿನ್ನ ಸತ್ವ ಪರೀಕ್ಷೆಯನ್ನೇ ಮಾಡಿದೆ. ವೇದ, ಧರ್ಮ, ಸದಾಚಾರಗಳಲ್ಲಿ ಇರುವ ನಿನ್ನ ಶ್ರದ್ಧಾಬುದ್ಧಿಗಳನ್ನು ಕಂಡು ನನಗೆ ಪರಮಾನಂದವಾಯಿತು. ನಿನ್ನಂಥ ಜ್ಞಾನಿಗಳು ಮತ್ತು ತಪೋವಿರಾಗಿಗಳು ಪಾಲನ ಮಾಡುತ್ತಲಿರುವ ಆ ಧರ್ಮವೇ ಧನ್ಯವು. ಇದೀಗ ನಿನ್ನ ಕಣ್ಣೆದುರೇ ನಾನು ಎರಡು ದೊಡ್ಡ ದೊಡ್ಡ ತಗ್ಗುಗಳನ್ನು ಮಾಡಿ ಕೊಡದಿಂದ ನೀರನ್ನು ತುಂಬಿರುವೆನಷ್ಟೇ .

ಆ ಕೊಡದಲ್ಲಿ ನಾನು ತಂದದ್ದು ಸರ್ವತೀರ್ಥೋದಕ. ಎಲ್ಲ ತೀರ್ಥಗಳಿಂದಲೂ ಪುಣ್ಯಜಲವನ್ನು ಸಂಗ್ರಹಿಸಿ ಆ ಕೊಡದಲ್ಲಿ ತುಂಬಿ ತಂದಿದ್ದೇನೆ. ಅದನ್ನೇ ಆ ಹೊಕ್ಕರಣೆಯಲ್ಲಿಯೂ ಆ ಸರೋವರದಲ್ಲಿಯೂ ನನ್ನ ಕೈಯಿಂದಲೇ ತುಂಬಿಸಿದ್ದೇನೆ. ನಿನಗೇನಾದರೂ ಅಪೇಕ್ಷೆ ಇದ್ದರೆ ಹೇಳು. ವರವನ್ನು ನೀಡುತ್ತೇನೆ. ನಿನ್ನಂಥ ಭಕ್ತನಿಗೆ ಕೊಡದಿರುವುದು ಯಾವುದಿದೆ ?

**ಕಾಲಭೀತಿ** : ದೇವದೇವೋತ್ತಮ, ನೀನು ನನ್ನ ಮೇಲೆ ಪ್ರಸನ್ನನೇ ! ನಾನು ಧನ್ಯ ಧನ್ಯ. ನೀನು ಸಂತುಷ್ಟನಾದರೆ ಸಾಕು. ಎಲ್ಲ ಧರ್ಮ ಕರ್ಮಗಳು ಸಫಲ. ನಾವು ಮಾಡುವ ಕರ್ಮಗಳೆಲ್ಲವೂ ಶಿವಪ್ರೇರಣೆ ಶಿವಪ್ರೀತ್ಯರ್ಥಂ ಅಲ್ಲವೆ! ನೀನು ಸಂತುಷ್ಟನಾಗದಿದ್ದರೆ, ಶ್ರಮವೆಲ್ಲವೂ ವ್ಯರ್ಥವೇ ಸರಿ. ನೀನು ನಿಜವಾಗಿಯೂ ಪ್ರಸನ್ನನಾಗಿದ್ದರೆ, ನೀನು ಇಲ್ಲಿ ನಿತ್ಯ ನಿರಂತರವೂ ನೆಲೆಸಿಬಿಡು. ಈ ಬಿಲ್ವಪತ್ರದ ಕೆಳಗೆ ಸ್ವಯಂಭೂವಾಗಿ ಉದ್ಭವಿಸಿ ಬಂದ ಈ ಶಿವಲಿಂಗದ ಪೂಜೆ ಆರಾಧನೆಗಳು, ಈ ಸ್ಥಳದಲ್ಲಿಯೇ ಮಾಡಿದ ದಾನ, ಧರ್ಮ, ಯಜ್ಞ ಯಾಗ ಮುಂತಾದ ಎಲ್ಲ ಧರ್ಮ ಕರ್ಮಗಳು ಅಕ್ಷಯ ಫಲಪ್ರದವಾಗಲಿ.

ಬೇರೆ ಕಡೆ ಐದು ಸಾವಿರ ಶಿವಮಂತ್ರ ಜಪದಿಂದ ಬರುವ ಪುಣ್ಯವು ಇಲ್ಲಿಯ ಸ್ವಯಂಭೂ ಶಿವಲಿಂಗದ ದರ್ಶನದಿಂದಲೇ ದೊರಕಲಿ. ಈ ಶಿವಲಿಂಗವು ಕಾಲಮಾರ್ಗದಿಂದ ನನ್ನನ್ನು ಪಾರು ಮಾಡಿದ್ದರಿಂದ ಮಹಾಕಾಲ ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಲಿ. ಈ ಪುಣ್ಯಸ್ಥಳಕ್ಕೆ ಬಂದು ಸಾಕ್ಷಾತ್ ಗಂಗಾಧರನ ಅಂಗುಷ್ಠ ಅಂಗುಲಿಯಿಂದ ನಿರ್ಮಿತವಾದ ಈ ಬಾವಿ ಹಾಗೂ ಸರೋವರಗಳಲ್ಲಿ ಸ್ನಾನ ಮಾಡಿ ಪಿತೃತರ್ಪಣವನ್ನು ನೀಡುವವರು ಸರ್ವ ತೀರ್ಥದಲ್ಲಿ ಸ್ನಾನಮಾಡಿದ ಪುಣ್ಯವನ್ನು ಪಡೆಯುತ್ತಾರೆ. ಇಲ್ಲಿ ಮಾಡಿದ ಪಿತೃ ಕಾರ್ಯದಿಂದ ಪಿತೃಗಳಿಗೆ ದಿವ್ಯಲೋಕ ಪ್ರಾಪ್ತಿಯಾಗಲಿ.

**ಶಂಕರ** : ಭಕ್ತ ವರೇಣ್ಯ, ಸ್ವಯಂಭೂ ಲಿಂಗಗಳಿದ್ದಲ್ಲಿ ನನ್ನ ನಿತ್ಯ ನಿವಾಸ ನಿಶ್ಚಿತವಾಗಿಯೂ ಇರುವದು. ಲಿಂಗಗಳು ಐದು ವಿಧ, ಸ್ವಯಂಭೂ ಲಿಂಗ, ರತ್ನಮಯ ಲಿಂಗ, ಧಾತುಲಿಂಗ, ಶಿಲಾಮಯಲಿಂಗ, ಚಂದನಾದಿ ಲೇಪನಿರ್ಮಿತ ಲಿಂಗ. ಇವುಗಳಲ್ಲಿ ಮೊದಮೊದಲಿನ ಲಿಂಗಗಳು ಶ್ರೇಷ್ಠವೆಂದು ತಿಳಿಯಬೇಕು. ಕೊನೆಯದಾದ ಲೇಪಜನಿತ ಲಿಂಗಕ್ಕಿಂತ ಶಿಲಾಮಯ ಲಿಂಗದ ಆರಾಧನೆಯಿಂದ ಹತ್ತುಪಟ್ಟು ಪುಣ್ಯ ಹೆಚ್ಚು. ಶಿಲಾಮಯಕ್ಕಿಂತ ಧಾತುಜ ಲಿಂಗ, ಅದಕ್ಕಿಂತ ರತ್ನಮಯಲಿಂಗ. ಎಲ್ಲಕ್ಕಿಂತ ಸ್ವಯಂಭೂಲಿಂಗ ಕ್ರಮವಾಗಿ ಹತ್ತು ಹತ್ತು ಪಟ್ಟು ಹೆಚ್ಚು ಪುಣ್ಯಪ್ರದಾಯಕವಾಗಿದೆ.

ಆಕಾಶದಲ್ಲಿ ತಾರಕಾಮಯಲಿಂಗ, ಪಾತಾಳದಲ್ಲಿ ಹಾಟಕೇಶ್ವರಲಿಂಗ ಭೂಲೋಕದಲ್ಲಿ ಸ್ವಯಂಭೂಲಿಂಗ ಇವು ಶುಭಫಲದಾಯಕ ಆಗಿವೆ. ಈ ಸ್ವಯಂಭೂ ಲಿಂಗದ ಸನ್ನಿಧಾನದಲ್ಲಿ ಬಂದು ಪೂಜೆಮಾಡಿ ಬೇಡಿಕೊಂಡರೆ, ಸರ್ವಾಪೇಕ್ಷೆಗಳೂ

ಸಿದ್ಧಿಸುವುವು. ಇಲ್ಲಿ ಸಮರ್ಪಿಸುವ ಹಣ್ಣು, ಹೂವು, ಕಾಯಿ, ನೈವೇದ್ಯ, ಪೂಜೆ, ಸ್ತೋತ್ರ, ದಾನ, ಅಥವಾ ಬೇರಾವುದೇ ಶುಭಕರ್ಮಗಳು ಅಕ್ಷಯವಾಗುವುವು.

ವತ್ಸ ! ಮಾಘ ಕೃಷ್ಣ ಪಕ್ಷದಲ್ಲಿ ಚತುರ್ದಶೀ ದಿನದಂದು ಶಿವಯೋಗದಲ್ಲಿ ಇಲ್ಲಿ ಶಿವನಿರ್ಮಿತ ಬಾವಿಯಲ್ಲಿ ಸ್ನಾನಮಾಡಿ ಹಗಲು ಲಿಂಗಾರ್ಚನೆ, ರಾತ್ರಿ ಕಾಲದಲ್ಲಿ ಪ್ರತಿಯೊಂದು ಪ್ರಹರದ ಮಹಾಕಾಲನ ಪೂಜೆಯನ್ನು ಮಾಡಿದರೆ, ಎಲ್ಲ ಲಿಂಗಗಳನ್ನೂ ಏಕಕಾಲಕ್ಕೆ ಪೂಜೆ ಮಾಡಿ, ಜಾಗರ ಸೇವೆ ಮಾಡಿದ ಪುಣ್ಯಫಲವು ಪ್ರಾಪ್ತವಾಗುವದು. ಚತುರ್ದಶೀ, ಅಷ್ಟಮೀ, ಸೋಮವಾರ ಹಾಗೂ ಇತರ ಪರ್ವ ದಿನಗಳಲ್ಲಿ ಈ ಸರೋವರದಲ್ಲಿ ಸ್ನಾನಮಾಡಿ ಈ ಶಿವಲಿಂಗವನ್ನು ಪೂಜಿಸುವವನಿಗೆ ಸುನಿಶ್ಚಿತ ಶಿವಪದ ಪ್ರಾಪ್ತಿ. ಇಲ್ಲಿ ಮಾಡಿದ ಜಪತಪ ಹಾಗೂ ರುದ್ರಮಂತ್ರ ಪಾರಾಯಣಗಳಿಗೆ ಅಕ್ಷಯ ಫಲ. ಭಕ್ತ ಶ್ರೇಷ್ಠನೇ, ಕಾಲ ಮಾರ್ಗ ಎಂದರೆ, ವೇದ ಶಾಸ್ತ್ರಗಳನ್ನು ಧಿಕ್ಕರಿಸಿ, ಸ್ವೇಚ್ಛಾಚಾರದಿಂದ ವರ್ತಿಸುವ ನಾಸ್ತಿಕ ಮಾರ್ಗ. ಕಾಲ ಮಾರ್ಗದಿಂದ ದೂರಸರಿದು ನಿನ್ನ ಅಚಲವಾದ ಧರ್ಮಶ್ರದ್ಧೆಯಿಂದ ವಾದ ಮಾಡಿ ದುರ್ಮಾರ್ಗವನ್ನು ಗೆದ್ದದ್ದರಿಂದ ನಿನ್ನ ಹೆಸರು ಮಹಾಕಾಲ ಎಂದೇ ಪ್ರಸಿದ್ಧವಾಗಲಿ. ಇನ್ನು ಮುಂದೆ ಇಲ್ಲಿಗೆ ಬೇಗನೆ ಕರಂಧಮ ಎಂಬ ರಾಜರ್ಷಿಯು ಬರಲಿರುವನು. ಅವನಿಗೆ ಧರ್ಮೋಪದೇಶವನ್ನು ಮಾಡು. ಅನಂತರ ಈ ನನ್ನ ಸ್ವಯಂಭೂ ಲಿಂಗವನ್ನು ಅರ್ಚನೆ ಮಾಡುತ್ತಲೇ, ನಿನ್ನ ಈ ಪಾಂಚಭೌತಿಕ ಶರೀರವು ಸವಿದು ಹೋದ ಬಳಿಕ ನೀನು ನನ್ನ ಕೈಲಾಸಲೋಕಕ್ಕೆ ಬಂದು ಬಿಡು. ಅಲ್ಲಿ ನಂದೀಶ್ವರನ ಜೊತೆಗೆ ನೀನು ನನ್ನ ಇನ್ನೊಬ್ಬ ದ್ವಾರಪಾಲಕನಾಗಿ ನನ್ನ ಸಾಕ್ಷಾತ್ ರೂಪವನ್ನೇ ಸೇವಿಸುತ್ತ ನಿರಂತರವಾಗಿ ನೆಲಸುವಿಯಂತೆ.''

ಹೀಗೆ ಹೇಳಿ ಮಹಾರುದ್ರ ದೇವರು ಅದೇ ಬಿಲ್ವಪತ್ರದ ಅಡಿಯಲ್ಲಿ ಉದ್ಭೂತವಾದ ಸ್ವಯಂಭೂ ಲಿಂಗದಲ್ಲಿ ಲೀನನಾದನು. ಮಹಾದೇವನು ಅಂತರ್ಧಾನ ಹೊಂದಿದ ಬಳಿಕ ಕಾಲಭೀತಿಯು ಆ ಪರಮೇಶ್ವರನಿಂದಲೇ ಕೊಟ್ಟ ಮಹಾಕಾಲ ಎಂಬ ಹೆಸರಿನಿಂದ ಪ್ರಸಿದ್ಧನಾಗಿ ಶಿವಪೂಜಾ ತತ್ಪರನಾದನು.

**ನಾರದ :** ಮಹಾಕಾಲನ ಚರಿತ್ರೆ ಎಲ್ಲ ಕಡೆ ಪಸರಿಸಿತು. ಅವನ ಭಕ್ತಿಗೆ ಒಲಿದ ಪರಶಿವನು ಲಿಂಗರೂಪದಿದ ಆವಿರ್ಭೂತನಾಗಿರುವನು ಎಂಬ ಸಮಾಚಾರವನ್ನು ಕೇಳಿ ತಂಡ ತಂಡವಾಗಿ ಬರತೊಡಗಿತು ಭಕ್ತಸ್ತೋಮ. ಕರಂಧಮ ರಾಜನ ಕಿವಿಗೂ ತಲುಪಿತು ಈ ಸಮಾಚಾರ. ಈ ವಿಚಿತ್ರ ವಾರ್ತೆಯನ್ನು ಕೇಳಿ ಅವನ ಚಿತ್ತ ಚಕಿತ, ಚಮತ್ಕೃತ, ಅವನು ಧಾವಿಸಿ ಬಂದ ಆ ಸ್ವಯಂಭೂ ಲಿಂಗದ ದರ್ಶನಕ್ಕಾಗಿ. ಆ ಮಹೀಸಾಗರ ಸಂಗಮದಲ್ಲಿ ಮಿಂದು ಮಹಾಕಾಲ ದರ್ಶನ ಪಡೆದ. ತನ್ನ ಜೀವನವು ಸಾರ್ಥಕ. ತನ್ನ ಜನ್ಮವೇ ಧನ್ಯ ಎಂದುಕೊಂಡಿತು ಅವನ ಆತ್ಮ. ಆ ಶಿವಲಿಂಗದ ವಿಶೇಷ ಪೂಜೆ, ಸೇವೆಗೈದು ದಂಡಪ್ರಣಾಮ ಸಲ್ಲಿಸುವ ಸ್ತುತಿ ಸ್ತೋತ್ರಗಳನ್ನು ಹೇಳಿದ. ಆ ಶಿವಲಿಂಗದ ಸಮೀಪದಲ್ಲಿಯೇ ಕೈ ಮುಗಿದು ಕುಳಿತುಕೊಂಡ ಆ ಕರಂಧಮ ರಾಜನನ್ನು ಕಂಡ ಕೂಡಲೇ ಅಲ್ಲಿಯೇ ಶಿವಮಂತ್ರವನ್ನು ಜಪಿಸುತ್ತ ಕುಳಿತುಕೊಂಡ

ಮಹಾಕಾಲನಿಗೆ ಸ್ವಯಂ ಮಹಾದೇವರು ಹೇಳಿದ ಮಾತು ನೆನಪಿಗೆ ಬಂದಿತು. ಕರಂಧಮ ಮಹಾರಾಜನಿಗೆ ಅವನು ಸ್ವಾಗತ ನೀಡಿದ. ಸತ್ಕಾರ ಮಾಡಿದ. ಕುಶಲ ಪ್ರಶ್ನೆ ಕೇಳಿದ. ಆಸನದಲ್ಲಿ ಕೂಡಿಸಿದ. ಆಗ ಆ ರಾಜರ್ಷಿಯು ಯೋಗೀಶ್ವರನಾದ ಮಹಾಕಾಲ ಮುನಿಗೆ ಸೌಜನ್ಯದಿಂದ ಬಾಗಿ ಪ್ರಶ್ನೆ ಕೇಳಿದ.

**ಕರಂಧಮ :** ಪೂಜ್ಯರೇ, ಮಾನವರು ಪಿತೃಗಳಿಗೆ ಜಲಾಂಜಲಿ ನೀಡಿ ತರ್ಪಣ ಕೊಟ್ಟರೆ ಅವರಿಗೆ ತೃಪ್ತಿ ಆಗುವದು ಎಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಅದು ಹೇಗೆ ಸಾಧ್ಯ? ಇಲ್ಲಿ ನಾವು ನೀಡಿದ ನೀರು ಅಥವಾ ಅನ್ನದ ಪಿಂಡಗಳು ಯಾವುದೇ ಲೋಕದಲ್ಲಿ, ಯಾವುದೋ ಯೋನಿಯಲ್ಲಿ ತಮ್ಮ ಕರ್ಮಾನುಸಾರವಾಗಿ ಜನಿಸಿ ಪಶುಪಕ್ಷಿಗಳ ರೂಪದಿಂದ ಚಲಿಸುವ ಪಿತೃಗಳಿಗೆ ಪ್ರೀತಿಯನ್ನು ಎಂತು ಉಂಟುಮಾಡುವವು? ನಾವು ಇಲ್ಲಿ ನೀಡುವ ಅನ್ನವೇ ಬೇರೆ. ಭಿನ್ನ ಭಿನ್ನ ಯೋನಿಗಳಲ್ಲಿ ಪಿತೃಗಳು ತಿನ್ನುತ್ತಿರವ ಆಹಾರವೇ ಬೇರೆ. ಈ ಆಹಾರವು ಆ ಆಹಾರವಾಗಿ ಮಾರ್ಪಡುವುದು ಎಂತು? ಇಲ್ಲಿ ನಾವು ಕೊಟ್ಟ ಅನ್ನ ಆಹಾರಗಳು ಅಲ್ಲಿ ಅವರಿಗೆ ಮುಟ್ಟುವ ಬಗೆ ಯಾವದು? ನಾವು ಕೊಡುವ ಇಲ್ಲಿಯ ಜಲಾಂಜಲಿ ಹಾಗೂ ಅನ್ನ ಪಿಂಡಗಳು ಪಿತೃಗಳ ಉಪಭೋಗಕ್ಕೆ ಒದಗುವವು ಎಂಬ ಭರವಸೆ ಏನು?

**ಮಹಾಕಾಲ :** ರಾಜನೇ, ಪಿತೃಗಳು ಹಾಗೂ ದೇವತೆಗಳು ವಿಲಕ್ಷಣವಾದ ಇಂದ್ರಿಯ ಪಾಟವವನ್ನು ಹೊಂದಿರುತ್ತಾರೆ. ಅವರ ಮೇಲೆ ಭಗವದನುಗ್ರಹ ವಿಶೇಷ. ನಮ್ಮ ಕಣ್ಣು ಕಿವಿಗಳಿಗಿಂತ ಅವರ ಕಣ್ಣು ಕಿವಿಗಳು ಅತ್ಯಂತ ಸೂಕ್ಷ್ಮ ಅಷ್ಟೇ ತೀಕ್ಷ್ಣ ದೂರಗ್ರಾಹಿ. ಆದ್ದರಿಂದಲೇ ಅವರು ಸ್ವರ್ಗ ಲೋಕದಲ್ಲಿದ್ದರೂ ಭೂಲೋಕದ ಯಾವುದೇ ಮೂಲೆಯಲ್ಲಿ ಯಾವುದೇ ಪ್ರಾಣಿಯು ತಮ್ಮ ಪೂಜೆಯನ್ನು ಮಾಡಿದರೂ ತಮ್ಮ ಸೂಕ್ಷ್ಮ ದೃಷ್ಟಿಯಿಂದ ನೋಡಬಲ್ಲರು. ಯಾವುದೇ ಭಕ್ತನು ಎಲ್ಲಿಯೇ ಕುಳಿತು ಎಷ್ಟೇ ಸಣ್ಣ ಧ್ವನಿಯಿಂದ ಭಕ್ತಿಯಿಂದ ಮಾಡಿದ ಸ್ತೋತ್ರಗಳನ್ನು ಕೇಳಬಲ್ಲರು. ಮಾನವನು ಮಾಡುವ ಅತೀ ಗುಪ್ತಯವಾದ ಗೂಢಭಕ್ತಿ, ರಹಸ್ಯ ಪೂಜೆ, ಏಕಾಂತ ಸೇವೆಗಳನ್ನು ಕೂಡ ಸ್ವೀಕರಿಸಿ ಸಂತೋಷಪಟ್ಟು ಅವುಗಳ ಫಲಗಳನ್ನು ನೀಡುವರು.

ದೇವೋತ್ತಮರಿಗೆ ಹಾಗೂ ಪಿತೃದೇವತೆಗಳಿಗೆ ಭೂತ, ಭವಿಷ್ಯ , ವರ್ತಮಾನಗಳ ತ್ರಿಕಾಲಜ್ಞಾನ ಅಭಾಧಿತ. ದೇವತೆಗಳು ಸೂಕ್ಷ್ಮ ತಮವಾದ ಇಂದ್ರಿಯಗಳನ್ನು ನಿಯಮಿಸುವದು ಮಾತ್ರವಲ್ಲದೇ, ಮಾನವರ ಪಂಚಭೌತಿಕ, ಶರೀರದಲ್ಲಿ ತತ್ವಾಭಿಮಾನಿಗಳಾಗಿ ನೆಲಸಿರುತ್ತಾರೆ. ಆದುದರಿಂದ ಮಾನವನು ಮಾಡುವ ಸ್ತುತಿ, ಸ್ತೋತ್ರ, ದಾನ, ಧರ್ಮ, ಪೂಜೆ, ಪುರಸ್ಕಾರ, ಎಲ್ಲವೂ ಅದೇ ದೇಹದಲ್ಲಿ ಸೂಕ್ಷ್ಮ ರೂಪವಾಗಿ ಇರುವ ದೇವತೆಗಳಿಗೆ ತಿಳಿದೇ ಬಿಡುತ್ತದೆ. ಈ ದೇಹಾಂತರ್ಗತರಾದ ತತ್ವಾಭಿಮಾನಿ ದೇವತೆಗಳ ಸೂಕ್ಷ್ಮ ದೇಹಗಳು ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಎಂಬ ಐದು ತನ್ಮಾತ್ರಗಳಿಂದಲೂ ಮತ್ತು ಮನ,ಬುದ್ಧಿ, ಅಹಂಕಾರ ಮತ್ತು ಪ್ರಕೃತಿಗಳಿಂದಲೂ ಕೂಡಿ ಒಟ್ಟು ಒಂಭತ್ತು ತತ್ವಗಳಿಂದ ರೂಪಗೊಂಡಿರುತ್ತವೆ. ಆದರೆ ಒಳಗೆ ಹತ್ತನೆಯ ತತ್ವರೂಪದಿಂದ ಭಗವಾನ್ ಪುರುಷೋತ್ತಮನೇ ವಾಸಮಾಡಿರುತ್ತಾನೆ.

ಆದ್ದರಿಂದ ದೇವತೆಗಳು ಹಾಗೂ ಪಿತೃದೇವತೆಗಳು ಗಂಧ ಹಾಗೂ ರಸತತ್ವಗಳಿಂದ ಸಂತೃಪ್ತರಾಗುತ್ತಾರೆ. ಶಬ್ದ ತತ್ವದಿಂದ ಜೀವಿಸುತ್ತಾರೆ. ಸ್ಪರ್ಶ ತತ್ವವನ್ನು ಸ್ವೀಕರಿಸುತ್ತಾರೆ. ಯಾವುದಾದರೂ ಪವಿತ್ರ ವಸ್ತುವನ್ನು ಕಂಡು ಆ ಶುದ್ಧಾತ್ಮರ ಹೃದಯವು ಸಂತುಷ್ಟವಾಗುತ್ತದೆ. ಪಶುಗಳು ಹುಲ್ಲನ್ನು, ಮಾನವರು ಅನ್ನವನ್ನು ತಿನ್ನುವಂತೆ ದೇವಯೋನಿಯ ದಿವ್ಯಪುರುಷರು ಅನ್ನದ ಸಾರತತ್ವವನ್ನು ಭುಂಜಿಸುತ್ತಾರೆ. ಅಚಿಂತ್ಯವೂ ಅದ್ಭುತವೂ ಆಗಿದೆ ಆ ದೇವತೆಗಳ ವಿಚಿತ್ರ ಶಕ್ತಿ. ಅವರು ನಾವು ಅರ್ಪಿಸಿದ ಅನ್ನದ ಸಾರವನ್ನು, ಜಲದ ಸಾರವನ್ನು ಸ್ವೀಕರಿಸುತ್ತಾರೆ. ಅವುಗಳ ಸೂಕ್ಷ್ಮವಾದ ಸಾರೋದ್ಧಾರವನ್ನು ಮಾಡಿದ ಬಳಿಕ ಸ್ಥೂಲವಾದ ಅನ್ನವು ಇದ್ದೇ ಇರುತ್ತದೆ. ನಮ್ಮ ಕಣ್ಣಿಗೆ ಕಾಣುವುದು ನಮ್ಮ ಬರೀ ಸ್ಥೂಲಾನ್ನ ಮಾತ್ರ. ಸೂಕ್ಷ್ಮಾತ್ ಸೂಕ್ಷ್ಮವಾದ ಅನ್ನ ತತ್ವದಿಂದಲೇ ಅವರಿಗೆ ತೃಪ್ತಿ ಜಲತತ್ವದಿಂದಲೇ ತುಷ್ಟಿ.

**ಕರಂಧಮ :** ಶ್ರಾದ್ಧದಲ್ಲಿ ಪಿತೃಗಳಿಗೆ ಅನ್ನವನ್ನು ನೀಡಲಾಗುವುದು. ಆದರೆ ಪಿತೃಗಳು ಕರ್ಮಾಧೀನರು. ಅವರು ಸ್ವರ್ಗದಲ್ಲಿಯೋ ನರಕದಲ್ಲಿಯೋ ಇರಬಹುದು. ನಾವು ಇಲ್ಲಿ ನೀಡಿದ ಶ್ರಾದ್ಧಾನ್ನವು ಸ್ವರ್ಗದಲ್ಲಿ ಉಪಭೋಗಕ್ಕೆ ಹೇಗೆ ಬರುವುದು? ಸ್ವರ್ಗಲೋಕದ ಊಟದಲ್ಲಿ ನಮ್ಮ ಮನುಜ ಲೋಕದ ಅನ್ನದ ಅಗಳುಗಳನ್ನು ಬಡಿಸುವುದು ಹೇಗೆ ? ಉಣ್ಣುವುದು ಹೇಗೆ? ದುರ್ದೈವದಿಂದ ಅವರು ನರಕದಲ್ಲಿದ್ದರೆ ಅವರ ಯಾತನಾಮಯ ಶರೀರದಲ್ಲಿ ಊಟವೆಲ್ಲಿ? ನಿದ್ರೆಯಲ್ಲಿ? ನೀರೆಲ್ಲಿ? ಯಮದೂತರು ನರಕದಲ್ಲಿ ನಾವು ನೀಡಿದ ಅನ್ನವನ್ನು ಅವರಿಗೆ ಉಣ್ಣಗೊಡುವರೆ ? ಶ್ರಾದ್ಧ ಮಾಡಿ ನೀಡಿದ ಅನ್ನವನ್ನು ಉಣ್ಣಲಿಕ್ಕೆ ಅವರು ಅಸಮರ್ಥರು ಆದ ಬಳಿಕ ಶ್ರಾದ್ಧಕರ್ತನಿಗೆ ಅವರು ಆಶೀರ್ವದಿಸಿ ವರ ಕೊಡುವುದು ಹೇಗೆ?

**ಮಹಾಕಾಲ :** ರಾಜೇಶ್ವರನೇ, ಪಿತೃಗಳು ತಮ್ಮ ಕರ್ಮಾಧೀನರು ಎನ್ನುವ ಮಾತು ನಿಜ. ಆದರೆ ದೇವತಾ, ಅಸುರ, ಯಕ್ಷ ಮುಂತಾದ ಮೂವರು ಅಮೂರ್ತ ಪಿತೃಗಳು; ಮತ್ತು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ನಾಲ್ಕು ಮೂರ್ತ ಪಿತೃಗಳು. ಹೀಗೆ ಒಟ್ಟು ಏಳು ಬಗೆಯ ಪಿತೃಗಳು ಇರುತ್ತಾರೆ. ಇವರು ನಿತ್ಯ ಪಿತೃಗಳು. ಇವರು ಕರ್ಮಾಧೀನರಲ್ಲ. ಶ್ರಾದ್ಧ ಮಾಡಿದವರಿಗೆ ವರ ಕೊಡಲು ಇವರೇ ಸಮರ್ಥರು. ಈ ಸಪ್ತಪಿತೃಗಳಿಗೆ ಅಧೀನರಾಗಿ ಇಪ್ಪತ್ತೊಂದು ಪಿತೃಗಣಗಳು ಇರುತ್ತವೆ, ಈ ಲೋಕದಲ್ಲಿ ಮಾಡಿದ ಶ್ರಾದ್ಧವು ಈ ಎಲ್ಲ ಮಾನವ ಪಿತೃಗಳಿಗೆ ತೃಪ್ತಿ ಉಂಟುಮಾಡುತ್ತವೆ. ಇವರು ತೃಪ್ತರಾಗಿ ಶ್ರಾದ್ಧ ಕರ್ತನ ಪೂರ್ವಜರು ಎಲ್ಲಿಯೇ ಇರಲಿ, ಯಾವ ಜಾತಿಯಲ್ಲಿಯೇ ಇರಲಿ, ಯಾವ ಯೋನಿಯಲ್ಲೇ ಜನಿಸಿರಲಿ, ಅವರಿಗೆ ಆ ಯೋನಿಗೆ ತಕ್ಕ ಆಹಾರವನ್ನು ನೀಡಿ ತೃಪ್ತಿಯನ್ನುಂಟು ಮಾಡುತ್ತಾರೆ. ಈ ರೀತಿಯಾಗಿ ತಾಯಿ ತಂದೆಗಳ ಶ್ರಾದ್ಧ ದಿನದಂದು ಯಜಮಾನನು ನೀಡಿದ ತರ್ಪಣ ನೀರು, ಅನ್ನದ ಪಿಂಡ, ಮುಂತಾದವುಗಳನ್ನು ಕರ್ಮಾಧೀನರಲ್ಲದ ಪಿತೃದೇವತೆಗಳು ಸ್ವೀಕರಿಸಿ ಭಿನ್ನ ಭಿನ್ನ ಸ್ಥಾನ ಯೋನಿಗಳಲ್ಲಿ ಇದ್ದ ಶ್ರಾದ್ಧ ಕರ್ತನ ಪಿತೃಗಳಿಗೆ ನೀಡಿ ಸಂತೋಷ ಪಡಿಸುತ್ತಾರೆ. ಮತ್ತು ಆ ದೇವತಾ ಗಣದ ಪಿತೃಗಳೇ ಶ್ರಾದ್ಧಕರ್ತನಿಗೆ ಪುಣ್ಯದಾನವನ್ನು, ವರದಾನವನ್ನು ಮಾಡುತ್ತಾರೆ.

**ಕರಂಧಮ :** ವಿಪ್ರೋತ್ತಮ, ಭೂತ ಮೊದಲಾದವುಗಳಿಗೆ ''ಇದಂ ಭೂತಾದಿಭ್ಯಃ'' ಇದು ಭೂತಗಳಿಗೆ ಮುಟ್ಟಲಿ ಎಂದು ಹೇಳಿ ಸಂಕ್ಷೇಪವಾಗಿ ಅವುಗಳ ನಾಮೋಚ್ಚಾರ ಮಾಡಿ ಪಿಂಡವನ್ನು ಇಡುವಂತೆ ಪಿತೃಗಳಿಗೂ ''ಇದಂ ಪಿತೃಭ್ಯಃ'' ಇಷ್ಟೇ ಹೇಳಿ ಸಂಕ್ಷೇಪವಾಗಿ ಶ್ರಾದ್ಧಕ್ರಿಯೆಯನ್ನು ಏಕೆ ಮುಗಿಸಬಾರದು.

**ಮಹಾಕಾಲ :** ರಾಜನೇ, ಎಲ್ಲರಿಗೂ ಸರಿಯಾದ ಗೌರವವನ್ನು ಸಲ್ಲಿಸುವುದು ಕರ್ತವ್ಯವಾಗಿದೆ. ಯೋಗ್ಯವಾದ ಸ್ವಾಗತ, ಸತ್ಕಾರಗಳನ್ನು ಶ್ರದ್ಧೆಯಿಂದ ಮಾಡದೆ ನೀಡಿದ ಯಾವ ವಸ್ತುವನ್ನೂ ದೇವತೆಗಳು ಸ್ವೀಕರಿಸುವುದಿಲ್ಲ. ಮನೆಯ ಬಾಗಿಲಲ್ಲಿ ಕುಳಿತ ನಾಯಿಯು ಬೀಸಿ ಒಗೆದ ರೊಟ್ಟಿಯ ತುಣುಕನ್ನು ತಿನ್ನುವಂತೆ ಅಭಿಮಾನಿ ಪುರುಷರು ''ಇದಂ ಪಿತೃಭ್ಯಃ'' ಎಂದು ಮಾತ್ರ ಉಚ್ಚರಿಸಿ ಒಗೆದ ಪಿಂಡವನ್ನು ಅಥವಾ ನೀರನ್ನು ಎಂದೂ ಸ್ವೀಕರಿಸಲಾರರು. ಇಲ್ಲಿ ಮಾನವರು ನೀಡಿದ ಶ್ರಾದ್ಧದ ಅನ್ನ ನೀರುಗಳನ್ನು ಸ್ವೀಕರಿಸಿ ಪಿತೃಗಳಿಗೆ ತಲುಪಿಸುವವರು ಪಿತೃಗಣ ಎಂಬ ಹೆಸರಿನ ದೇವತೆಗಳು. ಶ್ರದ್ಧೆಯಿಲ್ಲದೇ ಸರಿಯಾಗಿ ಮಂತ್ರಗಳಿಂದ ಆವಾಹನೆ ಸ್ವಾಗತ, ಸತ್ಕಾರ, ಸ್ತೋತ್ರ , ಆಸನ, ಅರ್ಘ್ಯ, ಪಾದ್ಯ, ಪ್ರಾರ್ಥನೆ ಮುಂತಾದ ಶಾಸ್ತ್ರೋಕ್ತ ಮಂತ್ರಪೂತ ವಿಧಿಗಳಿಲ್ಲದೇ ದೇವತೆಗಳು ಏನನ್ನೂ ಸ್ವೀಕರಿಸಲಾರರು. ಅಶ್ರದ್ಧೆಯಿಂದ ಮಂತ್ರೋಚ್ಚಾರಣೆಯಿಲ್ಲದ ಯಾವದೇ ಹವ್ಯಭಾಗ ಆಗಲಿ ಕವ್ಯ ಭಾಗವನ್ನಾಗಲಿ ದೇವತಾ ಪುರುಷರು ಸರ್ವಥಾ ಸ್ವೀಕರಿಸಲಾರರು. ಈ ವಿಷಯದಲ್ಲಿ ವೇದವು ಕೂಡ ಸ್ಪಷ್ಟವಾಗಿ ಅಪ್ಪಣೆಕೊಡುತ್ತದೆ.

**ಮಂತ್ರದೇವತಾ ಯದ್ಯದ್ವಿದ್ವಾನ್ ಮಂತ್ರವತ್ಕರೋತಿ ದೇವತಾಭಿರೇವ**
**ತತ್ಕರೋತಿ, ಯದ್ದದಾತಿ ದೇವತಾಭಿರೇವ ತದ್ದದಾತಿ, ಯತ್ ಪ್ರತಿ**
**ಗೃಹ್ಣಾತಿ ದೇವತಾಭಿರೇವ ತತ್ಪ್ರತಿಗ್ರಹ್ಣಾತಿ ತಸ್ಮಾನ್ಮಂತ್ರವತ್ ಪ್ರತಿ**
**ಗೃಹ್ಣೀಯಾತ್ ನಾಮಂತ್ರವತ್ ಪ್ರತಿಪದ್ಯತೇ ।**

ದೇವತೆಗಳೇ ಮಂತ್ರ ಎಂದು ಕರೆಯಲ್ಪಡುತ್ತಾರೆ. ಅವರು ಮಂತ್ರರೂಪರೇ. ವಿದ್ವಾನ್ ಪುರುಷರು ಯಾವ ಯಾವ ಕಾರ್ಯವನ್ನು ಮಂತ್ರದಿಂದ ಮಾಡುತ್ತಾರೋ ಅವುಗಳಿಂದ ದೇವತೆಗಳಿಂದಲೇ ಸಂಪನ್ನವನ್ನಾಗಿ ಮಾಡುತ್ತಾರೆ. ಮಂತ್ರೋಚ್ಚಾರಣ ಪೂರಕವಾಗಿ ಯಾವುದನ್ನು ಕೊಡುವರೋ ಅದನ್ನು ದೇವತೆಗಳ ಮುಖಾಂತರವಾಗಿಯೇ ನೀಡುತ್ತಾರೆ. ಸ್ವೀಕರಿಸುವವರು ಕೂಡ ಮಂತ್ರ ಪೂರಕವಾಗಿದ್ದರೆ ಮಾತ್ರ ಸ್ವೀಕರಿಸುತ್ತಾರೆ. ಹಾಗಿದ್ದರೆ ಮಾತ್ರ ದೇವತೆಗಳು ಅವರಿಗೆ ಮಂತ್ರದ್ವಾರಾ ತಲುಪಿಸುತ್ತಾರೆ. ಆದ್ದರಿಂದ ಮಂತ್ರವನ್ನು ಉಚ್ಚರಿಸದೇ ನೀಡಿದ್ದನ್ನು ಯಾವ ಪಿತೃಗಳೂ ಸ್ವೀಕಾರ ಮಾಡುವುದಿಲ್ಲ. ಮಂತ್ರವಿಲ್ಲದೇ ಮಾಡಿದ ಯಾವ ಕಾರ್ಯವೂ ಸಂಪನ್ನವಾಗುವದಿಲ್ಲ. ಈ ಕಾರಣದಿಂದ ಪುರಾಣೋಕ್ತ ಹಾಗೂ ವೇದೋಕ್ತ ಮಂತ್ರಗಳಿಂದಲೇ ಎಲ್ಲ ದಾನ ಕಾರ್ಯಗಳನ್ನೂ ಶ್ರಾದ್ಧ ಕಾರ್ಯಗಳನ್ನೂ ಮಾಡತಕ್ಕದ್ದು.

**ಕರಂಧಮ :** ಶ್ರಾದ್ಧ ಮಾಡುವಾಗ ಎಳ್ಳು,ದರ್ಭೆ, ಅಕ್ಷತೆ, ನೀರು ಇವುಗಳನ್ನು ಹಿಡಿದುಕೊಂಡೇ ದಾನವನ್ನು ಕೊಡುವ ಪದ್ಧತಿ ಇದೆ. ಇದಕ್ಕೆ ಕಾರಣವೇನು ಹೇಳಿ.

**ಮಹಾಕಾಲ :** ರಾಜನೇ, ಪೂರ್ವಕಾಲದಲ್ಲಿ ಮಾನವರು ಬಹುವಿಧವಾದ ದಾನವನ್ನು ನೀಡಿದರು. ಆದರೆ ದುಷ್ಟರಾದ ದೈತ್ಯರು ಅಲ್ಲಿ ಪ್ರವೇಶಿಸಿ ಬಲಾತ್ಕಾರದಿಂದ ಆ ದಾನಗಳನ್ನೆಲ್ಲ ತಾವೇ ಸ್ವೀಕರಿಸಿದರು. ಆಗ ದೇವತೆಗಳು, ಪಿತೃಗಳು ಬ್ರಹ್ಮದೇವರ ಬಳಿಗೆ ಹೋಗಿ ಹೇಳಿಕೊಂಡರು - ''ದೇವೋತ್ತಮ, ಈ ದುಷ್ಟರಾದ ದೈತ್ಯರು ನಮ್ಮ ಕಣ್ಣ ಎದುರೇ ನಾವು ನೋಡುತ್ತಿರುವಂತೆಯೇ ನಾವು ನೀಡಿದ ದಾನಗಳನ್ನೆಲ್ಲ ಅಪಹರಿಸಿ ಬಿಡುವರು. ನಮ್ಮ ದಾನವೆಲ್ಲವೂ ಇದರಿಂದ ನಷ್ಟವಾಗಿ ಹೋಗುವದು. ಇದರಿಂದ ಹೇಗಾದರೂ ಮಾಡಿ ನಮ್ಮನ್ನು ರಕ್ಷಿಸಿ'' ಆಗ ಬ್ರಹ್ಮದೇವರು ದೀರ್ಘ ವಿಚಾರ ಮಾಡಿ ಒಂದು ಉಪಾಯವನ್ನು ಹುಡುಕಿ ತೆಗೆದರು. ಪಿತೃಗಳಿಗೆ ಎಳ್ಳಿನಿಂದ ಸಹಿತವಾಗಿ ದಾನ ಕೊಡಬೇಕು. ದೇವತೆಗಳಿಗೆ ದರ್ಭೆ, ಅಕ್ಷತೆ, ನೀರು ಸಹಿತವಾಗಿ ದಾನ ಕೊಡಬೇಕು. ಎಳ್ಳು ಅಕ್ಷತೆ, ದರ್ಭೆ, ನೀರು ಈ ನಾಲ್ಕು ಪದಾರ್ಥಗಳು ಯಜ್ಞಾಂಗಗಳಾಗಿರುವುದರಿಂದ ಇವು ಇದ್ದಲ್ಲಿ ದೈತ್ಯರು ಬರಲಾರರು. ಇವು ಯಜ್ಞಾಂಗಗಳಾಗಿದ್ದರ ಕಾರಣದಿಂದ ಅತ್ಯಂತ ಪರಮ ಪವಿತ್ರ ಪದಾರ್ಥಗಳಾಗಿವೆ. ಈ ಪವಿತ್ರ ಪದಾರ್ಥಗಳ ಜೊತೆಗೆ ನೀಡಿದ ದಾನವನ್ನು ಮುಟ್ಟುವ ಶಕ್ತಿಯು ಅಪವಿತ್ರಾತ್ಮರಾದ ದೈತ್ಯರಿಗೆ ಇರುವುದಿಲ್ಲ.

ಆದ್ದರಿಂದ ದೇವತೆಗಳಿಗೆ ನೀಡುವಾಗ ಅಕ್ಷತೆಯನ್ನು, ಪಿತೃಗಳಿಗೆ ನೀಡುವಾಗ ಎಳ್ಳು ಎರಡೂ ಕಡೆಗೂ ದರ್ಭೆನೀರು ಯುಕ್ತವಾಗಿ ದಾನ ನೀಡಿದರೆ ಅದನ್ನು ದೈತ್ಯರಿಗೆ ಮುಟ್ಟಲು ಬಾರದೇ ನೇರವಾಗಿ ಪಿತೃದೇವತೆಗಳಿಗೆ ಮಾತ್ರ ಅದು ಸೇರುತ್ತದೆ. ತಿಲ, ಅಕ್ಷತ, ದರ್ಭ, ನೀರು ಈ ನಾಲ್ಕೂ ಇಲ್ಲದೇ ನೀಡಿದ ಯಾವುದೇ ದಾನವಾದರೂ ದೈತ್ಯರು ಬಲ ಪೂರ್ವಕವಾಗಿ ಅದರ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸುತ್ತಾರೆ. ದಾನ ನೀಡುವವರಿಗೆ ಯಾವ ಫಲವೂ ದೊರಕದು. ಯಾವ ಪುಣ್ಯವೂ ಪ್ರಾಪ್ತವಾಗದು. ಆದ್ದರಿಂದ ಶಾಸ್ತ್ರದಲ್ಲಿ ಈ ತಿಲ, ಅಕ್ಷತೆ, ದರ್ಭೆ, ಜಲ - ಈ ನಾಲ್ಕೂ ವಸ್ತುಗಳನ್ನು ಕೂಡಿಕೊಂಡೇ ದೇವತಾಕಾರ್ಯ ಪಿತೃಕಾರ್ಯ ಮಾಡಬೇಕೆಂದು ಕಡ್ಡಾಯ ಮಾಡಿದ್ದಾರೆ.

**ಕರಂಧಮ :** ಪೂಜ್ಯರೇ ನಾಲ್ಕೂ ಯುಗಗಳ ವ್ಯವಸ್ಥೆ ಏನು? ಯಾವ ಬಗೆಯಾಗಿದೆ ಎಂಬುದನ್ನು ನನಗೆ ತಿಳಿಸಿ ಹೇಳಿರಿ.

**ಮಹಾಕಾಲ :** ರಾಜನೇ, ಯುಗಗಳು ನಾಲ್ಕು - ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ, ಎಂದು. ಕೃತಯುಗವು ಸತ್ವಗುಣ ಪ್ರಧಾನವಾಗಿದೆ. ತ್ರೇತಾಯುಗವು ರಜೋಗುಣ ಪ್ರಧಾನ. ದ್ವಾಪರದಲ್ಲಿ ರಜೋಗುಣ, ತಮೋಗುಣಗಳ ಮಿಶ್ರಣ, ಕೊನೆಯದಾದ ಕಲಿಯುಗದಲ್ಲಿ ಕೇವಲ ತಮೋಗುಣವೇ ತುಂಬಿರುತ್ತದೆ. ಈ ನಾಲ್ಕೂ ಯುಗಗಳಲ್ಲಿ ನಡೆಯುವ ಮುಖ್ಯವಾದ ಆಚಾರ ಸಂಪ್ರದಾಯವನ್ನು ಹೇಳುತ್ತೇನೆ ಕೇಳು



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತೆಂಟನೇ ಅಧ್ಯಾಯ ಮುಗಿದುದು**

# ಮಹಾಕಾಲನಿಂದ ಯುಗಧರ್ಮಗಳ ನಿರೂಪಣೆ ಅಧ್ಯಾಯ -29

**ಧ್ಯಾನಂ ಪರಂ ಕೃತಯುಗೇ ತ್ರೇತಾಯಾಂ ಯಜ್ಞ ಉಚ್ಯತೇ**
**ವೃತ್ತಂ ಚ ದ್ವಾಪರೇ ಸತ್ಯಂ ದಾನಮೇವ ಕೃತೌ ಯುಗೇ ॥**

ಕೃತಯುಗದಲ್ಲಿ ಪರಮಾತ್ಮನ ಧ್ಯಾನವೇ ಮುಖ್ಯ ಧರ್ಮ. ತ್ರೇತಾಯುಗದಲ್ಲಿ ಯಜ್ಞವೇ ಪ್ರಧಾನ ಧರ್ಮ. ದ್ವಾಪರ ಯುಗದಲ್ಲಿ ಸದಾಚಾರ, ಸತ್ಯ ಧರ್ಮಗಳು ಪ್ರಧಾನವಾಗಿದೆ. ಕಲಿಯುಗದಲ್ಲಿ ದಾನವೇ ಎಲ್ಲಕ್ಕಿಂತ ಪ್ರಧಾನ ಧರ್ಮ. ಕೃತಯುಗದಲ್ಲಿ ಎಲ್ಲರ ಜೀವನದ ನಿರ್ವಾಹದ ಉದ್ಯೋಗ, ವೃತ್ತಿ, ಪ್ರವೃತ್ತಿಗಳು ಉಲ್ಲಾಸದಿಂದ ಪರಿಪೂರ್ಣವಾಗಿರುತ್ತವೆ. ಪ್ರಜೆಗಳೆಲ್ಲರೂ ತೇಜಸ್ವಿಗಳು, ವರ್ಚಸ್ವಿಗಳು. ಎಲ್ಲ ಪ್ರಾಣಿಗಳೂ ಸದಾ ಸಂತೃಪ್ತ, ಪಕ್ಷಪಾತ ಸ್ವಾರ್ಥ, ವಂಚನೆಗಳು ಇಲ್ಲ. ಆಯುಷ್ಯವು ಕೂಡ ಎಲ್ಲರದೂ ಪರಿಪೂರ್ಣ. ಎಲ್ಲರೂ ರೂಪಸಂಪನ್ನರು. ಎಲ್ಲೆಡೆಗೂ ಪ್ರಸಾದ. ವಿಷಾದ ಎಲ್ಲಿಯೂ ಇಲ್ಲ. ಎಲ್ಲೆಡೆಗೂ ಸಂತೋಷ, ತ್ವೇಷ, ದ್ವೇಷ ಎಲ್ಲಿಯೂ ಇಲ್ಲ. ಎಲ್ಲರೂ ವರ್ಣಾಶ್ರಮ ವ್ಯವಸ್ಥೆಯ ಕಿಂಕರರು. ವರ್ಣಸಂಕರದ ಹೆಸರೇ ಇಲ್ಲ.

ದಯ ದಾನಗಳು, ಪರೋಪಕಾರ, ಐಕ್ಯಮತ್ಯ - ಇವು ಎಲ್ಲ ಜನರ ಸ್ವಾಭಾವಿಕ ಗುಣಗಳು. ಜನರೆಲ್ಲರೂ ಪರ್ವತಪ್ರತ್ಯಂತ ದೇಶಗಳಲ್ಲಿಯೂ, ನದಿತೀರ ಪ್ರದೇಶಗಳಲ್ಲಿಯೂ ಸಂತೋಷದಿಂದ ನೆಲಿಸುವರು. ಸಮುದ್ರದ ವಿಶಾಲವಾದ ತೀರಪ್ರದೇಶದಲ್ಲಿಯೂ ಸಂತೋಷದಿಂದ ಜೀವಿಸುವರು. ಎಲ್ಲ ಮಾನವರೂ ಐಕ್ಯಮತ್ಯ ಸ್ನೇಹ ಸಾಮರಸ್ಯದಿಂದ ವಾಸಿಸುವರು. ಸಮುದ್ರದ ವಿಶಾಲವಾದ ತೀರಪ್ರದೇಶದಲ್ಲಿಯೂ ಜನರು ವಸತಿ ಮಾಡುವರು. ಎಲ್ಲ ಮಾನವರೂ ಐಕ್ಯಮತ್ಯ ಸ್ನೇಹ ಸಾಮರಸ್ಯದಿಂದ ಇದ್ದು ಸದಾ ಸರ್ವದಾ ಸದಾಶಿವನ ಧ್ಯಾನಪರರಾಗಿರುವರು. ಕೃತಯುಗದ ಕೊನೆಯ ಚರಣ ನಡೆದಾಗ ಪ್ರಾರಂಭದ ರಸಾವೇಶದ ಉಲ್ಲಾಸ ಪ್ರವೃತ್ತಿ ಕಡಿಮೆ ಆಗುವುದು. ಆಗಲೇ ಮಾನವರಿಗೆ ಮನೆ ಮಾಡಿಕೊಂಡಿರಲು ಉಪಯುಕ್ತವಾದ ವಸ್ತುಗಳನ್ನು ಒದಿಗಿಸಲು ಕಲ್ಪವೃಕ್ಷದ ಉತ್ಪತ್ತಿ ಆಗುವದು. ಎಲ್ಲ ಜನರಿಗೂ ಬೇಕಾದ ವಸ್ತ್ರ, ವಸ್ತು, ಪಡವೆ, ಹಣ್ಣು ಕಾಯಿಗಳನ್ನೂ ಮುಖ್ಯವಾಗಿ ಬಲವರ್ಧಕವಾದ ಮತ್ತು ಅತ್ಯಂತ ರುಚಿಕರವಾದ ಜೇನುತುಪ್ಪ ಮುಂತಾದ ಜೀವನದಲ್ಲಿ ಸ್ವಚ್ಛಂದ ಆನಂದದ ಅನುಭವವನ್ನು ತಂದು ಕೊಡಲು ಉಪಯುಕ್ತವಾದ ಎಲ್ಲ ಬಗೆಯ ವಸ್ತುಗಳನ್ನೂ ಆ ಕಲ್ಪವೃಕ್ಷವು ತನ್ನ ಚಿಗುರು, ತಳಿರು, ಕುಡಿ, ಮಿಡಿ, ಗುಡಿ, ರೆಂಬೆ, ಕೊಂಬೆ, ಫಲ, ಪುಷ್ಪಗಳಿಂದ ಸಮೃದ್ಧವಾಗಿ ಜನರಿಗೆ ಒದಗಿಸುವದು. ಕಲ್ಪವೃಕ್ಷವು ನೀಡಿದ ಆ ಜೇನುತುಪ್ಪವೂ ಈಗಿನ ಮಧು ಮಕ್ಷಿಕೆಗಳು ನಿರ್ಮಿಸಿದ ಜೇನಿಗಿಂತ ಎಷ್ಟೋ ಪಟ್ಟು ಹೆಚ್ಚು ಸಿಹಿಯಾಗಿರುವದು. ದೇವ ಭೋಗ್ಯವಾದ ಕಲ್ಪವೃಕ್ಷದ ಆ ಜೇನುತುಪ್ಪವನ್ನು ಯಥೇಚ್ಛವಾಗಿ ಉಂಡು ತೃಪ್ತಿಗೊಂಡ ಮಾನವರು ಅದೇ ಕಲ್ಪವೃಕ್ಷವು ನೀಡಿದ ಸುಂದರವಾದ ಬೆಲೆಬಾಳುವ ಬಟ್ಟೆಗಳನ್ನು ಉಟ್ಟುಕೊಂಡು, ಆಭರಣಗಳನ್ನು ತೊಟ್ಟುಕೊಂಡು, ಅದರ ಹಣ್ಣು ಹಂಪಲಗಳನ್ನೂ ತಿಂದುಂಡು, ಸಂತಸಮಯವಾದ ಜೀವನವನ್ನು ನಿರಾತಂಕವಾಗಿ ನಡೆಸುವರು. ಕಲ್ಪತರುವಿನ ಸ್ವಾದಿಷ್ಟವಾದ ಮಧುಪಾನ ದಿಂದ ಅವರೆಲ್ಲವರೂ ಬಲಿಷ್ಠರು, ನಿರೋಗಿಗಳು, ಸದಾ ಹೃಷ್ಟಪುಷ್ಟರು.

ಹೀಗೆ ಕೆಲ ದಿನಗಳು ಉರುಳಿದ ಬಳಿಕ ಮಾನವನಿಗೆ ನಾಲಿಗೆಯ ರುಚಿ ಬೆಳೆಯಿತು. ಅವನು ಇಂದ್ರಿಯಗಳ ದಾಸನಾಗಿ ಆಸೆಯಿಂದ ಹೆಚ್ಚು ಹೆಚ್ಚು ತಾನೊಬ್ಬನೇ ತಿನ್ನಬೇಕೆಂದು ಸ್ವಾರ್ಥದಿಂದ ಹಪಹಪಿಸತೊಡಗಿದ. ಭಗವಂತನ ಧ್ಯಾನ ಉಪಾಸನೆಗಳು ಕಡಿಮೆ ಆಗತೊಡಗಿದವು. ಕಲ್ಪವೃಕ್ಷದ ಜೇನುತುಪ್ಪ ಹಾಗೂ ವಸ್ತ್ರಾಭರಣ ಹಾಗೂ ಪರಿಮಳ ದ್ರವ್ಯಗಳ ಮೇಲೆ ತನ್ನ ಏಕಾಧಿಕಾರವನ್ನು ಸ್ಥಾಪಿಸಬೇಕೆಂದು ಬಲ ಪ್ರಯೋಗ ಆರಂಭಿಸಿದ. ಮಾನವನ ದುರಾಶಾಪೂರಿತವಾದ ಸ್ವಾರ್ಥ ಮನೋಭಾವದ ಈ ಹವ್ಯಾಸ ಹಾಗೂ ಬಲಪ್ರಯೋಗಗಳಿಂದ ಬೇಸತ್ತ ಆ ಕಲ್ಪವೃಕ್ಷ ತನ್ನ ಎಲ್ಲ ವಸ್ತುಗಳೊಂದಿಗೆ ಭೂಲೋಕದಿಂದ ಒಮ್ಮೆಲೆ ಅದೃಶ್ಯವಾಯಿತು.

ಕಲ್ಪವೃಕ್ಷವು ಭೂತಲದಲ್ಲಿ ಇರುವವರೆಗೆ ಜನರಿಗೆ ಚಳಿ, ಮಳೆ, ಬಿಸಿಲು, ಬೇಗೆಗಳ ಅನುಭವವೇ ಬರುತ್ತಿದ್ದಿಲ್ಲ. ಕಲ್ಪವೃಕ್ಷದ ಪ್ರಭಾವದಿಂದ ಭೂಲೋಕ ವಾಸಿಗಳಿಗೆಲ್ಲ ಸದಾ ತಣ್ಣೆಳಲು, ತಂಗಾಳಿ. ಎಲ್ಲೆಲ್ಲಿಯೂ ತಂಪು, ಕಂಪು, ಇಂಪು. ಯಾರಿಗೂ ಬೆವರಿಲ್ಲ. ಬಾಯಾರಿಕೆ ಇಲ್ಲ, ಬೇಗುದಿ ಇಲ್ಲ, ಆದರೆ ಕಲ್ಪವೃಕ್ಷವು ಹೋದ ಬಳಿಕ ಎಲ್ಲ ಅಧಿವ್ಯಾಧಿಗಳ ಉಪಾಧಿಗಳೂ, ಬಿಸಿಲಿನ ಬೇಗೆಯೂ, ಬೆವರಿನ ಬವಣೆಯೂ, ಹಸಿವೆಯ ಸಂಕಟವೂ, ಅನ್ನದ ಸಮಸ್ಯೆಯೂ, ಚಳಿಯ ನಡುಕ, ಎಲ್ಲವೂ ಮಾನವನ ಅನುಭವಕ್ಕೆ ಬರತೊಡಗಿತು. ಮಳೆ, ಗಾಳಿ, ಬಿಸಿಲಿನಿಂದ ತನ್ನನ್ನು ರಕ್ಷಿಸಿಕೊಳ್ಳಲು ಮಾನವನು ಮನೆಗಳನ್ನು ಕಟ್ಟಿಕೊಳ್ಳತೊಡಗಿದನು.

ತ್ರೇತಾಯುಗದ ಆರಂಭದಲ್ಲಿ ಪ್ರಾಣಿಗಳಿಗೆ ಕಲ್ಪವೃಕ್ಷದಿಂದ ಒದಗಿಬರುವ ಸಿದ್ಧಾನ್ನದ ಸಿದ್ಧಿ ಸಮೃದ್ಧಿಗಳು ಮರೆತು ಹೋಗಿದ್ದವು. ಆದರೆ ಮಾನವನ ಹಸಿವನ್ನು ಹಿಂಗಿಸಿ ಅವನಿಗೆ ಸುಖನಿವಾಸ, ಅನ್ನ ಪಾನ, ವಸತಿ, ಉಲ್ಲಾಸ, ವಿಲಾಸ, ತೃಪ್ತಿ ತೋಷಗಳನ್ನು ಒದಗಿಸಲು ಮತ್ತೊಂದು ಕಾಮಧೇನು ಬಂದಿತು. ಅದೇ ಭೂಮಿತಾಯಿ, ಮೋಡಗಳಿಂದಾಗುವ ವೃಷ್ಟಿಧಾರೆಯಿಂದ ಜಲ ಹಾಗೂ ನೆಲಗಳ ಸಂಯೋಗವಾಗಿ ಮಾನವನ ಪ್ರಯತ್ನದಿಂದ ಬೇಕುಬೇಕಾದ ಧಾನ್ಯಗಳು ಸಮೃದ್ಧವಾಗಿ ಭೂಮಿಯಲ್ಲಿ ಬೆಳೆಯತೊಡಗಿದವು. ಮತ್ತು ಕಾಡು, ಮೇಡು, ಬೆಟ್ಟ ಬಯಲುಗಳಲ್ಲಿಯೂ ಉತ್ತದೇ ಬಿತ್ತದೇ ಸಮೃದ್ಧವಾಗಿ ಹಣ್ಣು ಕಾಯಿ, ಗೆಡ್ಡೆ, ಗೆಣಸು, ಕಂದಮೂಲ, ಹೂವು, ಅಂಟು ಮುಂತಾದ ಪದಾರ್ಥಗಳು ಸಮೃದ್ಧವಾಗಿ ಮಾನವನಿಗೆ ದೊರಕತೊಡಗಿದವು.

ಇದರಿಂದ ಮಾನವನಿಗೆ ಎರಡು ವಿಧವಾದ ಧಾನ್ಯ, ಪುಷ್ಪ, ಫಲ, ತರಕಾರಿ ಮಧುಮಕ್ಷಿಕೆಗಳು, ಗಿಡಗಂಟಿಗಳಲ್ಲಿ ಬೆಳೆಸಿದ ಜೇನು, ಹೂವು, ಹಣ್ಣು, ಕಾಯಿಗಳು ಸಮೃದ್ಧವಾಗಿ ಬೆಳೆದು ಮಾನವ ಜೀವನವೂ ಉಲ್ಲಾಸಮಯವಾಯಿತು. ಆದರೆ, ಇದರ ಜೊತೆಗೆ ಈ ಎಲ್ಲ ದೇವದತ್ತವಾದ ನೈಸರ್ಗಿಕ ವಸ್ತುಗಳನ್ನು ನೀಡುವ ನೆಲ, ಹೊಲ, ಜಲ, ಸ್ಥಳಗಳ ಮೇಲೆಯೂ ಬನ, ಬಯಲು, ಬೆಳಕು, ನೀರು, ಕಾಡು, ನಾಡು ಮುಂತಾದ ದೇವದತ್ತವಾದ ಪ್ರಕೃತಿಯ ಪರಿಸರಗಳ ಮೇಲೆಯೂ ತನ್ನದೇ

ಅಧಿಕಾರವನ್ನು ಸ್ಥಾಪಿಸುವ ದುರಾಶೆ ಮಾನವನಲ್ಲಿ ಮೂಡಿತು. ಆದರಿಂದ ಪರಸ್ಪರರಲ್ಲಿ ದ್ವೇಷ, ಅಸೂಯೆ, ಲೋಭ, ಕಾಮ, ಕ್ರೋಧ, ದಂಭ, ಸ್ವಾರ್ಥ, ಮೋಹ, ಅಹಂಕಾರ ಮುಂತಾದ ದುರ್ಗುಣಗಳು ಬೆಳೆದು ನಿಂತವು. ತನ್ನ ಮುಂಗೈ ಜೋರಿನ ಮೇಲೆ ತನ್ನ ಶಕ್ತಿಯಿಂದ ಸಂಪನ್ಮೂಲವಾದ ನದಿ, ಪರ್ವತ, ಕ್ಷೇತ್ರ ದೇಶಗಳನ್ನು ಸ್ವಾಧೀನ ಮಾಡಿಕೊಳ್ಳಲು ಜನರಲ್ಲಿ ಸ್ಪರ್ಧೆ ಹೋರಾಟಗಳು ನಡೆದವು. ಆ ಕಾಲದಲ್ಲಿ ಭೂಮಿಯಿಂದ ಹದಿನಾಲ್ಕು ತರಹದ ಧಾನ್ಯಗಳನ್ನು ಬೆಳೆಯಲಾಗುತ್ತಿತ್ತು. ಅವೆಲ್ಲವುಗಳನ್ನೂ ತಾನೊಬ್ಬನೇ ಕಬಳಿಸಬೇಕೆಂದು ಸ್ಪರ್ದೆ, ಹೋರಾಟ, ಮಾನವರಲ್ಲಿ ನಡೆಯತೊಡಗಿದವು. ಇದನ್ನು ನೋಡಿ ಬೇಸತ್ತ ಭೂಮಿತಾಯಿಯು ಈ ಎಲ್ಲ ಧಾನ್ಯ ಹಾಗೂ ಔಷಧಿಗಳನ್ನು ಬಚ್ಚಿಟ್ಟುಕೊಂಡಳು. ಮಾನವರಿಗೆ ಏನೂ ದೊರಕದಂತಾಯಿತು. ಕಂಗಾಲಾದ ಜನತೆ ವೇನ ಪುತ್ರನಾದ ಪೃಥು ರಾಜನಿಗೆ ಮೊರೆಯಿಟ್ಟರು. ಆಗ ಪೃಥು ರಾಜನು ಭೂಮಾತೆಯ ದೋಹದ (ಹಿಂಡುವದು) ಮಾಡಿ ಮತ್ತೆ ಎಲ್ಲಾ ಧಾನ್ಯಗಳು, ವನಸ್ಪತಿಗಳು ಪ್ರಕಟವಾಗುವಂತೆ ಮಾಡಿದನು.

ಜನರು ಮತ್ತೆ ಆನಂದದಿಂದ ಪೃಥುವಿನ ಪುಣ್ಯದಿಂದ ಸುಖಜೀವನ ನಡೆಸಿದರು. ಕ್ಷತ್ರಿಯರು ಧರ್ಮದಿಂದ ಪ್ರಜಾಪಾಲನೆ ಮಾಡತೊಡಗಿದರು. ಎಲ್ಲೆಡೆಗೂ ವರ್ಣಾಶ್ರಮ ಧರ್ಮ, ಪ್ರತಿಷ್ಠೆ ಆಯಿತು. ಯಜ್ಞ ಯಾಗಗಳ ಅನುಷ್ಠಾನವು ನಿರಂತರ ನಡೆಯಿತು. ಆದರೆ ಕೆಲವು ಅಜ್ಞ ಮಾನವರು ಸದಾಶಿವ ಧ್ಯಾನರೂಪವಾದ ಮೋಕ್ಷ ಮಾರ್ಗ ಬಿಟ್ಟು ರಾಗವಶರಾಗಿ ವೇದಗಳಲ್ಲಿ ಹೇಳಿದ ಯಜ್ಞ ಪ್ರಕ್ರಿಯೆಯ ಸಂಬಂಧಿಯಾದ ಪುಷ್ಪಿತ ವಾಣಿಯನ್ನು ಕೇಳಿ ಸ್ವರ್ಗವೇ ಮೊದಲಾದ ಸುಖದ ಆಸೆಯಿಂದ ಫಲಾಪೇಕ್ಷಿಗಳಾಗಿ ಯಜ್ಞಾದಿ ಕರ್ಮಾಚರಣೆಯನ್ನು ಮಾಡತೊಡಗಿದರು.

ದ್ವಾಪರಯುಗ ಬಂದಬಳಿಕ, ಮಾನವರಲ್ಲಿ ಬುದ್ಧಿ ಭೇದ ಉತ್ಪನ್ನವಾಯಿತು. ಜನರಲ್ಲಿ ಲೋಭ, ಅಧೈರ್ಯ, ಸ್ವಾರ್ಥ, ಅಧಿಕಾರ ಲಾಲಸೆಗಳು ಭೂತಾಕಾರವಾಗಿ ಬೆಳೆದು ನಿಂತವು. ಭಗವಾನ್ ಶಂಕರನ ಭಕ್ತಿಯನ್ನು ಬಿಟ್ಟದ್ದರಿಂದ ಎಲ್ಲೆಡೆಗೂ ಧರ್ಮಸಂಕರ. ವರ್ಣಾಶ್ರಮ ಧರ್ಮ ವಿಲೋಪ. ದ್ವಾಪರ ಯುಗದ ಈ ದುರವಸ್ಥೆಯನ್ನು ಕಂಡು ಭಗವಾನ್ ವಿಷ್ಣುವು ವ್ಯಾಸರೂಪದಿಂದ ಪ್ರಕಟವಾದನು. ಹಿಂದೆ ಒಂದಾಗಿದ್ದ ವೇದರಾಶಿಯನ್ನೆಲ್ಲ ಋಗ್ವೇದ, ಯರ್ಜುವೇದ, ಸಾಮವೇದ, ಅಥರ್ವಣವೇದ ಎಂದು ನಾಲ್ಕು ಬಗೆಯಾಗಿ ವಿಂಗಡಿಸಿದನು. ಈ ವೇದಾರ್ಥವನ್ನು ಉಪಬ್ರಂಹಣ ಮಾಡಲು ಇತಿಹಾಸ ಪುರಾಣಗಳನ್ನು ರಚಿಸಿದನು.

ಈ ಪುರಾಣಗಳು (1) ಬ್ರಹ್ಮಪುರಾಣ (2) ಪದ್ಮಪುರಾಣ (3) ವಿಷ್ಣು ಪುರಾಣ (4) ಶಿವಪುರಾಣ (5) ಭಾಗವತ (6) ನಾರದೀಯ (7) ಮಾರ್ಕಂಡೇಯ (8) ಅಗ್ನಿಪುರಾಣ (9) ಭವಿಷ್ಯ (10) ಬ್ರಹ್ಮವೈವರ್ತ (11) ಲಿಂಗ (12) ವರಾಹ (13)ಸ್ಕಂದ (14) ವಾಮನ (15) ಕೂರ್ಮ (16) ಮಚ್ಛ್ಯ (17) ಗರುಡ (18) ಬ್ರಹ್ಮಾಂಡ ಎಂದು ಹದಿನೆಂಟು ಬಗೆಯಾಗಿ ಇರುತ್ತವೆ.

ಈ ಪುರಾಣ, ಸೂತ್ರ ಹಾಗೂ ಮಹಾಭಾರತ ಎಂಬ ಇತಿಹಾಸವನ್ನು ರಚಿಸಿದ ವ್ಯಾಸರು ಕೂಡ ಅನೇಕಾನೇಕರು ಕಲ್ಪಭೇದದಿಂದ ಆಗಿರುತ್ತಾರೆ. ಈ ವರಾಹ ಕಲ್ಪದಲ್ಲಿ ಆಗಲಿರುವ ವ್ಯಾಸರ ಹೆಸರುಗಳನ್ನು ಹೇಳುವೆ ಕೇಳು - ಋತ, ಸತ್ಯ, ಭಾರ್ಗವ, ಅಂಗಿರಾ, ಸವಿತಾ, ಮೃತ್ಯು, ಶತಕ್ರತು, ವಶಿಷ್ಠ, ಸಾರಸ್ವತ, ತ್ರಿಧಾಮ, ತ್ರಿವ್ರತ, ಶತತೇಜ, ಭಗವಾನ್, ನಾರಾಯಣ, ಕರತ, ಆರುಣಿ, ಕೃತಂಜಯ, ಭಾರದ್ವಾಜ, ಗೌತಮ, ವಾಜಶ್ರವ, ಶುಷ್ಮಾಯಣ, ತೃಣಬಿಂದು, ವೃಕ್ಷ, ಶಕ್ತಿ, ಪರಾಶರ, ಜಾತೂಕರ್ಣ್ಯ, ದ್ವೈಪಾಯನ, ಅಶ್ವತ್ಥಾಮ - ಇವರೆಲ್ಲರೂ ಭೂತ ಭವಿಷ್ಯದ ವ್ಯಾಸರು.

ಇವರಲ್ಲದೇ ದ್ವಾಪರಯುಗದಲ್ಲಿ ಅನೇಕ ಮುನಿಗಳು ಜನರಿಗೆ ಸದಾಚಾರ ಹಾಗೂ ಸದ್ವರ್ತನೆಗಳ ನ್ಯಾಯ ಮಾರ್ಗವನ್ನು ತೋರಿಸಲಿಕ್ಕಾಗಿ ಸ್ಮೃತಿ ಎಂಬ ಹೆಸರಿನ ಅನೇಕ ಧರ್ಮಶಾಸ್ತ್ರಗಳನ್ನು ರಚಿಸಿದರು. ಅಂಥ ಧರ್ಮಶಾಸ್ತ್ರರೂಪವಾದ ಸ್ಮೃತಿಗ್ರಂಥಕಾರರ ಕೆಲವು ಹೆಸರುಗಳನ್ನು ಹೇಳುತ್ತೇನೆ - ಮನು, ಅತ್ರಿ, ವಿಷ್ಣು, ಹಾರೀತ, ಯಾಜ್ಞವಲ್ಕ್ಯ ಅಂಗಿರಾ, ಯಮ, ಅಪಸ್ತಂಭ, ಸಂವರ್ತ, ಕಾತ್ಯಾಯನ, ಬ್ರಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೌತಮ, ಶಾತಾತಪ, ವಶಿಷ್ಠ - ಈ ಎಲ್ಲ ಸ್ಮೃತಿಕಾರರು ಧರ್ಮಶಾಸ್ತ್ರ ಪ್ರವರ್ತಕರಾದ ಋಷಿಗಳು.

ದ್ವಾಪರ ಯುಗದ ಸಂಧಿಕಾಲದಲ್ಲಿ ಕಲಿಯುಗದ ಆರಂಭದಲ್ಲಿ ಶಿವಯೋಗವು ನಾಶವಾಗತೊಡಗುತ್ತದೆ. ಆಗ ಧರ್ಮೋದ್ಧಾರ ಮಾಡಲಿಕ್ಕಾಗಿ ಕೆಲವು ಯೋಗ ಶಕ್ತಿಯನ್ನು ಬೆಳೆಸಿಕೊಂಡ ಮುನಿ ಯೋಗಿಗಳು ಪ್ರಕಟರಾಗುತ್ತಾರೆ. ಈ ಶ್ವೇತವರಾಹ ಕಲ್ಪದಲ್ಲಿ ಭಗವಾನ್ ಶಿವನೇ ಯೋಗೀಶ್ವರ ರೂಪದಿಂದ ಮೊಟ್ಟ ಮೊದಲು ಪ್ರಕಟನಾದ. ಅನಂತರ ಸುತಾರ, ತಾರಣ, ಸುಹೋತ್ರ, ಕಂಕಣ, ಲೋಗಾಕ್ಷಿ, ಜೈಗೀಷವ್ಯ, ಧಾವ್ಯ, ದಧಿವಾಹನ, ಋಷಭ, ಧರ್ಮ, ಉಗ್ರ, ಅತ್ರಿ, ಗೌತಮ, ವೇದಶೀರ್ಷ, ಗೋಕರ್ಣ, ಶಿಖಂಡಿ, ಗುಹಾವಾಸಿ, ಜಟಾಮಾಲಿ, ಅಟ್ಟಹಾಸ, ದಾರುಕ, ಲಾಂಗಲ, ಸಂಯಮಿ, ಶೂಲಿ, ದಂಡಿ, ಮುಂಡೀಶ್ವರ, ಸಹಿಷ್ಣು, ಸೋಮಶರ್ಮ, ಲಕುಲೀಶ್ವರ, ಕಾಯಾವ ರೋಹಣ - ಮುಂತಾಗಿ ಅನೇಕ ಯೋಗೀಶ್ವರರು ಅವತರಿಸಿ ಶೈವ ಧರ್ಮವನ್ನು ಭೂಲೋಕದಲ್ಲಿ ಪ್ರಸಾರ ಮಾಡುವರು.

ಕಲಿಯುಗದಲ್ಲಿ ನಡೆಯಲಿರುವ ಜನರ ಪ್ರವೃತ್ತಿ ಹಾಗೂ ನಡವಳಿಕೆಯನ್ನು ಹೇಳುತ್ತೇನೆ ಕೇಳು. ಈ ಯುಗದಲ್ಲಿ ತಮೋಗುಣದ್ದೇ ಪ್ರಾಚುರ್ಯ. ಸ್ವಾರ್ಥಿಯಾದ ಮಾನವರು ಮೋಸ, ವಂಚನೆ, ಅಸೂಯೆ, ಕಪಟ ಮುಂತಾದ ದುರ್ಗುಣಗಳಿಂದ ದೂಷಿತರಾಗಿ ಮಹಾತ್ಮರ ಕಗ್ಗೊಲೆ ಮಾಡುವರು. ಭೂಲೋಕದ ಅನೇಕ ಭಾಗಗಳಲ್ಲಿ ಅತಿವೃಷ್ಟಿ, ಅನಾವೃಷ್ಟಿ, ಅದರಿಂದ ಜನರಲ್ಲಿ ಉಪವಾಸ, ವನವಾಸ, ಭಯದ ವಾತಾವರಣ, ಎಲ್ಲ ಕಡೆಗೆ ಅನಾಚಾರ, ದುರ್ವಿಚಾರ, ಹಿಂಸಾಚಾರಗಳ ಅಕಾಂಡ ತಾಂಡವ, ಸುಳ್ಳು ಮಾತುಗಳನ್ನು ಸವಿನುಡಿಗಳಿಂದಾಡುವ ನಾರಿಯರ ದುಷ್ಟ ಸಂತತಿ.

ಎಲ್ಲ ಕಡೆಗೂ ವೇದ ಮಾರುವ ಬ್ರಾಹ್ಮಣರು, ದಕ್ಷಿಣೆಯ ಆಶೆಯಿಂದ ಮಾಡುವ ಯಜ್ಞ ಯಾಗಗಳ ಪ್ರಕ್ರಿಯೆಯಲ್ಲಿಯೇ ಜನರಿಗೆ ಅನಾಶ್ವಾಸ, ವೇದಗಳಲ್ಲಿಯೇ ಅವಿಶ್ವಾಸ, ಕ್ಷತ್ರಿಯರು ಸ್ವಾರ್ಥವಶರಾಗಿ ಪ್ರಜಾಪಾಲನೆಯತ್ತ ಗಮನಿಸದೇ ಅಧಿಕಾರಕ್ಕಾಗಿ ಹೋರಾಡುವರು. ವೈಶ್ಯ, ಶೂದ್ರರು ಸ್ವಧರ್ಮಭ್ರಷ್ಟರಾದ ಬ್ರಾಹ್ಮಣ ಕ್ಷತ್ರಿಯರನ್ನು ದೂರ ಸರಿಸಿ ಅವರೊಡನೆ ಹೋರಾಟ ನಡೆಸುವರು. ಅವರ ಸಮಾನರಾಗಿ ಒಮ್ಮೊಮ್ಮೆ ಮಿಗಿಲಾಗಿ ಸಾಮ್ರಾಜ್ಯವನ್ನು ಆಕ್ರಮಿಸುವರು. ಬ್ರಾಹ್ಮಣರು ಆಚಾರ ಭ್ರಷ್ಟರಾಗಿ ಶೂದ್ರರಂತೆ ವರ್ತಿಸುವರು. ಶೂದ್ರರ ಆಚರಣೆ ಬ್ರಾಹ್ಮಣರಂತೆ. ಕಳ್ಳರೇ ರಾಜರಾಗುವರು. ರಾಜರು ದೊಡ್ಡ ಪ್ರಮಾಣದ ಕಳ್ಳತನವನ್ನು ಮಾಡಿ ಚೋರರೆನಿಸುವರು. ಪತಿವ್ರತೆಯರ ಸಂಖ್ಯೆ ಕಡಿಮೆಯಾಗಿ ವ್ಯಭಿಚಾರಿಣಿ ಸ್ತ್ರೀಯರೇ ಪತಿವ್ರತೆಯರಂತೆ ಸಮಾಜದಲ್ಲಿ ಮನ್ನಣೆ ಪಡೆಯುವರು. ಕಲಿಯುಗದಲ್ಲಿ ಭೂಮಿಯಲ್ಲಿ ಬೆಳೆ ಅತ್ಯಲ್ಪ ಬರುವದು. ರಾಜರು ಧರ್ಮಕ್ಕೆ ಹೆದರದೇ ಪ್ರಜಾಪೋಷಕರಾಗದೇ ಪ್ರಜಾ ಶೋಷಕರೇ ಆಗುವರು. ಬ್ರಾಹ್ಮಣರು ಶೂದ್ರವೃತ್ತಿಯಾದ ನೌಕರಿ ಚಾಕರಿ ಮಾಡಿ ಜೀವಿಸುವರು. ಶೂದ್ರರು ಬ್ರಾಹ್ಮಣರಿಂದ ನಮಸ್ಕಾರ ಮಾಡಿಸಿಕೊಳ್ಳಲ್ಪಡುವರು. ಅಲ್ಪವಿದ್ಯೆಯುಳ್ಳ ಬ್ರಾಹ್ಮಣರು ಶೂದ್ರ ಅಧಿಕಾರಿಗಳನ್ನು ದೇವರಂತೆ ಫಲಪುಷ್ಪಗಳಿಂದ ಪೂಜೆ ಮಾಡುವರು. ಕಲಿಯುಗದ ಬ್ರಾಹ್ಮಣರು ಪಾಖಂಡಿಗಳಿಂದಲೂ, ಪಾಪಿಗಳಿಂದಲೂ, ನಿಷಿದ್ಧ ವಸ್ತುಗಳನ್ನು ಕೂಡ ದಾನ ಸ್ವೀಕರಿಸುವರು. ಬ್ರಾಹ್ಮಣರು ವಿದ್ಯೆ, ತಪಸ್ಸು, ಯಜ್ಞ, ಧರ್ಮ, ಕರ್ಮ, ವೇದ, ಶಾಸ್ತ್ರಗಳನ್ನು, ಹಣದ ಆಶೆಯಿಂದ ಮಾರಾಟಕ್ಕೆ ಇಡುವರು. ವೇದ ನಿಂದಕರ ಸಂಖ್ಯೆ ಹೆಚ್ಚಾಗುವದು. ಶೂದ್ರರು ತಾವೂ ಕೂಡ ಗ್ರಂಥ ಬರೆಯುವರು. ಜನರಿಗೆ ಸ್ವಕಪೋಲ ಕಲ್ಪಿತವಾದ ಆ ಶೂದ್ರ ಗ್ರಂಥಗಳು ಕೂಡ ಅಗ್ರಮಾನ್ಯವಾಗುವವು. ಗೋಹತ್ಯೆ, ಸಜ್ಜನಹತ್ಯೆ ನಿರಾತಂಕವಾಗಿ ನಡೆಯುವವು.

ಕಲಿಯುಗದ ಅಂತಿಮಭಾಗದಲ್ಲಿ ಎಲ್ಲ ಜಾತಿಯ ಜನರೂ ಅನ್ನಮಾರಾಟಕ್ಕೆ ನಿಲ್ಲುವರು. ಬ್ರಾಹ್ಮಣರು ವೇದಶಾಸ್ತ್ರಗಳನ್ನು ಮಾರಾಟ ಮಾಡಿದರೆ ಸ್ತ್ರೀಯರು ತಮ್ಮ ಮೈಯನ್ನೇ ಮಾರಾಟ ಮಾಡಿ ಹಣಗಳಿಸುವರು. ಪ್ರತಿಯೊಬ್ಬರ ಮನೆಯಲ್ಲಿ ಹೆಣ್ಣಿನದೇ ಪ್ರಾಧಾನ್ಯ. ಕಲಿಯುಗದ ಹೆಣ್ಣುಗಳೆಲ್ಲ ಅಪವಿತ್ರವಾದ ವಸ್ತ್ರಗಳನ್ನುಟ್ಟು ಅಧಿಕ ಭೋಜನ ಮಾಡುತ್ತ ಸ್ವಾರ್ಥಿಗಳಾಗಿ ಕರ್ಕಶ ಸ್ವಭಾವದಿಂದ ಕುತ್ಸಿತರಂತೆ ಆಗುವರು.

ಹೀಗೆ ಕಲಿಯುಗವು ಬೆಳೆ ಬೆಳೆದಂತೆ, ದೇಶದ, ತುಂಬ ಅನ್ಯಾಯ, ಅತ್ಯಾಚಾರ, ಹಿಂಸಾಚಾರ, ಪಾಪಾಚಾರಗಳು, ವಿಪರೀತವಾಗಿ ಬೆಳೆಯುವವು. ಸ್ತ್ರೀಯರೆಲ್ಲರೂ ಪರಪುರುಷರನ್ನು, ಪರಪುರುಷರೆಲ್ಲರೂ ಪರಸ್ತ್ರೀಯರನ್ನೂ ಕಾಮಿಸಿ ಸ್ವೇಚ್ಛಾಚಾರಿಗಳಾಗಿರುವರು. ಎಲ್ಲರ ಆಯುಷ್ಯವು ಕಡಿಮೆಯಾಗಿ ಮಾನವರೆಲ್ಲರೂ ಹದಿನೈದು ವರ್ಷಕ್ಕೆ ಮರಣಹೊಂದುವರು.

ರಾಜನೇ, ಯುದ್ಯಪಿ ಕಲಿಯುಗವು ಸರ್ವದೋಷಗಳಿಗೆ ತವರು. ಪಾಪಕೃತ್ಯಗಳ ಸುಗ್ಗಿ ಈ ಯುಗದಲ್ಲಿ. ಅದರ ಹೆಸರು ಹೇಳಿದರೆ ಸಜ್ಜನರಿಗೆಲ್ಲ ಮೈಯಲ್ಲಿ ನಡುಗು.

ಇಷ್ಟಾದರೂ ಮಹಾಜ್ಞಾನಿಗಳೆಲ್ಲರೂ ಕಲಿಯುಗವನ್ನೇ ಅಪೇಕ್ಷಿಸುವರು. ಆಗಲೇ ಎಲ್ಲ ಋಷಿಮುನಿಗಳ ಅವತಾರ ಈ ಭೂಲೋಕದಲ್ಲಿ. ಇದರ ಗುಟ್ಟು ಏನು? ನಿಜವಾಗಿಯೂ ಇದೊಂದು ಕೌತುಕದ ವಿಷಯ. ಇದರ ರಹಸ್ಯವನ್ನು ಹೇಳುತ್ತೇನೆ ಕೇಳು.

**ಕಲೇರ್ದೋಷನಿಧೇಶ್ಚೈವ ಶೃಣು ಚೈಕಂ ಮಹಾಗುಣಂ ।**
**ಯದಲ್ಪೇನ ತು ಕಾಲೇನ ಸಿದ್ಧಿಂ ಗಚ್ಛಂತಿ ಮಾನವಾಃ ॥**

**ತ್ರೇತಾಯಾಂ ವಾರ್ಷಿಕೋ ಧರ್ಮೋ ದ್ವಾಪರೇ ಮಾಸಿಕಃ ಸ್ಮೃತಃ ।**
**ಯಥಾ ಕ್ಲೇಶಂ ಚರನ್ ಪ್ರಾಜ್ಞಸ್ತದಹ್ನಾ ಪ್ರಾಪ್ಯತೇ ಕಲೌ ॥**

**ಯುಗತ್ರಯೇಣ ತಾವಂತಃ ಸಿದ್ಧಿಂ ಗಚ್ಛಂತಿ ಪಾರ್ಥಿವ ।**
**ಯಾವಂತಃ ಸಿದ್ಧಿಮಾಯಾಂತಿ ಕಲೌ ಹರಿಹರವ್ರತಾಃ ॥**

ಕಲಿಯು ದೋಷಗಳ ನಿಧಿಯೇ ಆದರೂ ಅವನಲ್ಲಿ ಒಂದು ದೊಡ್ಡ ಗುಣವಿದೆ. ಈ ಕಲಿಕಾಲದಲ್ಲಿ ಅತ್ಯಲ್ಪ ಪುಣ್ಯವನ್ನು ಮಾಡಿದರೂ ಅದರಿಂದಲೂ ಮಾನವನಿಗೆ ಸಿದ್ಧಿ ಪ್ರಾಪ್ತವಾಗುತ್ತದೆ. ತ್ರೇತಾಯುಗದಲ್ಲಿ ಒಂದು ವರ್ಷದವರೆಗೆ ಮಾಡಿದ ಯಜ್ಞ ಯಾಗ, ಜಪ ತಪಗಳಿಂದ ಬರುವಷ್ಟು ಫಲವು ಕಲಿಯುಗದಲ್ಲಿ ಒಂದೇ ದಿನದ ಅನುಷ್ಠಾನದಿಂದ ಬರುವದು. ದ್ವಾಪರಯುಗದಲ್ಲಿ ಬಹಳ ಕಷ್ಟಪಟ್ಟು ಒಂದು ತಿಂಗಳವರೆಗೆ ಮಾಡಿದ ಧರ್ಮಾಕರ್ಮಾನುಷ್ಠಾನ ಫಲವನ್ನು ಕಲಿಯುಗದಲ್ಲಿ ಒಂದೇ ಒಪ್ಪತ್ತಿನ ಅನುಷ್ಠಾನದಿಂದಲೇ ಪಡೆಯಬಹುದು. ಕಲಿಯುಗದಲ್ಲಿ ಶಿವನನ್ನು ವಿಷ್ಣುವನ್ನು ನಿಯಮದಿಂದ ಉಪಾಸನೆ ಮಾಡುವ ಮಾನವರು ಪಡೆಯುವ ಪುಣ್ಯಸಿದ್ಧಿಯನ್ನು ಬೇರೆಯುಗದ ಜನರು ಮೂರು ಯುಗಗಳ ತನಕ ಉಪಾಸನೆ ಮಾಡಿ ಪಡೆಯಬೇಕಾಗುವದು.

ರಾಜನೇ, ಈ ಇಪ್ಪತ್ತೆಂಟನೇ ಕಲಿಯುಗದಲ್ಲಿ ಮುಂದೆ ಆಗುವುದನ್ನು ಹೇಳುತ್ತೇನೆ ಕೇಳು - ಕಲಿಯುಗದ ಮೂರು ಸಾವಿರದ ಒಂಬೈನೂರ ವರ್ಷಗಳು ಕಳೆದ ಬಳಿಕ ವೀರಾಧಿವೀರ ಶೂದ್ರಕ ಎಂಬುವನು ರಾಜನಾಗುವನು. ಅವನು ಚರ್ಚಿತಾ ಎಂಬ ರಾಜಾಧಾನಿಯಲ್ಲಿ ಆರಾಧನೆಗೈದು ಸಿದ್ಧಿಯನ್ನು ಪಡೆಯುವನು. ಅನಂತರ ಮೂರುಸಾವಿರದ ಮೂರುನೂರಾ ಹತ್ತನೆಯ ವರ್ಷದಲ್ಲಿ ನಂದವಂಶದ ರಾಜ್ಯವು ನಡೆಯುವದು. ಚಾಣಕ್ಯ ಎಂಬ ಬ್ರಾಹ್ಮಣನು ನಂದ ವಂಶಜರನ್ನು ಸಂಹಾರ ಮಾಡಿ ಶುಕ್ರತೀರ್ಥದಲ್ಲಿ ತನ್ನ ಪಾಪಮುಕ್ತಿಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವನು. ಅನಂತರ ಒಂಬತ್ತು ದುರ್ಗಾಮಾತೆಯರಿಂದ ಸಿದ್ಧಿ ಪಡೆದ ವಿಕ್ರಮಾದಿತ್ಯನು ಭೂಮಿಯನ್ನು ಆಳುವನು.

ಇದಾದ ಬಳಿಕ ಮೂರು ಸಾವಿರದ ವರ್ಷದ ನಂತರ 'ಶಕ' ಎಂಬುವನು ರಾಜನಾಗಿ ಭೂಮಂಡಲವನ್ನು ಆಳುವನು. ಇದರ ನಂತರ ಮೂರು ಸಾವಿರದಾ ಆರುನೂರು ವರ್ಷಗಳ ನಂತರ ಮಗಧ ದೇಶದಲ್ಲಿ ಹೇಮ ಸದನ ಅಂಜನೀ ಎಂಬ ದಂಪತಿಗಳ ಗರ್ಭದಿಂದ ಸ್ವಯಂ ವಿಷ್ಣುವೇ ಬುದ್ಧ ರೂಪದಿಂದ ಜನ್ಮತಾಳುವನು. ಧರ್ಮಪಾಲನ ಮಾಡುವನು. ಮಹಾತ್ಮನಾದ ಬುದ್ಧನ ಚರಿತ್ರೆಯ ಲೀಲೆಗಳು ಭಾರತೀಯರೆಲ್ಲರಿಗೂ ಚಿರಸ್ಮರಣೀಯವೂ ಸದಾ ರಮಣೀಯವೂ ಆಗಿರುತ್ತವೆ.

ತದನಂತರ ಕಲಿಯುಗದಲ್ಲಿ ನಾಲ್ಕು ಸಾವಿರದ ನಾಲ್ಕು ನೂರು ವರ್ಷಗಳು ಉರುಳಿದ ಬಳಿಕ ಚಂದ್ರ ವಂಶದಲ್ಲಿ 'ಪ್ರಮಿತಿ' ಎಂಬ ವೀರವರೇಣ್ಯನಾದ ಮಹಾರಾಜನು ಹುಟ್ಟಿಬರುವನು. ಅವನು ಬಹುದೊಡ್ಡ ಸೇನೆಯನ್ನು ಕಟ್ಟಿಕೊಂಡು ಕೋಟಿ ಸಂಖ್ಯೆಯಲ್ಲಿ ಬೆಳೆದು ಮಲೆತು ನಿಂತ ದೇವದ್ವೇಷಿ ಧರ್ಮದ್ರೋಹಿಗಳಾದ ಮ್ಲೇಂಛರನ್ನು ಕೊಚ್ಚಿ ಹಾಕುವನು. ಬಗೆ ಬಗೆಯ ಕಲಿಯುಗದ ಪಾಖಂಡಿಗಳ ರುಂಡಗಳನ್ನು ಚೆಂಡಾಡಿ ವೇದ ಧರ್ಮವನ್ನು ಪುನಃ ಪ್ರತಿಷ್ಠಾಪನೆ ಗೈಯುವನು. ಮಹಾರಾಜ ಪ್ರಮಿತಿಯು ಗಂಗಾ ಯಮುನಾ ಸಂಗಮದ ಪವಿತ್ರ ತೀರ್ಥಕ್ಷೇತ್ರವಾದ ಪ್ರಯಾಗ ಕ್ಷೇತ್ರದಲ್ಲಿ ದೇಹತ್ಯಾಗ ಮಾಡುವನು.

ಎಷ್ಟಾದರೂ ಇದು ಕಲಿಯುಗವಲ್ಲವೇ? ಜನರೆಲ್ಲರೂ ಮತ್ತೆ ದುರ್ಬುದ್ಧಿಯಿಂದ ಅಧರ್ಮವನ್ನೇ ಆಶ್ರಯಿಸುವರು. ಸ್ವಾರ್ಥ, ಲೋಭ, ಅಧಿಕಾರದ ಲಾಲಸೆಗಾಗಿ ಕಳವು, ಕೊಲೆ, ದರೋಡೆ, ದೇಶದ ಲೂಟಿ ಮುಂತಾದವುಗಳನ್ನು ಸಾಮೂಹಿಕವಾಗಿಯೇ ನಡೆಸುವರು. ಶ್ರೌತ, ಸ್ಮಾರ್ತ, ಧರ್ಮ, ಕರ್ಮಾನುಷ್ಠಾನಗಳೆಲ್ಲವೂ ಲುಪ್ತವಾಗಿ ಹೋಗುವವು. ಬಲಿಷ್ಠರಾದ ಜನರ ದಾಳಿಯಿಂದ ಪದೇ ಪದೇ ಸ್ತ್ರೀಯರ ಮಾನಭಂಗ, ಸರ್ವಸ್ವ ಹರಣ, ಎಡೆಬಿಡದ ದಾಳಿಗಳಿಂದ ಜನರು ಊರು ಮನೆಗಳಲ್ಲಿ ಬಾಳಿ ಬದುಕುವುದೇ ಅಶಕ್ಯವಾಗುವುದು. ಜನರೆಲ್ಲರೂ ಮನೆಮಾರುಗಳನ್ನು ತೊರೆದು, ಮಡದಿ ಮಕ್ಕಳನ್ನೇ ಬಿಟ್ಟು ಬೇಸಾಯ ವ್ಯವಸಾಯಗಳನ್ನೆಲ್ಲ ತ್ಯಜಿಸುವರು. ಕಾಡು ಬೀಡುಗಳಲ್ಲಿಯೂ ಸಮುದ್ರ ತೀರಗಳಲ್ಲಿಯೂ ಪರ್ವತದ ಗುಹೆಗಳಲ್ಲಿಯೂ ಅಡಗಿಕೊಂಡು ಜನರು, ಕಂದ ಮೂಲ, ಫಲ, ಗೆಡ್ಡೆ ಗೆಣಸು ಹಸಿ ಮಾಂಸಗಳಿಂದಲೇ ಬದುಕುವ ಪ್ರಸಂಗ ಬರುವುದು. ಹರುಕು ಚಿಂದಿ, ಗಿಡದ ತೊಗಟೆ, ನಾರು, ಮೃಗಚರ್ಮಗಳನ್ನು ಉಟ್ಟುಕೊಳ್ಳಬೇಕಾಗುವದು.

ಆಗ ಶಾಲ್ಯ ಎಂಬ ಮ್ಲೇಂಛ ರಾಜನು ಅತ್ಯಂತ ಕ್ರೂರನಾಗಿ ಹೃದಯಶೂನ್ಯನಾಗಿ ಪ್ರಪಂಚದ ಎಲ್ಲ ಜನರನ್ನು ನಿರ್ದಯವಾಗಿ ಭೀಕರ ಹತ್ಯೆ ಮಾಡತೊಡಗುವನು. ಆಗ ಚರಾಚರ ಪ್ರಪಂಚಕ್ಕೆಲ್ಲ ಅಧೀಶ್ವರನಾದ ಶ್ರೀ ಹರಿಯು ಆ ಪಾಪಿಯನ್ನು ವಧಿಸಲಿಕ್ಕಾಗಿ ವಿಷ್ಣುಯಶ ಎಂಬುವವನ ಮಗನಾಗಿ ಕಲ್ಕಿ ರೂಪದಿಂದ ಹುಟ್ಟುವನು. ಶಾಲ್ಯ ಎಂಬ ಹೆಸರಿನಿಂದ ನರಹತ್ಯೆಯನ್ನು ಪ್ರಚಂಡ ಪ್ರಮಾಣದಲ್ಲಿ ಮಾಡುವ ಆ ಮ್ಲೇಂಛ ರಾಜನನ್ನು ತನ್ನ ತೀಕ್ಷ್ಣವಾದ ಖಡ್ಗದಿಂದ ಸಂಹರಿಸುವನು. ಮತ್ತು ಎಲ್ಲ ಕಡೆಗೂ ತಾನೇ ಬಿರುಗಾಳಿಯಂತೆ - ಬೀಸಿ ಅಸಂಖ್ಯ ಪಾಪಿಗಳನ್ನು ಸಂಹರಿಸಿ ವೇದ ಧರ್ಮವನ್ನು ಪುನರುದ್ಧಾರ ಮಾಡುವನು. ಹೀಗೆ ಸಜ್ಜನರ ರಕ್ಷಣೆ, ದುರ್ಜನರ ಶಿಕ್ಷೆಗಾಗಿ ಅವತಾರ ಮಾಡಿದ ಆ ಕಲ್ಕಿ ರೂಪ ಭಗವಂತನು ಧರ್ಮನೌಕೆಯನ್ನು ಸಿದ್ಧಗೊಳಿಸಿ ಅನೇಕ ಲೀಲೆಗಳನ್ನು ಮಾಡಿ ಕೊನೆಗೆ ಪರಂಧಾಮಕ್ಕೆ ತೆರಳುವನು.

ರಾಜನೇ, ಹೀಗೆ ಕಲಿಯುಗವು ಪೂರ್ತಿ ಮುಗಿದ ಬಳಿಕ ಮತ್ತೆ ಹೊಸ ಸತ್ಯಯುಗವು ಪ್ರಾರಂಭವಾಗುವುದು. ಮೊದಲನೇ ಸತ್ಯಯುಗ ಹಾಗೂ ಕೊನೆಯ

ಸತ್ಯಯುಗ ಹಾಗೂ ಈಗ ನಡೆದಿರುವ ಇಪ್ಪತ್ತೆಂಟನೆಯ ಕಲಿಯುಗವು ಉಳಿದೆಲ್ಲ ಯುಗಗಳಿಗಿಂತ ವೈಶಿಷ್ಟ್ಯಪೂರ್ಣವಾಗಿರುತ್ತವೆ. ಕಲಿಯುಗವು ಕಳೆದು ಸತ್ಯಯುಗವು ಪ್ರಾರಂಭವಾದ ಬಳಿಕ ಪುರುರಾಜನಿಂದ ಸೂರ್ಯವಂಶವು, ದೇವಾಪಿಯಿಂದ ಚಂದ್ರ ವಂಶವು ಶ್ರುತದೇವನಿಂದ ಬ್ರಾಹ್ಮಣವಂಶವು ಮತ್ತೆ ಪ್ರಾರಂಭವಾಗಿ ನಾಡಿನ ತುಂಬ ಸನಾತನ ಧರ್ಮದ ಅಭಿವೃದ್ಧಿಯನ್ನು ಸಾಧಿಸುವವು.

ಈ ನಾಲ್ಕು ಯುಗಗಳಲ್ಲಿ ಭಗವಾನ್ ಶಿವ ಹಾಗೂ ಕೇಶವರ ಆರಾಧನೆ ಹಾಗೂ ಉಪಾಸನೆ, ಧ್ಯಾನ, ಗಾನ ಮಾಡುವವರು ನಿಜವಾಗಿಯೂ ಧನ್ಯರು ಹಾಗೂ ಪುಣ್ಯವಂತರು.

## ಯಾರು ಶ್ರೇಷ್ಠರು ಈ ಮೂವರೊಳಗೆ ?

**ಕರಂಧಮ :** ಪೂಜ್ಯರೆ, ಮೋಕ್ಷವು ದೊರೆಯುವದು ಯಾರಿಂದ? ಕೆಲವರು ಶಿವನ ಆರಾಧನೆಯಿಂದ ಮೋಕ್ಷವೆಂದರೆ, ಹಲವರು ವಿಷ್ಣುವಿನ ಉಪಾಸನೆಯಿಂದಲೇ ಮೋಕ್ಷ ಎನ್ನುವರು. ಬ್ರಹ್ಮೋಪಾಸನೆಯಿಂದಲೇ ಮೋಕ್ಷ ಎಂದೂ ಹಲವರ ಅಭಿಪ್ರಾಯ. ತಮ್ಮ ದೃಷ್ಟಿಯಲ್ಲಿ ಯಾವದು ನಿಜ? ಈ ಮೂವರಲ್ಲಿ ಮುಕ್ತಿದಾತರು ಯಾರು?

**ಮಹಾಕಾಲ :** ನರೋತ್ತಮ, ಈ ತ್ರಿಮೂರ್ತಿಗಳು ಮೂವರೂ ಮಹಾ ಮಹಾ ದೇವತೆಗಳೇ. ಈ ಮೂವರ ಮಹಿಮೆಯೂ ಅಪಾರ. ತಿಳಿಯಲು ಅಶಕ್ಯ. ಅಗಾಧ. ಈ ವಿಷಯದಲ್ಲಿ ಮಹಾ ಮಹಾ ಜ್ಞಾನಿಗಳೇ ಮುಗ್ಗರಿಸಿದ್ದಾರೆ. ನನ್ನಂಥ ಬಡಪಾಯಿಯ ಪಾಡೇನು! ಪೂರ್ವಕಾಲದಲ್ಲಿ ನೈಮಿಷಾರಣ್ಯದಲ್ಲಿ ನೆಲಸಿರುವ ಮುನಿಗಳನ್ನೂ ಕೊರೆಯಿತಂತೆ ಈ ಸಂದೇಹದ ಕೀಟ. ಈ ಮೂರರಲ್ಲಿ ಯಾರು ಮಿಗಿಲು? ಈ ಶೇಷಪ್ರಶ್ನೆ ಬಗೆಹರಿಯಲೇ ಇಲ್ಲ. ಆಗ ಅವರೆಲ್ಲರೂ ನೇರವಾಗಿ ಸತ್ಯಲೋಕಕ್ಕೆ ಹೋದರು. ಭಗವಾನ್ ಬ್ರಹ್ಮದೇವರನ್ನೇ ಕೇಳಿದರು. ಬ್ರಹ್ಮ ವಿಷ್ಣು ಮಹೇಶ್ವರ ಈ ಮೂವರಲ್ಲಿ ಶ್ರೇಷ್ಠರು ಯಾರು? ಋಷಿಗಳ ಈ ಪ್ರಶ್ನೆಗೆ ಬ್ರಹ್ಮದೇವರ ಉತ್ತರ ಸ್ಪಷ್ಟವಾಗಿತ್ತು, ನಿಷ್ಪಕ್ಷವೂ ಆಗಿತ್ತು.

**ಅನಂತಾಯ ನಮಸ್ತಸ್ಮೈ ಯಸ್ಯಾಂತೋ ನೋಪಲಭ್ಯತೇ ।**
**ಮಹೇಶಾಯ ಚ ದ್ವಾವೇತೌ ಮಯಿ ಸ್ತಾಂ ಸುಮುಖೌ ಸದಾ ॥**

ಅನಂತನಾಮಕನಾದ ಆ ವಿಷ್ಣುವಿಗೆ ನಮಸ್ಕಾರ. ಆ ಭಗವಂತನಿಗೆ ಯಾವುದೇ ತರಹದ ನಾಶವು ಇರುವುದಿಲ್ಲ. ಅದರಂತೆ ಮಹಾಪುರುಷನಾದ ಪರಮೇಶ್ವರನಿಗೂ ನನ್ನ ನಮಸ್ಕಾರ. ಈ ಇಬ್ಬರೂ ದೇವರೂ ನನ್ನ ಮೇಲೆ ಸದಾ ಕಾಲ ಪ್ರಸನ್ನರಾಗಿ ಇರಲಿ.

ಈ ಶ್ಲೋಕವನ್ನು ಕೇಳಿಕೊಂಡು ಋಷಿ ಮುನಿಗಳು ಈ ಶಿವ ಹಾಗೂ ಕೇಶವರು ದೇವತಾಗಣದಲ್ಲಿಯೇ ಸರ್ವಶ್ರೇಷ್ಠರು ಎಂದು ನಿರ್ಣಯಿಸಿಕೊಂಡರು. ಅವರೆಲ್ಲರೂ ಹಾಲುಕಡಲಿನಲ್ಲಿ ಮಲಗಿದ ಭಗವಾನ್ ವಿಷ್ಣುವಿನ ಬಳಿಹೋಗಿ ಇದೇ ಪ್ರಶ್ನೆಯನ್ನು ಅವನ ಮುಂದೆ ಇಟ್ಟರು. ತ್ರಿಮೂರ್ತಿಗಳಲ್ಲಿ ಶ್ರೇಷ್ಠರು ಯಾರು ? ಆ ವಿಷ್ಣು ಭಗವಂತನು ಅವರಿಗೆ ಉತ್ತರ ಹೇಳಿದ್ದು ಹೀಗೆ.

ತದನಂತರ ಕಲಿಯುಗದಲ್ಲಿ ನಾಲ್ಕು ಸಾವಿರದ ನಾಲ್ಕು ನೂರು ವರ್ಷಗಳು ಉರುಳಿದ ಬಳಿಕ ಚಂದ್ರ ವಂಶದಲ್ಲಿ 'ಪ್ರಮಿತಿ' ಎಂಬ ವೀರವರೇಣ್ಯನಾದ ಮಹಾರಾಜನು ಹುಟ್ಟಿಬರುವನು. ಅವನು ಬಹುದೊಡ್ಡ ಸೇನೆಯನ್ನು ಕಟ್ಟಿಕೊಂಡು ಕೋಟಿ ಸಂಖ್ಯೆಯಲ್ಲಿ ಬೆಳೆದು ಮಲೆತು ನಿಂತ ದೇವದ್ವೇಷಿ ಧರ್ಮದ್ರೋಹಿಗಳಾದ ಮ್ಲೇಂಛರನ್ನು ಕೊಚ್ಚಿ ಹಾಕುವನು. ಬಗೆ ಬಗೆಯ ಕಲಿಯುಗದ ಪಾಖಂಡಿಗಳ ರುಂಡಗಳನ್ನು ಚಂಡಾಡಿ ವೇದ ಧರ್ಮವನ್ನು ಪುನಃ ಪ್ರತಿಷ್ಠಾಪನೆ ಗೈಯುವನು. ಮಹಾರಾಜ ಪ್ರಮಿತಿಯು ಗಂಗಾ ಯಮುನಾ ಸಂಗಮದ ಪವಿತ್ರ ತೀರ್ಥಕ್ಷೇತ್ರವಾದ ಪ್ರಯಾಗ ಕ್ಷೇತ್ರದಲ್ಲಿ ದೇಹತ್ಯಾಗ ಮಾಡುವನು.

ಎಷ್ಟಾದರೂ ಇದು ಕಲಿಯುಗವಲ್ಲವೇ? ಜನರೆಲ್ಲರೂ ಮತ್ತೆ ದುರ್ಬುದ್ಧಿಯಿಂದ ಅಧರ್ಮವನ್ನೇ ಆಶ್ರಯಿಸುವರು. ಸ್ವಾರ್ಥ, ಲೋಭ, ಅಧಿಕಾರದ ಲಾಲಸೆಗಾಗಿ ಕಳವು, ಕೊಲೆ, ದರೋಡೆ, ದೇಶದ ಲೂಟಿ ಮುಂತಾದವುಗಳನ್ನು ಸಾಮೂಹಿಕವಾಗಿಯೇ ನಡೆಸುವರು. ಶ್ರೌತ, ಸ್ಮಾರ್ತ, ಧರ್ಮ, ಕರ್ಮಾನುಷ್ಠಾನಗಳೆಲ್ಲವೂ ಲುಪ್ತವಾಗಿ ಹೋಗುವವು. ಬಲಿಷ್ಠರಾದ ಜನರ ದಾಳಿಯಿಂದ ಪದೇ ಪದೇ ಸ್ತ್ರೀಯರ ಮಾನಭಂಗ, ಸರ್ವಸ್ವ ಹರಣ, ಎಡೆಬಿಡದ ದಾಳಿಗಳಿಂದ ಜನರು ಊರು ಮನೆಗಳಲ್ಲಿ ಬಾಳಿ ಬದುಕುವುದೇ ಅಶಕ್ಯವಾಗುವುದು. ಜನರೆಲ್ಲರೂ ಮನೆಮಾರುಗಳನ್ನು ತೊರೆದು, ಮಡದಿ ಮಕ್ಕಳನ್ನೇ ಬಿಟ್ಟು ಬೇಸಾಯ ವ್ಯವಸಾಯಗಳನ್ನೆಲ್ಲ ತ್ಯಜಿಸುವರು. ಕಾಡು ಬೀಡುಗಳಲ್ಲಿಯೂ ಸಮುದ್ರ ತೀರಗಳಲ್ಲಿಯೂ ಪರ್ವತದ ಗುಹೆಗಳಲ್ಲಿಯೂ ಅಡಗಿಕೊಂಡು ಜನರು, ಕಂದ ಮೂಲ, ಫಲ, ಗೆಡ್ಡೆ ಗೆಣಸು ಹಸಿ ಮಾಂಸಗಳಿಂದಲೇ ಬದುಕುವ ಪ್ರಸಂಗ ಬರುವುದು. ಹರುಕು ಚಿಂದಿ, ಗಿಡದ ತೊಗಟೆ, ನಾರು, ಮೃಗಚರ್ಮಗಳನ್ನು ಉಟ್ಟುಕೊಳ್ಳಬೇಕಾಗುವದು.

ಆಗ ಶಾಲ್ಯ ಎಂಬ ಮ್ಲೇಂಛ ರಾಜನು ಅತ್ಯಂತ ಕ್ರೂರನಾಗಿ ಹೃದಯಶೂನ್ಯನಾಗಿ ಪ್ರಪಂಚದ ಎಲ್ಲ ಜನರನ್ನು ನಿರ್ದಯವಾಗಿ ಭೀಕರ ಹತ್ಯೆ ಮಾಡತೊಡಗುವನು. ಆಗ ಚರಾಚರ ಪ್ರಪಂಚಕ್ಕೆಲ್ಲ ಅಧೀಶ್ವರನಾದ ಶ್ರೀ ಹರಿಯು ಆ ಪಾಪಿಯನ್ನು ವಧಿಸಲಿಕ್ಕಾಗಿ ವಿಷ್ಣುಯಶ ಎಂಬುವವನ ಮಗನಾಗಿ ಕಲ್ಕಿ ರೂಪದಿಂದ ಹುಟ್ಟುವನು. ಶಾಲ್ಯ ಎಂಬ ಹೆಸರಿನಿಂದ ನರಹತ್ಯೆಯನ್ನು ಪ್ರಚಂಡ ಪ್ರಮಾಣದಲ್ಲಿ ಮಾಡುವ ಆ ಮ್ಲೇಂಛ ರಾಜನನ್ನು ತನ್ನ ತೀಕ್ಷ್ಣವಾದ ಖಡ್ಗದಿಂದ ಸಂಹರಿಸುವನು. ಮತ್ತು ಎಲ್ಲ ಕಡೆಗೂ ತಾನೇ ಬಿರುಗಾಳಿಯಂತೆ - ಬೀಸಿ ಅಸಂಖ್ಯ ಪಾಪಿಗಳನ್ನು ಸಂಹರಿಸಿ ವೇದ ಧರ್ಮವನ್ನು ಪುನರುದ್ಧಾರ ಮಾಡುವನು. ಹೀಗೆ ಸಜ್ಜನರ ರಕ್ಷಣೆ, ದುರ್ಜನರ ಶಿಕ್ಷೆಗಾಗಿ ಅವತಾರ ಮಾಡಿದ ಆ ಕಲ್ಕಿ ರೂಪ ಭಗವಂತನು ಧರ್ಮನೌಕೆಯನ್ನು ಸಿದ್ಧಗೊಳಿಸಿ ಅನೇಕ ಲೀಲೆಗಳನ್ನು ಮಾಡಿ ಕೊನೆಗೆ ಪರಂಧಾಮಕ್ಕೆ ತೆರಳುವನು.

ರಾಜನೇ, ಹೀಗೆ ಕಲಿಯುಗವು ಪೂರ್ತಿ ಮುಗಿದ ಬಳಿಕ ಮತ್ತೆ ಹೊಸ ಸತ್ಯಯುಗವು ಪ್ರಾರಂಭವಾಗುವುದು. ಮೊದಲನೇ ಸತ್ಯಯುಗ ಹಾಗೂ ಕೊನೆಯ

ಸತ್ಯಯುಗ ಹಾಗೂ ಈಗ ನಡೆದಿರುವ ಇಪ್ಪತ್ತೆಂಟನೆಯ ಕಲಿಯುಗವು ಉಳಿದೆಲ್ಲ ಯುಗಗಳಿಗಿಂತ ವೈಶಿಷ್ಟ್ಯಪೂರ್ಣವಾಗಿರುತ್ತವೆ. ಕಲಿಯುಗವು ಕಳೆದು ಸತ್ಯಯುಗವು ಪ್ರಾರಂಭವಾದ ಬಳಿಕ ಪುರುರಾಜನಿಂದ ಸೂರ್ಯವಂಶವು, ದೇವಾಪಿಯಿಂದ ಚಂದ್ರ ವಂಶವು ಶ್ರುತದೇವನಿಂದ ಬ್ರಾಹ್ಮಣವಂಶವು ಮತ್ತೆ ಪ್ರಾರಂಭವಾಗಿ ನಾಡಿನ ತುಂಬ ಸನಾತನ ಧರ್ಮದ ಅಭಿವೃದ್ಧಿಯನ್ನು ಸಾಧಿಸುವವು.

ಈ ನಾಲ್ಕು ಯುಗಗಳಲ್ಲಿ ಭಗವಾನ್ ಶಿವ ಹಾಗೂ ಕೇಶವರ ಆರಾಧನೆ ಹಾಗೂ ಉಪಾಸನೆ, ಧ್ಯಾನ, ಗಾನ ಮಾಡುವವರು ನಿಜವಾಗಿಯೂ ಧನ್ಯರು ಹಾಗೂ ಪುಣ್ಯವಂತರು.

## ಯಾರು ಶ್ರೇಷ್ಠರು ಈ ಮೂವರೊಳಗೆ ?

**ಕರಂಧಮ :** ಪೂಜ್ಯರೆ, ಮೋಕ್ಷವು ದೊರೆಯುವದು ಯಾರಿಂದ? ಕೆಲವರು ಶಿವನ ಆರಾಧನೆಯಿಂದ ಮೋಕ್ಷವೆಂದರೆ, ಹಲವರು ವಿಷ್ಣುವಿನ ಉಪಾಸನೆಯಿಂದಲೇ ಮೋಕ್ಷ ಎನ್ನುವರು. ಬ್ರಹ್ಮೋಪಾಸನೆಯಿಂದಲೇ ಮೋಕ್ಷ ಎಂದೂ ಹಲವರ ಅಭಿಪ್ರಾಯ. ತಮ್ಮ ದೃಷ್ಟಿಯಲ್ಲಿ ಯಾವದು ನಿಜ? ಈ ಮೂವರಲ್ಲಿ ಮುಕ್ತಿದಾತರು ಯಾರು?

**ಮಹಾಕಾಲ :** ನರೋತ್ತಮ, ಈ ತ್ರಿಮೂರ್ತಿಗಳು ಮೂವರೂ ಮಹಾ ಮಹಾ ದೇವತೆಗಳೇ. ಈ ಮೂವರ ಮಹಿಮೆಯೂ ಅಪಾರ. ತಿಳಿಯಲು ಅಶಕ್ಯ. ಅಗಾಧ. ಈ ವಿಷಯದಲ್ಲಿ ಮಹಾ ಮಹಾ ಜ್ಞಾನಿಗಳೇ ಮುಗ್ಗರಿಸಿದ್ದಾರೆ. ನನ್ನಂಥ ಬಡಪಾಯಿಯ ಪಾಡೇನು! ಪೂರ್ವಕಾಲದಲ್ಲಿ ನೈಮಿಷಾರಣ್ಯದಲ್ಲಿ ನೆಲಸಿರುವ ಮುನಿಗಳನ್ನೂ ಕೊರೆಯಿತಂತೆ ಈ ಸಂದೇಹದ ಕೀಟ. ಈ ಮೂರರಲ್ಲಿ ಯಾರು ಮಿಗಿಲು? ಈ ಶೇಷಪ್ರಶ್ನೆ ಬಗೆಹರಿಯಲೇ ಇಲ್ಲ. ಆಗ ಅವರೆಲ್ಲರೂ ನೇರವಾಗಿ ಸತ್ಯಲೋಕಕ್ಕೆ ಹೋದರು. ಭಗವಾನ್ ಬ್ರಹ್ಮದೇವರನ್ನೇ ಕೇಳಿದರು. ಬ್ರಹ್ಮ ವಿಷ್ಣು ಮಹೇಶ್ವರ ಈ ಮೂವರಲ್ಲಿ ಶ್ರೇಷ್ಠರು ಯಾರು? ಋಷಿಗಳ ಈ ಪ್ರಶ್ನೆಗೆ ಬ್ರಹ್ಮದೇವರ ಉತ್ತರ ಸ್ಪಷ್ಟವಾಗಿತ್ತು. ನಿಷ್ಪಷ್ಟವೂ ಆಗಿತ್ತು.

**ಅನಂತಾಯ ನಮಸ್ತಸ್ಮೈ ಯಸ್ಯಾಂತೋ ನೋಪಲಭ್ಯತೇ ।**
**ಮಹೇಶಾಯ ಚ ದ್ವಾವೇತೌ ಮಯಿ ಸ್ತಾಂ ಸುಮುಖೌ ಸದಾ ॥**

ಅನಂತನಾಮಕನಾದ ಆ ವಿಷ್ಣುವಿಗೆ ನಮಸ್ಕಾರ. ಆ ಭಗವಂತನಿಗೆ ಯಾವುದೇ ತರಹದ ನಾಶವು ಇರುವುದಿಲ್ಲ. ಅದರಂತೆ ಮಹಾಪುರುಷನಾದ ಪರಮೇಶ್ವರನಿಗೂ ನನ್ನ ನಮಸ್ಕಾರ. ಈ ಇಬ್ಬರೂ ದೇವರೂ ನನ್ನ ಮೇಲೆ ಸದಾ ಕಾಲ ಪ್ರಸನ್ನರಾಗಿ ಇರಲಿ.

ಈ ಶ್ಲೋಕವನ್ನು ಕೇಳಿಕೊಂಡು ಋಷಿ ಮುನಿಗಳು ಈ ಶಿವ ಹಾಗೂ ಕೇಶವರು ದೇವತಾಗಣದಲ್ಲಿಯೇ ಸರ್ವಶ್ರೇಷ್ಠರು ಎಂದು ನಿರ್ಣಯಿಸಿಕೊಂಡರು. ಅವರೆಲ್ಲರೂ ಹಾಲುಕಡಲಿನಲ್ಲಿ ಮಲಗಿದ ಭಗವಾನ್ ವಿಷ್ಣುವಿನ ಬಳಿಹೋಗಿ ಇದೇ ಪ್ರಶ್ನೆಯನ್ನು ಅವನ ಮುಂದೆ ಇಟ್ಟರು. ತ್ರಿಮೂರ್ತಿಗಳಲ್ಲಿ ಶ್ರೇಷ್ಠರು ಯಾರು ? ಆ ವಿಷ್ಣು ಭಗವಂತನು ಅವರಿಗೆ ಉತ್ತರ ಹೇಳಿದ್ದು ಹೀಗೆ.

**ಬ್ರಹ್ಮಾಣಂ ಸರ್ವಭೂತೇಷು ಪರಮಂ ಬ್ರಹ್ಮರೂಪಿಣಮ್ ।**
**ಸದಾಶಿವಂ ಚ ವಂದೇ ತೌ ಭವೇತಾಂ ಮಂಗಲಾಯ ಮೇ ॥**

ಎಲ್ಲ ಪ್ರಾಣಿಗಳಲ್ಲಿಯೂ ಶ್ರೇಷ್ಠನಾದ ಪರಬ್ರಹ್ಮರೂಪಿಯಾದ, ಈ ಬ್ರಹ್ಮನಲ್ಲಿ ಬ್ರಹ್ಮರೂಪಿಯಾಗಿರುವ ಆ ಬ್ರಹ್ಮದೇವನನ್ನೂ ಸದಾಶಿವನನ್ನೂ ನಾನು ನಮಸ್ಕರಿಸುತ್ತೇನೆ. ಆ ಇಬ್ಬರೂ ದೇವತೆಗಳು ನನಗೆ ಮಂಗಳವನ್ನು ಉಂಟು ಮಾಡಲಿ.

ವಿಷ್ಣು ಉಚ್ಚರಿಸಿದ ಈ ಪದ್ಯವನ್ನು ಕೇಳಿ ಅತ್ಯಾಶ್ಚರ್ಯವಾಯಿತು ಆ ಋಷಿ ವೃಂದಕ್ಕೆ. ಅವರೆಲ್ಲರೂ ವೈಕುಂಠ ಲೋಕದಿಂದ ಕೂಡಲೇ ಮರಳಿದರು. ಕೈಲಾಸ ಪರ್ವತಕ್ಕೆ ನೇರವಾಗಿ ನಡೆದರು. ಪಾರ್ವತಿಯೊಂದಿಗೆ ಪರಮೇಶ್ವರನು ಸರಸಾಲಾಪಗೈಯುತ್ತ ಕುಳಿತಿದ್ದ. ಆ ಹೈಮವತಿಯ ಕಿವಿಯಲ್ಲಿ ಯಾವುದೇ ಒಂದು ರಹಸ್ಯ ವಿಷಯವನ್ನು ಬಿತ್ತರಿಸುತ್ತಿದ್ದ. ಋಷಿ ಮುನಿಗಳು ಕಿವಿಗೊಟ್ಟು ಆಲಿಸಿದರು. ಪದ್ಯವು ಋಷಿ ಮುನಿಗಳ ಪ್ರಶ್ನೆಗೆ ಸಮಂಜಸ ಉತ್ತರವಾಗಿತ್ತು.

**ಏಕಾದಶ್ಯಾಂ ಪ್ರನೃತ್ಯಾಮಿ ಜಾಗರೇ ವಿಷ್ಣುಸದ್ಮನಿ ।**
**ಸದಾ ತಪಸ್ಯಾಂ ಚರಾಮಿ ಪ್ರೀತ್ಯರ್ಥಂ ಹರಿವೇಧಸೋಃ ॥**

ಬ್ರಹ್ಮ, ವಿಷ್ಣು ಇವರಿಬ್ಬರನ್ನೂ ಪ್ರೀತಿಗೊಳಿಸುವುದೇ ನನ್ನ ಉದ್ದೇಶ. ಅವರಿಬ್ಬರನ್ನೂ ಮೆಚ್ಚಿಸಲಿಕ್ಕಾಗಿಯೇ ನಾನು ತಪಸ್ಸನ್ನು ಮಾಡುವುದು. ಏಕಾದಶಿ ದಿನದಂದು ಹರಿಮಂದಿರಕ್ಕೆ ಹೋಗಿ ಆ ಶ್ರೀ ಹರಿಯ ಸಂತೋಷಕ್ಕಾಗಿ ಮತ್ತು ಏಕಾದಶೀ ವ್ರತದ ಪೂರ್ತಿಗಾಗಿ ಬೆಳಗಿನತನಕ ಜಾಗರ ಮಾಡಿ ಆ ವಿಷ್ಣುವಿನ ಉದ್ದೇಶದಿಂದ ನೃತ್ಯ ಸೇವೆಯನ್ನು ಕೂಡ ನಾನು ಮಾಡುತ್ತೇನೆ ಹರಿಮಂದಿರದಲ್ಲಿ.

ಇದನ್ನು ಕೇಳಿ ಆ ಮುಜನಿಗಳೆಲ್ಲರೂ ಮರಳಿ ಮನೆಗೆ ಬಂದರು. ತಮ್ಮ ನೈಮಿಷಾರಣ್ಯದ ಪುಣ್ಯಾಶ್ರಮದಲ್ಲಿ ಕುಳಿತುಕೊಂಡು ತಮ್ಮ ತಮ್ಮಲ್ಲಿ ಆಲೋಚನೆ ಗೈದರು: ಹರಿಹರ ಬ್ರಹ್ಮಾದಿ ಈ ತ್ರಿಮೂರ್ತಿಗಳೇ ಇಷ್ಟು ಸೌಜನ್ಯದಿಂದ ಒಬ್ಬರಿಗೊಬ್ಬರು ಮಾನ ಕೊಟ್ಟು ಮಾತನಾಡುವಾಗ ಆವರಿಂದ ಉತ್ಪನ್ನರಾದ ನಾವು ಅವರಲ್ಲಿಯ ಶ್ರೇಷ್ಠ ಕನಿಷ್ಠ ಭಾವವನ್ನು ಹೇಗೆ ನಿರ್ಧರಿಸಬಲ್ಲೆವು ! ಈ ತ್ರಿಮೂರ್ತಿಗಳಲ್ಲಿ ಒಬ್ಬನು ಶ್ರೇಷ್ಠ ಇನ್ನೊಬ್ಬ ಕನಿಷ್ಠ ಎಂದು ಹೇಳುವದು ಸರ್ವಥಾ ಮೂರ್ಖತನ. ಅಸತ್ಯ. ನರಕದ ದಾರಿ. ಆದುದರಿಂದ ಯಾರಿಗೆ ಯಾವ ದೇವರ ಮೇಲೆ ಶ್ರದ್ಧೆ ಉಂಟೋ ಅವರು ಅವನನ್ನು ಉಪಾಸನೆ ಮಾಡಿ ಮೋಕ್ಷಕ್ಕೆ ಹೋಗಬೇಕು.

**ತಸ್ಮಾದ್ಯಸ್ಯ ಮನೋರಾಗೋ ಯಸ್ಮಿನ್ ದೇವೇ ಭವೇತ್ ಸ್ಫುಟಮ್ ।**
**ಸ ತಂ ಭಜೇದ್ವಿಪಾಪಃ ಸ್ಯಾನ್ಮಮೇದಂ ಮತಮುತ್ತಮಮ್ ॥**

ತಮ್ಮ ಮನಸ್ಸಿನಲ್ಲಿ ಸರ್ವೋತ್ತಮ ದೇವ ಎಂದು ಭಾವಿಸಿದ ದೇವರನ್ನೇ ಅತ್ಯಂತ ಭಕ್ತಿಯಿಂದ ಪೂಜಿಸಬೇಕು. ಆದುದರಿಂದ ಅವನ ಪಾಪಗಳೆಲ್ಲವೂ ತೊಳೆದು ಹೋಗುವವು. ಅದರಿಂದಲೇ ಅವನ ಉದ್ಧಾರ. ಇದೇ ಶ್ರೇಷ್ಠವಾದ ಮತ ನನ್ನ ಮತವು ಕೂಡ ಇದೇ ಆಗಿದೆ.

**ಕರಂಧಮ :** ದ್ವಿಜಶ್ರೇಷ್ಠ, ಮನುಷ್ಯನ ಮನಸ್ಸು ದೇವತೆಗಳಲ್ಲಿ ಅನುರಕ್ತ ಆಗುವುದಿಲ್ಲ. ಧರ್ಮದಲ್ಲಿ ಪ್ರಸಕ್ತವೂ ಆಗುವುದಿಲ್ಲ. ಇದಕ್ಕೆಲ್ಲ ಯಾವ ಪಾಪವು ಪ್ರತಿಬಂಧಕವಾಗಿದೆ ?

**ಮಹಾಕಾಲ :** ರಾಜನೇ, ಚಿತ್ತವೃತ್ತಿಯ ಭೇದದಿಂದ ಅಧರ್ಮ ಕೂಡ ಭಿನ್ನ ಭಿನ್ನವಾಗಿದೆ. ಸ್ಥೂಲ, ಸೂಕ್ಷ್ಮ, ಅತ್ಯಂತ ಸೂಕ್ಷ್ಮ ಎಂದು ಅಧರ್ಮವು ತ್ರಿವಿಧ ಬಗೆಯದಾಗಿದೆ. ಇದರಲ್ಲಿ ಸ್ಥೂಲ ಪಾಪಗಳಿಂದ ಅನೇಕ ನರಕಗಳ ಪ್ರಾಪ್ತಿ ಆಗುತ್ತದೆ.

## ಯಾವ ಪಾಪದಿಂದ ಎಂಥ ನರಕ ?

ಪಾಪಾಚರಣೆಯು ಮುಖ್ಯವಾಗಿ ಮಾತು ಮನುಸ್ಸು ಮತ್ತು ತಾನು ಕೈಕೊಂಡ ಕರ್ಮಗಳಿಂದ ಆಗುತ್ತದೆ. ಇದರಲ್ಲಿ ಮಾನಸಿಕ ಪಾಪಗಳಲ್ಲಿ ಪರಸ್ತ್ರೀ ಚಿಂತನ. ಪರದ್ರವ್ಯವನ್ನು ಅಪಹರಿಸುವದು ಅಥವಾ ಅಪಹರಿಸುವ ಸಂಕಲ್ಪ. ಮನಸ್ಸಿನಿಂದ ಇನ್ನೊಬ್ಬರಿಗೆ ಅನಿಷ್ಟವನ್ನು ಬಯಸುವದು ಮತ್ತು ದುಷ್ಕಾರ್ಯವನ್ನು ಮಾಡಲು ಸಂಕಲ್ಪ ಮಾಡುವದು ಇವು ಮನಸ್ಸಿನ ಪಾಪ ಎಂದು ಕರೆಯಲ್ಪಡುವವು. ವಾಣಿಯ ಪಾಪ ಇದು ನಾಲ್ಕು ವಿಧವಾಗಿದೆ. ಅಸಂಗತವಾಗಿ ಮಾತನಾಡುವದು, ಸುಳ್ಳು ಹೇಳುವದು, ಅಪ್ರಿಯ ಕಠೋರ ನುಡಿಗಳನ್ನು ಆಡುವದು, ಇನ್ನೊಬ್ಬರ ನಿಂದೆ ಮತ್ತು ಚಾಡಿ ಹೇಳುವದು. ಇವು ನಾಲ್ಕು ವಿಧವಾಗಿದೆ: ನಿಷಿದ್ಧವಾದ ಅಭಕ್ಷ್ಯ, ಭಕ್ಷಣ, ಹಿಂಸೆ, ವ್ಯರ್ಥ ಭೋಗಾನುಭವ, ಪರದ್ರವ್ಯದ ಅಪಹಾರ. ಈ ರೀತಿಯಾಗಿ ಮನಸ್ಸು ಮಾತು ಮತ್ತು ದೇಹದಿಂದ ಆಗಬಹುದಾದ ಹನ್ನೆರಡು ವಿಧವಾದ ಪಾಪಕರ್ಮವನ್ನು ಹಿಂದೆ ಹೇಳಲಾಗಿದೆ. ಆದರೆ ಇನ್ನೂ ಕೆಲವು ಪ್ರಭೇದಗಳನ್ನು ಎಲ್ಲರಿಗೂ ಉಪಯುಕ್ತವಾದುದರಿಂದ ಇಲ್ಲಿ ತಿಳಿಸಲಾಗುವುದು. ಸಂಸಾರ ಸಮುದ್ರದಿಂದ ಪಾರುಗಾಣಿಸುವ ಮಹಾದೇವರನ್ನು ದ್ವೇಷಿಸುವವರು ನರಕದಲ್ಲಿ ಅಗ್ನಿಕುಂಡದಲ್ಲಿ ಬೇಯುತ್ತಾರೆ. ಒಟ್ಟು ಆರು ಮಹಾಪಾಪಗಳು ಇರುತ್ತವೆ.

(1) ದೇವಾಲಯದಲ್ಲಿ ಶಿವನ ಮೂರ್ತಿಗಾಗಲಿ ಶಿವನ ಲಿಂಗಕ್ಕಾಗಲಿ ನಮಸ್ಕಾರ ಮಾಡದಿರುವದು.

(2) ಕಂಡ ಬಳಿಕ ಕೈಮುಗಿದು ಶಿವನ ಸ್ತೋತ್ರ ಮಾಡದಿರುವದು.

(3) ದೇವರ ಮೂರ್ತಿಲಿಂಗಗಳ ಸಮ್ಮುಖದಲ್ಲಿ ದೇವಾಲಯದಲ್ಲಿಯೇ ಆಗಲೀ, ತಮ್ಮ ಮನೆಯ ದೇವರ ಕೋಣೆಯಲ್ಲಾಗಲೀ ಸ್ತ್ರೀಯೊಂದಿಗೆ ಶೃಂಗಾರ ಚೇಷ್ಟೆ, ಕ್ರೀಡೆ, ಕ್ರೀಡಾವಿಲಾಸಗಳನ್ನು ಮಾಡುವದು.

(4) ಹರಿಹರ ಹಾಗೂ ಗುರುಗಳ ಸನ್ನಿಧಾನದಲ್ಲಿ ಅವರ ಪೂಜೆಯನ್ನು ಮತ್ತು ಸ್ತೋತ್ರವನ್ನು ನಮಸ್ಕಾರಾದಿ ಶಿಷ್ಟಾಚಾರಗಳನ್ನು ಪಾಲಿಸದೇ ಪಾಲಿಸುವವರನ್ನು ನಿಂದಿಸುವದು.

(5) ಶಿವ ಶಾಸ್ತ್ರಗಳಲ್ಲಿ ಹೇಳಿದ ವಿಧಿ ವಿಧಾನ ವಿಚಾರಗಳನ್ನು ಮನ್ನಿಸದೇ ಇರುವದು.

(6) ಶಿವಭಕ್ತರನ್ನು ಮನ್ನಿಸದೇ ನಿಂದಿಸುತ್ತ ಇರುವದು.

ಯಾವ ಪಾಪಿಯು ತನ್ನ ಗುರುವನ್ನು, ಕಷ್ಟದಲ್ಲಿ ಇದ್ದ ವ್ಯಕ್ತಿಯನ್ನೂ, ಮನೆಯೊಡೆಯ ದೇಶಾಂತರಕ್ಕೆ ಹೋದದ್ದರಿಂದ ಅನಾಥರಂತಾದ ಅವನ ಬಡಕುಟುಂಬದ ದೀನ ಜನರನ್ನೂ, ಶತ್ರುಗಳಿಂದ ಅವಮಾನಿತನಾದ ಮನುಷ್ಯನನ್ನೂ ಪೂರ್ಣ ಕೈ ಬಿಟ್ಟು ಬಿಡುವನೋ ಅವನು ಗುರುನಿಂದೆಗೆ ಸಮಾನವಾದ ಪಾಪವನ್ನು ಮಾಡಿದಂತೆ ಎಂದು ತಿಳಿಯಬೇಕು. ಅಬಲೆಯಾದ ಸ್ವಸ್ತ್ರೀ ಅಥವಾ ಪರಸ್ತ್ರೀ ಯಾರನ್ನಾದರೂ ಅಪರಾಧವಿಲ್ಲದೆ ನಿಂದಿಸಿ ಅವಮಾನಿಸುವವನೂ ಮತ್ತು ತನ್ನನ್ನೇ ನಂಬಿದ ಮಕ್ಕಳು ಮಿತ್ರರನ್ನು ಧಿಕ್ಕರಿಸಿ ದೂರೀಕರಿಸುವವನೂ ಗುರುನಿಂದೆಯಂಥ ಮಹಾಪಾಪಕ್ಕೆ ಗುರಿಯಾಗುತ್ತಾನೆ.

## ಪಂಚಮಹಾ ಪಾತಕಗಳು

**ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।**
**ಮಹಾಪಾತಕಿನಸ್ತ್ವೇತೇ ತತ್ಸಂಸರ್ಗೀ ಚ ಪಂಚಮಃ ॥**

**ಬ್ರಹ್ಮಹತ್ಯೆ :** ಬ್ರಹ್ಮವನ್ನು ತಿಳಿದ ಜ್ಞಾನಿಯನ್ನು ಕೊಲ್ಲುವದು, ಸುರಾಪಾನ, ಸೆರೆ ಸೇಂದಿ ಮುಂತಾದವುಗಳನ್ನು ಕುಡಿಯುವದು, ಸ್ತೇಯೀಃ ಅಂದರೆ ಬೆಳ್ಳಿ ಬಂಗಾರ ಮುಂತಾದ ಬೆಲೆಯುಳ್ಳ ವಸ್ತುಗಳನ್ನು ಕದಿಯುವದು.

**ಗುರುತಲ್ಪಗ :** ಗುರುಹಿರಿಯರೇ ಮುಂತಾದ ಪೂಜ್ಯ ವ್ಯಕ್ತಿಗಳ ಮಡದಿಯರ ಜೊತೆಗೆ ವಿಹರಿಸುವದು ಇವು ನಾಲ್ಕು ಮಹಾ ಪಾತಕಗಳು. ಈ ಪಾತಕ ಮಾಡಿದವರು ಮಹಾಪಾತಕಿಗಳು. ಇಂಥ ಪಾಪಿಗಳ ಸಂಪರ್ಕ ಮಾಡುವುದು ಅವರ ಸಹವಾಸ ಮಾಡುವುದು ಐದನೆಯ ಮಹಾಪಾಪ ಎನಿಸುವದು. ಇವು ಐದು ಪಂಚ ಮಹಾಪಾತಕ ಗಳು ಎಂದು ಶಾಸ್ತ್ರಕಾರರು ಹೇಳಿದ್ದಾರೆ. ಇವು ಪಂಚಮಹಾಪಾತಕಗಳು ಎಂದು ನೋಡಲಿಕ್ಕೆ ಐದೇ ಕಂಡರೂ ಈ ಪಾಪಗಳ ವ್ಯಾಪ್ತಿ ಇನ್ನೂ ವಿಸ್ತಾರವಾಗಿದೆ. ಪ್ರತ್ಯಕ್ಷವಾಗಿ ಕೈಯಿಂದ ಬ್ರಾಹ್ಮಣರನ್ನು ಕೊಂದರೆ ಮಾತ್ರ ಬ್ರಹ್ಮಹತ್ಯೆ ಅಲ್ಲ. ದ್ವೇಷ ಲೋಭ ಕ್ರೋಧಗಳಿಂದ ಜ್ಞಾನಿಗಳಿಗೆ, ಮರ್ಮಾಂತಕವಾದ ಆಘಾತ ಅಥವಾ ಪೀಡೆ ಉಂಟು ಮಾಡುವವನು ಈ ಬ್ರಹ್ಮಹತ್ಯಾ ಪಾಪಕ್ಕೆ ಭಾಗೀದಾರನು.

ದರಿದ್ರನಾದ ಜ್ಞಾನಿಗೆ 'ಹಣ ಕೊಡುತ್ತೇನೆ. ಮನೆಗೆ ಬಾ' ಎಂದು ಮನೆವರೆಗೆ ಕರೆದುಕೊಂಡು ಹೋಗಿ ಮನೆಗೆ ಬಂದ ಬಳಿಕ 'ಇಲ್ಲ ಹೋಗಿ' ಎಂದು ಕೈ ತಿರುಗಿಸುವುದೂ, ಸಭೆಯಲ್ಲಿ ಸುಮ್ಮನೆ ಕುಳಿತ ವಿದ್ವಾಂಸರನ್ನು ಖಂಡನ ಮಾಡಿ ತೇಜೋವಧೆ ಮಾಡುವದೂ, ಗುರುಹಿರಿಯರನ್ನು ವಿರೋಧಿಸಿ ಅವರು ಕಡಿಮೆ ತಾನು ಹೆಚ್ಚು ಎಂದು ತನ್ನ ಜಂಭವನ್ನು ಮೆರೆಸುವುದೂ, ಜ್ಞಾನಿಗಳ ವೃತ್ತಿಭೇದ ಮಾಡುವುದೂ, ಚಾಡಿಹೇಳುವುದೂ, ಇನ್ನೊಬ್ಬರ ತಪ್ಪು ಹುಡುಕುವುದೂ, ಮತ್ತೊಬ್ಬರ ಮನಸ್ಸಿಗೆ ಉದ್ವೇಗವನ್ನುಂಟು ಮಾಡುವುದೂ, ಬ್ರಾಹ್ಮಣರ ದ್ರವ್ಯವನ್ನು ಅಪಹರಿಸುವದೂ ಬ್ರಹ್ಮಹತ್ಯಾ ಪಾಪದಲ್ಲಿ ಬರುತ್ತವೆ.

## ಸುರಾಪಾನ - ಸೆರೆ ಕುಡಿಯುವ ಪಾಪದ ಪ್ರಭೇದಗಳು

**ಸುರಾಪಾನ :** ಸೆರೆಯನ್ನು ಕುಡಿಯುವುದು ಮಾತ್ರ ಸುರಾಪಾನ ಪಾಪವಲ್ಲ. ತಾಯಿ ತಂದೆಯರನ್ನು ಸೇವೆ ಮಾಡದೆ ಪರಿತ್ಯಾಗ ಮಾಡುವುದು ಸುರಾಪಾನವೇ. ಸುಳ್ಳು ಸಾಕ್ಷಿ ಹೇಳುವುದು. ಮಿತ್ರನ ವಧೆ, ನಿಷಿದ್ಧ ಭಕ್ಷಣ. ಸ್ವಾರ್ಥದಿಂದ ಪ್ರಾಣಿಗಳ ಹತ್ಯೆ, ಊರು, ವನ, ಗೋಶಾಲೆಗಳಿಗೆ ಬೆಂಕಿ ಹಚ್ಚುವದು ಮುಂತಾದ ಪಾಪಗಳೆಲ್ಲವೂ ಸುರಾಪಾನದ ಪಾಪದ ಕಕ್ಷೆಯಲ್ಲಿ ಬರುತ್ತವೆ.

**ಸ್ವರ್ಣಸ್ತೇಯ :** ಬಂಗಾರದ ಕಳವು ಮೂರನೆಯ ಮಹಾಪಾಪ, ಬರೀ ಬೆಳ್ಳಿ ಬಂಗಾರ ಕದ್ದವರು ಮಾತ್ರ ಈ ಪಾಪಕ್ಕೆ ಭಾಗಿಗಳಾಗುವರು ಎಂದು ಅಲ್ಲ. ದಟ್ಟ ದರಿದ್ರ ಮನುಷ್ಯನಲ್ಲಿ ಇದ್ದು ಬಿದ್ದುದನ್ನೆಲ್ಲ ಅಪಹರಿಸುವುದೂ ಆನೆ, ಕುದುರೆ, ಸ್ತ್ರೀ ಮುಂತಾದವುಗಳನ್ನು ಅಪಹರಿಸುವುದೂ, ಪಸು, ಹೊಲ, ಮನೆ, ರತ್ನ ಔಷಧ, ಚಂದನ, ಕರ್ಪೂರ, ಕಸ್ತೂರಿ, ರೇಶ್ಮೆ, ಬಟ್ಟೆ, ಕೈಯಲ್ಲಿಕೊಟ್ಟ ಮನೆಯಲ್ಲಿಯೇ ಇಟ್ಟ ಹಣವನ್ನು ಎತ್ತಿಹಾಕುವುದು ಸುವರ್ಣ ಚೌರ್ಯದ ಸಮಾನ ಪಾಪಗಳು ಎಂದು ಎಣಿಸಲ್ಪಡುತ್ತವೆ.

**ಗುರು ಪತ್ನೀಗಮನ :** 'ಗುರುಸ್ತ್ರೀಯೊಡನೆ ಸಂಭೋಗ' ಇದು ಪಂಚಮಹಾ ಪಾತಕಗಳಲ್ಲಿ ನಾಲ್ಕನೆಯ ಪಾಪ. ಸೊಸೆ, ಮಿತ್ರನ ಮಡದಿ, ಅಕ್ಕ ತಂಗಿಯರು ಕನ್ಯಾವಸ್ಥೆಯಲ್ಲಿರುವ ಹೆಣ್ಣುಮಕ್ಕಳು, ಚಾಂಡಾಲ ಸ್ತ್ರೀ, ಕೀಳುಜಾತಿಯ ಬೇರೆಯ ಸ್ತ್ರೀ, ತಮ್ಮದೇ ಜಾತಿಯ ಬೇರೆ ಸ್ತ್ರೀಯೊಡನೆ ಗೈದ ವ್ಯಭಿಚಾರ ಗುರುಪತ್ನೀ ಗಮನ ಪಾಪದ ಕಕ್ಷೆಯಲ್ಲಿಯೇ ಬರುವ ಮಹಾಪಾಪಗಳು ಆಗಿರುತ್ತವೆ.

### ಉಪಪಾತಕಗಳು

ಇವೆಲ್ಲವೂ ದೊಡ್ಡ ದೊಡ್ಡದಾದ ಮಹಾಪಾಪಗಳು, ಇನ್ನೂ ಉಪಪಾತಕಗಳೂ ಅಸಂಖ್ಯವಾಗಿವೆ, ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ನಿದರ್ಶಿಸಲಾಗುವದು. ಅಹಂಕಾರ, ಅತಿಕೋಪ, ನಾಸ್ತಿಕ್ಯ, ಕೃತಘ್ನತೆ, ವಿಷಯಸುಖದಲ್ಲಿ ಅತೀ ಆಸಕ್ತಿ, ಜಿಪುಣತನ, ದುಷ್ಟತನ, ಅಸೂಯೆ, ತಪ್ಪಿಲ್ಲದೇ ಮಡದಿ ಮಕ್ಕಳನ್ನು ಬಿಡುವುದು, ಮೈತ್ರೀ ಭಂಗ, ಸ್ವಾಮಿ ಸೇವಕರ ಪರಿತ್ಯಾಗ, ಸಾಧುಗಳನ್ನು ನಿಂದಿಸುವದು. ಬಂಧುಗಳ ಧಿಕ್ಕಾರ, ತಪಸ್ವಿಗಳ ಅವಮಾನ, ಹಸುಗಳನ್ನು ಹೊಡೆಯುವದು, ಹೆಂಡತಿ ಅಥವಾ ಬೇರೆ ಸ್ತ್ರೀ, ಆಳುಗಳನ್ನು ಹೊಡೆಯುವದು, ದೇವಾಲಯದಲ್ಲಿ ಹಚ್ಚಿದ ಗಿಡ ಬಳ್ಳಿಗಳನ್ನು ಕಡಿಯುವುದು ಉಪಪಾಪಗಳು ಎನಿಸುವುವು. ಇವಲ್ಲದೆ ಅನಧಿಕಾರಿಗಳಿಂದ ಯಜ್ಞಾದಿ ಪುಣ್ಯಕರ್ಮಗಳನ್ನು ಮಾಡಿಸುವದು, ಅಧಮರನ್ನು ಯಾಚಿಸುವದು, ಮಡದಿ ಮಕ್ಕಳ ಮಾರಾಟ, ತೀರ್ಥಯಾತ್ರೆ, ಉಪವಾಸ ವ್ರತ, ದೇವಾಲಯ ನಿರ್ಮಾಣ ಮುಂತಾದ ಪುಣ್ಯಕರ್ಮಗಳನ್ನು ಹಣ ತೆಗೆದುಕೊಂಡು 'ಇದಂ ನ ಮಮ' ಎಂದು ಇನ್ನೊಬ್ಬರಿಗೆ ಮಾರಾಟ ಮಾಡುವದು, ಸ್ತ್ರೀ ಧನದಿಂದ ಬದುಕುವುದು, ಸ್ತ್ರೀಯರಿಗೆ ಅತ್ಯಂತ ಅಧೀನರಾಗಿ ಇರುವುದು, ಆಪತ್ಕಾಲದಲ್ಲಿ ಸ್ತ್ರೀಯರನ್ನು ರಕ್ಷಿಸದೇ ಇರುವುದು. ಅಂಗೀಕರಿಸಿದ ವ್ರತವನ್ನು ಮಾಡದೇ ಇರುವುದು. ಕಂಡದ್ದನ್ನೆಲ್ಲ (ನಿಷಿದ್ಧ) ತಿನ್ನುವದು,

ದುಶ್ಶಾಸ್ತ್ರಗಳನ್ನು ಓದಿ ಅದರಂತೆ ನಡೆಯುವದು. ಶುಷ್ಕ ತರ್ಕವನ್ನು ಅವಲಂಬಿಸುವದು, ಅಗ್ನಿ, ಗುರು, ಸಾಧು, ಬ್ರಾಹ್ಮಣ, ಹಸು, ರಾಜ, ಇವರನ್ನು ಪರೋಕ್ಷ ಅಥವಾ ಅಪರೋಕ್ಷದಲ್ಲಿ ನಿಂದಿಸುವದು ಇವೆಲ್ಲವೂ ಉಪಪಾತಕ ಎಂದು ಕರೆಯಲ್ಪಡುತ್ತವೆ.

ಈ ಉಪಪಾತಕಗಳ ಪಟ್ಟಿಯಲ್ಲಿ ಸೇರಿಸಬಹುದಾದ ಇನ್ನೂ ಕೆಲವು ಅಲ್ಪ ಪಾಪಗಳು ಉಂಟು. ಶ್ರಾದ್ಧ, ದೇವಪೂಜೆ, ವರ್ಣಾಶ್ರಮ ಧರ್ಮಗಳನ್ನು ಬಿಟ್ಟು ಬಿಡುವುದು. ಇವು ಮೂರು ಉಪಪಾತಕ ಶ್ರೇಣಿಯಲ್ಲಿಯೇ ಸೇರ್ಪಡೆಯಾಗುತ್ತವೆ. ಸುಳ್ಳು ಮಾತ ನಾಡುವುದು, ದೇವರೇ ಇಲ್ಲ ಎಂದು ನಾಸ್ತಿಕ ವಾದ ಹೂಡುವದು, ಪರ್ವಕಾಲ, ಪುಣ್ಯಕಾಲಗಳಲ್ಲಿ ವಿಹರಿಸುವದು, ಕಟುವಾಗಿ ಮಾತನಾಡುವದು, ಕೆರೆಕಾಲುವೆಗಳನ್ನು ನಾಶಪಡಿಸುವುದು, ಉಣ್ಣುವ ಪದಾರ್ಥಗಳನ್ನು ಮಾರಾಟ ಮಾಡುವದು, ಊಟ ಪಂಕ್ತಿಯಲ್ಲಿ ಭೇದ ಮಾಡುವದು, ಇವೆಲ್ಲವೂ ಉಪಪಾತಕಗಳ ಕಕ್ಷೆಯಲ್ಲಿ ಬರುವ ಪಾಪಗಳಾಗಿರುತ್ತವೆ.

## ಕ್ಷುದ್ರ ಪಾಪಗಳು

ಇದಕ್ಕಿಂತ ಇನ್ನೂ ಕಡಿಮೆ ಮಟ್ಟದ ಕೆಲವು ಕ್ಷುಲ್ಲಕ ಪಾಪಗಳು ಇರುತ್ತವೆ. ಗೋ, ಬ್ರಾಹ್ಮಣ, ಕನ್ಯೆ, ಸ್ವಾಮಿ, ಮಿತ್ರ ಹಾಗೂ ತಪಸ್ವಿಗಳ ಕಾರ್ಯದಲ್ಲಿ ವಿಘ್ನ ಒಡ್ಡುವುದು, ಇನ್ನೊಬ್ಬರ ವೈಭವ ನೋಡಿ ಹೊಟ್ಟೆಕಿಚ್ಚು ಪಡುವುದು, ಕೀಳು ಜಾತಿಯ ಹೆಣ್ಣಿನ ಸಹವಾಸ ಮಾಡುವುದು, ಗೋಶಾಲೆ, ಬೀದಿ, ಜಲಾಶಯ, ಉಪವನ, ಗಿಡದ ನೆರಳು ಮತ್ತು ಮಂದಿರ, ಮನೆ, ಗಿಡ, ಬಳ್ಳಿ, ಇವುಗಳ ಮೇಲೆ ಮಲಮೂತ್ರ ವಿಸರ್ಜನ ಮಾಡುವುದು, ಮಿಥ್ಯಾ ಭಾಷಣ, ಕಪಟ, ವಂಚನೆ, ಕೂಟ, ತನ್ನ ಸೇವಕರನ್ನು ಪಶುವಿನಂತೆ ನೋಡಿಕೊಳ್ಳುವುದು, ಮನೆಯಲ್ಲಿಯ ಆಳು ಮಕ್ಕಳು ಮತ್ತು ಮಡದಿ ಮಕ್ಕಳನ್ನು ಬಿಟ್ಟು ತಾನೊಬ್ಬನೇ ಊಟ ಮಾಡುವದು, ಬ್ರಹ್ಮಜ್ಞಾನಿಗಳ ನಿಂದೆ, ಎತ್ತು ಕುದುರೆಗಳ ಮೇಲೆ ಹೆಚ್ಚಿನ ಭಾರ ಹೇರುವದು, ಅವುಗಳ ಬೆನ್ನು ಗೋಣು ಗಾಯವಾಗಿದ್ದರೂ ನೊಗ ಹೇರಿ ಬಂಡಿಗೆ ಹೂಡುವುದು, ಅವುಗಳಿಗೆ ಮೇವು ಹಾಕದೇ ತಾನು ಊಟ ಮಾಡುವುದು, ಅವುಗಳಿಗೆ ರೋಗ ಬಂದಾಗಲೂ ಉಪಚಾರ ಮಾಡಿಸದೇ ದುಡಿಸಿಕೊಳ್ಳುವುದು, ಇವೆಲ್ಲವೂ ಕ್ಷುದ್ರ ಪಾಪಗಳು ಎಂದು ಕರೆಯಲ್ಪಡುತ್ತವೆ. ಜ್ಯೋತಿಷ್ಯ, ಪೌರೋಹಿತ್ಯ ಮುಂತಾದವುಗಳನ್ನು ಹಣಕ್ಕಾಗಿ ಉಪಜೀವನ ಧಂದೆ ಎಂದು ಮಾಡುವುದು, ಶೂದ್ರ ಸ್ತ್ರೀಯನ್ನು ಹೆಂಡತಿಯೆಂದು ಇಟ್ಟುಕೊಳ್ಳುವುದು ಧರ್ಮಾತ್ಮನ ಸೋಗು ಹಾಕುವುದು ಈ ಕ್ಷುದ್ರ ಪಾಪಗಳ ಶ್ರೇಣಿಯಲ್ಲಿ ಬರುತ್ತವೆ. ರಾಜರು ಪರಿಹರಿಸಬೇಕಾದ ಕೆಲವೊಂದು ರಾಜಪಾಪಗಳನ್ನು ಹೇಳುತ್ತೇನೆ ಕೇಳು.

## ರಾಜರ ಪಾಪಗಳು

ಯಶ್ಚ ಶಾಸ್ತ್ರಮತಿಕ್ರಮ್ಯ ಸ್ವೇಚ್ಛಯಾ ಚಾಹರೇತ್ಕರಮ್ ।
ಸದಾ ದಂಡರುಚಿರ್ಯಶ್ಚ ಯೋ ವಾ ದಂಡರುಚಿರ್ನ ಹಿ ॥

ಉತ್ಕೋಚಕೈರಧಿ ಕೃತೈಸ್ತಸ್ಕರೈಶ್ಚ ಪ್ರಪೀಡ್ಯತೇ ।
ಯಸ್ಯ ರಾಜ್ಞಃ ಪ್ರಜಾ ರಾಷ್ಟ್ರೇ ಪಚ್ಯತೇ ನರಕೇಷು ಸಃ ॥

ಅಚೋರಂ ಚೋರವತ್ಪಶ್ಯೇಚ್ಚೋರಂ ವಾ ಚೋರ ರೂಪಿಣಮ್ ।
ಆಲಸ್ಯೋಪಹತೋ ರಾಜಾ ವ್ಯಸನೀ ನರಕಂ ವ್ರಜೇತ್ ॥

ರಾಜರು ಶಾಸ್ತ್ರದ ಆಜ್ಞೆಯನ್ನು ಉಲ್ಲಂಘಿಸುವದು ಪಾಪ. ಪ್ರಜೆಗಳಿಂದ ಅನ್ಯಾಯವಾಗಿ ಮನಬಂದಂತೆ ಕರವನ್ನು ವಸೂಲಿ ಮಾಡುವುದು, ಯಾವರೀತಿಯಿಂದ ಯಾರಿಗೆ ದಂಡ ಹಾಕಿ ಹಣ ವಸೂಲು, ಮಾಡಬೇಕು ಎಂದು ಯಾವಾಗಲೂ ಉತ್ಸುಕಿತನಾಗುವುದು, ಅಪರಾಧಿಗಳಿಗೆ ದಂಡ ಕೊಡುವಲ್ಲಿ ಉದಾಸೀನತೆ ತೋರುವುದು, ಲಂಚ ತಿನ್ನುವ ಅಧಿಕಾರಿಗಳನ್ನು ಅಧಿಕಾರದಲ್ಲಿ ಇರಗೊಳಿಸುವುದು, ರಾಜ್ಯದಲ್ಲಿ ಕಳವು, ಕೊಲೆ ಸುಲಿಗೆಗಳು ಆಗಲು ಅವಕಾಶ ಕೊಡುವುದು, ಪ್ರಜರಿಗೆ ಪೀಡೆಯನ್ನುಂಟು ಮಾಡುವದು. ಇವು ರಾಜರ ಪಾಪಗಳು. ಮತ್ತು ಕಳವು ಮಾಡದವನನ್ನು ಕಳ್ಳನೆಂದು ತಿಳಿಯುವದು, ನಿಜವಾದ ಕಳ್ಳನನ್ನು ಕಳ್ಳನೆಂದು ತಿಳಿಯದೇ ಇರುವುದು, ಆಲಸ್ಯ ಎಂಬ ದೋಷಕ್ಕೆ ಅವಕಾಶ ಕೊಡುವುದು, ಬೇಟೆ, ದ್ಯೂತ, ಪಾನ ಮುಂತಾದ ದುರ್ವ್ಯಸನಗಳಿಗೆ ಅಂಟಿಕೊಳ್ಳುವುದು ರಾಜರ ಪಾಪದ ಪಟ್ಟಿಯಲ್ಲಿ ಸೇರುವವು. ಇಂಥ ಪಾಪಗಳನ್ನು ಮಾಡುವವರು ನೇರವಾಗಿ ನರಕಕ್ಕೆ ಹೋಗುವರು.

ಹೆರವರ ವಸ್ತು ವಡವೆ, ಎಷ್ಟೇ ಚಿಕ್ಕದಿರಲಿ, ಅದನ್ನು ಅಪಹರಿಸಿದರೆ, ಆ ಮನುಷ್ಯನು ಪಾಪಿ ಎನಿಸುವನು. ನರಕದಲ್ಲಿ ಬೀಳಲು ಅವನು ಪೂರ್ಣಾಧಿಕಾರಿ. ಇದರಲ್ಲಿ ಸಂದೇಹವಿಲ್ಲ. ಈ ಎಲ್ಲ ಪಾಪಗಳು ಸ್ಥೂಲ, ಸೂಕ್ಷ್ಮ, ಅತ್ಯಂತ ಸೂಕ್ಷ್ಮ ಎಂದು ಮೂರು ಬಗೆಯಾಗಿವೆ. ಮಹಾಪಾಪ, ಉಪಪಾಪ, ಸಾಮಾನ್ಯ ಪಾಪ ಎಂದೂ ಮೂರು ಬಗೆಯಾಗಿವೆ. ಈ ಎಲ್ಲ ವಿಧವಾದ ಪಾಪಗಳನ್ನು ಮಾಡಿದ ಮಾನವನು ಮರಣ ಹೊಂದಿದ ಬಳಿಕ ನರಕದಲ್ಲಿ ಯಮಯಾತನೆಯನ್ನು ಅನುಭವಿಸಬೇಕಾಗುವುದು. ನರಕದಲ್ಲಿ ದುಃಖಗಳನ್ನು ಅನುಭವಿಸಲಿಕ್ಕಾಗಿಯೇ ಒಂದು ಯಾತನಾ ಶರೀರ ಎಂಬುದನ್ನು ಪಡೆದು ಅದರಿಂದ ಭಯಂಕರವಾದ ಕಷ್ಟ ಕೋಟಲೆಗಳನ್ನು ಪಾಪಿಗಳು ನರಕದಲ್ಲಿ ಅನುಭವಿಸಬೇಕಾಗುವುದು. ಆದುದರಿಂದ ವಿವೇಕಿಯಾದ ಮಾನವನು ಈ ಎಲ್ಲ ಬಗೆಯಾದ ಪಾಪ ಕರ್ಮಗಳನ್ನು ದೂರ ಇಡಬೇಕು. ಚಂದ್ರಶೇಖರನ ಚಿಂತನ ಧ್ಯಾನೋಪಾಸನೆಯನ್ನು ಮಾಡುತ್ತ ಅವನ ಚಾರುಚರಣಗಳನ್ನೇ ಶರಣು ಹೊಂದಬೇಕು. ಭಕ್ತಿಯಿಂದಾಗಲಿ , ಬಲವಂತ ದಿಂದಾಗಲಿ, ಸಹವಾಸದಿಂದಾಗಲೀ, ಲೋಭದಿಂದಾಗಲೀ, ಪ್ರತಿಷ್ಠೆಗಾಗಿ ಆಗಲಿ ಮಾಡಿದ ಶಂಕರನ ನಮಸ್ಕಾರ ಸ್ತೋತ್ರ, ಪೂಜೆ, ನಾಮ, ಸಂಕೀರ್ತನ, ಆರಾಧನೆ, ಧ್ಯಾನ ಯಾವುದೂ ವ್ಯರ್ಥವಾಗುವುದಿಲ್ಲ. ಭಕ್ತಿಯಿಂದ ಶಿವಾರಾಧನೆ, ಶಿವೋಪಾಸನೆ ಶಿವಪೂಜೆಗಳನ್ನು ಮಾಡಿದವನು, ಲೌಕಿಕ ವಿಷಯಗಳನ್ನೆಲ್ಲ ಬಿಟ್ಟು ತನ್ನ ಕಾಯ ಕರಣಗಳನ್ನೆಲ್ಲ ಶಿವಾರ್ಪಣಗೈದ ಪುಣ್ಯಾತ್ಮನು ಎಂದೂ ನರಕಭಾಗಿಯಾಗುವುದಿಲ್ಲ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಇಪ್ಪತ್ತೊಂಬತ್ತನೇ ಅಧ್ಯಾಯ ಮುಗಿದುದು**

# ಪರಮೇಶ್ವರನ ಪೂಜಾವಿಧಾನ

ಅಧ್ಯಾಯ -30

**ಕರಂಧಮ :** ಬ್ರಾಹ್ಮಣೋತ್ತಮರೇ, ಭಗವಾನ್ ಪಾರ್ವತೀಪತಿಯ ಪೂಜೆಯ ವಿಧಾನವನ್ನು ಸಂಕ್ಷೇಪವಾಗಿ ನನಗೆ ಹೇಳುವ ಕೃಪೆ ಮಾಡಿರಿ.

**ಮಹಾಕಾಲ :** ಮಹೀಪತಿಯೆ, ಪ್ರಾತಃಕಾಲ, ಮಧ್ಯಾನ್ಹಕಾಲ, ಸಾಯಂಕಾಲ, ಹೀಗೆ ತ್ರಿಕಾಲದಲ್ಲಿಯೂ ಮಾಡಬೇಕು ಶಿವಪೂಜೆಯನ್ನು, ಶಿವನ ದರ್ಶನ ಸ್ಪರ್ಶನದಿಂದಲೇ ಮನುಷ್ಯ ಕೃತಾರ್ಥವಾಗುವನು. ಅವನ ಜನ್ಮ ಸಾರ್ಥಕ. ಪೂಜೆಗಿಂತ ಮೊದಲು ಪವಿತ್ರ ಜಲದಲ್ಲಿ ಸ್ನಾನ ಮಾಡಬೇಕು. ಅನಾರೋಗ್ಯ ಇದ್ದರೆ ಮಾತ್ರ ಕಟಿಸ್ನಾನ. ಧ್ಯಾನಸ್ನಾನ ಭಸ್ಮಸ್ನಾನ ಅಥವಾ ಕಂಠಸ್ನಾನದಿಂದ ಆದರೂ ಪೂಜಾ ಕಾರ್ಯವನ್ನು ಪ್ರಾರಂಭಿಸಬಹುದು. ಅದೂ ಆಗದಿದ್ದರೆ, ಆಪದ್ಧರ್ಮ ಎಂದು ಮಂತ್ರಸ್ನಾನವನ್ನಾದರೂ ಮಾಡಬೇಕು.

ಸ್ನಾನದ ಅನಂತರದಲ್ಲಿ ಉಣ್ಣೆಯ ವಸ್ತ್ರ ಅಥವಾ ಬಿಳಿಬಟ್ಟೆಯನ್ನು ಅಥವಾ ಯಾವುದೇ ಬಣ್ಣದ ಹೊಸ ವಸ್ತ್ರವನ್ನು ಉಟ್ಟುಕೊಳ್ಳಬೇಕು. ಕೊಳೆಯಾದ, ಹೊಲಿಗೆ ಹಾಕಿದ, ಹರಿದ, ಸುಟ್ಟ, ಮೈಲಿಗೆಯಾದ ವಸ್ತ್ರವನ್ನು ಉಟ್ಟುಕೊಳ್ಳಕೂಡದು. ಒಗೆದು ಸ್ವಚ್ಛಮಾಡಿದ ಹೊದೆಯುವ ಹಾಗೂ ಉಡುವ ಎರಡು ವಸ್ತ್ರಗಳನ್ನು ಧರಿಸಬೇಕು. ಇಲ್ಲದಿದ್ದರೆ ಪೂಜೆಯೇ ವ್ಯರ್ಥ.

ಹಣೆ, ಎದೆ, ಎರಡೂ ಹೆಗಲುಗಳ ಮೇಲೆ ಭಸ್ಮವನ್ನು ಧರಿಸಿ, ಪ್ರಸನ್ನ ಮನಸ್ಸಿನಿಂದ ಮಹಾದೇವರ ಪೂಜೆಯನ್ನು ಮಾಡುವವನು ಕೆಲವೇ ಸಮಯದಲ್ಲಿ ಶಿವನ ದರ್ಶನ ಪಡೆಯುತ್ತಾನೆ. ನಿರ್ಮಲ ಮನಸ್ಕನಾಗಿ ಶಿವ ಮಂದಿರದಲ್ಲಿ ಪ್ರವೇಶ ಮಾಡಿ ಮೊದಲು ಮಹಾದೇವರನ್ನು ವಂದಿಸಬೇಕು. ಅನಂತರ ಗುಡಿಯ ಗರ್ಭಗಾರದಲ್ಲಿ ಪ್ರವೇಶಮಾಡಿ ಕೈಕಾಲು ತೊಳೆದುಕೊಂಡು ಮನದಲ್ಲಿಯೇ ಮಹಾದೇವನನ್ನು ನೆನೆಯುತ್ತಾ ಲಿಂಗ ಅಥವಾ ಮೂರ್ತಿಯ ಮೇಲೆ ಏರಿಸಿದ ನಿರ್ಮಾಲ್ಯ, ಹೂವು, ಮಾಲೆ, ಗಂಧಗಳನ್ನು ತೆಗೆಯಬೇಕು. ಶಿವಮಂದಿರವನ್ನು ಭಕ್ತಿಯಿಂದ ಪೂರಕೆಯಿಂದ ಉಡುಗಿದವರ ಮನಸ್ಸಿನ ದೋಷಗಳನ್ನೆಲ್ಲ ಭಗವಾನ್ ಶಂಕರನು ತಾನೇ ಗುಡಿಸಿ ಹಾಕಿ ತೊಳೆದು ಸ್ವಚ್ಛಗೊಳಿಸುತ್ತಾನೆ. ಉಪಾಸಕನು ನಿಷ್ಕಲ್ಮಷ ಮನಸ್ಸಿನಿಂದ ಶಿವನನ್ನು ಚಿಂತನ ಮಾಡಿ ಮೊದಲು ದ್ವಾರಪಾಲಕರ ಪೂಜೆ ಮಾಡಬೇಕು. ಓಂ ಗಂ ಗಣಪತಯೇ ನಮಃ, ಓಂ ಕ್ಷೇಂ ಕ್ಷೇತ್ರ ಪಾಲಾಯನಮಃ, ಓಂ ಕುಂ ಕುಲದೇವತಾಯೈ ನಮಃ, ಓಂ ನಂ ನಂದಿನೇ ನಮಃ, ಓಂ ಧಾಂ ಧಾತ್ರೇ ವಿಧಾತ್ರೇ ನಮಃ ಹೀಗೆ ಹೊರಗಿನ ಪೂಜೆ ಮಾಡಿ ಒಳಗೆ ಶಿವಲಿಂಗದ ಬಲಭಾಗದಲ್ಲಿ ಉತ್ತರಕ್ಕೆ ಮುಖ ಮಾಡಿಕೊಂಡು ಕೂಡಬೇಕು. ಶರೀರವನ್ನು ಸಮಸ್ಥಿತಿಯಲ್ಲಿ ಇಟ್ಟು ನೆಟ್ಟಗೆ ಆಸನದ ಮೇಲೆ ಕುಳಿತುಕೊಂಡು ಒಂದು ಕ್ಷಣ ಹೊತ್ತು ಭಗವಾನ್ ಶಿವನ ಧ್ಯಾನವನ್ನು ಮಾಡಬೇಕು.

**ಶಿವಸ್ವರೂಪ ಚಿಂತನ :** ತಾವರೆಯ ಆಕಾರದ ಸೂರ್ಯ ಮಂಡಲ. ಅದರ ಮಧ್ಯ ಭಾಗದಲ್ಲಿ ಚಂದ್ರಮಂಡಲ. ಅದರ ನಟ್ಟನಡುವೆ ಅಗ್ನಿ ಮಂಡಲ. ಧರ್ಮ ಜ್ಞಾನ, ವೈರಾಗ್ಯ, ಐಶ್ವರ್ಯ ಇವುಗಳಿಂದ ಅದು ಸುತ್ತುವರೆಯಲ್ಪಟ್ಟಿದೆ. ಈ ಅಗ್ನಿ ಮಂಡಲದ ಮಧ್ಯದಲ್ಲಿ ಭಗವಾನ್ ಶಂಕರ. ಈ ಶಂಕರನನ್ನು ನಮ್ಮ ಭಾವನೆಯ ಮುಖಾಂತರ ಸಾಕ್ಷಾತ್ಕರಿಸಿಕೊಳ್ಳಬೇಕು. ಭಗವಾನ್ ಸದಾಶಿವನು ತನ್ನ ವಾಮಾ ಮತ್ತು ಜ್ಯೇಷ್ಠಾ ಮುಂತಾದ ಶಕ್ತಿಗಳಿಂದ ಒಡಗೂಡಿದ್ದಾನೆ.

ಅವನಿಗೆ ಐದು ಮುಖ, ಹತ್ತು, ತೋಳುಗಳು, ಪ್ರತಿಯೊಂದು ಮುಖದಲ್ಲಿಯೂ ಮೂರು ಕಣ್ಣುಗಳು, ಮಸ್ತಕ ಮೌಳಿಯಲ್ಲಿ ಚಂದ್ರ. ವಾಮಾಂಗದಲ್ಲಿ ಗಿರಿರಾಜ ನಂದಿನಿಯಾದ ಉಮಾದೇವಿ. ಹಿಂದೆ ಹೊಗಳುವ ಸಿದ್ಧಗಣ. ಮುಂದೆ ವಂದಿಸುವ ಪ್ರಮಥ ಗಣ, ಎಡದಲ್ಲಿ ಕಂಬಲ, ಅಶ್ವತರ, ಬಲದಲ್ಲಿ ನಾರದ ತಂಬುರು. ಮಧ್ಯದಲ್ಲಿ ಪಾರ್ವತೀ ಪರಮೇಶ್ವರರನು. ಇವರ ಧ್ಯಾನ ಮಾಡಬೇಕು. ಒಳಗಣ್ಣಿನಿಂದ ಚಿತ್ತ ಭಿತ್ತಿಯಲ್ಲಿ ಇಂಥ ಶಿವ ಸ್ವರೂಪವನ್ನು ಚಿಂತಿಸಿ ಪರಿಭಾವಿಸಬೇಕು.

## ಶಿವಪೂಜಾ ಪದ್ಧತಿ

ರಾಜನೇ ! ಹೀಗೆ ಧ್ಯಾನ ಮಾಡಿದ ಬಳಿಕ ಶಂಕರನಿಗೆ ಸೇವಾ ಕೈಂಕರ್ಯದಿಂದ ಅರ್ಘ್ಯ ಪಾದ್ಯಗಳನ್ನು ನೀಡಬೇಕು. ನೀರು, ಅಕ್ಷತೆ, ಕುಶ, ಚಂದನ, ಹೂವು, ಹಾಲು, ಮೊಸರು, ತುಪ್ಪ, ಜೇನುತುಪ್ಪ, ಇವು ಒಂಭತ್ತು ಅರ್ಘ್ಯದ ಅಂಗಗಳಾಗಿದ್ದು ಇವನ್ನೆಲ್ಲ ಒಂದೆಡೆ ಕೂಡಿಸಿ ರಸರೂಪದಿಂದ ಶಿವನಿಗೆ ಅರ್ಘ್ಯದಾನ ಮಾಡಬೇಕು. ಅನಂತರ ಶ್ರದ್ಧೆಯಿಂದ ಶಿವಲಿಂಗಕ್ಕೆ ಸ್ನಾನ ಮಾಡಿಸಲು ಸುರು ಮಾಡಬೇಕು. ಇದಕ್ಕಾಗಿ ಮೊದಲೇ ಒಂದು ನೂರು ಅಥವಾ ಇಪ್ಪತ್ತೆಂಟು ಹದಿನೆಂಟು ಕನಿಷ್ಠ ನಾಲ್ಕಾದರೂ ತೂತು ಬಿರುಕು ಇಲ್ಲದ ಕಲಶಗಳನ್ನು ಸಿದ್ಧಮಾಡಿ ಇಟ್ಟುಕೊಂಡಿರಬೇಕು. ಅವುಗಳಲ್ಲಿ ಚಂದನ, ಕೇಶರ, ಪಚ್ಚಕರ್ಪೂರ ಮೊದಲಾದ ಸುವಾಸಿತ ದ್ರವ್ಯಗಳನ್ನು ಹಾಕಿ ಸುಗಂಧಿತವನ್ನಾಗಿ ಮಾಡಿದ ನೀರನ್ನು ತುಂಬಿ 'ಓಂ ನಮಃ ಶಿವಾಯ' ಎಂಬ ಪಂಚಾಕ್ಷರ ಮಂತ್ರದಿಂದ ಆ ಎಲ್ಲ ಕಲಶಗಳನ್ನು ಅಭಿಮಂತ್ರಿಸಬೇಕು. ಇದಲ್ಲದೆ ಹಸುವಿನ ಹಾಲು, ಮೊಸರು, ತುಪ್ಪ, ಜೇನುತುಪ್ಪಗಳನ್ನು ಒಂದು ಕಡೆ ಕಲಿಸಿ ಶಿವಲಿಂಗದ ಎಡ ಭಾಗದಲ್ಲಿ ಇಟ್ಟುಕೊಂಡಿರಬೇಕು. ಮೊದಲನೇ ಕಲಶವನ್ನು ಎತ್ತಿ ಶಿವಲಿಂಗಕ್ಕೆ ಅಭಿಷೇಕ ಮಾಡಿ ಕೈಯಿಂದ ಲಿಂಗದ ಮೇಲು ಕೆಳ ಭಾಗವನ್ನೆಲ್ಲ ಉಜ್ಜಿ ಸ್ವಚ್ಛಮಾಡಿ ವೇದ ಮಂತ್ರಗಳನ್ನು ಉಚ್ಚರಿಸುತ್ತ ಉಳಿದ ಕಲಶಗಳನ್ನು ಒಂದೊಂದಾಗಿ ಎತ್ತಿಕೊಂಡು ಅಭಿಷೇಕ ಮಾಡಬೇಕು.

**ಓಂ ಹೂಂ ವಿಶ್ವಮೂರ್ತಯೇ ಶಿವಾಯ ನಮಃ**

ಎಂಬ ದ್ವಾದಶಾಕ್ಷರ ಮಂತ್ರ ರೂಪವಾದ ಈ ಮೂಲ ಮಂತ್ರವನ್ನು ಹೇಳುತ್ತಾ ಪಂಚಾಮೃತ ಸ್ನಾನವನ್ನು ಅನಂತರ ಕಲಾಶಾಭಿಷೇಕವನ್ನು ಮಾಡಬೇಕು. ಆ ಬಳಿಕ ವಸ್ತ್ರದಿಂದ ಲಿಂಗವನ್ನು ಒರಿಸಿ ಚಂದನವನ್ನು ಲೇಪಿಸಬೇಕು. ಅನಂತರ ಮಂತ್ರಗಳನ್ನು ಹೇಳುತ್ತ ಒಂದೊಂದೇ ಹೂವುಗಳನ್ನು ಏರಿಸಬೇಕು.

## ಪೀಠ ಪೂಜೆ

'ಆಧಾರ ಪೀಠಸ್ಯ ಆಗ್ನೇಯ ಕೋಣೆ ಓಂ ಧರ್ಮಾಯ ನಮಃ ' ಆಧಾರ ಪೀಠದ ಆಗ್ನೇಯ ದಿಕ್ಕಿನ ಮೂಲೆಯಲ್ಲಿ ಧರ್ಮವನ್ನು ನಮಸ್ಕಾರ ಮಾಡುತ್ತೇನೆ ಎಂದು ಹೂವು ಏರಿಸಿ ಆ ದಿಕ್ಕಿನ ಒಡೆಯನಾದ ಯಮಧರ್ಮನನ್ನು ಪೂಜಿಸಬೇಕು. ಹೀಗೆಯೇ ಹೂಗಳನ್ನು ಏರಿಸುತ್ತ ಆ ಆ ದಿಗಭಿಮಾನಿಗಳನ್ನು ಹೂಗಳಿಂದ ಪೂಜಿಸಬೇಕು. 'ನೈಋತ್ಯ ಕೋಣೇ ಓಂ ಜ್ಞಾನಾಯ ನಮಃ' 'ವಾಯುವ್ಯ ಕೋಣೆ ಓಂ ವೈರಾಗ್ಯಾಯ ನಮಃ' 'ಈಶಾನ್ಯ ಕೋಣೆ ಓಂ ಐಶ್ವರ್ಯಾಯ ನಮಃ' 'ಪೂರ್ವ ದಿಶಿ ಓಂ ಅಧರ್ಮಾಯ ನಮಃ' 'ದಕ್ಷಣೇ ಓಂ ಅಜ್ಞಾನಾಯ ನಮಃ' 'ಪಶ್ಚಿಮೇ ಓಂ ಅವೈರಾಗ್ಯಾಯ ನಮಃ ' 'ಉತ್ತರೇ ಅನೈಶ್ವರ್ಯಾಯ ನಮಃ' - ಹೀಗೆ ಮಂತ್ರಗಳನ್ನು ಹೇಳಿ ವೈರಾಗ್ಯಾದಿಗಳನ್ನು ಪೂಜಿಸಬೇಕು. ಬಳಿಕ ಕಮಲದ ಕರಣಿಕಾಗ್ರದಲ್ಲಿ ಈ ಮಂತ್ರದಿಂದ ಅನಂತಾದಿಗಳನ್ನು ಪೂಜಿಸಬೇಕು. ಓಂ ಅನಂತಾಯ ನಮಃ, ಓಂ ಪದ್ಮಾಯ ನಮಃ, ಓಂ ಅರ್ಕಮಂಡಲಾಯ ನಮಃ, ಓಂ ಸೋಮಮಂಡಲಾಯ ನಮಃ, ಓಂ ವಹ್ನಿ ಮಂಡಲಾಯ ನಮಃ, ಓಂ ವಾಮಜ್ಯೇಷ್ಠಾ ಪಂಚ ಮಂತ್ರ ಶಕ್ತಿಭ್ಯೋ ನಮಃ , ಓಂ ಪರಮ ಪ್ರಕೃತ್ಯೈ ದೈವ್ಯೈ ನಮಃ, ಹೀಗೆ ಕಮಲ ಕರಿಣಿಕೆಯಲ್ಲಿ ಅನಂತಾದಿಗಳನ್ನು ಪೂಜಿಸಿದ ಬಳಿಕ ಈಶಾನ್ಯ ತತ್ಪುರುಷಾದಿ ಮಂತ್ರಗಳಿಂದ ಈಶ ಮೂರ್ತಿ ಶಿವನ ಪೂಜೆಮಾಡಬೇಕು.

**ಓಂ ಈಶಾನ ತತ್ಪುರುಷಾಘೋರ-ವಾಮದೇವ-ಸದ್ಯೋಜಾತಾದಿ**
**ಪಂಚವಕ್ತ್ರಾಯ ರುದ್ರ-ಸಾಧ್ಯವಸ್ವಾದಿತ್ಯ-ವಿಶ್ವೇ-ದೇವಾಧಿದೇವ ರೂಪಾಯಾಂಡ**
**ಜಸ್ವೇದಜೋದ್ಭಿಜ ಜರಾಯುಜ ರೂಪಸ್ಥಾವರ ಜಂಗಮ ಮೂರ್ತಯೇ**
**ಪರಮೇಶ್ವರಾಯ ಓಂ ಹೂಂ ವಿಶ್ವಮೂರ್ತಯೇ ಶಿವಾಯ ನಮಃ ।**

ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ ಎಂಬ ಹೆಸರಿನ ಐದು ಮುಖಗಳುಳ್ಳ ಮತ್ತು ಹನ್ನೊಂದು ರುದ್ರಗಣ ಹಾಗೂ ಸಾಧ್ಯರೆಂಬ ದೇವತಾಗಣ ಅಷ್ಟವಸುಗಳು, ಹನ್ನೆರಡು ಆದಿತ್ಯರು, ಹಾಗೂ ವಿಶ್ವೇ ದೇವತೆಗಳು, ಮುಂತಾದ ದೇವತಾಸ್ವರೂಪಿಯಾದ, ಅಂಡಜ ಸ್ವೇದಜ, ಉದ್ಭಿಜ್ಜ, ಜರಾಯುಜ, ಮುಂತಾದ ಸ್ಥಾವರ ಜಂಗಮಾತ್ಮಕವಾದ ವಿಶ್ವದ ಆಧಾರನಾಗಿ ಮೂರ್ತಿಮಂತ ಪ್ರಪಂಚಸ್ವರೂಪನೇ ಆಗಿರುವ ಶಿವನಿಗೆ ನಮಸ್ಕಾರ ಎಂದು ಶಿವಪೂಜೆಯನ್ನು ಮಾಡಬೇಕು. ಆ ಬಳಿಕ ಮಹಾದೇವರ ಆಯುಧಗಳನ್ನು ''ತ್ರಿಶೂಲ, ಧನುಃ, ಖಡ್ಗ, ಕಪಾಲ, ಕುಠಾರೇಭ್ಯೋ ನಮಃ'' ಎಂಬ ಮಂತ್ರದಿಂದ ಪೂಜಿಸಬೇಕು. ಇದರ ನಂತರ ಜಲಾಧಾರದ ಮುಖಭಾಗದಲ್ಲಿ 'ಚಂಡೀಶ್ವರಾಯ ನಮಃ' ಎಂಬ ಮಂತ್ರದಿಂದ ಚಂಡೀಶ್ವರನ ಪೂಜೆಯನ್ನು ಮಾಡಬೇಕು.

## ಮಂಗಳಮೂರ್ತಿಗೆ ಮಂಗಳಾರತಿ

ಹೀಗೆ ವಿಧಿಪೂರ್ವಕವಾಗಿ ಪೂಜೆ ಮಾಡಿದ ಬಳಿಕ ನೀರು, ಅಕ್ಷತೆ, ಹೂವು ಹಾಗೂ ಫಲಗಳಿಂದ ಸಹಿತವಾಗಿ ಅರ್ಘ್ಯವನ್ನು ಕೊಡಬೇಕು. ಆ ಬಳಿಕ ಧೂಪ, ದೀಪ, ನೈವೇದ್ಯ, ಸಮರ್ಪಣೆ ಮಾಡಿ ಗಂಟೆ ಬಾರಿಸುತ್ತ ಮಂಗಳಾರತಿಯನ್ನು ಬೆಳಗಬೇಕು. ಶಿವನಿಗೆ

ಮಂಗಳಾರತಿ ಮಾಡುವಾಗ ಶಂಖ, ಜಾಗಟೆ, ಊದಿ, ಬಾರಿಸಬೇಕು. ನಗಾರಿ, ತಾಳ, ಬಜಂತ್ರಿ, ಮುಂತಾದ ಮಂಗಳವಾದ್ಯಗಳನ್ನು ಜನರಿಂದಲೂ ಬಾರಿಸಬೇಕು. ಹೀಗೆ ಸಂಭ್ರಮದಿಂದ ತ್ರಿಶೂಲಧಾರಿಯಾದ ಮುಕ್ಕಣ್ಣನಿಗೆ ಮಾಡುವ ಆರತಿಯನ್ನು ನೋಡುವವನು, ಮತ್ತು ಆರತಿಯನ್ನು ಬೆಳಗುವವನೂ ಸರ್ವಪಾಪಗಳಿಂದ ಮುಕ್ತಿಯನ್ನು ಹೊಂದುತ್ತಾನೆ. ಅನಂತರ ಶಿವನ ಸಾಮೀಪ್ಯದಲ್ಲಿ ಸಂಗೀತ ಸೇವೆ, ನೃತ್ಯಸೇವೆ ವಾದ್ಯ ಸೇವೆಗಳನ್ನು ಮಾಡಿಸಬೇಕು. ನಟರಾಜನಾದ ಶಿವನಿಗೆ ವಾದ್ಯ ಸಂಗೀತಸಹಿತವಾದ ನೃತ್ಯ ಸೇವೆ ಅತ್ಯಂತ ಇಷ್ಟ. ಅದರಿಂದ ಅವನು ಯಾವಾಗಲೂ ಸಂತುಷ್ಟ.

ಹೀಗೆ ಎಲ್ಲ ಬಗೆಯ ಸೇವೆಗಳನ್ನು ಸಮರ್ಪಿಸಿದ ಬಳಿಕ ಮಹಾದೇವರ ಸ್ತೋತ್ರವನ್ನು ಮಾಡುತ್ತ ಮಹಾದೇವರ ಎದುರು ನೆಲದುದ್ದಕ್ಕೂ ಬಡಿಗೆಯಂತೆ ಬಿದ್ದು ಶಿವನ ಪಾದ ಪೀಠಕ್ಕೆ ನೆತ್ತಿ ಚಾಚಿ ದಂಡ ಪ್ರಣಾಮವನ್ನು ಮಾಡಬೇಕು. ''ಸ್ವಾಮೀ, ನನ್ನಿಂದ ಏನಾದರೂ ಅಪರಾಧವಾಗಿದ್ದರೆ ದಯವಿಟ್ಟು ಕ್ಷಮಿಸು'' ಎಂದು ಬೇಡಿಕೊಳ್ಳಬೇಕು.

## ಮುಖ್ಯ ಮಾತು

ಈ ರೀತಿಯಾಗಿ ಶಿವಪೂಜೆ ಮಾಡುವ ಮಾನವನು ಒಂದು ಮುಖ್ಯವಾದ ವಿಷಯವನ್ನು ಮಾತ್ರ ಮನದಲ್ಲಿ ಇಟ್ಟುಕೊಂಡಿರಬೇಕು. ಆಚಾರ ಶುದ್ಧಿ ಇದ್ದರೆ ಮಾತ್ರ ಈ ಎಲ್ಲ ಪೂಜಾ ವಿಧಾನಗಳು ಪುಣ್ಯಫಲವನ್ನು ನೀಡುತ್ತವೆ. ದುರಾಚಾರಿ ಮಾನವನು ಮಾಡುವ ಎಲ್ಲ ಪುಣ್ಯಕರ್ಮಗಳು ವ್ಯರ್ಥವೇ ಸರಿ. ಸದಾಚಾರ ಸಂಪನ್ನನಾದ ಮಾನವನಿಗೆ ಮಾತ್ರ ಸತ್ಕರ್ಮಾನುಷ್ಠಾನದ ಪುಣ್ಯಫಲ. ಧರ್ಮವು ಫಲಿಸುವದು ಶುದ್ಧವಾದ ಆಚರಣೆ ಅರ್ಥಾತ್ ಸದಾಚಾರದಿಂದಲೇ. ಆಚಾರದಿಂದಲೇ ಸ್ವರ್ಗ, ಅನಾಚಾರದಿಂದಲೇ ನರಕ.

**''ಆಚಾರಾತ್ ಫಲತೇ ಧರ್ಮೋ ಹ್ಯಾಚಾರಾತ್ ಸ್ವರ್ಗಮಶ್ನುತೇ ।**
**ಆಚಾರಾಲ್ಲಭತೇ ಚಾಯುರಾಚಾರೋ ಹಂತ್ಯಲಕ್ಷಣಮ್ ॥**
**ಯಜ್ಞದಾನತಪಾಂಸೀಹ ಪುರುಷಸ್ಯ ನ ಭೂತಯೇ ।**
**ಭವಂತಿ ಯಃ ಸದಾಚಾರಂ ಸಮುಲ್ಲಂಘ್ಯ ಪ್ರವರ್ತತೇ ॥**

ಯಾವದೇ ಧರ್ಮವು ಫಲಪ್ರದವಾಗಬೇಕಾದರೆ ಸದಾಚಾರಶುದ್ಧಿ ಇದ್ದರೆ ಮಾತ್ರ. ಶಾಸ್ತ್ರೋಕ್ತವಾದ ಆಚರಣೆಯಿಂದಲೇ ಮಾನವನಿಗೆ ಸ್ವರ್ಗಾದಿ ಸದ್ಗತಿ. ವರ್ಣಾಶ್ರಮ ಧರ್ಮ ಆಚಾರಗಳ ಪದ್ಧತಿಗಳನ್ನು ಅನುಸರಿಸುವದರಿಂದ ಧರ್ಮಿಷ್ಠರಿಗೆ ಆಯುಷ್ಯದ ಅಭಿವೃದ್ಧಿ. ಧರ್ಮಾಚರಣದಿಂದ ಮಾನವರ ಅನಿಷ್ಟಗಳು ನಷ್ಟವಾಗುತ್ತವೆ. ಅಶುಭಗಳು ದೂರಾಗುತ್ತವೆ. ಸದಾಚಾರವನ್ನು ಉಲ್ಲಂಘಿಸಿ ಅನಾಚಾರ, ದುರಾಚಾರಗಳನ್ನು ಮಾಡುವವ ಎಷ್ಟು ಯಜ್ಞ ಮಾಡಿದರೂ ಫಲವಿಲ್ಲ. ಎಂಥ ದಾನ ಮಾಡಿದರೂ ಪುಣ್ಯವಿಲ್ಲ. ಆಚಾರಹೀನನಾದ ಮಾನವನು ಮಾಡಿದ ಯಜ್ಞ, ದಾನ, ಪೂಜೆ, ಜಪ, ತಪಸ್ಸು ಎಲ್ಲವೂ ವ್ಯರ್ಥ. ಆದ್ದರಿಂದ ಯಾವುದೇ

ಪುಣ್ಯಕರ್ಮವನ್ನು ಮಾಡುವ ಮೊದಲು ಮಾನವನು ಸದಾಚಾರದ ನಿಯಮವನ್ನು ತಪ್ಪದೇ ಪಾಲಿಸಬೇಕು. ಅದಕ್ಕಾಗಿ ಮೊದಲು ಶಾಸ್ತ್ರೋಕ್ತವಾದ ಸದಾಚಾರ ನಿಯಮಗಳ ಸಂಕ್ಷಿಪ್ತ ಪರಿಚಯ ಮಾಡಿಕೊಡುತ್ತೇನೆ ಕೇಳು.

ಧರ್ಮ, ಅರ್ಥ, ಕಾಮ ಈ ಮೂರು ಸಾಧನಗಳಿಂದ ನಾಲ್ಕನೆಯ ಪುರುಷಾರ್ಥವಾದ ಮೋಕ್ಷವನ್ನು ಸಂಪಾದಿಸಲಿಕ್ಕಾಗಿ ಗೃಹಸ್ಥನಾದವನು ಸದಾಚಾರ ವ್ರತದ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

## ಸದಾಚಾರದ ಸೂತ್ರಗಳು

**ಬ್ರಾಹ್ಮೇ ಮೂಹೂರ್ತೇ ಚೋದ್ಬುದ್ಧ್ಯ ಧರ್ಮಾರ್ಥೌ ಚಾಪಿ ಚಿಂತಯೇತ್ ।**
**ಸಮುತ್ಥಾಯ ತ್ವಥಾಚಮ್ಯ ದಂತಧಾವನ ಪೂರ್ವಕಮ್ ॥**

**ಸಂಧ್ಯಾಮುಪಾಸೀತ ಬುಧಃ ಶಾಂತಾಂತಃ ಪ್ರಯತಃ ಶುಚಿಃ ।**
**ಪೂರ್ವಾಂ ಸಂಧ್ಯಾಂ ಸನಕ್ಷತ್ರಾಂ ಪಶ್ಚಿಮಾಂ ಸದಿವಾಕರಾಮ್ ॥**

**ವರ್ಜಯೇದನೃತಂ ಚಾಸತ್ - ಪ್ರಲಾಪಂ ಪರುಷಂ ತಥಾ ।**
**ಅಸತ್ಶೀವಾಮಸದ್ವಾದಮಸಚ್ಛಾ ಸ್ತ್ರಂ ಚ ಪಾರ್ಥಿವ ॥**

ಬ್ರಾಹ್ಮ ಮೂಹೂರ್ತದಲ್ಲಿ ಎಂದರೆ ಮೂರು ಮುಕ್ಕಾಲುಗಳಿಗೆ ರಾತ್ರಿ ಇರುವ ಬೆಳಗಿನ ಜಾವದ ಕಾಲದಲ್ಲಿ ತಪ್ಪದೇ ಏಳಬೇಕು. ಧರ್ಮ ಸ್ವರೂಪಿಯೂ ಪರಮಪುರುಷಾರ್ಥವಾದ ಮೋಕ್ಷವನ್ನು ನೀಡುವವನೂ ಆದ ಭಗವಂತನನ್ನು ಧ್ಯಾನ ಮಾಡಬೇಕು. ಮತ್ತು ಅಂದು ತಾನು ಯಾವ ಯಾವ ಧರ್ಮಕಾರ್ಯಗಳನ್ನು ಮಾಡಬೇಕು? ತನ್ನ ಅರ್ಥ (ದ್ರವ್ಯ) ವನ್ನು ಧರ್ಮಸಾಧನವಾಗಿ ಎಷ್ಟೆಷ್ಟು ವಿನಿಯೋಗಿಸಬೇಕು ಎನ್ನುವದನ್ನು ಕೂಡ ಚೆನ್ನಾಗಿ ಆಲೋಚನೆ ಮಾಡಬೇಕು. ಅನಂತರ ಹಾಸಿಗೆಯಿಂದ ಎದ್ದು ಬಹಿರ್ದೆಶೆಗೆ ಹೋಗಿ ಬಂದು ಹಲ್ಲುಜ್ಜಿಕೊಂಡು ಸ್ನಾನಮಾಡಿ ಶುಚಿರ್ಭೂತನಾಗಿ ಪ್ರಸನ್ನ ಮನದಿಂದ ಸಂಧ್ಯಾವಂದನೆಯನ್ನು ಮಾಡಬೇಕು. ಪ್ರಾತಃ ಸಂಧ್ಯಾವಂದನೆಯನ್ನು ಮುಗಿಲಿನಲ್ಲಿ ಚುಕ್ಕೆಗಳಿರುವಾಗಲೇ ಮಾಡಬೇಕು. ಸಂಜೆಯ ಸಂಧ್ಯಾವಂದನೆಯನ್ನು ಸೂರ್ಯನು ಅಸ್ತವಾಗುವದಕ್ಕಿಂತ ಮೊದಲೇ ಮಾಡಬೇಕು. ಯಾವ ಕಾಲದಲ್ಲಿಯೂ ಸಂಧ್ಯಾವಂದನೆಯನ್ನು ಸರ್ವಥಾ ಬಿಡಕೂಡದು. ಆಪತ್ಕಾಲದಲ್ಲಿ ಮಾತ್ರ ಬಿಟ್ಟರೆ ತಪ್ಪಿಲ್ಲ. ಸುಳ್ಳನ್ನು ಮಾತಾಡಬಾರದು. ಕೆಟ್ಟ ಮಾತುಗಳನ್ನು ಆಡಬಾರದು. ಬಿರುನುಡಿಗಳನ್ನು ನುಡಿಯಬಾರದು. ಅಧಮರ ಸೇವೆಯನ್ನು ಗೈಯಬಾರದು. ನಾಸ್ತಿಕರ ವಾದವನ್ನು ಕೇಳಬಾರದು, ಹೇಳಬಾರದು. ದುಃಶಾಸ್ತ್ರಗಳನ್ನು ಎಂದಿಗೂ ಓದಬಾರದು, ಮನ್ನಿಸಬಾರದು. ಈ ಎಲ್ಲ ಕಾರ್ಯಗಳನ್ನು ಪೂರ್ವಾಹ್ನದಲ್ಲಿಯೇ ಮಾಡಬೇಕು. ಬಲ್ಲವರು ಆಸನವನ್ನು ಕಾಲಿನಿಂದ ಎಳೆಯ ಬಾರದು. ಬೆಂಕಿ ನೀರು ಎರಡನ್ನು ಒಂದೇ ಸಲ ಕೂಡಿ ಒಯ್ಯಬಾರದು.

**ಪಾದೌ ಪ್ರಸಾರಯೇನ್ನೈವ ಗುರುದೇವಾಗ್ನಿಸಮ್ಮುಖೇ ।**
**ಚತುಷ್ಪಥಂ ಚೈತ್ಯತರುಂ ದೇವಾಗಾರಂ ತಥಾ ಯತಿಮ್ ॥**

**ವಿದ್ಯಾಧಿಕಂ ಗುರುಂ ವೃದ್ಧಂ ಕುರ್ಯಾದೇತಾನ್ ಪ್ರದಕ್ಷಿಣಾನ್ ॥**

ಗುರುಗಳು, ದೇವರು ಹಾಗೂ ಬೆಂಕಿ ಇವುಗಳ ಎದುರು ಕಾಲನ್ನು ಚಾಚಬಾರದು. ನಾಲ್ಕು ದಾರಿಗಳು ಕೂಡುವ ಅಥವಾ ಒಡೆಯುವ ಬೀದಿಕೂಟ, ಚೈತ್ಯ, ವೃಕ್ಷ, ದೇವಾಲಯ, ಸನ್ಯಾಸಿ, ವಿದ್ವಾಂಸ, ಗುರುಹಿರಿಯು - ಇವರನ್ನೆಲ್ಲ ಯಾವಾಗಲೂ ಪ್ರದಕ್ಷಿಣೆ ಮಾಡಿ ಬಲಕ್ಕೆ ಹಾಕಿಕೊಂಡು ಹೋಗಬೇಕು.

## ವಿಶಿಷ್ಟ ಧರ್ಮ

**ಆಹಾರ ನೀಹಾರ ವಿಹಾರ ಯೋಗಾಃ**
**ಸುಸಂವ್ರತಾ ಧೃಗ್ ವಿಷಯಾ ನ ಕಾರ್ಯಾಃ**

**ವಾಗ್ಬುದ್ಧಿವೀರ್ಯಾಣಿ ತಪಸ್ತಥೈವ**
**ದಾನಯುಷೀ ಗುಪ್ತ ತಮೇ ಚ ಕಾರ್ಯೇ ॥**

ಮಾನವನು ತನ್ನ ಆಹಾರ, ಉಪಹಾರ, ಮೈಥುನಾದಿ ವಿಹಾರಗಳನ್ನು ಎಲ್ಲರೆದುರು ಹೇಳಬಾರದು. ಮತ್ತು ಜನರೆದುರು ಧರ್ಮ ಬಲ್ಲವನು ಅವುಗಳನ್ನು ಮಾಡಬಾರದು. ಇವಲ್ಲದೆ ತನ್ನ ವಾಣಿ, ಬುದ್ಧಿ, ಪರಾಕ್ರಮ, ತಪಸ್ಸು, ದಾನ, ಆಯುಷ್ಯ ಇವುಗಳೆಲ್ಲ ಜನರೆದುರು ಬಯಲು ಮಾಡದೆ ಗುಟ್ಟಾಗಿ ಇರಿಸಬೇಕು.

**ಉಭೇ ಮೂತ್ರ ಪುರಿಷೇ ತು ದಿವಾ ಕುರ್ಯಾದುದಙ್ ಮುಖಃ ।**
**ದಕ್ಷಿಣಾಭಿಮುಖೋ ರಾತ್ರೌ ಹ್ಯೇವಮಾಯುರ್ನ ಮೇಹತಃ ॥**

ಮಲಮೂತ್ರ ವಿಸರ್ಜನೆಯನ್ನು ಹಗಲು ಹೊತ್ತು ಉತ್ತರಕ್ಕೆ ಮುಖಮಾಡಿ ರಾತ್ರಿ ದಕ್ಷಿಣಕ್ಕೆ ಮುಖಮಾಡಿ ಮಾಡಬೇಕು. ಇದರಿಂದ ಆಯುಷ್ಯ ಕ್ಷೀಣವಾಗುವದಿಲ್ಲ.

**ಪ್ರತ್ಯಗ್ನಿಂ ಪ್ರತಿಸೂರ್ಯಂ ಚ ಪ್ರತಿಗಾಂ ವ್ರತಿನಂ ಪ್ರತಿ**
**ಪ್ರತಿಸೋಮೋದಕಂ ಸಂಧ್ಯಾಂ ಪ್ರಜ್ಞಾ ನಶ್ಯತಿ ಮೇಹತಃ**

ಅಗ್ನಿ, ಸೂರ್ಯ, ಹಸು, ವ್ರತಾನುಷ್ಠಾನ ಮಾಡುವ ಚಂದ್ರ, ನೀರು ಇವುಗಳಿಗೆ ಎದುರಾಗಿ ಮಲಮೂತ್ರ ವಿಸರ್ಜನೆ ಮಾಡಬಾರದು. ಭೋಜನ, ಶಯನ, ಸ್ನಾನ, ಮಲಮೂತ್ರ ವಿಸರ್ಜನ, ಬೀದಿಯಲ್ಲಿ ತಿರುಗಾಡುವದು ಇವೆಲ್ಲ ಮಾಡಿ ಮುಗಿದ ಬಳಿಕ ಮನೆಗೆ ಬಂದು ಎರಡು ಕೈ, ಎರಡು ಕಾಲು ಮತ್ತು ಮುಖ ಇವು ಐದನ್ನು ಚೆನ್ನಾಗಿ ನೀರಿನಿಂದ ತೊಳೆದುಕೊಳ್ಳಬೇಕು. ಅನಂತರ ಆಚಮನ ಮಾಡಬೇಕು. ನದಿ, ಸ್ಮಶಾನ, ಬೂದಿ, ಗೊಬ್ಬರ, ಬಿತ್ತದ ಹೊಲ, ಹುಲ್ಲುಗಾವಲು ಮುಂತಾದ ಸ್ಥಳಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡಬಾರದು. ಬಾವಿಯಿಂದ ಎತ್ತಿದ ನೀರಿನಿಂದಲೇ ಶೌಚ ಕ್ರಿಯೆಯನ್ನು ಮಾಡಬೇಕು. ದುರ್ಗಂಧವು ಪೂರ್ಣ ತೊಳೆದು ಹೋಗುವವರೆಗೆ ಮಣ್ಣು ಹಚ್ಚಿ ನೀರಿನಿಂದ ಕೈಕಾಲುಗಳನ್ನು ತೊಳೆದುಕೊಳ್ಳಬೇಕು. ಇದಕ್ಕೆ 'ಮೃತ್ತಿಕಾ ಶೌಚ' ಎನ್ನುವರು. ಇದಕ್ಕೆ ನೀರೊಳಗಿನ ಮಣ್ಣು ದೇವಸ್ಥಾನದ ಮಣ್ಣು, ಹುತ್ತಿನ ಮಣ್ಣು ಇವುಗಳನ್ನು ಉಪಯೋಗಿಸಬಾರದು.

## ಸರ್ವಸಾಮಾನ್ಯ ಧರ್ಮ

ಇವಲ್ಲದೇ ಕೆಲವೊಂದು ಸಾಮಾನ್ಯ ಧರ್ಮಗಳನ್ನು ಎಲ್ಲರೂ ಪಾಲಿಸಬೇಕು. ಇವುಗಳನ್ನು ಲಕ್ಷದಲ್ಲಿ ಇಟ್ಟುಕೊಳ್ಳಬೇಕು. ಸೂರ್ಯನಿಗೆ ಪ್ರತಿದಿನ ಅರ್ಘ್ಯ ಕೊಡಬೇಕು. ಹೆಚ್ಚು ಚಿಂತೆ ಮಾಡಬಾರದು. ತನ್ನಷ್ಟಕ್ಕೆ ತಾನೇ ಎಂದೂ ಹೊಡೆದುಕೊಳ್ಳಬಾರದು. ತನ್ನ ಎರಡೂ ಕೈಗಳಿಂದ ತನ್ನದೇ ಆದ ತಲೆಯನ್ನು ತಿಕ್ಕುವದು ತುರಿಸುವದು, ತೂಗಾಡಿಸುವದನ್ನು ಮಾಡಬಾರದು.

ಸ್ತ್ರೀಯರನ್ನು ರಕ್ಷಿಸಬೇಕು. ಕಾರಣವಿಲ್ಲದೆ ನಾರಿಯರ ಬಗ್ಗೆ ಈರ್ಷೆ, ಅಸೂಯೆಗಳನ್ನು ಮಾಡಬಾರದು. ಯಾವ ಪ್ರಾಣಿಗಳಿಗೂ ದ್ರೋಹ ಬಗೆಯಬಾರದು. ಮನದಲ್ಲಿ ನಿತ್ಯವೂ ಶಿವನ ಧ್ಯಾನ ಮಾಡಬೇಕು. ದೇವರನ್ನು ಚಿತ್ತದಲ್ಲಿ ಇರಿಸಿಕೊಂಡೇ ನ್ಯಾಯಮಾರ್ಗದಿಂದ ಧನವನ್ನು ಸಂಪಾದಿಸಬೇಕು. ಜಿಪುಣನಾಗಬಾರದು, ಕೃತಘ್ನನಾಗಬಾರದು.

ಪರದ್ರೋಹಕ್ಕೆ ಎಳೆಸುವ ಕಾರ್ಯಗಳಲ್ಲಿ ಮನಸ್ಸನ್ನು ಹಾಕಬಾರದು. ಕೈ ಕಾಲುಗಳಲ್ಲಿ ಚಂಚಲತೆ ಇರಬಾರದು. ಕಣ್ಣುಗಳಲ್ಲಿ ಚಾಪಲ್ಯವು ತೋರುವಂತೆ ಹಾವಭಾವವನ್ನು ಮಾಡಬಾರದು. ಸರಳವೃತ್ತಿಯಿಂದ ಇರಬೇಕು. ವಾಣಿಯಿಂದಾಗಲೀ, ತನ್ನ ಅಂಗಾಂಗಗಳಿಂದಾಗಲಿ, ಚಪಲತೆ ತೋರಬಾರದು. ದುರ್ಜನರ ಸಹವಾಸ ಮಾಡಬಾರದು. ವ್ಯರ್ಥ ವಿವಾದ, ಅಕಾರಣ ದ್ವೇಷ ಎಂದೂ ಮಾಡಬಾರದು. ಸಾಮ, ದಾನ, ಭೇದ ಈ ಮೂರು ಉಪಾಯಗಳಿಂದಲೇ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ಅನಿವಾರ್ಯ ಪ್ರಸಂಗದಲ್ಲಿ ಮಾತ್ರ ನಾಲ್ಕನೆಯದಾದ ದಂಡೋಪಾಯವನ್ನು ಅವಲಂಬಿಸಬೇಕು. ಮುರುಕು ಆಸನ, ಮುರಿದ ಪಲ್ಲಂಗು, ಒಡೆದ ಪಾತ್ರೆ, ಹರಿದ ಬಟ್ಟೆಗಳನ್ನು ಉಪಯೋಗಿಸಕೂಡದು.

ಶಂಕರ ಮತ್ತು ನಂದಿ ಇವೆರಡರ ನಡುವೆ ಹಾಯ್ದು ಹೋಗಬಾರದು. ಒಂದೇ ಅರಿವೆಯನ್ನು ಧಾರಣ ಮಾಡಿ ಊಟ ಮಾಡಬಾರದು. ಹಾಗೇ ಅಗ್ನಿಯಲ್ಲಿ ಆಹುತಿ ನೀಡಬಾರದು. ದೇವರ ಪೂಜೆಯನ್ನು ಒಂದು ವಸ್ತ್ರದ ಮೇಲೆ ಮಾಡಬಾರದು. ಎಲ್ಲ ಕಾರ್ಯಗಳನ್ನು ಮಾಡುವಾಗಲೂ ಶಿವನಾಮವನ್ನು ಸದಾಸರ್ವದಾ ಉಚ್ಚರಿಸುತ್ತಲೇ ಕಾರ್ಯ ಮಾಡಬೇಕು. ಹೊಲದ ಕೆಲಸ ಮಾಡುವದು, ಬೀಸುವದು, ಕಸಗೂಡಿಸುವುದು, ನೀರು ಸಿಂಪಡಿಸುವುದು ಹಾಗೂ ಕುಡಿಯುವುದು. ಆಟ, ನಿದ್ದೆ, ಊಟ, ವಿಶ್ರಾಂತಿ, ಎಚ್ಚರದ ಅವಸ್ಥೆ, ಕಾರ್ಯದ ಪ್ರಾರಂಭ, ಕಾರ್ಯದ ಮುಕ್ತಾಯ, ಬಾಯಿಂದ ಪ್ರಿಯವಚನ, ಪಾನೀಯಗಳನ್ನು ಕುಡಿಯುವುದು, ಮೂಸಿ ನೋಡುವುದು, ಸ್ಪರ್ಶ ಮಾಡುವದು, ಎದ್ದು ಹೊರಟು ಹೋಗುವದು, ಕೇಳುವುದು, ಹೇಳಲು ಬಯಸುವುದು, ಮೈಥುನ, ಶೌಚ ಕರ್ಮ - ಈ ಇಪ್ಪತ್ತು ಕಾರ್ಯಗಳನ್ನು ಮಾಡುವಾಗ ತಪ್ಪದೇ ಯಾವನು ಶಂಕರನ ನಾಮಸ್ಮರಣವನ್ನು ಮಾಡುವನೋ ಅವನೇ ನಿಜವಾದ ಶಿವಭಕ್ತ. ಉಳಿದವರೆಲ್ಲರೂ ನಾಮಮಾತ್ರಕ್ಕೆ ಶಿವಭಕ್ತರು. ಪ್ರತಿಯೊಂದು ಕಾರ್ಯದಲ್ಲಿಯೂ ಶಿವ ಸ್ಮರಣೆ ಮಾಡುವ ಶಿವಭಕ್ತನು ಕೊನೆಗೆ ಶಿವಸ್ವರೂಪನೇ ಆಗಿ ಕಡೆಗೆ ಶಿವನನ್ನು ಹೊಂದುತ್ತಾನೆ.

## ಹೆಣ್ಣು ಮಕ್ಕಳೊಡನೆ ಹೇಗೆ ಮಾತನಾಡಬೇಕು ?

ಧೀಮಂತ ಪುರುಷರು ಹಾಗೂ ವಿವೇಕಿ ಪುರುಷರು ಪರಸ್ತ್ರೀಯರೊಡನೆ ಮಾತು ಕತೆಗಳನ್ನಾಡಬಾರದು, ಅನಿವಾರ್ಯವಾಗಿ ಮಾತನಾಡಲೇಬೇಕಾಗಿ ಬಂದಾಗ 'ಅಮ್ಮ ಅಕ್ಕ ಎಂದು' ಕಿರಿಯರಿದ್ದರೆ, ತಂಗಿ, ಮಗಳೇ ಎಂದು ಮೊದಲಾಗಿ ಸಂಬೋಧಿಸಿ ಮಾತನಾಡಬೇಕು.

"ಸ್ವಸ್ರಾ ದುಹಿತ್ರಾ ಮಾತ್ರಾ ವಾ ನೈಕಾಂತಾಸನಮಾಚರೇತ್ ।
ದುರ್ಜಯೋ ಹೀಂದ್ರಿಯಗ್ರಾಮೋ ಮುಹ್ಯತೇ ಪಂಡಿತೋಽಪಿ ಸನ್ ॥

ತಾಯಿ, ತಂಗಿ, ಮಗಳು ಅಥವಾ ಮತ್ತೆ ಯಾವುದೇ ಸಂಬಂಧಿಕ ಹೆಣ್ಣು ಮಕ್ಕಳೊಡನೆ ಏಕಾಂತದಲ್ಲಿ ಇರಬಾರದು. ಇಂದ್ರಿಯಗಳು ಸ್ವಾಭಾವಿಕವಾಗಿ ಗೆಲ್ಲಲು ಅಶಕ್ಯವಾಗಿರುತ್ತವೆ. ಓದು ಬರಹ ಬಲ್ಲ ವಿದ್ವಾಂಸರು ಕೂಡ ಈ ವಿಷಯದಲ್ಲಿ ಮುಗ್ಗರಿಸುವದುಂಟು.

## ಮತ್ತೆ ಕೆಲವು ವಿಧಿ - ನಿಷೇಧಗಳು

ಗುರುಗಳು ಮನೆಗೆ ಬಂದರೆ ಅವರಿಗೆ ಎದ್ದು ನಿಂತು ಸ್ವಾಗತ ಮಾಡಿ ಆಸನದ ಮೇಲೆ ಕೂಡಿಸಬೇಕು. ಪಾದಮುಟ್ಟಿ ನಮಸ್ಕರಿಸಬೇಕು. ರಾತ್ರಿ ಮಲಗುವಾಗ ಉತ್ತರ ಮತ್ತು ಪಶ್ಚಿಮಕ್ಕೆ ತಲೆ ಮಾಡಿ ಮಲಗಿಕೊಳ್ಳಬಾರದು. ರಜಸ್ವಲೆಯಾದ ಸ್ತ್ರೀಯರ ದರ್ಶನ, ಸ್ಪರ್ಶ, ಸಂಭಾಷಣಗಳನ್ನು ಮಾಡಕೂಡದು. ನೀರಿನಲ್ಲಿ ಮಲಮೂತ್ರ ವಿಸರ್ಜನೆ ಮೈಥುನಾದಿಗಳನ್ನು ಮಾಡಕೂಡದು. ಶಿವಭಕ್ತರಾದ ದೇವತೆಗಳಿಗೂ, ಮಾನವರಿಗೂ, ಋಷಿಗಳಿಗೂ, ಪಿತೃಗಳಿಗೂ ನೈವೇದ್ಯ, ವೈಶ್ಯದೇವ, ಹಸ್ತೋದಕ ಮೊದಲಾದವುಗಳ ಮುಖಾಂತರ ಅನ್ನವನ್ನು ನೀಡಿ ಶೇಷವಾದ ಅನ್ನವನ್ನು ಮಾತ್ರ ತಾನು ತಿನ್ನಬೇಕು. ಊಟ ಮಾಡುವಾಗ ಮಡಿಬಟ್ಟೆ ಉಟ್ಟು ಆಚಮನ ಮಾಡಿ ಪೂರ್ವ ಅಥವಾ ಉತ್ತರಕ್ಕೆ ಮುಖಮಾಡಿ ಮೌನದಿಂದಲೇ ಊಟ ಮಾಡಬೇಕು. ಅಡುಗೆಯ ಸಿಹಿ, ಕಹಿ ಬಗೆಗೆ, ರುಚಿ, ರಸದ ಬಗೆಗೆ ಭೋಜನ ಸಮಯದಲ್ಲಿ ಚರ್ಚೆ ಮಾಡಬಾರದು. ವಸ್ತ್ರವಿಲ್ಲದೆ, ಬರಿಮೈಯಿಂದ ಸ್ನಾನ, ಶಯನ, ಪದಚಲನಗಳನ್ನು ಮಾಡಬಾರದು.

ಗುರುಹಿರಿಯರು ತಪ್ಪು ಮಾಡಿದರೆ, ಅದನ್ನು ಬೇರೊಬ್ಬರಿಗೆ ಹೇಳಬಾರದು. ಅವರು ಸಿಟ್ಟಿಗೆದ್ದರೆ, ಸೌಮ್ಯವಾಗಿಯೇ ಅವರಿಗೆ ಶಾಂತರಾಗಲು ಹೇಳಬೇಕು. ಗುರುನಿಂದೆಯನ್ನು ಮಾಡಬಾರದು, ಕೇಳಲೂಬಾರದು. ನೂರು ಕಾರ್ಯಬಿಟ್ಟು ಧಾರ್ಮಿಕ ಉಪದೇಶ ಅಥವಾ ಕಥಾ ಪುರಾಣಾದಿಗಳನ್ನು ಅವಶ್ಯವಾಗಿ ಕೇಳಬೇಕು. ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಅತಿಥಿಗಳ ಪೂಜೆಮಾಡಿಯೇ ಅವರಿಗೆ ಊಟಕ್ಕೆ ಹಾಕಿಯೇ ನಂತರ ತಾನು ಊಟ ಮಾಡಬೇಕು. ಸಂಜೆ, ಮುಂಜಾನೆಗಳಲ್ಲಿ ಭೋಜನ ಶಯನಗಳನ್ನೂ ಮತ್ತು ಸಾಯಂಸಂಧ್ಯಾಕಾಲದಲ್ಲಿ ಅಧ್ಯಯನವನ್ನೂ ಮಾಡಬಾರದು. ಸಂಜೆ ಮುಂಜಾವುಗಳಲ್ಲಿ ಊಟ ಮಾಡುವದು ಸುರಾಪಾನಕ್ಕೆ ಸಮಾನ.

## ಸರ್ವಸಾಮಾನ್ಯ ಧರ್ಮ

ಇವಲ್ಲದೇ ಕೆಲವೊಂದು ಸಾಮಾನ್ಯ ಧರ್ಮಗಳನ್ನು ಎಲ್ಲರೂ ಪಾಲಿಸಬೇಕು. ಇವುಗಳನ್ನು ಲಕ್ಷದಲ್ಲಿ ಇಟ್ಟುಕೊಳ್ಳಬೇಕು. ಸೂರ್ಯನಿಗೆ ಪ್ರತಿದಿನ ಅರ್ಘ್ಯ ಕೊಡಬೇಕು. ಹೆಚ್ಚು ಚಿಂತೆ ಮಾಡಬಾರದು. ತನ್ನಷ್ಟಕ್ಕೆ ತಾನೇ ಎಂದೂ ಹೊಡೆದುಕೊಳ್ಳಬಾರದು. ತನ್ನ ಎರಡೂ ಕೈಗಳಿಂದ ತನ್ನದೇ ಆದ ತಲೆಯನ್ನು ತಿಕ್ಕುವದು ತುರಿಸುವದು, ತೂಗಾಡಿಸುವದನ್ನು ಮಾಡಬಾರದು.

ಸ್ತ್ರೀಯರನ್ನು ರಕ್ಷಿಸಬೇಕು. ಕಾರಣವಿಲ್ಲದೆ ನಾರಿಯರ ಬಗ್ಗೆ ಈರ್ಷೆ, ಅಸೂಯೆಗಳನ್ನು ಮಾಡಬಾರದು. ಯಾವ ಪ್ರಾಣಿಗಳಿಗೂ ದ್ರೋಹ ಬಗೆಯಬಾರದು. ಮನದಲ್ಲಿ ನಿತ್ಯವೂ ಶಿವನ ಧ್ಯಾನ ಮಾಡಬೇಕು. ದೇವರನ್ನು ಚಿತ್ತದಲ್ಲಿ ಇರಿಸಿಕೊಂಡೇ ನ್ಯಾಯಮಾರ್ಗದಿಂದ ಧನವನ್ನು ಸಂಪಾದಿಸಬೇಕು. ಜಿಪುಣನಾಗಬಾರದು, ಕೃತಘ್ನನಾಗಬಾರದು.

ಪರದ್ರೋಹಕ್ಕೆ ಎಳೆಸುವ ಕಾರ್ಯಗಳಲ್ಲಿ ಮನಸ್ಸನ್ನು ಹಾಕಬಾರದು. ಕೈ ಕಾಲುಗಳಲ್ಲಿ ಚಂಚಲತೆ ಇರಬಾರದು. ಕಣ್ಣುಗಳಲ್ಲಿ ಚಾಪಲ್ಯವು ತೋರುವಂತೆ ಹಾವಭಾವವನ್ನು ಮಾಡಬಾರದು. ಸರಳವೃತ್ತಿಯಿಂದ ಇರಬೇಕು. ವಾಣಿಯಿಂದಾಗಲೀ, ತನ್ನ ಅಂಗಾಂಗಗಳಿಂದಾಗಲಿ, ಚಪಲತೆ ತೋರಬಾರದು. ದುರ್ಜನರ ಸಹವಾಸ ಮಾಡಬಾರದು. ವ್ಯರ್ಥ ವಿವಾದ, ಅಕಾರಣ ದ್ವೇಷ ಎಂದೂ ಮಾಡಬಾರದು. ಸಾಮ, ದಾನ, ಭೇದ ಈ ಮೂರು ಉಪಾಯಗಳಿಂದಲೇ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ಅನಿವಾರ್ಯ ಪ್ರಸಂಗದಲ್ಲಿ ಮಾತ್ರ ನಾಲ್ಕನೆಯದಾದ ದಂಡೋಪಾಯವನ್ನು ಅವಲಂಬಿಸಬೇಕು. ಮುರುಕು ಆಸನ, ಮುರಿದ ಪಲ್ಲಂಗು, ಒಡೆದ ಪಾತ್ರೆ, ಹರಿದ ಬಟ್ಟೆಗಳನ್ನು ಉಪಯೋಗಿಸಕೂಡದು.

ಶಂಕರ ಮತ್ತು ನಂದಿ ಇವೆರಡರ ನಡುವೆ ಹಾಯ್ದು ಹೋಗಬಾರದು. ಒಂದೇ ಅರಿವೆಯನ್ನು ಧಾರಣ ಮಾಡಿ ಊಟ ಮಾಡಬಾರದು. ಹಾಗೇ ಅಗ್ನಿಯಲ್ಲಿ ಆಹುತಿ ನೀಡಬಾರದು. ದೇವರ ಪೂಜೆಯನ್ನು ಒಂದು ವಸ್ತ್ರದ ಮೇಲೆ ಮಾಡಬಾರದು. ಎಲ್ಲ ಕಾರ್ಯಗಳನ್ನು ಮಾಡುವಾಗಲೂ ಶಿವನಾಮವನ್ನು ಸದಾಸರ್ವದಾ ಉಚ್ಚರಿಸುತ್ತಲೇ ಕಾರ್ಯ ಮಾಡಬೇಕು. ಹೊಲದ ಕೆಲಸ ಮಾಡುವದು, ಬೀಸುವದು, ಕಸಗೂಡಿಸುವುದು, ನೀರು ಸಿಂಪಡಿಸುವುದು ಹಾಗೂ ಕುಡಿಯುವುದು. ಆಟ, ನಿದ್ದೆ, ಊಟ, ವಿಶ್ರಾಂತಿ, ಎಚ್ಚರದ ಅವಸ್ಥೆ, ಕಾರ್ಯದ ಪ್ರಾರಂಭ, ಕಾರ್ಯದ ಮುಕ್ತಾಯ, ಬಾಯಿಂದ ಪ್ರಿಯವಚನ, ಪಾನೀಯಗಳನ್ನು ಕುಡಿಯುವುದು, ಮೂಸಿ ನೋಡುವುದು, ಸ್ಪರ್ಶ ಮಾಡುವದು, ಎದ್ದು ಹೊರಟು ಹೋಗುವದು, ಕೇಳುವುದು, ಹೇಳಲು ಬಯಸುವುದು, ಮೈಥುನ, ಶೌಚ ಕರ್ಮ - ಈ ಇಪ್ಪತ್ತು ಕಾರ್ಯಗಳನ್ನು ಮಾಡುವಾಗ ತಪ್ಪದೇ ಯಾವನು ಶಂಕರನ ನಾಮಸ್ಮರಣವನ್ನು ಮಾಡುವನೋ ಅವನೇ ನಿಜವಾದ ಶಿವಭಕ್ತ. ಉಳಿದವರೆಲ್ಲರೂ ನಾಮಮಾತ್ರಕ್ಕೆ ಶಿವಭಕ್ತರು. ಪ್ರತಿಯೊಂದು ಕಾರ್ಯದಲ್ಲಿಯೂ ಶಿವ ಸ್ಮರಣೆ ಮಾಡುವ ಶಿವಭಕ್ತನು ಕೊನೆಗೆ ಶಿವಸ್ವರೂಪನೇ ಆಗಿ ಕಡೆಗೆ ಶಿವನನ್ನು ಹೊಂದುತ್ತಾನೆ.

## ಹೆಣ್ಣು ಮಕ್ಕಳೊಡನೆ ಹೇಗೆ ಮಾತನಾಡಬೇಕು ?

ಧೀಮಂತ ಪುರುಷರು ಹಾಗೂ ವಿವೇಕಿ ಪುರುಷರು ಪರಸ್ತ್ರೀಯರೊಡನೆ ಮಾತು ಕತೆಗಳನ್ನಾಡಬಾರದು, ಅನಿವಾರ್ಯವಾಗಿ ಮಾತನಾಡಲೇಬೇಕಾಗಿ ಬಂದಾಗ 'ಅಮ್ಮ ಅಕ್ಕ ಎಂದು' ಕಿರಿಯರಿದ್ದರೆ, ತಂಗಿ, ಮಗಳೇ ಎಂದು ಮೊದಲಾಗಿ ಸಂಬೋಧಿಸಿ ಮಾತನಾಡಬೇಕು.

"ಸ್ವಸ್ರಾ ದುಹಿತ್ರಾ ಮಾತ್ರಾ ವಾ ನೈಕಾಂತಾಸನಮಾಚರೇತ್ ।
ದುರ್ಜಯೋ ಹೀಂದ್ರಿಯಗ್ರಾಮೋ ಮುಹ್ಯತೇ ಪಂಡಿತೋಽಪಿ ಸನ್ ॥

ತಾಯಿ, ತಂಗಿ, ಮಗಳು ಅಥವಾ ಮತ್ತೆ ಯಾವುದೇ ಸಂಬಂಧಿಕ ಹೆಣ್ಣು ಮಕ್ಕಳೊಡನೆ ಏಕಾಂತದಲ್ಲಿ ಇರಬಾರದು. ಇಂದ್ರಿಯಗಳು ಸ್ವಾಭಾವಿಕವಾಗಿ ಗೆಲ್ಲಲು ಅಶಕ್ಯವಾಗಿರುತ್ತವೆ. ಓದು ಬರಹ ಬಲ್ಲ ವಿದ್ವಾಂಸರು ಕೂಡ ಈ ವಿಷಯದಲ್ಲಿ ಮುಗ್ಗರಿಸುವದುಂಟು.

## ಮತ್ತೆ ಕೆಲವು ವಿಧಿ - ನಿಷೇಧಗಳು

ಗುರುಗಳು ಮನೆಗೆ ಬಂದರೆ ಅವರಿಗೆ ಎದ್ದು ನಿಂತು ಸ್ವಾಗತ ಮಾಡಿ ಆಸನದ ಮೇಲೆ ಕೂಡಿಸಬೇಕು. ಪಾದಮುಟ್ಟಿ ನಮಸ್ಕರಿಸಬೇಕು. ರಾತ್ರಿ ಮಲಗುವಾಗ ಉತ್ತರ ಮತ್ತು ಪಶ್ಚಿಮಕ್ಕೆ ತಲೆ ಮಾಡಿ ಮಲಗಿಕೊಳ್ಳಬಾರದು. ರಜಸ್ವಲೆಯಾದ ಸ್ತ್ರೀಯರ ದರ್ಶನ, ಸ್ಪರ್ಶ, ಸಂಭಾಷಣಗಳನ್ನು ಮಾಡಕೂಡದು. ನೀರಿನಲ್ಲಿ ಮಲಮೂತ್ರ ವಿಸರ್ಜನೆ ಮೈಥುನಾದಿಗಳನ್ನು ಮಾಡಕೂಡದು. ಶಿವಭಕ್ತರಾದ ದೇವತೆಗಳಿಗೂ, ಮಾನವರಿಗೂ, ಋಷಿಗಳಿಗೂ, ಪಿತೃಗಳಿಗೂ ನೈವೇದ್ಯ, ವೈಶ್ಯದೇವ, ಹಸ್ತೋದಕ ಮೊದಲಾದವುಗಳ ಮುಖಾಂತರ ಅನ್ನವನ್ನು ನೀಡಿ ಶೇಷವಾದ ಅನ್ನವನ್ನು ಮಾತ್ರ ತಾನು ತಿನ್ನಬೇಕು. ಊಟ ಮಾಡುವಾಗ ಮಡಿಬಟ್ಟೆ ಉಟ್ಟು ಆಚಮನ ಮಾಡಿ ಪೂರ್ವ ಅಥವಾ ಉತ್ತರಕ್ಕೆ ಮುಖಮಾಡಿ ಮೌನದಿಂದಲೇ ಊಟ ಮಾಡಬೇಕು. ಅಡುಗೆಯ ಸಿಹಿ, ಕಹಿ ಬಗೆಗೆ, ರುಚಿ, ರಸದ ಬಗೆಗೆ ಭೋಜನ ಸಮಯದಲ್ಲಿ ಚರ್ಚೆ ಮಾಡಬಾರದು. ವಸ್ತ್ರವಿಲ್ಲದೆ, ಬರಿಮೈಯಿಂದ ಸ್ನಾನ, ಶಯನ, ಪದಚಲನಗಳನ್ನು ಮಾಡಬಾರದು.

ಗುರುಹಿರಿಯರು ತಪ್ಪು ಮಾಡಿದರೆ, ಅದನ್ನು ಬೇರೊಬ್ಬರಿಗೆ ಹೇಳಬಾರದು. ಅವರು ಸಿಟ್ಟಿಗೆದ್ದರೆ, ಸೌಮ್ಯವಾಗಿಯೇ ಅವರಿಗೆ ಶಾಂತರಾಗಲು ಹೇಳಬೇಕು. ಗುರುನಿಂದೆಯನ್ನು ಮಾಡಬಾರದು, ಕೇಳಲೂಬಾರದು. ನೂರು ಕಾರ್ಯಬಿಟ್ಟು ಧಾರ್ಮಿಕ ಉಪದೇಶ ಅಥವಾ ಕಥಾ ಪುರಾಣಾದಿಗಳನ್ನು ಅವಶ್ಯವಾಗಿ ಕೇಳಬೇಕು. ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಅತಿಥಿಗಳ ಪೂಜೆಮಾಡಿಯೇ ಅವರಿಗೆ ಊಟಕ್ಕೆ ಹಾಕಿಯೇ ನಂತರ ತಾನು ಊಟ ಮಾಡಬೇಕು. ಸಂಜೆ, ಮುಂಜಾನೆಗಳಲ್ಲಿ ಭೋಜನ ಶಯನಗಳನ್ನೂ ಮತ್ತು ಸಾಯಂಸಂಧ್ಯಾಕಾಲದಲ್ಲಿ ಅಧ್ಯಯನವನ್ನೂ ಮಾಡಬಾರದು. ಸಂಜೆ ಮುಂಜಾವುಗಳಲ್ಲಿ ಊಟ ಮಾಡುವದು ಸುರಾಪಾನಕ್ಕೆ ಸಮಾನ.

ದಾರಿಯಲ್ಲಿ ಉಗುಳುವುದು, ಮೂಗು ಹಿಂಡುವುದು ಪಾಪಕರ. ಕಪ್ಪು ಬಣ್ಣದ ಬಟ್ಟೆಯನ್ನು ಹೊದೆಯಬಾರದು. ಬಟ್ಟೆಗಳನ್ನು ತಿರುವು ಮುರುವಾಗಿ ಧರಿಸಬಾರದು. ಅಂಚು ಸೆರಗು ಇಲ್ಲದ ಬಟ್ಟೆಗಳನ್ನು ಧರಿಸಬಾರದು. ಒಂದು ಕಡೆಯಲ್ಲಿ ಹರಿದ, ಹೊಲಿದ, ಹೊಲಸಾದ, ಸುಟ್ಟುಹೋದ ಬಟ್ಟೆಗಳನ್ನು ಬಿಟ್ಟು ಬಿಡಬೇಕು. ಹೊದೆಯಬಾರದು, ಉಡಲೂಬಾರದು. ಪೂಜೆ ಸಂಧ್ಯಾವಂದನೆ ಮುಂತಾದ ಧರ್ಮ ಕಾರ್ಯ ಪ್ರಾರಂಭದಲ್ಲಿ ಎರಡೂ ಕೈಕಾಲು ಮುಖ ಇವು ಐದೂ ತೊಳೆದುಕೊಂಡು ಆಸನದ ಮೇಲೆ ಕೂಡಬೇಕು. ಮೂರು ಸಲ ಆಚಮನ ಮಾಡಬೇಕು. ಎರಡು ಸಲ ಮುಖ ತೊಳೆದುಕೊಳ್ಳಬೇಕು. ಮತ್ತೆ ನೀರಿನಿಂದ ಬಾಯಿ, ಕಣ್ಣು, ತಲೆ ಕಿವಿ ಮೂಗುಗಳನ್ನು ಸ್ಪರ್ಶ ಮಾಡಬೇಕು. ಮತ್ತೆ ಎರಡು ಬಾರಿ ಆಚಮನ ಮಾಡಿ ಎಲ್ಲ ಕರ್ಮಗಳನ್ನು ಮಾಡಬೇಕು. ಮಡಿಯಿಂದ ಕುಳಿತಾಗ ಸೀನು ಬಂದರೆ, ಉಗುಳು ಬಂದರೆ ಹಲ್ಲಿನಲ್ಲಿ ಅಗಳು ಬಂದರೆ, ಮತ್ತೆ ಯಾವುದಾದರೂ ಪದಾರ್ಥವು ಬಂದರೆ, ಪತಿತರ ಜೊತೆಗೆ ಮಾತನಾಡುವಾಗ ಪ್ರಸಂಗ ಬಂದರೆ, ಆಚಮನ ಮಾಡಿ ಮತ್ತೆ ತನ್ನ ಪೂಜಾ ಆಹ್ನಿಕವನ್ನು ಮುಂದುವರಿಸಬೇಕು.

ವಿದ್ವಾನನಾದ ಮನುಷ್ಯನು ವೇದಾಧ್ಯಯನವನ್ನು ಅವಶ್ಯವಾಗಿ ಮಾಡಬೇಕು. ನ್ಯಾಯಮಾರ್ಗದಲ್ಲಿಯೇ ಧನವನ್ನು ಸಂಪಾದಿಸಬೇಕು. ಆತ್ಮಕಲ್ಯಾಣಕ್ಕಾಗಿ ಯಜ್ಞಯಾಗ ದೇವತಾರ್ಚನಾದಿಗಳನ್ನು ಮಾಡಬೇಕು. ತನಗಿಂತ ಕೆಳಗಿನ ಮಟ್ಟದ ಜನರೊಡನೆ ಮಾತನಾಡುವಾಗಲೂ ನೀನು ತಾನು ಎಂದು ಏಕವಚನದಲ್ಲಿ ಮಾತನಾಡಬಾರದು. ವಿವೇಕಿಗಳಾದವರು ತೀರ್ಥಸ್ನಾನ, ಉಪವಾಸ ವ್ರತ, ಸತ್ಪಾತ್ರ ದಾನ, ಹೋಮ ಜಪ, ಯಜ್ಞ, ದೇವತಾಪೂಜೆ, ಶಿವೋಪಾಸನೆಗಳಿಂದ ತನ್ನ ಅಂತಃಕರಣವನ್ನು ಶೋಧಿಸಿಕೊಳ್ಳಬೇಕು. ಒಟ್ಟಾರೆ, ಯಾವ ಕಾರ್ಯವನ್ನು ಮಾಡುವಾಗಲೂ ಅಥವಾ ಮಾಡಿದ ನಂತರವೂ ತನ್ನ ವಿಷಯದಲ್ಲಿ ಹೆರವರಿಗೆ ಜಿಗುಪ್ಸೆ ಹುಟ್ಟುವುದಿಲ್ಲವೋ ಅಂಥ ಕೆಲಸಗಳನ್ನು ಮಾತ್ರ ಮಾಡಬೇಕು. ಇದೆಲ್ಲವನ್ನು ನಾನು ಸದಾಚಾರ ವಿಷಯವನ್ನು ಸಂಕ್ಷಿಪ್ತವಾಗಿ ಹೇಳಿದೆ. ಸ್ಮೃತಿ ಪುರಾಣದಿಂದ ಈ ವಿಷಯದಲ್ಲಿ ಹೆಚ್ಚಿನ ವಿವರವನ್ನು ಪಡೆಯಬೇಕು.

**ನಾರದ** : ಮಹಾಕಾಲನು ಹೀಗೆ ಧರ್ಮೋಪದೇಶ ನೀಡುವಾಗ ಆಕಾಶದಲ್ಲಿ ಮಹಾಶಬ್ದವಾಯಿತು. ಮಹಾಕಾಲನು ಶಿವಲೋಕಕ್ಕೆ ತೆರಳಿದನು. ಕುರುನಂದನ ! ಸ್ವಯಂಭೂ ಲಿಂಗವು ಮಹೀಸಾಗರ ಸಂಗಮ ತೀರ್ಥದಲ್ಲಿ ಉದ್ಭವಿಸಿದ ಸಮಾಚಾರವನ್ನು ನಾನು ಈವರೆಗೆ ನಿನಗೆ ತಿಳಿಸಿ ಹೇಳಿದೆ. ಮಹಾಕಾಲ ಈ ಕೂಪ ಮತ್ತು ಸರೋವರಗಳು ಕೂಡ ಪರಮಪವಿತ್ರ ಹಾಗೂ ಸಿದ್ಧಿದಾಯಕ. ಈ ಮಹೀಸಾಗರ ಸಂಗಮ ತೀರ್ಥದಲ್ಲಿ ಒಟ್ಟು ಏಳು ಲಿಂಗಗಳು ಪ್ರಕಟವಾಗಿರುತ್ತವೆ. ಈ ಸಪ್ತ ಶಿವಲಿಂಗಗಳನ್ನು ಆರಾಧನೆ, ಉಪಾಸನೆ, ಅರ್ಚನೆ ಮಾಡಿದವರು ಮಹಾಕಾಲನಂತೆ ಶಿವಸಾರೂಪ್ಯವನ್ನು ಹೊಂದುತ್ತಾರೆ. ಇದನ್ನು ಓದಿದವರು ಧನ್ಯ. ಕೇಳಿದವರಿಗೆ ಮಹಾಪುಣ್ಯ.

## ಮಹೀಸಾಗರ ಸಂಗಮ ತೀರ್ಥದಲ್ಲಿ ವಾಸುದೇವನ ಆಗಮನ ಮತ್ತು ಮೂರ್ತಿ ಪ್ರತಿಷ್ಠೆ

**ನಾರದ :** ಸುಭದ್ರಾವಲ್ಲಭಾ, ಮಹೀಸಾಗರ ಸಂಗಮದ ತಡಿ ಎಡೆಯಲ್ಲಿ ನಾನು ಒಂದು ಪುಣ್ಯಸ್ಥಾನವನ್ನು ಸ್ಥಾಪನೆ ಮಾಡಿದ ಬಳಿಕ ಕಾಲಾಂತರದಲ್ಲಿ ನನ್ನ ಮನದಲ್ಲಿ ಒಂದು ವಿಚಾರ ಬಂದಿತು - ''ತೀರ್ಥವು ಭಗವಾನ್ ವಾಸುದೇವನು ಇಲ್ಲದಿದ್ದರೆ ಉತ್ತಮ ತೀರ್ಥ ಹೇಗಾಗುವದು? ಸೂರ್ಯನು ಇಲ್ಲದಿದ್ದರೆ ಏನು ಚಂದ ಆಗಸ! ಚಂದ್ರನಿರದಿದ್ದರೆ ಏನು ಅಂದ ಅಂತರಿಕ್ಷ ! ಚಿಕ್ಕೆಗಳ ಬಳಗಕ್ಕಾದರೂ ಏನು ಶೋಭೆ ಚಂದ್ರನಿಲ್ಲದಿದ್ದರೆ ! ಅದರಂತೆ ಶ್ರೀಹರಿಯು ಭೂಷಣಗಳಿಗೆ ಭೂಷಣ, ಮಂಗಳಗಳಿಗೆ ಮಂಗಲ, ಮಂಡನಗಳಿಗೆ ಮಂಡನ. ಯಾವ ತೀರ್ಥ ಯಾವ ಮನೆ ಯಾವ ಹೃದಯ ಯಾವ ಶಾಸ್ತ್ರದಲ್ಲಿ ನನ್ನ ಸ್ವಾಮಿಯಾದ ಶ್ರೀ ಹರಿ ಇರುವದಿಲ್ಲವೋ ಅದೆಲ್ಲವೂ ದುಷ್ಟ, ಕೆಟ್ಟ. ಆದುದರಿಂದ ಹೇಗಾದರೂ ಮಾಡಿ ವರನೀಡುವ ಆ ಪುರುಷೋತ್ತಮನನ್ನು ಪ್ರಸನ್ನಗೊಳಿಸಬೇಕು. ಎಲ್ಲರ ಮೇಲೆ ಅನುಗ್ರಹದ ವೃಷ್ಟಿಯನ್ನು ಮಾಡಲಿಕ್ಕಾಗಿ ಈ ತೀರ್ಥಕ್ಕೆ ಅವನನ್ನು ಕಲಾ ಸಹಿತವಾಗಿ ಕರೆದುಕೊಂಡು ಬರಬೇಕು'' ಈ ವಿಚಾರ ನನ್ನ ತಲೆಯಲ್ಲಿ ಸುಳಿವುದು ಒಂದೇ ತಡ. ಅನುಷ್ಠಾನದಲ್ಲಿ ಕೂಡ ಅದನ್ನು ತಂದು ಬಿಟ್ಟೆ. ಜ್ಞಾನಯೋಗದಿಂದ ಆ ಯೋಗೀಶ್ವರನಾದ ವಿಷ್ಣುವನ್ನು ಸಂತುಷ್ಟನನ್ನಾಗಿ ಮಾಡಲು ತಪಸ್ಸಿಗೆ ತೊಡಗಿದೆ. ನೂರು ವರುಷಗಳ ವರೆಗೆ ನಡೆಯಿತು ನನ್ನ ಈ ವಿಷ್ಣುವಿನ ಉದ್ದೇಶದಿಂದ ಕೈಕೊಂಡ ತಪೋನುಷ್ಠಾನ.

ನನ್ನ ಅಂಗಾಂಗಗಳೆಲ್ಲವೂ ಇಂದ್ರಿಯಗಳ ಅಧೀನ. ಎಲ್ಲ ಇಂದ್ರಿಯಗಳು ಮನಸ್ಸಿನ ಅಂಕಿತದಲ್ಲಿ. ಮನಸ್ಸು ಶ್ರೀ ಹರಿಯ ಪಾದಗಳಲ್ಲಿ. ನನ್ನ ಕಣ್ಣಿನಲ್ಲಿ ವಾಸುದೇವನ ರೂಪ. ಅಂತಃಕರಣದಲ್ಲಿ ವಾಸುದೇವನ ವಾಸನಾಮಯ ರೂಪ. ನಾಲಿಗೆಯ ತುದಿಯಲ್ಲಿ ವಾಸುದೇವನ ಮಂತ್ರ. ನಿರಂತರ ಈ ವಾಸುದೇವನ ಮಂತ್ರ ಜಪವೇ ನನ್ನ ಘೋರ ತಪ. ಈ ನನ್ನ ತೀಕ್ಷ್ಣಾತಿ ತೀಕ್ಷ್ಣವಾದ ತಪೋನುಷ್ಠಾನದಿಂದ ಆ ಜಗದೀಶ್ವರನ ಹೃದಯ ಕರಗಿತು. ಕರುಳು ಎಳೆಯಿತು. ಕರುಣೆ ಉಕ್ಕಿತು. ಧಾವಿಸಿ ಬಂದ ಆ ಭಗವಂತ ನಾನಿದ್ದಲ್ಲಿಗೆ, ಕರುವಿದ್ದಲ್ಲಿ ಓಡಿ ಬರುವ ಹಸುವಿನಂತೆ. ಹಾರುವ ಹಕ್ಕಿಯ ಮೇಲೆ ಬಂದಿದ್ದ ಆ ಹರಿ, ಗರುಡಾರೂಢ ಸ್ವಾಮಿಯನ್ನು ಕಂಡು ನನ್ನ ಮೈತುಂಬ ಮುಳ್ಳು, ಕಣ್ಣ ತುಂಬ ನೀರು. ಹೃದಯ ತುಂಬ ಭಕ್ತಿಯ ಮಹಾಪೂರ. ನನಗೆ ಗೊತ್ತಿಲ್ಲದಂತೆಯೇ ನನ್ನ ನಡುನೆತ್ತಿ ಅವನ ಅಂಗಾಲನ್ನು ಒತ್ತಿತು. ಅವನ ಕಾಲಡಿಯ ಹುಡಿಯನ್ನು ಮುಡಿದುಕೊಂಡೆ ನನ್ನ ತಲೆಯ ಮೇಲೆ. ಎದ್ದು ನಿಂತೆ, ಕೈ ಜೋಡಿಸಿದೆ. ಗದ್ಗದ ಕಂಠದಲ್ಲಿ ಒಡೆದು ಹೋದ ಶಬ್ದದ ತುಣುಕುಗಳನ್ನು ಹೇಗೋ ಕೂಡಿಸಿದೆ. ಹೃದಯದ ಭಾವಕ್ಕೆ ಭಾಷೆಯ ಅಂಗಿಯನ್ನು ತೊಡಿಸಿದೆ. ನಮ್ರತೆಯಿಂದ ನುಡಿದೆ.

''ಮಹಾಪ್ರಭು ! ಬಹು ವರುಷಗಳ ಹಿಂದೆ ನಿನ್ನ ಶ್ವೇತದ್ವೀಪ ಎಂಬ ನೆಲೆಯಲ್ಲಿ ನಾನು ನಿನ್ನ ಹುಟ್ಟು ಇಲ್ಲದ ನಾಶವಿಲ್ಲದ ನರನಾರಾಯಣ ರೂಪವನ್ನು ನೋಡಿದ್ದೆ.

ಆ ನಿನ್ನ ಅಪರೂಪವಾದ ರೂಪವು ಇಂದಿಗೂ ಅಚ್ಚಳಿಯದೇ ಅಚ್ಚೊತ್ತಿದೆ ನನ್ನ ಚಿತ್ತಭಿತ್ತಿಯಲ್ಲಿ. ನನ್ನ ಮನೋಮಂದಿರದಲ್ಲಿ ನಿಚ್ಚಳವಾಗಿ ಮೂಡಿದ ಆ ನಿನ್ನ ನರನಾರಾಯಣ ರೂಪವು ನನಗೆ ಅತ್ಯಂತ ಅಚ್ಚು ಮೆಚ್ಚಿನ ರೂಪವಾಗಿದೆ. ಆ ನಿನ್ನ ದಿವ್ಯ ರೂಪವನ್ನು ಅನುದಿನವೂ ನೋಡಬೇಕೆಂಬ ಹಂಬಲ ನನಗೆ. ಅನುಗಾಲವೂ ಆದರ ದರ್ಶನದ ತವಕ. ಆದುದರಿಂದ ಭಗವನ್ ! ನಿನ್ನಲ್ಲಿ ನನ್ನದೊಂದು ಪ್ರಾರ್ಥನೆ. ನೀನು ನನ್ನ ಮೇಲೆ ಪ್ರಸನ್ನಾಗಿರುವೆಯಷ್ಟೆ! ಹಾಗಿದ್ದರೆ ಆ ನಿನ್ನ ನರನಾರಾಯಣ ರೂಪವನ್ನು ಇಲ್ಲಿ ಸ್ಥಾಪಿತವಾಗುವಂತೆ ಮಾಡು. ಆ ನಿನ್ನ ಒಂದು ಅಂಶವು ಇಲ್ಲಿಯೇ ನಿತ್ಯ ನಿರಂತರವೂ ನೆಲೆಸಲಿ. ದಯಮಾಡಿ ಮನ್ನಿಸು ಈ ನಿನ್ನ ಭಕ್ತನ ಬಿನ್ನಹವನ್ನು. ಇದೇ ನಾನು ನಿನಗೆ ಮಾಡುವ ಪ್ರಾರ್ಥನೆ. ಇದೇ ನಿನ್ನಲ್ಲಿ ನನ್ನ ಅರ್ಥನೆ.''

ನನ್ನ ಅನುನಯದ ಬೇಡಿಕೆಯನ್ನು ಕೇಳಿ ಬಾಯಿ ತೆರೆದ ಭಗವಂತ - ''ಬ್ರಹ್ಮ ಪುತ್ರನಾದ ನಾರದ ! ಪೂರ್ಣವಾಗಲಿ ನಿನ್ನ ಅಪೇಕ್ಷೆ. ತೃಪ್ತವಾಗಲಿ ಮನಸ್ಸು. ತುಷ್ಟವಾಗಲಿ ಹೃದಯ. ಭಕ್ತರ ಮಾತಿಗೆ ಎದುರು ಉಂಟೆ? ನಿನ್ನ ,ಮನೋಭೀಷ್ಟದಂತೆ ಈ ತೀರ್ಥದಲ್ಲಿ ನಾನು ನಿತ್ಯ ಸನ್ನಿಹಿತನಾಗುವೆ.'' ಹೀಗೆ ಹೇಳಿದ ಆ ಗರುಡವಾಹನ ಸ್ವಾಮಿಯು ಅಲ್ಲಿಯೇ ಆಗಲೇ ಒಂದು ವಿಷ್ಣು ಪ್ರತಿಮೆಯಲ್ಲಿ ತನ್ನ ಕಲಾತ್ಮಕವಾದ ಅಂಶವನ್ನು ಇಟ್ಟು ನಾರದನಿಗೆ ಅಭೀಷ್ಟವಾದ ವರಕೊಟ್ಟು ಅಲ್ಲಿಂದ ತೆರಳಿದನು. ಅನಂತರ ಆ ಭಗವಂತನ ಅನುಗ್ರಹವು ಎಲ್ಲ ಜನರ ಮೇಲೆಯೂ ಎಲ್ಲ ಕಾಲದಲ್ಲಿಯೂ ಆಗಲಿ ಎಂಬ ಅಪೇಕ್ಷೆಯಿಂದ ಆ ಮೂರ್ತಿಯನ್ನು ಸ್ಥಾಪನೆ ಮಾಡಿದನು ನಾರದ ಮುನಿ. ಶ್ವೇತದ್ವೀಪ ನಿವಾಸಿಯಾದ ಸಾಕ್ಷಾತ್ ಶ್ರೀಹರಿಯೇ ಇಲ್ಲಿಗೆ ಬಂದು ತನ್ನ ಒಂದು ಕಲಾರೂಪದಿಂದ ಬಹು ಪುರಾತನ ಕಾಲದಿಂದ ನೆಲಿಸಿದ್ದರಿಂದ ಇದಕ್ಕೆ ವೃದ್ಧವಾಸುದೇವ ಎಂಬ ಹೆಸರು ಬಂದಿದೆ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೂವತ್ತನೇ ಅಧ್ಯಾಯ ಮುಗಿದುದು.**

# ಕಾರ್ತೀಕ ಮಾಸದಲ್ಲಿ ಹರಿಪೂಜೆ ಮತ್ತು ಹರಿದಿನಗಳ ಆಚರಣೆ

ಅಧ್ಯಾಯ -31

ಕಾರ್ತೀಕ ಶುದ್ಧ ಏಕಾದಶಿಯಂದು ನದಿ ಅಥವಾ ಜಲಾಶಯದಲ್ಲಿ ವಿಧಿಪೂರ್ವಕ ಸ್ನಾನಮಾಡಿ ಭಕ್ತಿಯಿಂದ ಶ್ರೀಹರಿಯ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಏಕಾದಶಿಯಂದು ಪೂರ್ಣ ಉಪವಾಸ ಇದ್ದು ರಾತ್ರಿ ಜಾಗರ ಮಾಡಬೇಕು. ಭಗವಂತನ ಎದುರು ಹಾಡು ಹಾಡಬೇಕು. ನೃತ್ಯ ಮಾಡಬೇಕು. ವಾದ್ಯಗಳನ್ನು ಬಾರಿಸಬೇಕು. ಹರಿಕಥೆಯನ್ನು ಹೇಳಬೇಕು. ಕೇಳಬೇಕು, ಕಾಮ,ಕ್ರೋಧ, ದಂಭಗಳನ್ನು ಬಿಟ್ಟು ಪ್ರಸನ್ನ ಚಿತ್ತನಾಗಿ ಆ ಮಹಾದಿನದಂದು ದಾನ ನೀಡಬೇಕು. ದಿನ ತ್ರಯದ ವ್ರತಾನುಷ್ಠಾನವನ್ನು ಅನೂಚಾನವಾಗಿ ಆಚರಿಸಬೇಕು. ಇದರಿಂದ ಬ್ರಹ್ಮಹತ್ಯಾದಿ ದೋಷಗಳು ಕೂಡ ನಷ್ಟವಾಗುವವು. ಎಲ್ಲ ವಿಧ ಪಾಪರಾಶಿಗಳಿಂದ ಮುಕ್ತಿ. ಅಂತ್ಯದಲ್ಲಿ ಭಗವತ್ ಪ್ರಾಪ್ತಿ. ಈ ಶ್ರೇಷ್ಠ ತೀರ್ಥದಲ್ಲಿ ಶ್ರೀ ಹರಿಯನ್ನು ಐತರೇಯ ಎಂಬ ಬ್ರಾಹ್ಮಣನು ಆರಾಧನಗೈದು ಸಿದ್ಧಿಯನ್ನು ಪಡೆದ.

**ಅರ್ಜುನ :** ''ಮಹಾಮುನಿಯೇ ! ಯಾರು ಈ ಐತರೇಯ ! ಯಾರ ಮಗ! ಅವನ ವಾಸ ಎಲ್ಲಿ? ಅವನು ವಾಸುದೇವನನ್ನು ಹೇಗೆ ಆರಾಧಿಸಿದ? ಎಂತು ಸಿದ್ಧಿ ಪಡೆದ?''

**ನಾರದ :** ಕುಂತೀಕುಮಾರ ! ನಾನು ಸ್ಥಾಪಿಸಿದ ಈ ಸ್ಥಾನದಲ್ಲಿ ಅನೇಕ ಮುನಿ ಮಹರ್ಷಿಗಳು ಬಂದು ನೆಲೆಸಿದ್ದು ನಿನಗೆ ಗೊತ್ತು. ಅವರ ವಂಶದಲ್ಲಿ ಒಬ್ಬ ಶ್ರೇಷ್ಠ ಬ್ರಾಹ್ಮಣ. ಮಾಂಡೂಕಿ ಎಂದು ಅವನ ಹೆಸರು. ಅವನು ವೇದಗಳಲ್ಲಿ ಪಾರಂಗತ. ವೇದಾಂಗಗಳಲ್ಲಿ ಪರಿಣತ. ವೇದಾಂತದ ಪಾರದರ್ಶಿ. ಇತರಾ ಅವನ ಹೆಂಡತಿಯ ಹೆಸರು. ಸತೀಮಣಿಯರ ಸದ್ಗುಣಗಳೆಲ್ಲವೂ ಮೇಳವಿಸಿದ್ದವು ಪರಮ ಪತಿವ್ರತೆಯಾದ ಆ ಪ್ರಮದಾಮಣಿಯಲ್ಲಿ. ಅವಳ ಹೊಟ್ಟೆಯಲ್ಲಿ ಜನಿಸಿ ಬಂದದ್ದೇ ಕಾರಣವಾಗಿತ್ತು ಅವನ ಐತರೇಯ ಎಂಬ ಹೆಸರಿಗೆ.

ಈ ಐತರೇಯನಿಗೆ ಬಾಲ್ಯದಲ್ಲಿ ಎಂದು ಲೌಲ್ಯ ಇರಲಿಲ್ಲ. ಚಾಪಲ್ಯವಂತೂ ದೂರದ ಮಾತು. ಎಳಮೆಯಲ್ಲಿಯೇ ವಯಸ್ಸು ಮೀರಿದ ಹಿರಿಮೆ. ಧ್ರುವರಾಜನಂತೆ ಚಿಕ್ಕತನದಿಂದ ''ಓಂ ನಮೋ ಭಗವತೇ ವಾಸುದೇವಾಯ '' ಎಂಬ ದ್ವಾದಶಾಕ್ಷರ ಮಂತ್ರದ ಜಪ, ಈ ಮಂತ್ರ ದೀಕ್ಷೆ ಶಿಕ್ಷೆಗಳು ಈ ಜನ್ಮದ್ದಲ್ಲ. ಜನ್ಮಾಂತರದ ಪ್ರಾಪ್ತಿ.

ಅವನು ಯಾರ ಮಾತನ್ನೂ ಕೇಳುತ್ತಿರಲಿಲ್ಲ. ಸ್ವಯಂ ಮಾತಿಲ್ಲ. ಓದು ಬರಹ ಯಾವುದೂ ಇಲ್ಲ. ಇವನೊಬ್ಬ ಕೆಪ್ಪ, ಹುಚ್ಚ ಎಂದು ಜನರೆಲ್ಲರೂ ಹೆಚ್ಚಿಗೆ ವಿಚಾರಿಸದೇ ನಿರ್ಣಯಿಸಿ ಬಿಟ್ಟರು. ಈ ಮಗನನ್ನು ದಾರಿಗೆ ತರಲು ತಂದೆ ಮಾಡಿದ ಉಪಾಯ ಒಂದೆರಡಲ್ಲ. ಪರಿಪರಿಯಿಂದ ತಿಳಿಸಿ ಹೇಳಿದ. ಯಾವುದಾದರೂ ಒಂದು

ಲೌಕಿಕ ವಿಷಯದಲ್ಲಿ ಮಗನ ಆಸಕ್ತಿಯನ್ನು ಕುದುರಿಸಬೇಕೆಂದು ಯತ್ನಿಸಿದ. ಆದರೆ ಯಾವುದೂ ನಡೆಯಲಿಲ್ಲ. ತಂದೆಯ ಪರಿಶ್ರಮವೆಲ್ಲ ನಿರರ್ಥಕ. ಯಾವ ವ್ಯವಹಾರವೂ ತಿಳಿಯಲಿಲ್ಲ ಈ ಕಿವುಡ ಮಗನಿಗೆ. ತಂದೆಗೂ ನಿಶ್ಚಯವಾಯಿತು ತನ್ನ ಮಗ ಕಿವುಡ ಮಾತ್ರವಲ್ಲ ಜಡ, ಎಬಡ, ಮೂರ್ಖ ಮತ್ತು ಮದಡ ಎಂದು.

ಇಂಥ ಮೂರ್ಖ ಮಗನನ್ನು ಹೆತ್ತದ್ದಕ್ಕಾಗಿ ಮಡದಿಯ ಮೇಲೆಯೂ ಬೇಸರ ಆ ಮಾಂಡೂಕಿ ಬ್ರಾಹ್ಮಣನಿಗೆ. ಹುಚ್ಚ ಮಗನನ್ನು ಹೆತ್ತ ಆ ಇತರಾದೇವಿಯನ್ನು ಅಸಡ್ಡೆಯಿಂದಲೇ ಕಂಡ ಆ ಮೊಂಡು ಸ್ವಭಾವದ ಮಾಂಡೂಕಿ ಮುನಿ. ಐತರೇಯನಿಂದ ಇತರಾದೇವಿಯಲ್ಲಿ ಜುಗುಪ್ಸೆಗೊಂಡ ಮಾಂಡೂಕಿಯು ಪಿಂಗಾ ಎಂಬ ಹೆಸರಿನ ಬೇರೊಬ್ಬ ಸ್ತ್ರೀಯನ್ನು ಮದುವೆಯಾದನು, ಈ ಎರಡನೆಯ ಹೆಂತಿಯಿಂದ ಮಾಂಡೂಕಿಗೆ ನಾಲ್ಕು ಜನ ಮಕ್ಕಳು. ನಾಲ್ಕು ವೇದಗಳೇ ಮಾನವನ ರೂಪ ತಳೆದಂತೆ! ಆ ನಾಲ್ಕೂ ಜನ ಮಕ್ಕಳಿಗೆ ನಾಲ್ಕೂ ವೇದಗಳಲ್ಲಿಯೂ, ಹದಿನಾಲ್ಕು ವಿದ್ಯೆಗಳಲ್ಲಿಯೂ ಅಸಾಧಾರಣ ಪಾಂಡಿತ್ಯ. ಪೂರ್ಣ ಪ್ರಭುತ್ವ. ಆದರೆ ಮೊದಲಿನ ಮಡದಿ ಇತರಾ ದೇವಿಯ ಮಗನಾದ ಐತರೇಯ ಮಾತ್ರ ಕೆಪ್ಪ, ಬೆಪ್ಪ, ನಿರಕ್ಷರಕುಕ್ಷಿ. ಅವನ ಮಲತಮ್ಮಂದಿರು ಒಬ್ಬರಿಗಿಂತ ಒಬ್ಬರು ಸರ್ವವಿದ್ಯಾ ಪ್ರವೀಣರು. ಇತರಾ ಸಾಧಾರಣರಾದರು. ಆದರೆ ಐತರೇಯ ಮಾತ್ರ ನಿರ್ವಿಕಾರ. ಹೇವವಿಲ್ಲ. ಅಸೂಯೆಯ ಭಾವವೂ ಇಲ್ಲ ಅವನ ಮನದಲ್ಲಿ. ನಿಷ್ಕಲ್ಮಷ ಬುದ್ಧಿ, ನಿಷ್ಕಪಟ ವೃತ್ತಿ ಆ ಐತರೇಯನದು. ಮಹಾ ಭಗವದ್ಭಕ್ತ ಆ ಇತರಾಕುಮಾರ.

ಅವನು ಬೇರೆ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ. ಯಾರ ಮಾತನ್ನೂ ಕೇಳುತ್ತಿರಲಿಲ್ಲ. ಸ್ನಾನ ಪಾನಗಳಲ್ಲಿ ಉದಾಸೀನ. ತಿಂಡಿತಿನಿಸುಗಳಲ್ಲಿ ಅಸಡ್ಡೆ. ಬಾಳಿನಲ್ಲಿ ಜುಗುಪ್ಸೆ. ಬದುಕಿನಲ್ಲಿಯೇ ಬೇಸರ. ಇಷ್ಟಾದರೂ ಅವನು ತಪ್ಪದೇ ಮಾಡುವ ಒಂದು ಕೆಲಸವೆಂದರೆ, ಈ ವಾಸುದೇವ ಮಂದಿರ ಪ್ರಯಾಣ. ಒಂದು ದಿನವೂ ಬಿಡದೇ ಆ ಹರಿಮಂದಿರಕ್ಕೆ ಹೋಗುತ್ತಿದ್ದ ಆ ಐತರೇಯ. ಅರುಣೋದಯ ಕಾಲದಲ್ಲಿಯೇ ಎದ್ದು ಪ್ರಾತರ್ವಿಧಿ ಮುಗಿಸಿ ಆ ಮಹಾಕಾಲ ಕೂಪದಲ್ಲಿ ಸ್ನಾನಮಾಡಿ ವಾಸುದೇವನ ಮೂರ್ತಿಯೆದುರು ಕುಳಿತು ''ಓಂ ನಮೋ ಭಗವತೇ ವಾಸು ದೇವಾಯ'' ಎಂಬ ಹನ್ನೆರಡು ಅಕ್ಷರದ ವಾಸುದೇವ ಮಂತ್ರವನ್ನು ಮೌನವಾಗಿಯೇ ಜಪಿಸುತ್ತಿದ್ದ. ದೇವಾಲಯದಲ್ಲಿ ಪೂಜಾರಿ ಬೈದು ಹೊರಗೆ ಹಾಕುವವರೆಗೂ ನಡೆಯುತ್ತಿತ್ತು ಅವನ ಈ ಮಂತ್ರ ಜಪ. ಆಮೇಲೆ ಮನೆಗೆ ಬಂದು ತಾಯಿ ಹಾಕಿದ್ದು ಉಣ್ಣುವದು. ಜನ ಹೇಳಿದ್ದು ಕೇಳುವದು. ನಿಂದೆ ನಿರ್ಭತ್ಸನೆಗಳನ್ನು ತಾಳುವದು. ಹುಚ್ಚನಂತೆ ಬಾಳುವದು. ಇದೇ ಅವನ ದಿನಚರ್ಯೆ. ಗೂಢವಾದ ತಪಶ್ಚರ್ಯೆ.

ಆದರೆ ತಾಯಿ ಇತರಾ ದೇವಿಗೆ ಮಾತ್ರ ಮಗನ ಈ ಮೌಢ್ಯ ಜಾಡ್ಯಗಳನ್ನು ಕಂಡು ಹೊಟ್ಟೆಯಲ್ಲಿ ಹತ್ತು ಜ್ವಾಲಾಮುಖಿ ಸಿಡಿದಷ್ಟು ದುಃಖ. ತನ್ನ ಮಲ ಮಕ್ಕಳು ಪಂಡಿತ ಶಿರೋಮಣಿಗಳು. ತನ್ನ ಹೊಟ್ಟೆಯ ಮಗ ಮೂರ್ಖಶಿಖಾಮಣಿ. ಎಲ್ಲ ಕಡೆಗೂ ತನ್ನ ಸವತಿಯ ಮಕ್ಕಳಿಗೆ ಪುರಸ್ಕಾರ. ತನ್ನ ಪುತ್ರನಿಗೆ ಎಲ್ಲ ಕಡೆಗೂ ತಿರಸ್ಕಾರ.

ಹೋದಲ್ಲೆಲ್ಲಾ ಅವರಿಗೆ ಉಲ್ಲಾಸ, ಗೌರವ, ಮರ್ಯಾದೆ. ಅಂಥ ಮಕ್ಕಳನ್ನು ಹೆತ್ತ ತಾಯಿಗೂ ಜನರಿಂದ ಆದರ, ಉಪಚಾರ, ಆದರೆ ತನ್ನ ಮಗನಿಗೆ ಮಾತ್ರ ಉಪಹಾಸ, ಅಪಮಾನ, ಇಂಥ ಹುಚ್ಚ ಮಗನನ್ನು ಹೆತ್ತದ್ದಕ್ಕಾಗಿ ತನಗೂ ಜನರಿಂದ ಉಪಹಾಸ, ಅಪಮಾನ. ಈ ಎಲ್ಲ ವೈಪರೀತ್ಯವನ್ನು ಕಂಡು ಅವಳ ಹೊಟ್ಟೆ ಉರಿದು ಹೋಯಿತು.

## ತಾಯ್ಗರುಳಿನ ತಾಪಕೋಪ

ತನ್ನ ಸಿಟ್ಟನ್ನು ಯಾರ ಮೇಲೆಯೂ ತೀರಿಸಿಕೊಳ್ಳಲಿಕ್ಕೂ ಆಗದೇ ಅವಳ ಹೊಟ್ಟೆಯಲ್ಲಿಯೇ ಅದು ವಡವಾಗ್ನಿಯಂತೆ ಅಡಗಿ ಅವಳ ಬಾಳೆಲ್ಲವೂ ಕಿಚ್ಚು ಕೆದರಿದ ಬೆಂಕಿಗಿಟ್ಟಾಂತಾಯಿತು. ಕೊನೆಗೆ ಒಂದು ದಿನ ದುಃಖಿತಪ್ತಳಾಗಿ ತನ್ನ ಮಗನ ಬಳಿಯಲ್ಲಿ ಬಂದು ಅವಳು ತನ್ನ ಆ ದುಃಖದ ಕೋಡಿಯನ್ನು ಹರಿಬಿಟ್ಟಳು. ''ಮೂರ್ಖ ಮಗನೆ, ನೀನು ನನ್ನನ್ನು ದುಃಖದ ದಳ್ಳುರಿಯಲ್ಲಿ ಬೇಯಿಸಲಿಕ್ಕೆ ಹುಟ್ಟಿರುವೆ. ನನ್ನ ಜನ್ಮಕ್ಕೆ ಧಿಕ್ಕಾರ. ನನ್ನ ಬಾಳಿಗೆ ತಿರಸ್ಕಾರ. ಕೈ ಹಿಡಿದ ಗಂಡನು ತಿರಸ್ಕರಿಸಿದ ಹೆಣ್ಣಿನ ಜೀವನವು ಬರೀ ವ್ಯರ್ಥ ಮಾತ್ರವಲ್ಲ ಅನರ್ಥ. ಹುಚ್ಚು ಹುಳುಕ ಮಕ್ಕಳು ಇರುವದಕ್ಕಿಂತ ಬಂಜೆಯೇ ವಾಸಿ. ನನ್ನ ಕರುಳಿನ ಕಂದನಾದ ನಿನ್ನನ್ನು ಜನರು ಹುಚ್ಚ ಮೂಕ ಎಂದು ಕರೆದು ಉಪಹಾಸಗೈಯುವುದನ್ನು ನಾನು ನೋಡಲಾರೆ. ನಿನಗಾಗುವ ಅಪಮಾನವನ್ನು ತಾಳಲಾರೆ. ಮಗನ ಈ ಅವಮಾನವನ್ನು ಕಣ್ಣಿನಿಂದ ನೋಡುವುದಕ್ಕಿಂತ ಸಾವಯುವುದೇ ಲೇಸಲ್ಲವೇ? ಇಂಥ ದುಃಖಮಯವಾದ ಜೀವನವನ್ನು ಬಾಳುವುದಕ್ಕಿಂತ ಮರಣಹೊಂದುವುದು ಸಾವಿರ ಪಟ್ಟು ಒಳ್ಳೆಯದು. ನಾನು ಬದುಕಿ ಮಾಡುವದಾದರೂ ಏನು? ಮಗು, ನಾನು ಮರಣ ಹೊಂದಿದ ಬಳಿಕ ನೀನು ಮಾತ್ರ ನನ್ನನ್ನು ನೆನೆಯಬೇಡ. ಮಹಾಭಗವದ್ಭಕ್ತನಾಗು. ಬಾಯಿಂದ ನಿನಗೆ ಮಂತ್ರ ಸ್ತೋತ್ರ ಬಾರದಿದ್ದರೂ ಮೌನದಿಂದಲೇ ಆ ವಾಸುದೇವನನ್ನು ಧ್ಯಾನ ಮಾಡು. ಅವನ ಮೂಕ ಭಕ್ತನಾಗು. ದೀರ್ಘಕಾಲದ ವರೆಗೆ ಶ್ರೀವಾಸುದೇವನ ಉಪಾಸನೆಗೈದು ಶಾಶ್ವತ ಆನಂದವನ್ನು ಹೊಂದು.

## ಅಜ್ಞನಲ್ಲ, ಸರ್ವಜ್ಞ

**ನಾರದ :** ತಾಯಿಯ ಮಾತು ಕೇಳಿ ಐತರೇಯನಿಗೆ ಹುಚ್ಚು ನಗೆ. ಅವನು ಗಹ ಗಹಿಸಿ ನಕ್ಕ, ಬಿದ್ದು ಬಿದ್ದು ನಕ್ಕ. ಧರ್ಮದ ಸೂಕ್ಷ್ಮವನ್ನು ಅರಿತ ಮೇಧಾವಿ ಆ ಐತರೇಯ. ಕೂಡಲೇ ಅವನು ಕಣ್ಣು ಮುಚ್ಚಿದ. ನಿಮೀಲಿತ ನಯನದಿಂದ ಕೆಲನಿಮಿಷ ಧ್ಯಾನೈಕತಾನಲೀನ ಮಾನಸನಾಗಿ ಸಮಾಧಿಸ್ಥನಂತೆ ಕುಳಿತುಬಿಟ್ಟ ಭಗವಂತನ ನಾಮಸ್ಮರಣೆಗೈಯುತ್ತ. ಅನಂತರ ಎದ್ದು ನಿಂತು ತಾಯಿಯ ಅಡಿದಾವರೆಗಳಿಗೆ ಭಕ್ತಿಯಿಂದ ವಂದಿಸಿದ. ಗಂಭೀರವಾಗಿ ಮಾತನಾಡತೊಡಗಿದ.

## ಮೂಢ ಮಗನ ಮುಖದಿಂದ ಗೂಢವೇದಾಂತ ನಿರೂಪಣೆ

**ಐತರೇಯ :** ಅಮ್ಮಾ ! ನೀನು ವ್ಯರ್ಥವಾಗಿ ಎಂಥ ಮಾಯಾ ಮೋಹದಲ್ಲಿ ಬಿದ್ದಿರುವೆ? ಅಜ್ಞಾನವನ್ನು ಜ್ಞಾನವೆಂದು ಬಗೆದಿರುವೆ. ಶೋಕಿಸಬಾರದ್ದನ್ನು ಕುರಿತು

ಶೋಕ ಮಾಡುತ್ತಿರುವೆ. ಆದರೆ ಶೋಚನೀಯವಾದುದರ ಬಗ್ಗೆ ನಿನಗೆ ಲೇಶವೂ ಶೋಕವಿಲ್ಲ. ಈ ಸಂಸಾರವೆಲ್ಲವೂ ಮಾಯೆ, ಇದಕ್ಕಾಗಿ ಚಿಂತೆ ಏಕೆ? ಇದು ತಿಳಿಗೇಡಿಗಳ ಕೆಲಸ. ನೀನೋ ನನ್ನ ತಾಯಿ, ಮಹಾವಿದುಷಿ, ಎಲ್ಲ ಬಲ್ಲವಳು. ನಿನಗೆ ಇದು ಶೋಭಿಸುವದಿಲ್ಲ. ಈ ಸಂಸಾರದಲ್ಲಿ ಸಾರ ತತ್ವವು ಬೇರೆಯೇ ಇದೆ. ಆದರೆ ಮಾನವ ಅಜ್ಞಾನ ಮೋಹಿತ. ನಿಸ್ಸಾರವಾದದ್ದನ್ನೇ ಸಾರ ಎಂದು ಬಗೆದಿದ್ದಾನೆ. ಈ ಮನುಷ್ಯ ದೇಹ ಸಾರಭೂತವಾದದ್ದು ಎಂದು ನೀನು ಭಾವಿಸಿರುವೆಯಷ್ಟೇ ! ಇದು ಎಷ್ಟು ಅಸಾರ ಎಂಬುದನ್ನು ನೀನು ಕೇಳು. ಈ ಮಾನವದೇಹ ಮೂಳೆಗಳ ಒಂದು ಗೂಡು. ರಕ್ತ ಮಾಂಸ ರೂಪ ಮಣ್ಣನ್ನು ಇಟ್ಟು ನಾಡೀ ಜಾಲ ಎಂಬ ಹಗ್ಗದಿಂದ ಇದನ್ನು ಬಿಗಿದು ಕಟ್ಟಿದ್ದಾರೆ. ಇದೊಂದು ಮಲಮೂತ್ರಗಳ ಕುಂಡ. ಕೂದಲು ಹಾಗೂ ರೋಮಗಳೆಂಬ ಹುಲ್ಲಿನಿಂದ ಇದನ್ನು ಮುಚ್ಚಿದ್ದಾರೆ. ಬಗೆ ಬಗೆಯ ಬಣ್ಣದ ತೊಗಲಿನಿಂದ ಇದಕ್ಕೆ ಮೇಲಿನಿಂದ ಬಣ್ಣ ಬಳೆದಿದ್ದಾರೆ.

ಮುಖವೇ ಈ ಮೂಳೆ ಮನೆಯ ಬಾಗಿಲು. ಎರಡು ಕಣ್ಣು, ಎರಡು ಕಿವಿ, ಎರಡು ಮೂಗಿನ ಹೊರಳೆ ಇವೇ ಈ ಮನೆಯ ಆರು ಕಿಟಕಿಗಳು. ಎರಡು ತುಟಿಗಳು ಈ ಬಾಗಿಲನ್ನು ತೆರೆದು ಮುಚ್ಚುವ ಫಲಕಗಳು. ನಾಲಿಗೆಯೇ ಅಗಳಿ. ಈ ದೇಹರೂಪವಾದ ಮನೆಯಲ್ಲಿ ಜೀವ ಎಂಬ ಗೃಹಸ್ಥನು ನೆಲೆಯೂರಿ ನಿಂತಿದ್ದಾನೆ. ತ್ರಿಗುಣಾತ್ಮಕವಾದ ಪ್ರಕೃತಿಯೆ ಅವನ ಮಡದಿ. ಕಾಮ, ಕ್ರೋಧ, ಅಹಂಕಾರ, ಲೋಭ ಮುಂತಾದವುಗಳು ಅವನ ಗಂಡು ಮಕ್ಕಳು. ಅಸೂಯೆ, ದುರಾಶೆ, ತೃಷ್ಣೆ ಮುಂತಾದವು ಹೆಣ್ಣು ಮಕ್ಕಳು. ಪರ್ವತದಿಂದ ಝರಿಗಳು ಹರಿಯುವಂತೆ ಈ ಶರೀರದಿಂದ, ಕಫ, ಮೂತ್ರ ಮೊದಲಾದವುಗಳು ಹರಿಯುತ್ತಲೇ ಇರುತ್ತವೆ. ವಿಷ್ಠಾ, ಮೂತ್ರದಿಂದ ತುಂಬಿದ ತೊಗಲಿನ ಪಾತ್ರೆಯಂತಿರುವ ಈ ದೇಹವು ವಿಚಾರ ಮಾಡಿದರೆ, ಅಪವಿತ್ರ ವಸ್ತುಗಳ ಒಂದು ಭಂಡಾರವೇ ಇದ್ದಂತಿದೆ. ನಮ್ಮ ದೇಹದಿಂದ ಹೊರಬಿದ್ದ ಮಲಮೂತ್ರಗಳ ಸ್ಪರ್ಶಮಾಡಿದರೆ, ಮಣ್ಣು ನೀರು ಹಚ್ಚಿ ತೊಳೆದುಕೊಳ್ಳುತ್ತೇವೆ. ಆದರೆ ಅದೇ ಅಪವಿತ್ರ ವಸ್ತುಗಳನ್ನು ರಾಶಿ ರಾಶಿಯಾಗಿ ಒಳಗೆ ಒಟ್ಟಿಕೊಂಡಿರುವ ಈ ದೇಹದ ಬಗ್ಗೆ ಮಾನವನಿಗೆ ವೈರಾಗ್ಯವು ಏಕೆ ಹುಟ್ಟುವುದಿಲ್ಲ? ಸುಗಂಧವಾದ ನೀರಿನಲ್ಲಿ ಎದ್ದಿ, ಕಸ್ತೂರಿ ಪುನಗ, ಪಚ್ಚ ಕರ್ಪೂರ, ಗಂಧ ಕೇಶರಾದಿ ಪರಿಮಳ ದ್ರವ್ಯ ಮುಂತಾದವುಗಳನ್ನು ಹಚ್ಚಿ ತಿಕ್ಕಿದರೂ ಈ ದೇಹದ ದುರ್ಗಂಧ ಹೋಗುವುದಿಲ್ಲ. ನಾಯಿಯ ಬಾಲವನ್ನು ಎಷ್ಟು ಪ್ರಯತ್ನಿಸಿದರೂ ಸರಳ ಮಾಡುವದು ಶಕ್ಯವೆ? ತನ್ನ ದೇಹದ ದುರ್ಗಂಧದಿಂದ ವಿರಕ್ತನಾಗದೇ ಇದ್ದ ಮನುಷ್ಯನು ಬೇರೆ ಯಾರ ಯಾವ ವಿಧವಾದ ಉಪದೇಶದಿಂದ ವೈರಾಗ್ಯವನ್ನು ಹೊಂದುವನು? ಭಾವಶುದ್ಧಿಯೇ ಎಲ್ಲಕ್ಕಿಂತ ಪರಮ ಪವಿತ್ರವಾದದ್ದು. ಬರೀ ಮೇಲಿನ ದೇಹವನ್ನು ಎಷ್ಟು ಗಂಧ ಲೇಪಗಳಿಂದ ಪರಿಮಳಿತವನ್ನಾಗಿ ಮಾಡಿದರೂ ಮನುಷ್ಯನ ಆಂತರಿಕ ಭಾವ ಶುದ್ಧಿಯಾಗುವವರೆಗೆ ಪರಿಶುದ್ಧನಾಗುವುದೇ ಇಲ್ಲ.

ಭಾವಶುದ್ಧಿಯೇ ಎಲ್ಲ ಕರ್ಮಗಳಿಗೆ ಪ್ರಮಾಣಭೂತವಾಗಿದೆ. ಪತ್ನಿ ಹಾಗೂ ಪುತ್ರರ ಆಲಿಂಗನ ರೂಪ ಕರ್ಮವು ಒಂದೇ ಆಗಿದ್ದರೂ ಅವೆರಡೂ ಭಾವಗಳಲ್ಲಿ ಮಾತ್ರ ದೊಡ್ಡ ಅಂತರವಿದೆ. ತಾಯಿಯ ಸ್ತನವನ್ನು ಮಗು ನೆನೆಯುವ ಭಾವವೇ ಬೇರೆ, ಪತಿ

ನೆನೆಯುವ ಭಾವವೇ ಬೇರೆ. ಆದುದರಿಂದ ಸಮ ಚಿತ್ತವನ್ನೇ ಮೊದಲು ಶುದ್ಧಗೊಳಿಸಬೇಕು. ಬಾಹ್ಯ ಶುದ್ಧಿಯ ಬೇರೆ ಬೇರೆ ಸಾಧನಗಳಿಂದ ನಮಗೇನು ಪ್ರಯೋಜನ? ಭಾವದೃಷ್ಟಿಯಿಂದ ಯಾರ ಅಂತಃಕರಣವು ಅತ್ಯಂತ ಪರಿಶುದ್ಧವಾಗಿದೆಯೋ ಅವರು ಮಾತ್ರ ಸ್ವರ್ಗ ಹಾಗೂ ಮೋಕ್ಷಗಳನ್ನು ಪಡೆಯುವರು. ಮನುಷ್ಯನ ಅವಿದ್ಯೆ ಎಂಬ ರಾಗಮಯವಾದ ಮಲಮೂತ್ರ ಲೇಪದ ದುರ್ಗಂಧವು ತೊಳೆದು ಹೋಗಬೇಕಾದರೆ, ಜ್ಞಾನರೂಪವಾದ ನಿರ್ಮಲ ಜಲದಿಂದ, ವೈರಾಗ್ಯವೆಂಬ ಮಣ್ಣಿನಿಂದ ತಿಕ್ಕಿ ಭಾವಶೋಧನ ಕಾರ್ಯವನ್ನು ಮಾಡಬೇಕು. ಪಾಂಚಭೌತಿಕವಾದ ಈ ಮಾನವ ದೇಹವು ಸ್ವಭಾವತಃ ಅಶುದ್ಧ. ಜ್ಞಾನ ವೈರಾಗ್ಯ ಭಕ್ತಿ ಮೊದಲಾದ ಸಾಧನಗಳಿಂದ ಇದನ್ನು ಶೋಧನ ಮಾಡಿ ಶುದ್ಧಗೊಳಿಸಬೇಕು.

## ಜಠರದಲ್ಲಿ ಕಠಿಣ ದುಃಖ

ಅಜ್ಞಾನ ಹಾಗೂ ಪೂರ್ವಕರ್ಮಗಳ ಕಾರಣದಿಂದಾಗಿ ಮಾನವನು ಜನನ ಮರಣ ಜಾಲದಲ್ಲಿ ಪುನಃ ಪುನಃ ಮುಳುಗಿ ಏಳಬೇಕಾಗುತ್ತದೆ. ಗರ್ಭವಾಸ ದುಃಖ ಅತ್ಯಂತ ಅಸಹ್ಯವಾಗಿದೆ. ಗರ್ಭದಲ್ಲಿದ್ದ ಶಿಶುವು ಉರಿಯುವ ಒಲೆಯ ಮೇಲಿಟ್ಟ ಅನ್ನದಂತೆ, ಗರ್ಭರೂಪ ಕಲಶದಲ್ಲಿಟ್ಟ ಜೀವವು ಜಠರಾಗ್ನಿಯಿಂದ ಕುದಿದು ಹೋಗುತ್ತಾನೆ. ಬೆಂಕಿಯಲ್ಲಿ ಕಾಯಿಸಿದ ಸಾವಿರ ಸೂಜಿಗಳನ್ನು ಏಕಕಾಲಕ್ಕೆ ಚುಚ್ಚಿ ಚಚ್ಚಿದಷ್ಟು ಪೀಡೆ ಎನಿಸುವದು ಆ ಗರ್ಭಸ್ಥ ಜಂತುವಿಗೆ. ಗರ್ಭದಲ್ಲಿದ್ದಾಗ ಪ್ರಾಣಿಗಳಿಗೆಲ್ಲ ಜನ್ಮಾಂತರದ ನೆನಪು ಬರುವುದಂತೆ. ''ನಾನು ಈ ಮೊದಲು ಅನೇಕ ಸಲ ಹುಟ್ಟಿ ಸತ್ತೆ. ಅನೇಕ ಬಾರಿ ಸತ್ತು ಹುಟ್ಟಿದೆ. ಸಾವಿರಾರು ಯೋನಿಗಳಲ್ಲಿ ಈ ವರೆಗೆ ನಾನು ತಿರುತಿರುಗಿ ಬಂದದ್ದಾಯಿತು. ಈಗ ಮಾತ್ರ ನನಗೆ ಹಿಂದಿನ ಸಂಸ್ಕಾರ ಎದ್ದು ಬಂದಿದೆ. ಈ ಜನ್ಮದಲ್ಲಿ ಮುಂದೆ ಎಂದೂ ನನಗೆ ಈ ಘೋರ ಗರ್ಭವಾಸ ದುಃಖವು ಆಗದಂತೆ ಈಗ ಬರಲಿರುವ ಮಾನವ ಶರೀರದಿಂದ ಸಾಧನಾನುಷ್ಠಾನ ಮಾಡುವೆನು. ಸಂಸಾರ ಬಂಧನದಿಂದ ಬಿಡುಗಡೆ ಮಾಡಿಸುವ ಭಗವಂತನ ತತ್ವಜ್ಞಾನವನ್ನು ಮಾಡಿಕೊಂಡು ನಿರಂತರವೂ ನಾರಾಯಣ ಧ್ಯಾನವನ್ನು ಮಾಡುತ್ತೇನೆ.'' ಹೀಗೆ ಗರ್ಭಸ್ಥಜೀವವು ಚಿಂತೆಯಲ್ಲಿರುವಾಗಲೇ ಅದಕ್ಕೆ ಜನನ ದುಃಖವು ಪ್ರಾರಂಭವಾಗುತ್ತದೆ. ಗರ್ಭವಾಸ ದುಃಖಕ್ಕಿಂತ ಕೋಟಿ ಪಟ್ಟು ಮಿಗಿಲಾಗಿದೆ ತಾಯಿಯ ಗರ್ಭದಿಂದ ಹುಟ್ಟಿ ಬರುವಾಗ ಜೀವಕ್ಕೆ ಆಗುವ ಆ ಎಲ್ಲ ದುಃಖ. ಅಂತೂ ಕಷ್ಟ ಪಟ್ಟು ತಾಯಿಯ ಗರ್ಭದಿಂದ ಮನುಷ್ಯ ಒಮ್ಮೆ ಹೊರಗೆ ಬಂದರೆ ತೀರಿತು ಆ ಸ್ಮರಣ ಶಕ್ತಿ, ಈ ವಿವೇಕ, ವೈರಾಗ್ಯ ಎಲ್ಲವೂ ಸಂಪೂರ್ಣ ನಷ್ಟ, ಪೂರ್ತಿ ಲುಪ್ತ. ಹುಟ್ಟಿದ ಜನ್ಮದ ಸುಖದುಃಖ ಅನುಭವಗಳ ಮಾಲೆ ಸುರುವಾಗುವದು ಅದೇ ಹುಟ್ಟಿದ ಆ ಎಳೆ ಕಂದಮ್ಮಗಳಿಗೆ. ಅತ್ತು ಕರೆದು, ನಕ್ಕು, ನಲಿದು, ಸುಖ ದುಃಖಗಳ ದ್ವಂದ್ವಗಳಲ್ಲಿ ಹುರಿಗೊಂಡು ಹೊಸ ಜೀವನದ ಸವಾಲುಗಳನ್ನು ಎದುರಿಸಲು ಸಿದ್ಧವಾಗುತ್ತದೆ ಈ ಜೀವ.

## ಬಾಲ್ಯದ ಬವಣೆ

ಬಾಲ್ಯದಲ್ಲಿ ಇಂದ್ರಿಯಗಳು ಬಲಗೊಂಡಿರುವದಿಲ್ಲ. ದುಃಖವನ್ನು ಹೇಳಲಿಕ್ಕೂ ಬಾಯಿ ಇರುವುದಿಲ್ಲ. ಆಗ ಅನುಭವಿಸುವದು ಅಳುವದು ಎರಡನೇ ಕೆಲಸ. ಹಲ್ಲಿನ ಬೇನೆ, ಬಾಲ್ಯಾವಸ್ಥೆಯ ಬಾಲಗ್ರಹ ಮುಂತಾದವುಗಳನ್ನು ರೋದಂತಿಯೊಡನೆ ಎಲ್ಲರೂ ಅನುಭವಿಸಲೇಬೇಕು. ಹಸಿವೆ, ಬಾಯಾರಿಕೆ, ಬೀಳುವುದು, ಏಳುವುದು, ಜನರಿಂದ, ಹೊಡೆತ ಬಡೆತ, ಉದಾಸೀನತೆ, ತಿರಸ್ಕಾರ, ಉಪವಾಸ, ಅಜೀರ್ಣ ಎಲ್ಲವನ್ನೂ ಸಹಿಸಬೇಕು ಈ ಬಾಲ್ಯದಲ್ಲಿ.

## ತಾರುಣ್ಯದ ತರಲೆ ತೊಂದರೆ ತಾಪಗಳು

ಯೌವನವು ಸುಖ-ದುಃಖಗಳ, ರೋಗ ಭೋಗಗಳ, ಸ್ನೇಹ ಮೋಹಗಳ ಒಂದು ರಂಗಸ್ಥಳ. ವಯೋಧರ್ಮಕ್ಕನುಗುಣವಾಗಿ ಒಂದು ವಿಷಯದ ಮೇಲೆ ಕಾಮ,ರಾಗ, ಅದು ತನಗೆ ಸಿಗದಿದ್ದರೆ ಕ್ರೋಧ, ಬೇರೊಬ್ಬರಿಗೆ ದೊರೆತರೆ ಈರ್ಷೆ ಮಾತ್ಸರ್ಯ. ತನಗೆ ಇಲ್ಲವಾದರೆ ಭಯಂಕರ ದುಃಖ. ಆ ಇಷ್ಟ ವಸ್ತುವು ದೊರೆತರೆ ಉನ್ಮಾದ. ಅದನ್ನು ಇನ್ನೊಬ್ಬರು ನೋಡಿದರೂ ಕೇಳಿದರೂ ಕ್ರೋಧ. ಅದನ್ನು ತಾನೊಬ್ಬನೆ ಇಟ್ಟುಕೊಂಡು ಅಥವಾ ಒಟ್ಟಿಕೊಂಡು ಸುಖಿಸಬೇಕೆನ್ನುವ ಲೋಭ ಸ್ವಾರ್ಥ. ಬೇರೊಬ್ಬರು ಅದನ್ನು ಬಯಸಿದರೆ ಅವರೊಡನೆ ದ್ವೇಷ, ವೈರ, ಯುದ್ಧ, ಸಾವು, ನೋವು. ಒಂದೇ ಎರಡೇ! ಎಲ್ಲಿ ನೋಡಿದರೂ ಯುವಾವಸ್ಥೆಯಲ್ಲಿ ಅನರ್ಥ ಪರಂಪರೆ. ಸಾವುನೋವುಗಳ ಸರಮಾಲೆ. ರಾತ್ರಿಯಲ್ಲಿ ಹೆಣ್ಣಿನ ಹುಚ್ಚು ಮೆಚ್ಚು ನೆಚ್ಚಿನಿಂದ ನಿದ್ರೆಯಿಲ್ಲ. ಹಗಲು ದ್ರವ್ಯ ಸಂಪಾದನೆಯ ಚಿಂತೆಯಿಂದ ಸಮಾಧಾನವಿಲ್ಲ. ಮಡದಿ ಮಕ್ಕಳು ಸ್ವಾರ್ಥಪರರು. ಎಲ್ಲ ವಿಧ ತಪ್ಪುಗಳಿಗೂ ಅವರು ತವರುಮನೆ ಎಂದು ಗೊತ್ತಿದ್ದರೂ ಅವರಿಗಾಗಿ ತನ್ನ ಜೀವನವನ್ನೇ ದುಃಖದ ದಳ್ಳುರಿಯಲ್ಲಿ ತಳ್ಳಿ, ದ್ರವ್ಯ ಸಂಪಾದನೆಯನ್ನು ಮಾಡುವನು ಈ ಮೂರ್ಖ ಮನುಷ್ಯ.

## ಮುಪ್ಪಿನ ಮಿಡುಕು

ಈ ಯೌವನವಾದರೂ ಎಷ್ಟು ದಿನದ್ದು? ವಾರ್ಧಕ್ಯ ತಾರುಣ್ಯವನ್ನು ಕವಿದುಕೊಂಡೇ ಬಂದಿರುವದು. ನವ ಯೌವನದಲ್ಲಿಯೇ ಮುಪ್ಪು ತನ್ನ ಕಪ್ಪುನೆರಳನ್ನು ಚಾಚಿಬಿಟ್ಟಿರುವದು. ಕ್ರಮವಾಗಿ ಒಂದೊಂದೇ ಹೆಜ್ಜೆ ಮುಂದೆ ಬಂದು ಆ ಮುಪ್ಪು ತನ್ನ ಅಪ್ಪುಗೆಯಲ್ಲಿ ಈ ಮಾನವನನ್ನು ಬಿಗಿದು ಬಿಡುವುದು. ದೇಹ ಜರ್ಜರ, ಮೈಯಲ್ಲಿ ನಡುಕ, ಮುಖದಲ್ಲಿ ನಿರಿಗೆ, ಕೂದಲಿನಲ್ಲಿ ಬಿಳುಪು. ಮೈಯೆಲ್ಲ ಅಡಪು. ತಲೆಗೆ ಟಕಳು ಕಳೆಗೆಟ್ಟ ಮುಖ. ನಿಸ್ತೇಜ ನೇತ್ರ. ಶಿಥಿಲವಾದ ಸಂಧಿ ಬಂಧ.

ಕೇಳದ ಕಿವಿ. ಕಾಣದ ಕಣ್ಣು, ಜೊಲ್ಲು ಸುರಿಸುವ ಬಾಯಿ, ಶಿಥಿಲವಾದ ಇಂದ್ರಿಯಗಳು. ಆಶೆಬುರುಕ ಮನಸ್ಸು, ಎಲ್ಲರಿಂದಲೂ ಅವಮಾನ. ಮಡದಿ ಮಕ್ಕಳಿಂದಲೂ ತಿರಸ್ಕಾರ. ಮೈತುಂಬಾ ರೋಗಗಳು. ಸರ್ವ ದುಃಖಗಳ ಸಮ್ಮಿಲನ

ಈ ವೃದ್ಧಾವಸ್ಥೆಯಲ್ಲಿ. ಯಾವ ಧರ್ಮ ಕರ್ಮಗಳನ್ನು ಮಾಡಲಿಕ್ಕಾಗುವದಿಲ್ಲ. ಈ ಮುದಿತನದಲ್ಲಿ. ಆದುದರಿಂದ ಬಾಲ್ಯ ಯೌವನದಲ್ಲಿಯೇ ಧರ್ಮವನ್ನು ಆಚರಿಸಬೇಕು. ಮೋಕ್ಷದ ಸಾಧನೆಯನ್ನು ಮಾಡಿಕೊಳ್ಳಬೇಕು.

## ರೋಗದ ಆಗರ, ದುಃಖದ ಸಾಗರ

ವಾತ, ಪಿತ್ತ, ಕಫಗಳ ವೈಷಮ್ಯವೇ ವ್ಯಾಧಿ. ಈ ವ್ಯಾಧಿಮಯವೇ ಈ ಶರೀರ. ಮುಪ್ಪಿನಲ್ಲಿ ದೇಹದಲ್ಲಿರುವ ಜೀವ ಜಂತುಗಳ ಪ್ರತಿರೋಧ ಶಕ್ತಿ ಎಲ್ಲವೂ ನಷ್ಟ. ಆದುದರಿಂದ ವಾರ್ಧಕ್ಯದಲ್ಲಿ ಈ ದೇಹವು ಮುಕ್ತದ್ವಾರ ರೋಗಗಳ ಪ್ರವೇಶಕ್ಕೆ. ಒಟ್ಟು ಈ ದೇಹದಲ್ಲಿ ಒಂದು ನೂರಾ ಒಂದು ವ್ಯಾಧಿಗಳು ಇರುತ್ತವೆ. ಇದರಲ್ಲಿ ಒಂದು ರೋಗವು ನಿತ್ಯ - ಉಳಿದ ನೂರು ರೋಗಗಳು ಆಗಂತುಕ. ಆಗಂತುಕವಾದ ನೂರು ರೋಗಗಳು ಔಷಧೋಪಚಾರ ಜಪ, ಹೋಮ, ದಾನ ಮುಂತಾದ, ಉಪಾಯಗಳಿಂದ ಕಡಿಮೆಯಾಗುವವು. ಆದರೆ ಮೃತ್ಯುರೂಪವಾದ ನಿತ್ಯವ್ಯಾಧಿಯು ಮಾತ್ರ ಯಾವ ಉಪಾಯದಿಂದಲೂ ದೂರ ಆಗುವದಿಲ್ಲ.

ಮಾನವನಿಗೆ ಕಾಲವು ಒದಗಿ ಬಂದಿದ್ದರೆ ಔಷಧ, ತಪಸ್ಸು, ದಾನ, ಧರ್ಮ, ಮಡದಿ, ಮಕ್ಕಳು, ಗುರುಹಿರಿಯರ ಪ್ರಯತ್ನ, ಮಂತ್ರ, ತಂತ್ರ, ರಸಾಯನ, ಲೇಪ, ಉಪಚಾರ, ಯಾಗ, ಯೋಗ, ಯಾವವೂ ಬೇರೆ ಬೇರೆಯಾಗಿಯೂ ಎಲ್ಲ, ಕೂಡಿಯೂ ಇಡಿಕಿಡಿಯಾಗಿಯೂ ಹೇಗಾದರೂ ಮೃತ್ಯುವನ್ನು ತಪ್ಪಿಸಲು ಸಾಧ್ಯವಿಲ್ಲ.

ಎಲ್ಲ ಪ್ರಾಣಿಗಳಿಗೂ ಮರಣದಂಥ ಭಯವಿಲ್ಲ. ಮೃತ್ಯುವಿನಂಥ ದುಃಖವಿಲ್ಲ. ಮಡದಿ ಮಕ್ಕಳು ಮಿತ್ರ ಮೊದಲಾದವರೆಲ್ಲರೂ ಮಾನವನನ್ನು ಸ್ನೇಹ ಪಾಶದಲ್ಲಿ ಬಿಗಿದಿರುವರು. ಮೃತ್ಯುವು ಎಲ್ಲ ಪಾಶಗಳನ್ನು ಹರಿದು ಹಾಕಿ ಜೀವವನ್ನು ಹಾರಿಸಿ ಕೊಂಡು ಹೋಗುತ್ತದೆ.

## ಜೀವನದುದ್ದಕ್ಕೂ ಸಾವಿನ ಕರಿನೆರಳು

ಮಾನವರಲ್ಲಿ ಕೆಲವರು ಅರವತ್ತು ಎಪ್ಪತ್ತು ಎಂಬತ್ತು ತೊಂಬತ್ತು ವರ್ಷ ಬದುಕುವುದುಂಟು. ನೂರು ಜನರಲ್ಲಿ ಐದು ಜನರೂ ಕೂಡ ನೂರು ವರ್ಷ ಬದುಕಲಾರರು. ಅರವತ್ತು ಮುಗಿದ ಮರುದಿನವೇ ಮೃತ್ಯು ಹೊಸ್ತಿಲ ಮೇಲೆ ಜಪ್ಪಿಸಿ ಕುಳಿತಿರುತ್ತದೆ. ಎಂದೋ ಯಾವಾಗಲೋ ನಿಯಮವಿಲ್ಲ. ಮಾನವನ ನೂರು ವರ್ಷ ಆಯುಷ್ಯದಲ್ಲಿ ಪೂರ್ತಿ ನೂರು ವರ್ಷವೂ ಬದುಕುತ್ತಾನೆ ಎಂದು ಇಟ್ಟುಕೊಂಡರೂ ಐವತ್ತು ವರ್ಷ ರಾತ್ರಿ ಎಂದರೆ, ನಿದ್ರಾಮಾರಿಯೇ ನಮ್ಮ ಆಯುಷ್ಯದ ಅರ್ಧ ಭಾಗವನ್ನು ನುಂಗಿ ಬಿಟ್ಟಿರುತ್ತಾಳೆ. ಹತ್ತು ವರ್ಷ ಬಾಲ್ಯಾವಸ್ಥೆ. ಹತ್ತು ವರ್ಷ ವೃದ್ಧಾವಸ್ಥೆ-

ಹೀಗೆ ಎಪ್ಪತ್ತು ವರ್ಷ ಯಾವ ಸಾಧನೆ ಮಾಡಿಕೊಳ್ಳಲೂ ಉಪಯೋಗವಿಲ್ಲ. ಉಳಿದ ಮೂವತ್ತು ವರ್ಷ ಆಯುಷ್ಯದಲ್ಲಿ ವಿದ್ಯಾಭ್ಯಾಸ, ದ್ರವ್ಯ ಸಾಧನೆ, ಭಯಾಪಾಯ ಪರಿಹಾರ, ಸುಖಸಾಧನ ಸೋಪಾನ ರಚನೆಯಲ್ಲಿಯೆ ವ್ಯಯಿಸಿ ಹೋಗುತ್ತದೆ. ಇಷ್ಟಾಗಿ ಉಳಿದ ಸಮಯದಲ್ಲಿಯೂ ರೋಗ ಶೋಕಗಳು ಮನುಷ್ಯನ ಜೀವನದಲ್ಲಿ

ಅಶಾಂತಿ ತಾಂಡವವನ್ನು ಮಾಡಲು ಜಪ್ಪಿಸಿ ಕುಳಿತುಕೊಂಡಿರುತ್ತವೆ. ಹೀಗೆ ಸಂಸಾರದ ಚಿಂತೆ ಯಲ್ಲಿಯೇ ಮನುಷ್ಯ ಮೈಮರೆತು ಕುಳಿತುಕೊಂಡಾಗಲೇ ಹದ್ದಿನಂತೆ ಎರಗಿ ಬಿಡುತ್ತದೆ ಮೃತ್ಯು.

## ಮರ್ತ್ಯನ ಮಾನವನ ಮೊದಲು ಕರ್ತವ್ಯ

ಆದುದರಿಂದ ವಿವೇಕಿಯಾದ ಮನುಷ್ಯನು ಬಾಲ್ಯದಿಂದಲೇ ಈ ದೇಹವು ಅಶಾಶ್ವತವೆಂದು ತಿಳಿದುಕೊಂಡು ಸಾಧನಾನುಷ್ಠಾನವನ್ನು ಮೊದಲುಮಾಡಿಕೊಳ್ಳಲು ಸುರುಮಾಡಬೇಕು. ಸಮಯ ಸಿಕ್ಕಾಗಲೆಲ್ಲ ಆತ್ಮೋದ್ಧಾರದ ಉದ್ದೇಶದಿಂದ ದೇವರ ಧ್ಯಾನ ಮಾಡಬೇಕು. ಆಧ್ಯಾತ್ಮ ಸಾಧನೆಯನ್ನು ಜೀವನದ ಮುಖ್ಯ ಗುರಿ ಎಂದು ಇಟ್ಟು ಕೊಳ್ಳಬೇಕು. ತಿಳುವಳಿಕೆ ಬಂದಾಗಿನಿಂದಲೇ ಪರಮಾರ್ಥ ಸಾಧನೆ ಮಾಡುತ್ತಲಿರಬೇಕು. ಆಗ ಮೃತ್ಯು ಬಂದರೂ ಹೆದರಿಕೆ ಇಲ್ಲ. ಈಗ ಸುರು ಮಾಡಿದ ಸಾಧನೆಯ ಕ್ರಮವು ಈಗಿನ ಬಲವತ್ತರವಾದ ಸಂಸ್ಕಾರದ ಫಲದಿಂದ ಜನ್ಮಾಂತರದಲ್ಲಿ ತಾನಾಗಿ ಪೂರ್ತಿಗೊಳ್ಳುವುದು. ಬೇಗ ಭಗವತ್ಪ್ರಸಾದ ಲಭ್ಯವಾಗುವುದು. ಮೃತ್ಯು ದೂರಾಗುವುದು. ಮುಕ್ತಿ ಸಮೀಪವಾಗುವದು.

## ಸಾವು ಸಮೀಪಿಸಿದಾಗ

ಹಾಗಿಲ್ಲದೆ, ಸಂಸಾರದಲ್ಲಿಯೇ ಲಂಪಟನಾಗಿ ಲೋಲುಪ್ತಿಯಿಂದ ಮಡದಿ ಮಕ್ಕಳ ಮೋಹದ ಮಾಯೆಯ ಮಡುವಿನಲ್ಲಿಯೇ ಬಿದ್ದು ಒದ್ದಾಡುತ್ತ ಪ್ರಾಣ ನೀಗಿದರೆ ಮೃತ್ಯು ಅತ್ಯಂತ ಭಯಂಕರವಾಗುವುದು. ಮೃತ್ಯು ಎಂದರೆ ಆತ್ಮದ ನಾಶವಲ್ಲ. ಜೀವನಿಗೆ ಈ ಶರೀರದಿಂದ ವಿಯೋಗ ಮಾತ್ರ. ಮರಣ ಸಮಯದಲ್ಲಿ ಮರ್ಮಸ್ಥಾನಗಳೆಲ್ಲವೂ ಒಡೆದು ಹೋಗುವವು. ಪ್ರಾಣಗಳು ಉತ್ಕ್ರಮಣವಾಗುವಾಗ ಭಯಂಕರವಾದ ಯಾತನೆ, ಕಷ್ಟ, ದುಃಖಗಳನ್ನು ಅನುಭವಿಸಬೇಕಾಗುವದು. ಅಪ್ಪ, ಅಮ್ಮ, ಕಾಂತಾ ಪುತ್ರ ! ಎಂದು ಚೀರುತ್ತಾ ಜೀವನು ಗೋಳಿಡುವನು. ಗಂಟಲು ಒಣಗಿ ಮಾತನಾಡಲು ಬಾರದೆ ಏನೂ ಹೇಳಲು ತಿಳಿಯದೇ ಹಾಸಿಗೆಯ ಮೇಲೆ ಹೊರಳಾಡುವನು. ಕಾಲ ಪುರುಷರು ಬಂದು ಪಾಶ ಹಾಕಿ ಜಗ್ಗುವಾಗ ಕೊರಳು ಗುರು ಗುರು ಎನ್ನುವದು. ಮತ್ತೊಂದು ದೇಹದಲ್ಲಿ ಪ್ರವೇಶ ಮಾಡುವ ಆಶೆಯಿಂದ ಜೀವನು ತನ್ನ ಮೊದಲಿನ ದೇಹವನ್ನು ಬಿಡುವನು. ಅನಂತರ ಯಾತನಾಮಯ ಶರೀರವನ್ನು ಹೊಂದಿ ತನ್ನ ಪಾಪಕರ್ಮಕ್ಕೆ ಅನುಸಾರವಾಗಿ ನರಕಗಳಲ್ಲಿ ಬಗೆ ಬಗೆಯ ದುಃಖಗಳನ್ನು ಅನುಭವಿಸುವನು. ಪುಣ್ಯ ಕರ್ಮಗಳನ್ನು ವಿಪುಲವಾಗಿ ಮಾಡಿದ್ದರೆ, ಸ್ವರ್ಗಾದಿ ಲೋಕಗಳಲ್ಲಿ ಸುಖವನ್ನು ಅನುಭವಿಸುವನು. ಆದರೆ, ಮನುಷ್ಯನು ಸ್ವರ್ಗಾದಿ ಲೋಕಗಳಲ್ಲಿ ಸುಖೋಪಭೋಗಗಳನ್ನು ಅನುಭವಿಸುವಾಗ ಅವನ ಮೂಲ ಧನವಾದ ಪುಣ್ಯ ರಾಶಿಯು ಮಾತ್ರ ಕರಗುತ್ತಲೇ ಇರುತ್ತದೆ.

ಪುಣ್ಯದ ನಿಧಿ ಪೂರ್ಣ ಕರಗಿದ ಕೂಡಲೇ ಬೇರು ಕಡಿದ ಮರ ಕೆಳಗೆ ಉರುಳುವಂತೆ ಸ್ವರ್ಗದಿಂದ ಜೀವನು ಕೆಳಕ್ಕೆ ಉರುಳಿ ಬೀಳುತ್ತಾನೆ. ಆದುದರಿಂದ ಸ್ವರ್ಗಕ್ಕೆ ಹೋದರೂ

ಜೀವನಿಗೆ 'ಎಂದು ನಾನು ಇಲ್ಲಿಂದ ಹೊರಡುವುದಾಗುವುದೋ' ಎಂದು ದುಃಖದ ನೆರಳು ಕವಿದುಕೊಂಡೇ ಇರುವುದು.

## ನರಕದ ಯಮಯಾತನೆ

ನರಕಕ್ಕೆ ಹೋದರಂತೂ ಕೇಳುವುದೇ ಬೇಡ. ಪ್ರಸಿದ್ಧವೇ ಇದೆ ನರಕ ಯಾತನೆ, ದಳ್ಳುರಿಯಲ್ಲಿ ತಳ್ಳುವುದು, ಭರ್ಚಿಯಿಂದ ಚುಚ್ಚುವುದು, ಈಟಿಯಿಂದ ಇರಿಯುವುದು, ಆನೆಯಿಂದ ತುಳಿಸುವುದು, ಕೊಡಲಿಯಿಂದ ಕಡಿಯುವುದು, ಕುದಿಯುವ ಎಣ್ಣೆಯ ಕಡಾಯಿಯಲ್ಲಿ ಕುದಿಸುವುದು, ಕಾದ ಕಬ್ಬಿಣದ ಕಂಬವನ್ನು ಆಲಿಂಗಿಸುವುದು. ಹೀಗೆ ವರ್ಣನಾತೀತ, ಗಣನಾತೀತ, ಅಸಹ್ಯ ಅಸಂಖ್ಯ ಯಮಯಾತನೆಗಳು ನರಕ ಲೋಕದಲ್ಲಿ.

## ಬಾಳು, ನೂರಾರು ಗೋಳು

ಈ ಸ್ವರ್ಗ ನರಕಗಳಿಂದ ಪಾರಾಗಿ ಈ ಪ್ರಪಂಚಕ್ಕೆ ಬಂದರೆ, ಬೇರೆ ಬೇರೆ ಜಾತಿಗಳಲ್ಲಿ ಜೀವನು ತನ್ನ ಕರ್ಮಾನುಸಾರವಾಗಿ ಜನಿಸುವನು. ಹಾವು, ಚೇಳು, ಪಶು, ಪಕ್ಷಿ, ಕ್ರಿಮಿ, ಕೀಟ ಯಾವ ಯಾವವೋ ಜನ್ಮಗಳು, ಜಾತಿಗಳು, ಯೋನಿಗಳು ಜೀವಿಯ ಬಾಳಿನ ಗೋಳಿಗೆ.

ಹಾವು ಚೇಳು ಆದರೆ ಹಸಿವೆಯ ತಾಪ. ಅವುಗಳಿಗೆ ಆಹಾರ ಹುಡುಕುವುದೇ ಕಷ್ಟ. ಹೊರಬಂದರೆ ಹೊಡೆದು ಬಿಡುವರು. ಒಳಗೆ ಇದ್ದರೆ ಉಪವಾಸ. ಸಾವು ಹುಡುಕಿಕೊಂಡು ಬಂದು ಅವುಗಳನ್ನು ಕೊಲ್ಲುವದೂ ಉಂಟು. ಅದು ಇನ್ನೂ ದುಃಖ. ಬುಟ್ಟಿಯಲ್ಲಿ ಹಾವುಗಳನ್ನು ಹಾಕಿಕೊಂಡು ಹಲ್ಲು ಮುರಿದು ಹೊಟ್ಟೆಗೆ ನೀಡದೇ, ಕಂಡಲ್ಲೆಲ್ಲ ಕುಣಿಯ ಹಚ್ಚುವುದು ಇನ್ನೂ ಘೋರ ದುಃಖ. ಕ್ರಿಮಿ ಕೀಟಗಳಾದರೆ, ದೊಡ್ಡ ಪ್ರಾಣಿಗಳಿಂದ ಯಾವಾಗಲೂ ಮರಣ ಭಯ. ಹವೆಯಲ್ಲಿ ಬದಲಾವಣೆಯಾದರೂ ಅವುಗಳಿಗೆ ಸಾಮೂಹಿಕ ಮೃತ್ಯು. ಮೃಗ ಪಕ್ಷಿಗಳಿಗೆ ಮಳೆ, ಬಿಸಿಲು ಛಳಿಗಳಲ್ಲಿ ಬದುಕುವುದೇ ಕಷ್ಟ. ಪಶುಗಳಿಗಂತೂ ಮಾನವರ ಗುಲಾಮರಾಗಿ ಹಗಲಿರುಳೂ ದುಡಿತ. ಅದರ ಮೇಲೆ ಹೊಡೆತ. ಹೊಟ್ಟೆಗಿಲ್ಲದೆ ಹಗಲಿರುಳು ಚಾಟಿಯ ಏಟು. ಅಂಕುಶಗಳ ತಿವಿತ. ಭಾರ ಹೇರಿಕೊಂಡು ಬಿಸಿಲಲ್ಲಿ ಓಡಬೇಕು. ಮಳೆಯಲ್ಲಿ ನೆನೆಯಬೇಕು. ಚಳಿಯಲ್ಲಿ ನಡುಗಬೇಕು. ಸಾಯುವವರೆಗೂ ದುಡಿಯಬೇಕು. ಇದಕ್ಕಿಂತ ಮರಣ ಏನು ಕೆಟ್ಟ?

## ಸರ್ವಂ ವಸ್ತು ಭಯಾನ್ವಿತಮ್

ಮಾನವನಾಗಿ ಹುಟ್ಟಿ ಬಂದವರಿಗೂ ಕೂಡ ದುರ್ಭಿಕ್ಷೆ, ದಾರಿದ್ರ್ಯ, ರಾಷ್ಟ್ರವಿಪ್ಲವ, ಮಹಾಯುದ್ಧ, ಪಿಡುಗು ರೋಗಗಳ ಆಕ್ರಮಣ ಮೊದಲಾದವುಗಳಿಂದ ಸಂತತವೂ ಅಸ್ಥಿರತೆ, ಆಪತ್ತು ಕುತ್ತು ವಿಪತ್ತು ನಿತ್ಯವೂ ಇರುತ್ತವೆ. ಈ ಸಂಸಾರದಲ್ಲಿ ಎಲ್ಲಿ ನೋಡಿದರೂ ದುಃಖ. ಎಲ್ಲಿ ನೋಡಿದರೂ ಅಶಾಂತಿ. ಈ ಎಲ್ಲ ದುಃಖಮಯ

ಪ್ರಪಂಚದಲ್ಲಿ ಎಲ್ಲವೂ ಅಶಾಶ್ವತ. ಭಯಾಪಾಯ ಉಳ್ಳದ್ದು. ಜಗತ್ತಿನಲ್ಲಿ ನಿರ್ಭಯವಾದ ವಸ್ತು ಒಂದೇ. ಅದು ವೈರಾಗ್ಯ. ನಿರುಪಾಯವಾದ ಆನಂದದ ನಿಧಿ ಒಂದೇ. ಅದೇ ವಿಷ್ಣು. ಆ ವಿಷ್ಣುವನ್ನು ಹೊಂದಬೇಕಾದರೆ ವೈರಾಗ್ಯವನ್ನು ಆಶ್ರಯಿಸಬೇಕು. ಆ ವೈರಾಗ್ಯವು ಸ್ಥಿರವಾಗಬೇಕಾದರೆ ಈ ಸಂಸಾರವೆಲ್ಲವೂ ದುಃಖಮಯ ಎಂದು ತಿಳಿದು ತ್ಯಾಗ ಮಾಡಬೇಕು. ತಾಯಿ ! ಕಾಗೆಗಳು ಇರುವ ಅಪವಿತ್ರ ಸ್ಥಾನದಲ್ಲಿ ರಾಜಹಂಸವು ಇರಲಾರದು. ಅದರಂತೆ ಈ ದುಃಖಮಯ ಸಂಸಾರದಲ್ಲಿ ವಿರಕ್ತ ಚೇತನ ಸಂತಸದಿಂದ ಇರುವದಿಲ್ಲ.

## ಸಂಸಾರದ ಗೊಂಡಾರಣ್ಯ

ಅಮ್ಮ ! ಈ ಸಂಸಾರವೆಂಬುದು ಒಂದು ದೊಡ್ಡ ಗೊಂಡಾರಣ್ಯ. ನಾನಾ ಬಗೆಯ ಕರ್ಮಗಳೇ ಬಗೆ ಬಗೆಯ ಹೆಮ್ಮರಗಳು ಇಲ್ಲಿ. ಶೋಕ ಹರ್ಷಗಳು ಇಲ್ಲಿಯ ಛಳಿ, ಬಿಸಿಲು. ಲೋಭವೆಂಬುವ ಹಾವು, ಚೇಳು ಹರಿದಾಡುತ್ತಿವೆ ಈ ವನಾಂತರದಲ್ಲಿ. ಕಾಮ, ಕ್ರೋಧರೆಂಬ ಕಳ್ಳರು ತಂಬೂ ಹೊಡೆದು ಕುಳಿತಿದ್ದಾರೆ ಇಲ್ಲಿ. ಇಂಥ ದುಃಖಮಯವಾದ ಅರಣ್ಯದಲ್ಲಿ ಇದ್ದವನು ಬಿದ್ದಂತೆ, ಬಿದ್ದವನು ಸತ್ತಂತೆ.

ಆದುದರಿಂದ ಇದನ್ನು ನಾನು ದಾಟಿ ಮುಂದೆ ಹೋಗಿದ್ದೇನೆ, ನೀವೆಲ್ಲ ಇದ್ದುದು ಅವಿದ್ಯಾರೂಪ ಅರಣ್ಯ. ನಾನು ಇದನ್ನು ದಾಟಿ ವಿದ್ಯಾರೂಪ ವನದಲ್ಲಿ ಪ್ರವೇಶ ಮಾಡಿದ್ದೇನೆ. ಆ ವಿದ್ಯಾರಣ್ಯದಲ್ಲಿ ಸಪ್ತ ಪರ್ವತಗಳೂ ಸಪ್ತ ಹ್ರದಗಳೂ ಇರುತ್ತವೆ. ಸಪ್ತ ನದಿಗಳು ಇರುತ್ತವೆ. ತೇಜಸ್ಸು, ಅಭಯದಾನ ಅದ್ರೋಹ, ದಕ್ಷತೆ, ಅಚಪಲತೆ, ಅಕ್ರೋಧ, ಪ್ರಿಯವಚನ - ಇವು ಏಳು ಆ ವಿದ್ಯಾರಣ್ಯದಲ್ಲಿಯ ಸಪ್ತ ಪರ್ವತಗಳು. ಧೃಡ ನಿಶ್ಚಯ, ಸಮಬುದ್ಧಿ, ಇಂದ್ರಿಯ ಸಂಯಮ, ಗುಣ ಸಂಚಯ, ನಿರ್ಮೋಹ, ತಪಸ್ಸು, ಸಂತೋಷ - ಇವೇ ಏಳು ಸರೋವರಗಳು. ಭಗವದ್ಭಕ್ತಿ, ವಿರಕ್ತಿ ನಿರ್ಮಮತೆ, ಭಗವದಾರಾಧನೆ, ಭಗವತ್ ಸಮರ್ಪಣೆ, ಬ್ರಹ್ಮಜ್ಞಾನ, ಆತ್ಮಸಿದ್ಧಿ- ಇವು ಏಳು ನದಿಗಳು , ಯಾವನು ಅತ್ಮತೃಪ್ತಿಯಿಂದ ಒಡಗೂಡಿ ಶಾಂತವೃತ್ತಿಯಿಂದ ಜಿತೇಂದ್ರಿಯನಾಗಿ ಭಗವದ್‌ಧ್ಯಾನವನ್ನು ಮಾಡುವನೋ ಅವನು ಮಾತ್ರ ಈ ಮಾರ್ಗದಿಂದ ಪರಬ್ರಹ್ಮವನ್ನು ಹೊಂದುತ್ತಾನೆ.

ತಾಯಿ ! ನಾನು ಒಂದು ವಿಶಿಷ್ಟವಾದ ವ್ರತವನ್ನು ಧಾರಣ ಮಾಡಬೇಕೆಂಬ ಹೆಬ್ಬಯಕೆಯಿಂದ ಬ್ರಹ್ಮಚರ್ಯವನ್ನು ಆಚರಿಸುತ್ತಿದ್ದೇನೆ. ಈ ಬ್ರಹ್ಮಚರ್ಯದಲ್ಲಿ ಬ್ರಹ್ಮನೇ ಸಮಿಧೆ, ಬ್ರಹ್ಮನೇ ಅಗ್ನಿ. ಬ್ರಹ್ಮನೇ ಕುಶ, ನೀರೂ ಬ್ರಹ್ಮ, ಗುರುವೂ ಬ್ರಹ್ಮ, ಇದೇ ನನ್ನ ಬ್ರಹ್ಮಚರ್ಯ ವ್ರತ. ಬ್ರಹ್ಮನನ್ನು ಅರಿತವರು ಇದಕ್ಕೆ ಸೂಕ್ಷ್ಮ ಬ್ರಹ್ಮಚರ್ಯ ಎಂದು ಕರೆಯುವರು. ನನ್ನ ಗುರುವಿನ ಪರಿಚಯವನ್ನು ಹೇಳುತ್ತೇನೆ ಕೇಳು. ತಾಯಿ ನನಗೆ ಈ ಸದ್ವಿದ್ಯೆಯನ್ನು ಕೊಟ್ಟ ಗುರು ಒಬ್ಬನೇ ಇರುತ್ತಾನೆ. ಬೇರೆ ಶಿಕ್ಷಕರೇ ಇಲ್ಲ ಈ ನಿನ್ನ ಮಗನಿಗೆ, ಆ ನನ್ನ ಶಿಕ್ಷಕನನ್ನು ಅರಿಸಿಕೊಂಡು ನಾನು

ಹೋಗಬೇಕಾಗಿಲ್ಲ. ಅವನು ನನಗೆ ಬಹು ಹತ್ತಿರ. ನನ್ನ ಹೃದಯ ಪೀಠದಲ್ಲಿಯೇ ಮಂಡಿಸಿದ್ದಾನೆ ಆ ನನ್ನ ಪರಮಗುರು ಮುಕುಂದ.

**ಏಕೋ ಗುರುರ್ನಾಸ್ತಿ ತತೋ ದ್ವಿತೀಯಃ**
**ಯೋ ಹೃದ್ಗಸ್ತಮಹಂ ವೈ ನಮಾಮಿ ।**
**ಪಂಚಾಭವನ್ಮ್ಯವ ಗುರುಂ ಮುಕುಂದ**
**ಪರಾಭೂತಾ ದಾನವಾಸ್ಸರ್ವ ಏವ ॥**

ನನ್ನ ಹೃದಯ ಗುಹೆಯಲ್ಲಿರುವ ಮುಕುಂದನೊಬ್ಬನೇ ನನಗೆ ಗುರು. ಬೇರೆ ಯಾವನನ್ನೂ ನಾನು ಗುರುವೆಂದು ಮನ್ನಿಸುವುದಿಲ್ಲ. ಮಹಾ ಗುರುವಾದ ಆ ಪರಮಾತ್ಮ ರೂಪವಾದ ಗುರುವಿಗೆ ನಾನು ನಮಸ್ಕಾರ ಮಾಡುತ್ತೇನೆ. ಆ ಮುಕುಂದನನ್ನು ದ್ವೇಷಿಸಿ ಎಲ್ಲ ದಾನವರೂ ಪರಾಹತರಾಗಿದ್ದಾರೆ.

ಆ ಪರಮಾತ್ಮನೊಬ್ಬನೇ ನನಗೆ ಗುರು, ತಂದೆ, ತಾಯಿ, ಸ್ವಾಮಿ, ಮಿತ್ರ - ಐದೂ ಆಗಿದ್ದಾನೆ. ಈ ನನ್ನ ಗುರುವಿನಲ್ಲಿ ಓದಿ ನನ್ನ ಸಹಾಧ್ಯಾಯಿಗಳಾದ ಏಳು ನನ್ನ ಅಣ್ಣ ತಮ್ಮಂದಿರು ಆಕಾಶದಲ್ಲಿ ಸಪ್ತರ್ಷಿಗಳಾಗಿ ಬೆಳಗುತ್ತಿದ್ದಾರೆ. ಆ ನನ್ನ ವೇದಾಂತ ಸಹಪಾಠಿಗಳಾದ ಏಳು ಸೋದರರನ್ನು ನಕ್ಷತ್ರಮಂಡಲದಲ್ಲಿ ಸಪ್ತರ್ಷಿಗಳು ಎಂದು ಎಲ್ಲರೂ ಪೂಜಿಸುತ್ತಾರೆ. ಇದು ನನ್ನ ಬ್ರಹ್ಮಚರ್ಯ ವ್ರತದ ಆಚರಣ ರೀತಿಯಾಯಿತು. ಇನ್ನು ನನ್ನ ಗೃಹಸ್ಥ ಜೀವನವನ್ನು ಹೇಳುತ್ತೇನೆ, ಕೇಳು. ನಾನು ಈಗ ಪೂರ್ಣ ಗೃಹಸ್ಥಾಶ್ರಮೀ ! ಪ್ರಕೃತಿಯೇ ನನ್ನ ಪತ್ನಿ. ಆ ಭಾರ್ಯೆಯ ಚಿಂತೆಯನ್ನು ನಾನು ಎಂದೂ ಮಾಡುವುದಿಲ್ಲ. ಅವಳೇ ನನ್ನ ಚಿಂತೆಯನ್ನು ಮಾಡುತ್ತಾಳೆ. ಗೃಹಸ್ಥನಾದ ನನ್ನದು ಒಂದು ಅಗ್ನಿ ಶಾಲೆಯಿದೆ. ಅದರಲ್ಲಿ ಕಣ್ಣು, ಕಿವಿ, ನಾಲಿಗೆ, ಮೂಗು, ತೊಗಲು, ಮನಸ್ಸು, ಬುದ್ಧಿ ಎಂಬ ಏಳು ವಿಧವಾದ ಅಗ್ನಿಗಳು ಯಾವಾಗಲೂ ಪ್ರಜ್ವಲಿತವಾಗಿರುತ್ತವೆ. ಗಂಧ, ರಸ, ರೂಪ, ಸ್ಪರ್ಶ, ಮತ್ತು ಮಂತವ್ಯ, ಬೋದ್ಧವ್ಯ ಇವು ಏಳು ಆ ಅಗ್ನಿಯಲ್ಲಿ ಹಾಕಬೇಕಾದ ಸಮಿಧೆಗಳು. ಹೋಮ ಮಾಡುವವ ಸ್ವಯಂ ನಾರಾಯಣ. ಅವನನ್ನು ನೆನೆದರೆ ಸಾಕು. ತಕ್ಷಣವೇ ಪ್ರತ್ಯಕ್ಷ. ನಾನು ಪ್ರಾರ್ಥನೆ ಮಾಡಿದ ಕೂಡಲೇ ಸ್ವಯಂ ಆ ಭಗವಂತನು ಆ ಮೇಲೆ ಹೇಳಿದ ಏಳು ಸಮಿಧೆಗಳನ್ನು ಮೇಲೆ ಹೇಳಿದ ನಾಸಿಕಾದಿ ಏಳು ಅಗ್ನಿಗಳಲ್ಲಿ ಹೋಮ ಮಾಡುವನು. ಹೀಗೆ ಈ ಯಜ್ಞದಿಂದ ನಾನು ವಿಷ್ಣುವಿನ ಆರಾಧನೆಯನ್ನು ಮಾಡುತ್ತಾ ಗೃಹಸ್ಥಧರ್ಮವನ್ನು ಮಾಡುತ್ತೇನೆ.

## ತೋಯದ ಮೇಲಿನ ತಾವರೆ

ನಾನು ಯಾವ ವಸ್ತುಗಳನ್ನೂ ಬಯಸುವದಿಲ್ಲ. ಆದರೂ ನನ್ನ ಬಯಕೆಗಳೆಲ್ಲವೂ ಪೂರ್ಣವಾಗಿರುತ್ತವೆ. ನಾನು ಸಾಂಸಾರಿಕವಾಗಿ ಯಾವ ದೋಷವನ್ನೂ ಯಾರ ದ್ವೇಷವನ್ನೂ ಮಾಡುವದಿಲ್ಲ, ಆದರೂ ಯಾವ ದೋಷವೂ ನನ್ನಲ್ಲಿ ಪ್ರಕಟವಾಗುವದಿಲ್ಲ. ನೀರಿನ ಮೇಲೆ ತೇಲುವ ತಾವರೆ ಎಲೆಗೆ ನೀರಿನ

ಲೇಪವಿಲ್ಲ. ಅದೇ ರೀತಿಯಾಗಿ ನಾನು ಕೂಡ ರಾಗ ದ್ವೇಷದಿಂದ ಲಿಪ್ತನಾಗುವದಿಲ್ಲ. ತಾಯಿಯೇ, ನೀನು ನನ್ನ ವಿಷಯದಲ್ಲಿ ದುಃಖವನ್ನು ಮಾಡಬೇಡ. ನಾನು ನಿನ್ನನ್ನು ನೂರಾರು ಯಜ್ಞ ಯಾಗಗಳಿಂದಲೂ ದೊರಕಲಾರದ ಉಚ್ಚತಮವಾದ ಪುಣ್ಯಪದಕ್ಕೆ ತಲುಪಿಸುತ್ತೇನೆ.''

## ಹಡೆದಮ್ಮನ ಹೆಮ್ಮೆ

ಅರ್ಥಗರ್ಭಿತವಾದ ಈ ಐತರೇಯನ ಗಂಭೀರ ಭಾವವುಳ್ಳ ಈ ನುಡಿಯನ್ನು ಕೇಳಿ ತಾಯಿ ಇತರಾದೇವಿಗೆ ಅತ್ಯಾಶ್ಚರ್ಯ ಆಯಿತು. ''ಇಷ್ಟು ದಿನ ನನಗೆ ಅವನ ಯೋಗ್ಯತೆಯೇ ತಿಳಿದಿರಲಿಲ್ಲ. ಮೇಲೆ ಹುಚ್ಚನಂತೆ ಕಂಡರೂ ಅಂತರಂಗದಲ್ಲಿ ಅವನೊಬ್ಬ ಪೂರ್ಣ ಜ್ಞಾನಿ. ಈ ನನ್ನ ಪುತ್ರನಾದ ಐತರೇಯನು ಒಬ್ಬ ಮೌನಿ ಮುನಿ. ಇಂದಿಲ್ಲ ನಾಳೆ ಪ್ರಪಂಚವು ನನ್ನ ಮಗನ ಈ ಜ್ಞಾನದ ಎತ್ತರವನ್ನು, ಈ ವೈರಾಗ್ಯದ ಮೇಲ್ಮೆಯನ್ನು, ಅವನ ವ್ಯಕ್ತಿತ್ವದ ಹಿರಿಮೆಯನ್ನು ಅರಿತುಕೊಳ್ಳುವುದು. ಆದರಿಂದ ಅವನ ತಾಯಿಯಾದ ನನ್ನ ಕೀರ್ತಿಯು ದಿಗಂತ ವಿಶ್ರಾಂತವಾಗುವದು'' ಎಂದು ಅವಳು ತನ್ನಲ್ಲಿಯೇ ವಿಚಾರಿಸಿದಳು. ಇಂಥ ಪರಮ ಜ್ಞಾನಿಯಾದ ಮಗನನ್ನು ಹೆತ್ತದ್ದಕ್ಕಾಗಿ ಅವಳಿಗೆ ಧನ್ಯತೆ ಎನಿಸಿತು. ಇದೆಲ್ಲವೂ ಈ ಕ್ಷೇತ್ರವಾಸಿಯಾದ ಭಗವಾನ್ ಶ್ರೀ ವಾಸುದೇವನ ಪ್ರಭಾವ ಎಂದು ಅವಳಿಗೆ ನಿಶ್ಚಯವಾಯಿತು. ಅವಳಿಗೆ ಹೃದಯ ತುಂಬಿ ಬಂದಿತು. ದಿವ್ಯಜ್ಞಾನಿಯಾದ ಐತರೇಯನಂಥ ಕುಲೋದ್ಧಾರಕ ಪುತ್ರನನ್ನು ಕೊಟ್ಟದ್ದಕ್ಕಾಗಿ ಕೃತಜ್ಞತೆಯಿಂದ ಆ ವಾಸುದೇವರೂಪಿ ಭಗವಂತನ ಎದುರು ಹೋಗಿ ಅತ್ಯಂತ ಭಕ್ತಿಯಿಂದ ಸಾಷ್ಟಾಂಗ ಪ್ರಣಿಪಾತ ಪುರಸ್ಸರವಾಗಿ ವಂದನೆಗೈದಳು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೂವತ್ತೊಂದನೇ ಅಧ್ಯಾಯ ಮುಗಿದುದು.**

## ತಾಯಿ ಮಗನಿಗೆ ಭಗವಂತನ ಸಾಕ್ಷಾತ್ಕಾರ

ಅಧ್ಯಾಯ-32

ಭಗವಾನ್ ವಾಸುದೇವನು ಇತರಾದೇವಿಯ ಭಕ್ತಿಯಿಂದ ಪ್ರೀತನಾಗಿದ್ದಾನೆ. ಐತರೇಯನ ಸಂತತ ಆರಾಧನೆಯಿಂದ ಪ್ರಸನ್ನನೂ ಆಗಿದ್ದಾನೆ. ಈ ತಾಯಿ ಮಗ ಈರ್ವರ ನಿರತಿಶಯ ಭಕ್ತಿಯುಕ್ತ ಸಂತತ ಆರಾಧನೆ, ನಿರಂತರ ಉಪಾಸನಾ ರೂಪವಾದ ಚಿರಕಾಲೀನ ತಪೋನುಷ್ಠಾನದಿಂದ ಪರಮಾತ್ಮನು ಪ್ರತ್ಯಕ್ಷನಾದ ಅವರ ಕಣ್ಣೆದುರು. ನಾರದರು ಪ್ರತಿಷ್ಠಾಪಿಸಿದ ವಾಸುದೇವನ ದಿವ್ಯಮೂರ್ತಿಯಿಂದ ಸಾಕ್ಷಾತ್ ಸ್ವಯಂ ಶ್ರೀ ವಾಸುದೇವನೇ ಹೊರಗೆ ಎದ್ದು ಬಂದು ತನ್ನ ಸಾಕ್ಷಾತ್ ಮೂಲರೂಪದಿಂದ ಆ ತಾಯಿ ಮಕ್ಕಳಿಗೆ ತನ್ನ ದಿವ್ಯ ದರ್ಶನವನ್ನು ಇತ್ತ. ಸ್ವಯಂ ಭಗವಂತನೇ ತನ್ನ ಭಕ್ತಿಯಿಂದ ಪ್ರಸನ್ನನಾಗಿ ಪ್ರತ್ಯಕ್ಷ ಬಂದು ನಿಂತುದುದನ್ನು ನೋಡಿ ಐತರೇಯನಿಗೆ ಹರ್ಷೋದ್ರೇಕವಾಗಿ

ಆನಂದ ಭಾಷ್ಪಗಳು ಉದುರತೊಡಗಿದವು. ಮೈ ಎಲ್ಲವೂ ರೋಮಾಂಚನಗಳಿಂದ ಕಂಚುಕಿತ. ಕಂಠ ಗದ್ಗದಿತ. ಹೃದಯ ಉಲ್ಲಸಿತ. ಮಾತು ವಿಸ್ಖಲಿತ. ಭಾವೋದ್ರೇಕದಿಂದ ಗದ್ಗದಿತವಾದ ಅವನ ಬಾಯಿಂದ ಮಾತೇ ಹೊರಡಲಿಲ್ಲ. ಆದರೂ ಅವನು ಕಷ್ಟದಿಂದ ಹೇಗೋ ತನ್ನ ನುಡಿಗಳನ್ನು ಹೊಂದಿಸಿಕೊಂಡು ಕೈ ಜೋಡಿಸಿ, ಶಬ್ಧ ಕೂಡಿಸಿ, ಭಕ್ತಿ ಭಾವೋದ್ರಿಕ್ತವಾದ ಸ್ತೋತ್ರವನ್ನು ಮಾಡಿದ.

**ಐತರೇಯ** : ಭಗವನ್ ! ವಾಸುದೇವನೆ, ನಿನಗೆ ನಮೋನಮಃ । ಜ್ಞಾನರೂಪಿಯಾದ ನಿನಗೆ ನಮಸ್ಕಾರ. ಆನಂದಮೂರ್ತಿಗೆ ವಂದನೆ. ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ಎಂಬ ಈ ಚತುರ್ಮೂರ್ತಿಗೆ ನನ್ನ ಪ್ರಣಾಮ. ಸ್ವಾಮಿನ್ ! ಆತ್ಮಾರಾಮನಾದ ನೀನು ಎಲ್ಲ ಇಂದ್ರಿಯಗಳಿಗೂ ನಿಯಾಮಕನಾಗಿರುವ ದರಿಂದ 'ಹೃಷೀಕೇಶ' ಎಂದು ಕರೆಯಲ್ಪಡುವೆ. ಷಡ್ಗುಣೈಶ್ವರ್ಯ ಸಂಪನ್ನನಾದುದರಿಂದ ನಿನ್ನನ್ನು 'ಭಗವಾನ್' ಎಂದು ಕರೆಯುವವರು ಭಕ್ತ ಭಾವುಕರು. ನೀನು ವಿರಾಡ್ರೂಪಿ. ಅಗ್ನಿಯೇ ನಿನ್ನ ಮುಖ. ಪೃಥ್ವಿಯೇ ನಿನ್ನ ಚರಣ. ಆಕಾಶವೇ ಮಸ್ತಕ. ಸೂರ್ಯ ಚಂದ್ರರೇ ಎರಡು ಕಣ್ಣು. ಈ ಸಂಪೂರ್ಣವಾದ ಪ್ರಪಂಚವೇ ನಿನ್ನ ಶರೀರ. ನಾಲ್ಕು ದಿಕ್ಕುಗಳು ನಿನ್ನ ನಾಲ್ಕು ತೋಳುಗಳು. ಈ ಬ್ರಹ್ಮಾಂಡವೆಲ್ಲವೂ ನಿನ್ನನ್ನೇ ಆಶ್ರಯಿಸಿದೆ. ಇಂಥ ವಿರಾಟ್ ಶರೀರವುಳ್ಳ ಭಗವಂತನೇ, ನನ್ನ ಅನಂತಾಂತ ವಂದನೆಗಳು ನಿನಗೆ.

## ನಿನ್ನ ಗುಣಗಳು ಅನಂತ ; ನನ್ನ ದೋಷಗಳೂ ಅನಂತ

ಭಗವನ್, ಈ ಸಂಸಾರದ ಜನನ ಮರಣದ ಜಾಲದಲ್ಲಿ ಸಿಕ್ಕು ಜರ್ಜರಿತವಾಗಿದೆ ಈ ನನ್ನ ಜೀವ. ಇದಕ್ಕೆ ಬಿಡುಗಡೆ ಎಂದು ? ನಾನು ತಿರುಗಿ ಬಂದ ಯೋನಿಗಳು ಎಷ್ಟು? ನಾನು ಜನ್ಮ ಪಡೆದ ಬೇರೆ ಬೇರೆ ಯೋನಿಗಳಲ್ಲಿ ನನಗೆ ಜನ್ಮ ವಿತ್ತ ತಾಯಿ ತಂದೆಗಳ ಲೆಕ್ಕ ಮಾಡಿದರೆ ಮುಗಿಲಿನಲ್ಲಿಯ ಚಿಕ್ಕೆಗಳಷ್ಟು ಅಥವಾ ನೆಲದ ಮೇಲಿನ ಮಣ್ಣು ಕಣಗಳಷ್ಟು ಆಗಬಹುದು. ಈ ಎಲ್ಲ ಜನ್ಮಗಳಲ್ಲಿ ನನಗೆ ಇದ್ದ ಶತ್ರು, ಮಿತ್ರ, ಅಣ್ಣ, ತಮ್ಮ, ಮಡದಿ ಮಕ್ಕಳ ಗಣನೆಯನ್ನು ಯಾರಿಗೂ ಮಾಡಲು ಶಕ್ಯವಿಲ್ಲ. ಅನಂತ ಜನ್ಮಗಳು ಕಳೆದರೂ ನನಗೆ ನಿನ್ನ ಆರಾಧನೆ ಮಾಡಲು ಆಗಲಿಲ್ಲ. ಎಲ್ಲ ಜನ್ಮಗಳಲ್ಲಿಯೂ ಈ ಕಾಮ, ಕ್ರೋಧಾದಿ ವೈರಿಗಳು ನನ್ನ ಮೇಲೆ ದಾಳಿ ಮಾಡುತ್ತಲೇ ಇವೆ. ನಿನಗೆ ಷಡ್ಗುಣಗಳಿದ್ದಂತೆ ನನಗೆ ಷಡ್ವೈರಿಗಳು. ನಿನ್ನಲ್ಲಿ ಗುಣಗಳೂ ಅನಂತ, ನನ್ನಲ್ಲಿ ದೋಷಗಳು ಅನಂತ, ನಾನು ಪತಿತ, ನೀನು ಪತಿತೋದ್ಧಾರಕ. ನಾನು ಅನಾಥ, ನೀನು ಅನಾಥರಕ್ಷಕ. ಸ್ವಾಮೀ ! ನಾನು ನಿನಗೆ ಶರಣು ಬಂದಿದ್ದೇನೆ. ಸಂಸಾರ ಸಾಗರದಲ್ಲಿ ಬಿದ್ದು ಅತ್ಯಂತ ಆರ್ತನಾದ ನನ್ನ ಮೇಲೆ ಕರುಣೆಯನ್ನು ತೋರು. ನನ್ನನ್ನು ಉದ್ಧರಿಸು.

**"ಸೋಽಹಂ ಭೃಶಾರ್ತಃ ಕರುಣಾಂ ಕುರು ತ್ವಂ ಸಂಸಾರಗರ್ತೇ ಪತಿತಸ್ಯ ವಿಷ್ಣೋ॥**
**ಮಹಾತ್ಮನಾಂ ಸಂಶ್ರಯಮಭ್ಯುಪೇತೋ ನೈವಾವಸೀದತ್ಯಪಿ ದುರ್ಗತೋಽಪಿ ।**

ಲೇಪವಿಲ್ಲ. ಅದೇ ರೀತಿಯಾಗಿ ನಾನು ಕೂಡ ರಾಗ ದ್ವೇಷದಿಂದ ಲಿಪ್ತನಾಗುವದಿಲ್ಲ. ತಾಯಿಯೇ, ನೀನು ನನ್ನ ವಿಷಯದಲ್ಲಿ ದುಃಖವನ್ನು ಮಾಡಬೇಡ. ನಾನು ನಿನ್ನನ್ನು ನೂರಾರು ಯಜ್ಞ ಯಾಗಗಳಿಂದಲೂ ದೊರಕಲಾರದ ಉಚ್ಚತಮವಾದ ಪುಣ್ಯಪದಕ್ಕೆ ತಲುಪಿಸುತ್ತೇನೆ.''

## ಹಡೆದಮ್ಮನ ಹೆಮ್ಮೆ

ಅರ್ಥಗರ್ಭಿತವಾದ ಈ ಐತರೇಯನ ಗಂಭೀರ ಭಾವವುಳ್ಳ ಈ ನುಡಿಯನ್ನು ಕೇಳಿ ತಾಯಿ ಇತರಾದೇವಿಗೆ ಅತ್ಯಾಶ್ಚರ್ಯ ಆಯಿತು. ''ಇಷ್ಟು ದಿನ ನನಗೆ ಅವನ ಯೋಗ್ಯತೆಯೇ ತಿಳಿದಿರಲಿಲ್ಲ. ಮೇಲೆ ಹುಚ್ಚನಂತೆ ಕಂಡರೂ ಅಂತರಂಗದಲ್ಲಿ ಅವನೊಬ್ಬ ಪೂರ್ಣ ಜ್ಞಾನಿ. ಈ ನನ್ನ ಪುತ್ರನಾದ ಐತರೇಯನು ಒಬ್ಬ ಮೌನಿ ಮುನಿ. ಇಂದಿಲ್ಲ ನಾಳೆ ಪ್ರಪಂಚವು ನನ್ನ ಮಗನ ಈ ಜ್ಞಾನದ ಎತ್ತರವನ್ನು, ಈ ವೈರಾಗ್ಯದ ಮೇಲ್ಮೆಯನ್ನು, ಅವನ ವ್ಯಕ್ತಿತ್ವದ ಹಿರಿಮೆಯನ್ನು ಅರಿತುಕೊಳ್ಳುವುದು. ಅದರಿಂದ ಅವನ ತಾಯಿಯಾದ ನನ್ನ ಕೀರ್ತಿಯು ದಿಗಂತ ವಿಶ್ರಾಂತವಾಗುವದು'' ಎಂದು ಅವಳು ತನ್ನಲ್ಲಿಯೇ ವಿಚಾರಿಸಿದಳು. ಇಂಥ ಪರಮ ಜ್ಞಾನಿಯಾದ ಮಗನನ್ನು ಹೆತ್ತದ್ದಕ್ಕಾಗಿ ಅವಳಿಗೆ ಧನ್ಯತೆ ಎನಿಸಿತು. ಇದೆಲ್ಲವೂ ಈ ಕ್ಷೇತ್ರವಾಸಿಯಾದ ಭಗವಾನ್ ಶ್ರೀ ವಾಸುದೇವನ ಪ್ರಭಾವ ಎಂದು ಅವಳಿಗೆ ನಿಶ್ಚಯವಾಯಿತು. ಅವಳಿಗೆ ಹೃದಯ ತುಂಬಿ ಬಂದಿತು. ದಿವ್ಯಜ್ಞಾನಿಯಾದ ಐತರೇಯನಂಥ ಕುಲೋದ್ಧಾರಕ ಪುತ್ರನನ್ನು ಕೊಟ್ಟದ್ದಕ್ಕಾಗಿ ಕೃತಜ್ಞತೆಯಿಂದ ಆ ವಾಸುದೇವರೂಪಿ ಭಗವಂತನ ಎದುರು ಹೋಗಿ ಅತ್ಯಂತ ಭಕ್ತಿಯಿಂದ ಸಾಷ್ಟಾಂಗ ಪ್ರಣಿಪಾತ ಪುರಸ್ಸರವಾಗಿ ವಂದನೆಗೈದಳು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೂವತ್ತೊಂದನೇ ಅಧ್ಯಾಯ ಮುಗಿದುದು.**

## ತಾಯಿ ಮಗನಿಗೆ ಭಗವಂತನ ಸಾಕ್ಷಾತ್ಕಾರ

ಅಧ್ಯಾಯ-32

ಭಗವಾನ್ ವಾಸುದೇವನು ಇತರಾದೇವಿಯ ಭಕ್ತಿಯಿಂದ ಪ್ರೀತನಾಗಿದ್ದಾನೆ. ಐತರೇಯನ ಸಂತತ ಆರಾಧನೆಯಿಂದ ಪ್ರಸನ್ನನೂ ಆಗಿದ್ದಾನೆ. ಈ ತಾಯಿ ಮಗ ಈರ್ವರ ನಿರತಿಶಯ ಭಕ್ತಿಯುಕ್ತ ಸಂತತ ಆರಾಧನೆ, ನಿರಂತರ ಉಪಾಸನಾ ರೂಪವಾದ ಚಿರಕಾಲೀನ ತಪೋನುಷ್ಠಾನದಿಂದ ಪರಮಾತ್ಮನು ಪ್ರತ್ಯಕ್ಷನಾದ ಅವರ ಕಣ್ಣೆದುರು. ನಾರದರು ಪ್ರತಿಷ್ಠಾಪಿಸಿದ ವಾಸುದೇವನ ದಿವ್ಯಮೂರ್ತಿಯಿಂದ ಸಾಕ್ಷಾತ್ ಸ್ವಯಂ ಶ್ರೀ ವಾಸುದೇವನೇ ಹೊರಗೆ ಎದ್ದು ಬಂದು ತನ್ನ ಸಾಕ್ಷಾತ್ ಮೂಲರೂಪದಿಂದ ಆ ತಾಯಿ ಮಕ್ಕಳಿಗೆ ತನ್ನ ದಿವ್ಯ ದರ್ಶನವನ್ನು ಇತ್ತ. ಸ್ವಯಂ ಭಗವಂತನೇ ತನ್ನ ಭಕ್ತಿಯಿಂದ ಪ್ರಸನ್ನನಾಗಿ ಪ್ರತ್ಯಕ್ಷ ಬಂದು ನಿಂತುದುದನ್ನು ನೋಡಿ ಐತರೇಯನಿಗೆ ಹರ್ಷೋದ್ರೇಕವಾಗಿ

ಆನಂದ ಭಾಷ್ಪಗಳು ಉದುರತೊಡಗಿದವು. ಮೈ ಎಲ್ಲವೂ ರೋಮಾಂಚನಗಳಿಂದ ಕಂಚುಕಿತ. ಕಂಠ ಗದ್ಗದಿತ. ಹೃದಯ ಉಲ್ಲಸಿತ. ಮಾತು ವಿಸ್ಖಲಿತ. ಭಾವೋದ್ರೇಕದಿಂದ ಗದ್ಗದಿತವಾದ ಅವನ ಬಾಯಿಂದ ಮಾತೇ ಹೊರಡಲಿಲ್ಲ. ಆದರೂ ಅವನು ಕಷ್ಟದಿಂದ ಹೇಗೋ ತನ್ನ ನುಡಿಗಳನ್ನು ಹೊಂದಿಸಿಕೊಂಡು ಕೈ ಜೋಡಿಸಿ, ಶಬ್ದ ಕೂಡಿಸಿ, ಭಕ್ತಿ ಭಾವೋದ್ರಿಕ್ತವಾದ ಸ್ತೋತ್ರವನ್ನು ಮಾಡಿದ.

**ಐತರೇಯ** : ಭಗವನ್ ! ವಾಸುದೇವನೆ, ನಿನಗೆ ನಮೋನಮಃ । ಜ್ಞಾನರೂಪಿಯಾದ ನಿನಗೆ ನಮಸ್ಕಾರ. ಆನಂದಮೂರ್ತಿಗೆ ವಂದನೆ. ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ಎಂಬ ಈ ಚತುರ್ಮೂರ್ತಿಗೆ ನನ್ನ ಪ್ರಣಾಮ. ಸ್ವಾಮಿನ್ ! ಆತ್ಮಾರಾಮನಾದ ನೀನು ಎಲ್ಲ ಇಂದ್ರಿಯಗಳಿಗೂ ನಿಯಾಮಕನಾಗಿರುವ ದರಿಂದ 'ಹೃಷೀಕೇಶ' ಎಂದು ಕರೆಯಲ್ಪಡುವೆ. ಷಡ್ಗುಣೈಶ್ವರ್ಯ ಸಂಪನ್ನನಾದುದರಿಂದ ನಿನ್ನನ್ನು 'ಭಗವಾನ್' ಎಂದು ಕರೆಯುವವರು ಭಕ್ತ ಭಾವುಕರು. ನೀನು ವಿರಾಡ್ರೂಪಿ. ಅಗ್ನಿಯೇ ನಿನ್ನ ಮುಖ. ಪೃಥ್ವಿಯೇ ನಿನ್ನ ಚರಣ. ಆಕಾಶವೇ ಮಸ್ತಕ. ಸೂರ್ಯ ಚಂದ್ರರೇ ಎರಡು ಕಣ್ಣು. ಈ ಸಂಪೂರ್ಣವಾದ ಪ್ರಪಂಚವೇ ನಿನ್ನ ಶರೀರ. ನಾಲ್ಕು ದಿಕ್ಕುಗಳು ನಿನ್ನ ನಾಲ್ಕು ತೋಳುಗಳು. ಈ ಬ್ರಹ್ಮಾಂಡವೆಲ್ಲವೂ ನಿನ್ನನ್ನೇ ಆಶ್ರಯಿಸಿದೆ. ಇಂಥ ವಿರಾಟ್ ಶರೀರವುಳ್ಳ ಭಗವಂತನೇ, ನನ್ನ ಅನಂತಾಂತ ವಂದನೆಗಳು ನಿನಗೆ.

## ನಿನ್ನ ಗುಣಗಳು ಅನಂತ ; ನನ್ನ ದೋಷಗಳೂ ಅನಂತ

ಭಗವನ್, ಈ ಸಂಸಾರದ ಜನನ ಮರಣದ ಜಾಲದಲ್ಲಿ ಸಿಕ್ಕು ಜರ್ಜರಿತವಾಗಿದೆ ಈ ನನ್ನ ಜೀವ. ಇದಕ್ಕೆ ಬಿಡುಗಡೆ ಎಂದು ? ನಾನು ತಿರುಗಿ ಬಂದ ಯೋನಿಗಳು ಎಷ್ಟು? ನಾನು ಜನ್ಮ ಪಡೆದ ಬೇರೆ ಬೇರೆ ಯೋನಿಗಳಲ್ಲಿ ನನಗೆ ಜನ್ಮ ವಿತ್ತ ತಾಯಿ ತಂದೆಗಳ ಲೆಕ್ಕ ಮಾಡಿದರೆ ಮುಗಿಲಿನಲ್ಲಿಯ ಚುಕ್ಕಿಗಳಷ್ಟು ಅಥವಾ ನೆಲದ ಮೇಲಿನ ಮಣ್ಣು ಕಣಗಳಷ್ಟು ಆಗಬಹುದು. ಈ ಎಲ್ಲ ಜನ್ಮಗಳಲ್ಲಿ ನನಗೆ ಇದ್ದ ಶತ್ರು, ಮಿತ್ರ, ಅಣ್ಣ, ತಮ್ಮ, ಮಡದಿ ಮಕ್ಕಳ ಗಣನೆಯನ್ನು ಯಾರಿಗೂ ಮಾಡಲು ಶಕ್ಯವಿಲ್ಲ. ಅನಂತ ಜನ್ಮಗಳು ಕಳೆದರೂ ನನಗೆ ನಿನ್ನ ಆರಾಧನೆ ಮಾಡಲು ಆಗಲಿಲ್ಲ. ಎಲ್ಲ ಜನ್ಮಗಳಲ್ಲಿಯೂ ಈ ಕಾಮ, ಕ್ರೋಧಾದಿ ವೈರಿಗಳು ನನ್ನ ಮೇಲೆ ದಾಳಿ ಮಾಡುತ್ತಲೇ ಇವೆ. ನಿನಗೆ ಷಡ್ಗುಣಗಳಿದ್ದಂತೆ ನನಗೆ ಷಡ್‌ವೈರಿಗಳು. ನಿನ್ನಲ್ಲಿ ಗುಣಗಳೂ ಅನಂತ, ನನ್ನಲ್ಲಿ ದೋಷಗಳು ಅನಂತ, ನಾನು ಪತಿತ, ನೀನು ಪತಿತೋದ್ಧಾರಕ. ನಾನು ಅನಾಥ, ನೀನು ಅನಾಥರಕ್ಷಕ. ಸ್ವಾಮೀ ! ನಾನು ನಿನಗೆ ಶರಣು ಬಂದಿದ್ದೇನೆ. ಸಂಸಾರ ಸಾಗರದಲ್ಲಿ ಬಿದ್ದು ಅತ್ಯಂತ ಆರ್ತನಾದ ನನ್ನ ಮೇಲೆ ಕರುಣೆಯನ್ನು ತೋರು. ನನ್ನನ್ನು ಉದ್ಧರಿಸು.

**"ಸೋಽಹಂ ಭೃಶಾರ್ತಃ ಕರುಣಾಂ ಕುರು ತ್ವಂ ಸಂಸಾರಗರ್ತೇ ಪತಿತಸ್ಯ ವಿಷ್ಣೋ॥**
**ಮಹಾತ್ಮನಾಂ ಸಂಶ್ರಯಮಭ್ಯುಪೇತೋ ನೈವಾವಸೀದತ್ಯಪಿ ದುರ್ಗತೋಽಪಿ ।**

ಸಂಸಾರ ಸಾಗರದಲ್ಲಿ ಬಿದ್ದ ಮಾನವನು ಎಷ್ಟೇ ದುರಾತ್ಮನಾದರೂ ಮಹಾತ್ಮರನ್ನು ಆಶ್ರಯಿಸಿದರೆ, ಎಂದೂ ಅಧಃಪತಿತನಾಗುವುದಿಲ್ಲ. ಅವನಿಗೆ ನಾಶವಂತೂ ಇರುವುದೇ ಇಲ್ಲ. ಅಂದ ಬಳಿಕ ಮಹಾಪುರುಷರಲ್ಲಿ ಅತ್ಯಂತ ಶ್ರೇಷ್ಠನಾದ ನಿನ್ನನ್ನೇ ನಂಬಿದ ನಾನು ದುಃಖ ಪಡುವದೆಂದರೆ ಏನು ! ದಯಮಾಡಿ ಸಂಸಾರವೆಂಬ ಈ ದೊಡ್ಡ ತೆಗ್ಗಿನಲ್ಲಿ ಬಿದ್ದ ನನ್ನನ್ನು ಬೇಗನೇ ಉದ್ಧರಿಸು.

## ರೋಗಿಗಳಿಗೆ ವೈದ್ಯ, ಸಂಸಾರಿಗಳಿಗೆ ಕಂಸಾರಿ

**ಪಾರಾಯಣಂ ರೋಗವತಾಂ ಹಿ ವೈದ್ಯೋ ಮಹಾಬ್ಧಿಮಗ್ನಸ್ಯ ಚ ನೌ ರ್ನರಸ್ಯ ।**
**ಬಾಲಸ್ಯ ಮಾತಾಪಿತರೌ ಸುಘೋರ ಸಂಸಾರ ಖಿನ್ನಸ್ಯ ಹರೇ ತ್ವಮೇಕಃ ॥**

ಬೇನೆಯಿಂದ ಬಳಲುವವರಿಗೆ ವೈದ್ಯನೇ ಗತಿ. ಸಮುದ್ರದಲ್ಲಿ ಮುಳುಗುವವನಿಗೆ ನೌಕೆಯೇ ಆಧಾರ. ಚಿಕ್ಕ ಮಕ್ಕಳಿಗೆ ತಾಯಿತಂದೆಯೇ ಆಧಾರ. ಭಯಂಕರವಾದ ಸಂಸಾರದಲ್ಲಿ ಇದ್ದು ಕಷ್ಟ ಪಡುವವರಿಗೆ ಶ್ರೀ ಹರಿಯೇ ತಾರಕ. ಆದುದರಿಂದ ನಾನು ನಿನಗೇ ಶರಣು ಬಂದಿದ್ದೇನೆ. ನೀನು ನನ್ನ ಮೇಲೆ ಪ್ರಸನ್ನನಾಗು. ಈ ಸಂಸಾರದ ಹಾಳು ಬಾವಿಯಿಂದ ನನ್ನನ್ನು ಮೇಲಕ್ಕೆ ಎತ್ತು. ಸಂಸಾರವೆಂಬ ರೋಗಕ್ಕೆ ನಿಜವಾದ ಚಿಕಿತ್ಸಕನಾದ ನೀನು ನನ್ನ ಹೃದಯದಲ್ಲಿ ವಿರಾಜಮಾನನಾಗು. ನಿನ್ನ ಸ್ತೋತ್ರವನ್ನು ಮಾಡಲು ಬ್ರಹ್ಮಾದಿ ದೇವತೆಗಳು ಕೂಡ ಸಮರ್ಥರಲ್ಲ. ಅಂದಮೇಲೆ ನಾನೆಂತು ನಿನ್ನ ಸ್ತೋತ್ರ ಮಾಡಬಲ್ಲೆನು! ಮನೋವಾಚಾಮ ಗೋಚರನಾದ ಅನಂತನೇ, ಪಾಪಹಾರಿ ಹರಿಯೇ, ಪುರುಷೋತ್ತಮನಾದ ನಾರಾಯಣನೇ, ನಾನು ನಿನಗೆ ಶರಣು, ಶರಣು ಬಂದಿದ್ದೇನೆ ನನ್ನನ್ನು ಬೇಗನೇ ಉದ್ಧರಿಸು''.

ಅರ್ಜುನ, ಐತರೇಯನ ಈ ಸ್ತೋತ್ರವನ್ನು ಕೇಳಿ ಪರಮ ಪ್ರೀತನಾದ ಭಕ್ತವತ್ಸಲ ಆ ವಾಸುದೇವ ಭಗವಂತ. ದಯಾರ್ದ್ರ ದೃಷ್ಟಿಯಿಂದ ನೋಡಿದ. ವತ್ಸ ಐತರೇಯನನ್ನು ಕಂಡು ಕಟಾಕ್ಷಪಾತದಿಂದ ಕರುಣೆಯ ಕೋಡಿಯನ್ನೇ ಹರಿಸಿದ. ಅಲ್ಲಿಯೇ ಕೈಮುಗಿದು ಕುಳಿತ ತಾಯಿ ಇತರಾದೇವಿಯ ಕಡೆಗೆ ನೋಡಿ ಹೃದಯದಲ್ಲಿ ಉಕ್ಕುವ ವಾತ್ಸಲ್ಯರಸಕ್ಕೆ ಶಬ್ದದ ಕವಚ ತೊಡಿಸುತ್ತಾ ನುಡಿದ.

''ವತ್ಸ, ಐತರೇಯ, ನಿನ್ನ ಭಕ್ತಿಯಿಂದ ಹಾಗೂ ಭಕ್ತಿರಸದಲ್ಲಿ ಅದ್ದಿ ತೆಗೆದ ಈ ನಿನ್ನ ಪ್ರಾರ್ಥನೆಯಿಂದ ಅತ್ಯಂತ ಪ್ರಸನ್ನನಾಗಿದ್ದೇನೆ ನಾನು, ನಿನಗೆ ಏನು ವರಬೇಕು ಬೇಡು. ಅದು ಎಷ್ಟೇ ದುರ್ಲಭವಾಗಿರಲಿ ಅದನ್ನು ನಾನು ನಿನಗೆ ಕೊಡುತ್ತೇನೆ.''

**ಐತರೇಯ** : ಸ್ವಾಮಿ, ನನಗೆ ಬೇರೆ ಯಾವ ವರವೂ ಬೇಡ, ಈ ಸಂಸಾರ ಒಂದು ಕಡೆಯಿಲ್ಲದ ಕಡಲು. ತಡೆಯಿಲ್ಲದ ದುಃಖದ ಒಡಲು. ಈ ಕಡಲಿನ ನೆಲೆಯಿಲ್ಲದ ದುಃಖದ ಮಡುವಿನಲ್ಲಿ ನಾನು ಮುಳುಗುತ್ತಿದ್ದೇನೆ. ನೀನು ನನ್ನನ್ನು ಕಡೆಹಾಯಿಸುವ ಅಂಬಿಗನಾಗು. ನಿನ್ನ ಚರಣವೇ ನನಗೆ ಒಂದು ನೌಕೆಯಾಗಲಿ.

## ಐತರೇಯನಿಗೆ ವಿವಾಹಕ್ಕೆ ಆಜ್ಞೆ

**ವಾಸುದೇವ :** ವತ್ಸ ಐತರೇಯ, ಇಷ್ಟು ಭಕ್ತಿಯಿಂದ ನನ್ನನ್ನು ಸ್ತೋತ್ರಮಾಡಿರುವೆ. ಭಕ್ತಿಯುಕ್ತವಾದ ಈ ಸ್ತೋತ್ರದಿಂದಲೇ ನೀನು ಈಗ ಭವಬಂಧನದಿಂದ ಮುಕ್ತನಾಗಿರುವೆ. ನಿನ್ನಂತೆ ಈ ಗುಪ್ತ ಕ್ಷೇತ್ರಕ್ಕೆ ಬಂದು ಇಲ್ಲಿಯ ತೀರ್ಥ ಕ್ಷೇತ್ರದಲ್ಲಿ ಮಿಂದು, ಇಲ್ಲಿಯ ವಾಸುದೇವ ವಿಗ್ರಹದಲ್ಲಿ ನೆಲೆನಿಂತ ನನ್ನನ್ನು ಭಕ್ತಿಯಿಂದ ಹೀಗೆ ಸ್ತೋತ್ರ ಮಾಡುವ ಭಕ್ತರೆಲ್ಲರನ್ನೂ ನಾನು ಉದ್ಧರಿಸುವೆ. ಅವರ ಅಘಗಳೆಲ್ಲವೂ ಅಂದರೆ ಪಾಪಗಳೆಲ್ಲವೂ ನಾಶವಾಗುವವು. ಆದ್ದರಿಂದ ಈ ಸ್ಥಳಕ್ಕೆ 'ಅಘನಾಶನ' ಎಂದು ಹೆಸರು ಬರುವದು. ಇಲ್ಲಿ ಏಕಾದಶಿ ಉಪವಾಸ ಮಾಡಿ ಈ ನನ್ನ ಮೂರ್ತಿಯ ಎದುರು ಶುದ್ಧ ಮನಸ್ಸಿನಿಂದ ಮಂತ್ರ ಸ್ತೋತ್ರಗಳಿಂದ ಸ್ತುತಿಸಿದರೆ ಸದ್ಗತಿಯನ್ನು ಹೊಂದುವರು. ವತ್ಸ ಐತರೇಯ, ನೀನು ಇನ್ನು ಮದುವೆಯಾಗು. ಮಡದಿಯೊಂದಿಗೆ ಯಜ್ಞ ಮಾಡು. ನಿನ್ನ ತಾಯಿಯನ್ನು ಸಂತೋಷಪಡಿಸು, ನನ್ನ ಧ್ಯಾನವನ್ನು ನಿರಂತರ ಮಾಡು. ಅದರಿಂದ ನಿನಗೆ ಸದ್ಗತಿ ನಿಶ್ಚಿತ.

ನೀನು ಈವರೆಗೆ ವೇದಾಧ್ಯಯನವನ್ನು ಮತ್ತು ಶಾಸ್ತ್ರಾಧ್ಯಯನವನ್ನು ಗುರುಮುಖದಿಂದ ಮಾಡಲಿಲ್ಲ. ಈಗ ನಾನೇ ನಿನಗೆ ಗುರು. ನಿನ್ನ ಮಸ್ತಕದ ಮೇಲೆ ಇರಿಸಿದ್ದೇನೆ ನನ್ನ ವರದ ಹಸ್ತವನ್ನು. ವೇದ ವೇದಾಂತ ರಹಸ್ಯವೆಲ್ಲ ನಿನಗೆ ಸ್ವಯಂ ಪ್ರತಿಭಾತವಾಗಲಿ. ಸರ್ವಶಾಸ್ತ್ರಗಳೂ ನಿನಗೆ ಈಗಲೇ ಸ್ಫುರಿಸಲಿ, ಭಗವದರ್ಪಣ ಬುದ್ಧಿಯಿಂದ ವರ್ಣಾಶ್ರಮೋಚಿತವಾದ ಕರ್ಮಗಳನ್ನು ಮಾಡಿ ನೀನು ಮೋಕ್ಷವನ್ನು ಹೊಂದು. ನೀನು ಇಲ್ಲಿಂದ ಕೋಟಿ ತೀರ್ಥಕ್ಕೆ ಹೋಗು. ಅಲ್ಲಿ ಹರಿಮೇಧನು ಯಜ್ಞ ಮಾಡುತ್ತಿದ್ದಾನೆ. ಅಲ್ಲಿ ಹೋದರೆ, ನಿನ್ನ ತಾಯಿಯ ಯಜ್ಞತೀರ್ಥವು ಪೂರ್ಣವಾಗುವುದು.''

## ಸಾಕ್ಷಾತ್ ದರ್ಶನ, ಪ್ರತ್ಯಕ್ಷ ಸಂಭಾಷಣ

ಹೀಗೆ ಐತರೇಯನ ಚರ್ಮ ಚಕ್ಷುಸ್ಸಿಗೆ ಗೋಚರವಾಗಿ ಸಾಕ್ಷಾತ್ಕಾರವನ್ನು ಕರುಣಿಸಿದ ಆ ವಾಸುದೇವ ಭಗವಂತನು ನಾರದರು ಸ್ಥಾಪಿಸಿದ ವಾಸುದೇವ ವಿಗ್ರಹದಲ್ಲಿ ಅಂತರ್ಧಾನ ಹೊಂದಿದನು. ಇತರಾದೇವಿ ಮತ್ತು ಅವನ ಮಗನಾದ ಐತರೇಯ ಇಬ್ಬರೂ ತಮ್ಮ ವಿಸ್ಮಯ ವಿಸ್ಫಾರಿತವಾದ ನೇತ್ರ ದ್ವಂದ್ವದಿಂದ ಪ್ರತ್ಯಕ್ಷನಾಗಿ ತಮ್ಮ ಕಣ್ಣೆದುರೇ ಬಂದು ನಿಂತ ವಾಸುದೇವನನ್ನು ಅಡಿಯಿಂದ ಮುಡಿಯವರೆಗೆ ನೋಡಿದರು. ಸಚ್ಚಿದಾನಂದ ವಿಗ್ರಹನಾದ ಸ್ವಾಮಿ ಶ್ರೀ ಹರಿಯನ್ನು ತಮ್ಮ ಕಣ್ಣಾರೆ ಕಂಡರು. ಅವನ ಜೊತೆಗೇ ಮಾತನಾಡಿದರು. ಅವನ ತುಟಿಪುಟದಿಂದಲೇ ತೂರಿ ಬಂದ, ಅವನ ಸ್ವಂತ ಶ್ರೀಕಂಠ ಸ್ವರವನ್ನು ಕೇಳಿದರು. ಅವನ ಜ್ಞಾನಾನಂದ ರೂಪವಾದ ಪಾದಗಳನ್ನು ಸ್ಪರ್ಶಿಸಿದರು. ಅವನು ತಲೆಯ ಮೇಲೆ ತನ್ನ ಕೈಯಿಟ್ಟಾಗ ಪುಲಕಿತರಾದರು ಆನಂದದಿಂದ. ಈಗ ಅದೇ ಸಾಕ್ಷಾತ್ ಶ್ರೀ ವಾಸುದೇವನು ತನ್ನ ಆ ದಿವ್ಯ ರೂಪವನ್ನು ಉಪ ಸಂಹರಿಸಿ ಅಲ್ಲಿ ಇದ್ದ ವಾಸುದೇವನ ವಿಗ್ರಹದಲ್ಲಿ

ಲೀನವಾದದ್ದನ್ನೂ ಕಣ್ಣುತುಂಬ ನೋಡಿದರು. ಒಂದು ಕ್ಷಣ ಅವರಿಗೆ ಬಹಳ ವ್ಯಥೆಯಾಯಿತು. ಕೈಗೆ ಸಿಕ್ಕ ಕೃಷ್ಣನನ್ನು ಕಳೆದುಕೊಂಡೆವಲ್ಲಾ ಎಂದು. ಆದರೆ ಅವರಿಗೆ ಒಂದು ಸಮಾಧಾನ ಆ ಕೃಷ್ಣ ನಮ್ಮ ಕಣ್ಣೆದುರೇ ಈ ವಾಸುದೇವ ಮೂರ್ತಿಯಲ್ಲಿ ಪ್ರವೇಶ ಮಾಡಿದ್ದಾನೆ. ಇಲ್ಲಿದ್ದ ಈ ವಾಸುದೇವ ಮೂರ್ತಿ ಆ ಸಾಕ್ಷಾತ್ ವಾಸುದೇವನೇ. ಇದು ನಮ್ಮ "ಚಕ್ಷುರ್ವೈ ಸತ್ಯ." ನಾವು ಇನ್ನು ಮೇಲೆ ಇವನನ್ನೇ ಆರಾಧಿಸಬೇಕು ಎಂದು ಮನಸಾ ನಿಶ್ಚಯಿಸಿದರು. ಮತ್ತು ಆ ವಾಸುದೇವ ಮೂರ್ತಿಗೆ ನಮಸ್ಕಾರ ಮಾಡಿದರು.

## ತಾಯಿಯ ತವಕ , ಮಗನ ಸಮಾಧಾನ

**ಇತರಾದೇವಿ :** ಮಗು ಐತರೇಯ, ನೀನು ಇಷ್ಟು ದಿನ ಈ ವಾಸುದೇವ ಮೂರ್ತಿಯ ಎದುರು ಕುಳಿತು ಏನು ಮಾಡುತ್ತಿದ್ದೆ ! ಈ ದೇವಸ್ಥಾನ ಬಿಟ್ಟು ನೀನು ಹೊರಗೇ ಬರುತ್ತಿರಲಿಲ್ಲ, ಸಮಯ ಸಿಕ್ಕಾಗಲೆಲ್ಲ ಈ ಹರಿಮಂದಿರಕ್ಕೇ ಬರುತ್ತಿದ್ದಿ. ಇಲ್ಲಿ ಬಂದು ನೀನು ಮಾಡಿದ್ದೇನು?

**ಐತರೇಯ :** ನಾನು ಇಲ್ಲಿ ಬಂದು ಇಲ್ಲಿಯ ತೀರ್ಥದಲ್ಲಿ ಸ್ನಾನ ಮಾಡಿ ಈ ಭಗವನ್ ಮೂರ್ತಿಯ ಮುಂದೆ ಕುಳಿತುಕೊಂಡು 'ಓಂ ನಮೋ ಭಗವತೇ ವಾಸುದೇವಾಯ' ಎಂದು ಹನ್ನೆರಡು ಅಕ್ಷರಗಳ ದಿವ್ಯ ಮಂತ್ರವನ್ನು ಜಪ ಮಾಡುತ್ತಿದ್ದೆ.

**ಇತರಾ :** ವತ್ಸ, ಗುರುಮುಖದಿಂದ ಉಪದೇಶವಿಲ್ಲದೆ, ಮಂತ್ರಗಳನ್ನು ಪಠಿಸಬಾರದು ಎಂದು ಹಿರಿಯರು ಹೇಳಿದ್ದನ್ನು ನಾನು ಕೇಳಿದ್ದೇನೆ. ನನಗೆ ತಿಳಿದಂತೆ ನೀನು ಈ ವರೆಗೆ ಮೂಕನಾಗಿದ್ದಿ. ನಿನಗೆ ಯಾರ ಉಪದೇಶವೂ ಆಗಿದ್ದನ್ನು ನಾನು ಕಾಣೆ. ಉಪದೇಶವಿಲ್ಲದೆ, ಈ ವಾಸುದೇವನ ಈ ದ್ವಾದಶಾಕ್ಷರ ಮಂತ್ರವನ್ನು ಹೇಗೆ ಜಪಿಸುತ್ತಿದ್ದೆ?

**ಐತರೇಯ :** ಉಪದೇಶವಿಲ್ಲದೆ, ಮಂತ್ರ ಜಪ ಮಾಡಬಾರದು ಎಂಬುದನ್ನು ನಾನು ಅರಿತಿದ್ದೇನೆ. ನನಗೆ ಈ ಜನ್ಮದಲ್ಲಿ ಯಾರಿಂದಲೂ ಮಂತ್ರೋಪದೇಶ ಆಗಲಿಲ್ಲ. ಇದೇನೋ ನಿಜವೇ. ಆದರೆ ಜನ್ಮಾಂತರದಲ್ಲಿ ಗುರುಗಳಿಂದ ಈ ವಾಸುದೇವ ಮಂತ್ರದ ಉಪದೇಶವನ್ನು ನಾನು ಪಡೆದಿದ್ದೆ. ಆ ಹಿಂದಿನ ನೆನಪು ಇನ್ನೂ ಹಚ್ಚ ಹಸಿರಾಗಿದೆ ನನ್ನ ಹೃದಯದ ಮೈದಾನದಲ್ಲಿ, ಅದನ್ನು ನೆನಪಿಗೆ ತಂದುಕೊಂಡು ಈ ಜನ್ಮದಲ್ಲಿ ನಾನು ಈ ವಾಸುದೇವ ಮಂತ್ರವನ್ನು ಹಿಂದೆ ಗುರುಗಳು ಹೇಳಿದ ಪ್ರಕಾರ ಜಪಮಾಡುತ್ತಿದ್ದೆ.

**ಇತರಾ :** ಮಗು, ನಿನ್ನ ಮಾತು ನನಗೆ ಕೌತುಕದ ಕೋಟೆಯನ್ನೇ ನಿರ್ಮಿಸುತ್ತಿದೆ. ನಿನ್ನ ಈ ಜನ್ಮದ ಆಶ್ಚರ್ಯವನ್ನು ಕಂಡು ನನಗೆ ನಿನ್ನ ಜನ್ಮಾಂತರದ ನೆನಪು ಮಂತ್ರೋಪದೇಶದ ಸಂಸ್ಕಾರ ಅಸಂಭಾವಿತ ಎನಿಸುವದಿಲ್ಲ. ಶ್ರೀ ಹರಿಯ ಅನುಗ್ರಹದಿಂದ ಬೇರೆಯವರಿಗೆ ಅಸಾಧ್ಯವಾದುದೆಲ್ಲ ನಿನಗೆ ಸಾಧ್ಯ. ಆದರೆ, ನೀನು ಜನ್ಮಾಂತರದಲ್ಲಿ ಏನು ಆಗಿದ್ದೆ? ಯಾವ ಜಾತಿಯಲ್ಲಿ ಜನಿಸಿದ್ದೆ? ಆಗ ನಿನ್ನ ತಾಯಿ ಯಾರು? ತಂದೆ ಯಾರು? ಗುರು ಯಾರು? ಎಲ್ಲವನ್ನೂ ಹೇಳು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೂವತ್ತ ಎರಡನೇ ಅಧ್ಯಾಯ ಮುಗಿದುದು**

## ಶೂದ್ರನಿಗೂ ಬ್ರಹ್ಮೋಪದೇಶ

ಅಧ್ಯಾಯ-33

**ಐತರೇಯ :** ತಾಯಿ, ಕಳೆದ ಜನ್ಮದಲ್ಲಿ ನಾನೊಬ್ಬ ಶೂದ್ರನಾಗಿದ್ದೆ. ಆದರೆ ಇಂದಿನಂತೆ ಅಂದೂ ನಾನು ಪಾಪಭೀರು. ಈ ಸಂಸಾರದಲ್ಲಿ ರಾಗ, ದ್ವೇಷ, ಮದ, ಮತ್ಸರ, ಕಾಮ ಕ್ರೋಧಾದಿ ಉಪಾಧಿಗಳು ನನಗೆ ಎಲ್ಲಿ ಅಂಟಿಕೊಳ್ಳುವವೋ ಎಂದು ಆಗಲು ತುಂಬ ಹೆದರಿಕೆ ನನಗೆ. ಅದಕ್ಕಾಗಿ ನಾನೊಂದು ಹಂಚಿಕೆ ಮಾಡಿದೆ. ಮನೆಮಾರು ತೊರೆದ ಓರ್ವ ಸದಾಚಾರಿ ಬ್ರಹ್ಮನಿಷ್ಠ ಬ್ರಾಹ್ಮಣನಿಗೆ ಶರಣು ಹೋದೆ. ಬಾಳಿನ ಬಗೆಗೆ ನನಗೆ ಇರುವ ಜುಗುಪ್ಸೆಯನ್ನೂ ಸಾಂಸಾರಿಕ ಸುಖದ ವಿಷಯದಲ್ಲಿ ನನಗಿರುವ ಹೇಯಭಾವನೆಯನ್ನೂ ಅವನಿಗೆ ತಿಳಿಸಿದೆ. 'ನನ್ನ ಇಷ್ಟ ದೇವನಾದ ಶ್ರೀ ಹರಿಯ ಕೃಪೆಗೆ ನಾನು ಪಾತ್ರನಾಗುವಂತೆ ಉಪದೇಶ ನೀಡಬೇಕು' ಎಂದು ಬಗೆಬಗೆಯಿಂದ ಬಿನ್ನಹ ಮಾಡಿಕೊಂಡೆ. ಅವನಿಂದ ಹರಿಪ್ರಸಾದದ ಉಪಾಯ ಕೇಳಿಕೊಂಡೆ

ತುಂಬ ದಯಾಳು ಆ ಬ್ರಾಹ್ಮಣ. ನನ್ನ ವೈರಾಗ್ಯ, ಹರಿಭಕ್ತಿ, ಧರ್ಮನಿಷ್ಠೆ ಭಗವತ್ ಪ್ರವೃತ್ತಿಗಳನ್ನು ಚೆನ್ನಾಗಿ ತಿಳಿದುಕೊಂಡ. ನನಗೆ ಸ್ನಾನ ಮಾಡಿಕೊಂಡು ಬರಲು ಅಪ್ಪಣೆ ನೀಡಿದ. ಸ್ನಾನ ಮಾಡಿ ಶುಚಿರ್ಭೂತನಾಗಿ ನಾನು ಆ ಗುರುವಿನ ಕಡೆಗೆ ಹೋದೆ. ಹಿಂದೆ ನಾರದರಿಗೆ ಶೂದ್ರ ಜನ್ಮದಲ್ಲಿದ್ದಾಗ ಸಂನ್ಯಾಸಿಗಳು ಉಪದೇಶ ಮಾಡಿದಂತೆ ಈ ನನ್ನ ಗುರುಗಳು ಕೂಡ ನನಗೆ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು 'ಓಂ ನಮೋ ಭಗವತೇ ವಾಸುದೇವಾಯ'' ಎಂದು ಉಪದೇಶಿಸಿದರು. ಇದನ್ನು ಸದಾ ಜಪ ಮಾಡು ಎಂದು ಅಪ್ಪಣೆ ನೀಡಿದರು.

### ಮಂತ್ರವೇ ಚಿಂತಾಮಣಿ

ತಾಯಿ ! ಒಂದು ಚಿಂತಾಮಣಿ ದೊರೆತದ್ದಕ್ಕಿಂತ ಹೆಚ್ಚು ಸಂತೋಷವಾಯಿತು ನನಗೆ ಆ ಮಂತ್ರ ಲಾಭದಿಂದ. ಜನ್ಮದಿಂದ ಶೂದ್ರನಾದರೂ ನನ್ನ ಮೇಲೆ ಈ ವಾಸುದೇವ ಮಂತ್ರವನ್ನು ಉಪದೇಶಿಸಿ ಪರಮಾನುಗ್ರಹ ಮಾಡಿದ್ದರು ಆ ಬ್ರಾಹ್ಮಣೋತ್ತಮರು. ಇದನ್ನು ವ್ಯರ್ಥಮಾಡಿಕೊಳ್ಳಬಾರದು ಎಂದು ಛಲ ನನಗೆ ಹಿಡಿಯಿತು. ಪ್ರತಿನಿತ್ಯವೂ ತ್ರಿಕಾಲ ಸ್ನಾನಮಾಡಿ, ಎಲ್ಲವನ್ನು ಬಿಟ್ಟು ಆ ಮಂತ್ರವನ್ನೇ ಜಪಿಸತೊಡಗಿದೆ. ಹಸಿವೆ, ನೀರಡಿಕೆಗಳ ಪರಿವೆ ಇಲ್ಲ. ಹಗಲು ರಾತ್ರಿಗಳ ಅರಿವು ಇಲ್ಲ. ಸಂತತವೂ ಜಪ, ತೆರಿಪಿಲ್ಲದೇ ತಪ. ಬದುಕಿ ಇರುವವರೆಗೂ ಜಪಿಸುತ್ತಲೇ ಇದ್ದೆ. ಈ ದಿವ್ಯ ಮಂತ್ರದ ಜಪಾನುಷ್ಠಾನದಲ್ಲಿಯೇ ತಲ್ಲೀನನಾಗಿ ಇದ್ದಾಗ ಸಾವು ಯಾವಾಗಲೋ ಬಂದು ಬಿಟ್ಟಿತು. ಜಪ ಧ್ಯಾನ ಲೀನನಾದ ನನಗೆ ಗೊತ್ತೇ ಆಗಲಿಲ್ಲ ಮೃತ್ಯು ಬಂದದ್ದು. ಹೀಗೆ ಶೂದ್ರ ಯೋನಿಯಿಂದ ಮುಕ್ತನಾಗಿ ಈಗ ನಾನು ನಿನ್ನ ಹೊಟ್ಟೆಯಿಂದ ಮತ್ತೆ ಹುಟ್ಟಿ ಬಂದಿದ್ದೇನೆ.

ತಾಯೀ, ನಿನ್ನ ಯೋಗ್ಯತೆಯೇನು ಸಾಮಾನ್ಯವೆ! ನೀನು ಜನ್ಮ ಜನ್ಮಾಂತರಗಳಲ್ಲಿ ಅನನ್ಯ ಭಾವದಿಂದ ಆರಾಧಿಸಿರುವೆ ಆ ಶ್ರೀಹರಿಯನ್ನು, ನಿನ್ನ ಮಗನಾಗಿ ಹುಟ್ಟಿದ್ದು

ನನ್ನ ಪರಮ ಭಾಗ್ಯ. ನಿನ್ನ ಹೊಟ್ಟೆಯ ಪುಣ್ಯದಿಂದ ನನಗೆ ಈ ಜನ್ಮದಲ್ಲಿಯೂ ಪೂರ್ವ ಜನ್ಮದ ನೆನಪು ಅಚ್ಚಳಿಯದೇ ಉಳಿದಿದೆ. ಅದೇ ವಾಸುದೇವಾರ್ಥದ ಮಂತ್ರವನ್ನು ನಾನು ಮತ್ತೆ ಜಪಿಸತೊಡಗಿದೆ. ನಿನ್ನ ಕಣ್ಣೆದುರೇ ಆ ಮಂತ್ರ ಜಪವನ್ನು ನಾನು ಭಕ್ತಿ ಉದ್ರೇಕದಿಂದ ಮಾಡಿದೆ. ನನ್ನ ಮಂತ್ರ ಜಪ ಮೆಚ್ಚಿಗೆಯಾಯಿತು ಆ ಭಗವಂತನಿಗೆ. ಆದುದರಿಂದಲೇ ಪ್ರತ್ಯಕ್ಷನಾದ ನಮ್ಮಿಬ್ಬರಿಗೂ. ಇನ್ನು ನಾವು ಆ ಪರಮಾತ್ಮನ ಅಪ್ಪಣೆಯಂತೆ ಕೋಟಿತೀರ್ಥಕ್ಕೆ ಹೋಗೋಣ. ಅಲ್ಲಿ ಹರಿಮೇಧ ಎಂಬ ಮಹರ್ಷಿಯು ಮಾಡುವ ಯಜ್ಞವನ್ನು ನೋಡೋಣ'' ಹೀಗೆ ಹೇಳಿ, ಐತರೇಯನು ತಾಯಿಯೊಂದಿಗೆ ಕೋಟಿತೀರ್ಥಕ್ಕೆ ತೆರಳಿದನು. ಅಲ್ಲಿ ಒಳ್ಳೆಯ ವೈಭವದಿಂದ ನಡೆದಿತ್ತು ಹರಿಮೇಧನ ಯಜ್ಞ. ತೇಜಸ್ವಿಗಳಾದ ಋತ್ವಿಜರು. ವರ್ಚಸ್ವಿಗಳಾದ ಮುನಿ ಮಹರ್ಷಿಗಳು, ಓಜಸ್ವಿಯಾದ ಪುರೋಹಿತ ಪರಿವಾರದವರು ಅಲ್ಲಿಯ ಅಗ್ನಿ ಶಾಲೆಯಲ್ಲಿ ಕುಳಿತುಕೊಂಡಿದ್ದರು. ಐತರೇಯ ಬಂದಿದ್ದನ್ನು ಯಾರೂ ಗಮನಿಸಲೇ ಇಲ್ಲ. ಆಗ ಐತರೇಯನು ಆ ಯಜ್ಞ ಮಂಟಪದಲ್ಲಿ ನಿಂತು ಕೈ ಮುಗಿದು, ಉಚ್ಚ ಕಂಠದಿಂದ ಈ ಪದ್ಯ ಹೇಳಿದನು.

## ಮಂತ್ರ ಸ್ಫೂರ್ತಿ, ಮಹರ್ಷಿಗಳ ಕೀರ್ತಿ

**ನಮಸ್ತಸ್ಮೈ ಭಗವತೇ ವಿಷ್ಣವೇಽ ಕುಂಠ ಮೇಧಸೇ ।**
**ಯನ್ಮಾಯಾ ಮೋಹಿತಧಿಯೊ ಭ್ರಮಾಮಃ ಕರ್ಮಸಾಗರೇ ॥**

''ಭಗವಂತನಾದ ವಿಷ್ಣುವಿಗೆ ನಮಸ್ಕಾರ. ಅವನ ಬುದ್ಧಿ ಎಂದೂ ಕುಂಠಿತವಾಗುವದಿಲ್ಲ. ಅವನ ಮಾಯೆಯಿಂದ ಮೋಹಿತರಾಗಿ ನಾವೆಲ್ಲ ಮಾನವರು ನಾನಾ ವಿಧವಾದ ಕರ್ಮಗಳ ಕಡಲಿನಲ್ಲಿ ಸುತ್ತುತ್ತಿದ್ದೇವೆ.'' ಕಂಚಿನ ಕಂಠದಿಂದ ಒಮ್ಮೆಲೆ ಹೊಮ್ಮಿ ಚಿಮ್ಮಿ ಬಂದ ಈ ಪದ್ಯವನ್ನು ಕೇಳಿ, ಆ ಯಜ್ಞಮಂಟಪದಲ್ಲಿ ಆಸೀನರಾದ ಜನರೆಲ್ಲರೂ ಆಶ್ಚರ್ಯಚಕಿತರಾದರು. ಅವರು ಎಲ್ಲರೂ ತತ್ವಜ್ಞರು. ಮಹಾ ಪ್ರಾಜ್ಞರು. ಈ ಶ್ಲೋಕದ ಹಿಂದಿರುವ ಜ್ಞಾನದ ಹಿರಿಮೆಯನ್ನು ತಕ್ಷಣದಲ್ಲಿಯೇ ಗುರುತಿಸಿದರು. ಎದ್ದು ನಿಂತು ಸ್ವಾಗತ ನೀಡಿದರು ಐತರೇಯ ಮುನಿಗೆ. ಉಚ್ಚವಾದ ಆಸನದ ಮೇಲೆ ಕೂಡಿಸಿದರು. ಅರ್ಘ್ಯ ಪಾದ್ಯಾದಿಗಳಿಂದ ಪೂಜೆ ಮಾಡಿದರು. ತತ್ವೋಪದೇಶ ಮಾಡಬೇಕೆಂದು ಕೇಳಿಕೊಂಡರು. ವಾಸುದೇವನ ಪ್ರಸಾದದಿಂದ ಐತರೇಯನ ಮಿದುಳಿನಲ್ಲಿ ದಿವ್ಯ ಜ್ಞಾನದ ರಾಶಿಯೇ ಕಡಲಾಡುತ್ತಿತ್ತು. ಅಲ್ಲಿ ನೆರೆದ ಪಂಡಿತ ಮಂಡಲಿ ಎದುರು ತತ್ವ ಜ್ಞಾನದ ಮಂದಾಕಿನಿಯನ್ನೇ ಹರಿಸಿದ. ವೇದಾಂತ ಪ್ರಪಂಚದ ಜಟಿಲತರವಾದ ಪ್ರಮೇಯವು ಪುಂಜಗಳನ್ನೆಲ್ಲ ಬಿಡಿಸಿ, ಸರಳ ರೀತಿಯಿಂದ ತಿಳಿಸಿ ಉಪನ್ಯಾಸ ಮಾಡಿದ. ಅವನ ಅತ್ಯುತ್ತಮವಾದ ಆ ಶಾಸ್ತ್ರ ಪ್ರವಚನವನ್ನು ಕೇಳಿ, ಇದೊಂದು 'ಜ್ಞಾನ ಮೇರು' ಎಂದು ಅವನ ಪಾದಗಳಿಗೆ ಪೊಡಮೊಟ್ಟರು ಆ ಎಲ್ಲ ಮುನಿ ಮಹರ್ಷಿಗಳು.

# ಐತರೇಯನ ಮಂಗಳ ವಿವಾಹ

ಹರಿಮೇಧನಿಗಂತೂ ಪರಮ ಸಂತೋಷ. ಇಂಥ ಜಂಗಮ ಜ್ಞಾನಕೋಶ ದಂತಿರುವ ತಪೋ ಮೂರ್ತಿಯೂ ತನ್ನ ಯಜ್ಞ ಮಂಟಪಕ್ಕೆ ತಾಯಿಯೊಂದಿಗೆ ದಯಮಾಡಿಸಿದ್ದು ಜನ್ಮ ಜನ್ಮಾಂತರದ ತನ್ನ ಪುಣ್ಯ ಪರಿಪಾಕ ಎಂದೇ ಭಾವಿಸಿದ. ಎಲ್ಲರಿಗಿಂತ ವಿಶಿಷ್ಟ ಗೌರವವನ್ನು ಸಲ್ಲಿಸಿದ ಆ ಐತರೇಯ ಮಹರ್ಷಿಗೆ. ಸದಸ್ಯರೆ,ಲ್ಲರೂ ಐತರೇಯನ ಪಾಂಡಿತ್ಯಕ್ಕೆ ತಲೆತೂಗಿದರು. ಎಲ್ಲರೂ ಅವನಿಗೆ ದಕ್ಷಿಣೆಯನ್ನು ಕೊಡುವವರೇ, ಪ್ರಶಂಸೆಯನ್ನು ಮಾಡುವವರೆ. ಈ ಜ್ಞಾನ ನಿಧಿಯ ಎದುರು ತಲೆಬಾಗಿಸುವವರೇ. ಯಜಮಾನನಾದ ಹರಿಮೇಧನಿಗೆ, ಐತರೇಯನಿಗೆ ಎಷ್ಟು ಕೊಟ್ಟರೂ ತೃಪ್ತಿಯೆನಿಸಿಲಿಲ್ಲ. ಕೊನೆಗೆ ಅವನು ತನ್ನ ಸುಂದರಿಯಾದ ಮಗಳನ್ನೇ ಐತರೇಯನಿಗೆ ಕೊಡ ಮಾಡಿದನು. ಇತರಾ ದೇವಿಯು ಸಂತೋಷದಿಂದ ಒಪ್ಪಿದಳು. ಯಜ್ಞವೆಲ್ಲ ಮುಗಿದ ಬಳಿಕ, ಆ ಯಜ್ಞ ಮಂಟಪವೇ ಲಗ್ನ ಮಂಟಪವಾಯಿತು. ಆ ಎಲ್ಲ ಮುನಿ ಮಹರ್ಷಿ ಋತ್ವಿಜರ ಎದುರೇ ಐತರೇಯನು ಆ ಹರಿಮೇಧ ನಂದಿನಿಯನ್ನು ವಿಧಿಪೂರ್ವಕವಾಗಿ ಪಾಣಿ ಗ್ರಹಣ ಮಾಡಿದನು.

ತಾಯಿ ಇತರಾದೇವಿಗೆ ಐತರೇಯನ ವಿವಾಹದಿಂದ ಪರಮಾನಂದವಾಯಿತು. ಅತ್ಯಂತ ಸಂತಸದಿಂದಲೇ ಸೊಸೆಯನ್ನು ಮನೆ ತುಂಬಿಸಿಕೊಂಡಳು. ಕಾಲಕ್ರಮದಿಂದ ಐತರೇಯನಿಗೆ ಅನೇಕ ಸತ್ಪುತ್ರರು ಉತ್ಪನ್ನರಾದರು. ಆ ಐತರೇಯ ಮುನಿಯು ಇದೇ ಈ ವಾಸುದೇವ ಮೂರ್ತಿಯ ಸನ್ನಿಧಿಯಲ್ಲಿ ಇದ್ದುಕೊಂಡು ದಶಮಿ, ಏಕಾದಶಿ, ದ್ವಾದಶಿ, ಈ ದಿನತ್ರಯ ವ್ರತವನ್ನು ತಪ್ಪದೇ ಪಾಲಿಸುತ್ತಿದ್ದನು, ಅನೇಕ ಯಜ್ಞ ಯಾಗಗಳನ್ನು ಮಾಡಿ ಇಲ್ಲಿಯೇ ಈ ವಾಸುದೇವನಿಗೆ ಸಮರ್ಪಿಸುತ್ತಿದ್ದನು. ಐತರೇಯನಿಗೆ ಯಾವಾಗಲೂ ವಾಸುದೇವನದೇ ನಿಧಿಧ್ಯಾಸ. ಅವನದೇ ಧ್ಯಾನ, ಅವನದೇ ಗಾನ, ಯಾವಾಗಲೂ ಅವನು ಇವನಲ್ಲಿಯೇ ಲೀನ. ಹೀಗೆ ಬದುಕಿ ಇರುವವರೆಗೂ ಈ ಪುಣ್ಯ ಸ್ಥಳದಲ್ಲಿ ವಾಸುದೇವನ ಆರಾಧನೆ ಮಾಡಿ ಐತರೇಯನು ಮೋಕ್ಷವನ್ನು ಹೊಂದಿದ.

ಅರ್ಜುನ,ಇಂಥ ಮಹಾಮಹಿಮೆಯುಳ್ಳ ಭಗವಾನ್ ವಾಸುದೇವನು ಕ್ಷೇತ್ರಮೂರ್ತಿಯಾಗಿ ಇಲ್ಲಿ ನೆಲಸಿದ್ದಾನೆ. ಅವನ ಪೂಜೆ, ಧ್ಯಾನ, ಹಾಗೂ ಸ್ತೋತ್ರದಿಂದ ಫಲ ಅಕ್ಷಯ, ಪುಣ್ಯ ಅನಂತ,

**ನಾರದ** : ಕುಂತೀಪುತ್ರ, ನಾನು ಆ ಸ್ಥಳದಲ್ಲಿ ವಾಸುದೇವನ ಸುಂದರವಾದ ಮೂರ್ತಿಯನ್ನು ಸ್ಥಾಪಿಸಿದ ಬಳಿಕ ನನಗೆ ಒಂದು ವಿಚಾರ ಹೊಳೆಯಿತು. ಮಾನವರ ಕಣ್ಣಿಗೆ ಪ್ರತ್ಯಕ್ಷವಾಗಿ ಕಾಣುವ ದೇವತೆ ಸೂರ್ಯ. ಪ್ರತ್ಯಕ್ಷ ದೇವತೆಯಾದ ಈ ಸೂರ್ಯ ಭಗವಂತನನ್ನು ಈ ಪುಣ್ಯ ಕ್ಷೇತ್ರಕ್ಕೆ ಕರೆತರಬೇಕೆಂದು ಬಲವತ್ತರ ಬಯಕೆ ಮೂಡಿತು ನನ್ನ ಮನಸ್ಸಿನಲ್ಲಿ. ಮುಗಿಲಿನ ಹೆಗಲಲಿರುವ ಸೂರ್ಯನನ್ನು ನೆಲದ ಮೇಲಿರುವ ಈ ತೀರ್ಥಕ್ಕೆ ಕರೆತರುವ ಬಗೆ ಎಂತು? ನಾನು ಯೋಚಿಸಿಯೇ ಯೋಚಿಸಿದೆ. ತಪಸ್ಸಿನ ಹೊರತು ಬೇರೆ ಉಪಾಯ ಇಲ್ಲ ಎನಿಸಿತು ಆ ಸೂರ್ಯ

ಭಗವಂತನನ್ನು ಕರೆತರಲು, ಆಗಲೇ ಈ ನನ್ನ ಸಂಕಲ್ಪವು ಕೃತಿಯಲ್ಲಿ ಇಳಿಯಿತು. ನಾನು ತಪಸ್ಸಿಗೆ ಇಳಿದೆ. ಭಕ್ತಿಯಿಂದ ಇಂದ್ರಿಯಗಳನ್ನೆಲ್ಲ ಬಿಗಿಹಿಡಿದೆ. ಸೂರ್ಯನಾರಾಯಣನ ನಿರಂತರ ಧ್ಯಾನ ಹಾಗೂ ಅವನ ನಾಮೋಚ್ಚಾರಣ ರೂಪವಾದ ನನ್ನ ತಪಸ್ಸು, ಅವಿಚ್ಛಿನ್ನ ನೂರು ವರ್ಷಗಳವರೆಗೆ ನಡೆಯಿತು. ಮೊದಲು ಕೆಲ ದಿನ ಗಡ್ಡೆ ಗೆಣಸು ತಿನ್ನುತ್ತಿದ್ದೆ. ಹಣ್ಣು ಹಂಪಲಗಳ ಮೇಲೆ ಹಲವು ವರ್ಷ. ಬರೆ ನೀರಿನ ಮೇಲೆ ಕೆಲ ಕಾಲ ಇದ್ದೆ. ಬರಬರುತ್ತ ಎಲ್ಲವನ್ನೂ ಬಿಟ್ಟೆ. ಕೇವಲ ಗಾಳಿ ಕುಡಿದೆ. ತಪಸ್ಸನ್ನು ಮುಂದುವರೆಸಿದೆ. ಕೊನೆ ಕೊನೆಗೆ ಅದನ್ನೂ ಬಿಟ್ಟು, ಶ್ವಾಸ ನಿರೋಧ ಮಾಡಿ, ಸಂಪ್ರಜ್ಞಾತ ಸಮಾಧಿಯ ಅವಸ್ಥೆಯಿಂದ ಜಾರಿಕೊಂಡೆ ಅಸಂಪ್ರಜ್ಞಾತಾ ಸಮಾಧಿಗೆ. ಅಲ್ಲಿ ಎಷ್ಟು ವರ್ಷ ಇದ್ದೆನೋ ನೆನಪಿಲ್ಲ. ನನ್ನ ಈ ತಪಸ್ಸಿನ ಉಗ್ರತೆಗೆ ಧಾವಿಸಿ ಬಂದಿದ್ದ ಭಾಸ್ಕರ. ನಾನು ಅಸಂಪ್ರಜ್ಞಾತ ಸಮಾಧಿಯ ಅವಸ್ಥೆಯಲ್ಲಿ ಮೈಮರೆತಿದ್ದೆ. ಸವಿತೃದೇವ ತಾನೇ ಬಂದು ಎಚ್ಚರಿಸಿದ. ಜೀರ್ಣ ಶೀರ್ಣವಾದ ನನ್ನ ದೇಹವೆಲ್ಲ ತಪೋನುಷ್ಠಾನದಲ್ಲಿ ನಿರಾಹಾರದಿಂದ ಸವೆದು, ಮೂಳೆಗಳಲ್ಲಿ ಮಾತ್ರ ಮಿಡಿಯುತ್ತಿತ್ತು ಜೀವನಾಡಿ.

ಇಂಥ ನನ್ನ ದೇಹದಲ್ಲಿ ಶಕ್ತಿ ಪೂರಣ ಮಾಡಿ ಮಾತಾಡುವಂತೆ ಮಾಡಿದ ಆ ಪ್ರಭಾಕರ. ಅವನು ನನ್ನ ಮೇಲೆ ಕೈಯ್ಯಾಡಿಸಿದ್ದರಿಂದ ನನಗೆ ಬಲ ಬಂತು. ಮಾತಾಡುವ ಪಾಟವವೂ ಬಂದಿತು. ನನ್ನ ಕಣ್ಣಿಗೆ ಅವನ ದಿವ್ಯ ದರ್ಶನ ಮಾಡುವ ಶಕ್ತಿಯೂ ಬಂದಿತು. ನಾನು ಕಣ್ಣು ತೆರೆದು, ಮುಖ ಎತ್ತಿ, ಕೈ ಮುಗಿದು, ಆ ತೇಜೋನಿಧಿಯ ಕಡೆಗೆ ನೋಡಿದೆ. ಆ ಕಿರಣಮಾಲಿಯು ತನ್ನ ಯೋಗ ಶಕ್ತಿಯಿಂದ ಬೇರೊಂದು ಸೌಮ್ಯ ರೂಪವನ್ನು ಧರಿಸಿ ಬಂದು ನನ್ನ ಕಣ್ಣೆದುರು ಐತಂದು ನಿಂತಿದ್ದಿತು. ನಾನು ಭಕ್ತಿಯಿಂದ ಎರಡೂ ಕೈ ಜೋಡಿಸಿ ಆ ದಿವಾಕರನಿಗೆ ವಂದಿಸಿದೆ. ಸಾಮವೇದದ ಬೇರೆ ಬೇರೆ ಮಂತ್ರಗಳನ್ನು ಹೇಳಿ ಅವನನ್ನು ಸ್ತುತಿಸಿದೆ. ನನ್ನ ಸ್ತುತಿ ಸ್ತೋತ್ರದಿಂದ ತೃಪ್ತನಾದ ಆ ಆದಿತ್ಯ ದೇವ. ಪ್ರಸನ್ನ ಮನಸ್ಸಿನಿಂದ ಹೇಳಿದ. 'ದೇವರ್ಷಿಯೆ ! ನೀನು ನನ್ನನ್ನು ಕುರಿತು ಮಾಡಿದ ತಪಸ್ಸು ದೀರ್ಘಕಾಲೀನ. ಅಷ್ಟೇ ಉಗ್ರ. ಇಷ್ಟು ಭೀಷಣ ತಪೋನುಷ್ಠಾನವನ್ನು ಈ ಭೂಲೋಕದಲ್ಲಿ ನಿನ್ನ ಹೊರತು ಯಾರೂ ಮಾಡಲಾರರು. ನೀನು ಮಾಡಿದ ಈ ಅತ್ಯುಗ್ರವಾದ ತಪೋನುಷ್ಠಾನದಿಂದ ನಾನು ಸಂತುಷ್ಟ. ನಿನ್ನ ಅಭೀಷ್ಟ ಏನು ಹೇಳು ಕೊಡುತ್ತೇನೆ.'

ಜಗದೀಶ್ವರನ ಈ ಮಾತುಗಳನ್ನು ಕೇಳಿ, ನಾನು ಅವನಿಗೆ ಕೈ ಜೋಡಿಸಿದೆ ಹಾಗೂ ಹೇಳಿದೆ - ''ಭಗವನ್ , ನೀನು ನನ್ನ ಮೇಲೆ ನಿಜವಾಗಿಯೂ ಪ್ರಸನ್ನನಾಗಿದ್ದರೆ, ನೀನು ನಿನ್ನ ಕಾಮರೂಪಿಣಿಯಾದ ಕಲೆಯಿಂದ ನಮ್ಮನ್ನು ಸದಾ ರಕ್ಷಿಸು.' ನಾನು ಬೇಡಿಕೊಂಡ ವರಕ್ಕೆ ಆ ಆದಿತ್ಯನು 'ತಥಾಸ್ತು' ಎಂದು ಹೇಳಿದನು. ಹೀಗೆ ನನ್ನ ಅಪೇಕ್ಷೆಯು ಪೂರ್ಣವಾದದ್ದರಿಂದ ಜಗಚ್ಚಕ್ಷು ಎನಿಸಿದ ಸೂರ್ಯ ದೇವನು ಪರಮಸಂತುಷ್ಟನಾದನು. ಅನಂತರ ನಾನು ಈ ಸೂರ್ಯನ ವಿಗ್ರಹವನ್ನು ಭಟ್ಟಾದಿತ್ಯ ಎಂಬ ಹೆಸರಿನಿಂದ ಕರೆದೆ. ಓರ್ವ ಭಟ್ಟನ ದ್ವಾರಾ ಸ್ಥಾಪಿತವಾದ ಕಾರಣದಿಂದ ಅದಕ್ಕೆ ಭಟ್ಟಾದಿತ್ಯ ಎಂಬ ಹೆಸರು ಬಂದಿತು. ಹೂವುಗಳಿಂದ ಈ ಪ್ರತಿಮೆಯನ್ನು ಪೂಜೆ ಮಾಡಿದ ಬಳಿಕವೇ ಸೂರ್ಯದೇವನು ಸಾಕ್ಷಾತ್ತಾಗಿ ಪ್ರವೇಶಗೈದನು. ಇದನ್ನು ನೋಡಿ ನನ್ನ ಮನಸ್ಸಿನಲ್ಲಿ

ಭಕ್ತಿಯ ಉದ್ರೇಕವಾಯಿತು. ಪುಷ್ಪಗಳಿಂದ ನಾನು ಆ ಸೂರ್ಯ ನಾರಾಯಣನ ವಿಗ್ರಹವನ್ನು ಪೂಜೆ ಮಾಡಿದೆ. ವೇದದ ರಹಸ್ಯ ರೂಪವಾದ ಅಂತರಾರ್ಥವನ್ನು ಒಳಗೊಂಡ, ಒಂದು ನೂರಾ ಎಂಟು ಸೂರ್ಯನ ಹೆಸರುಗಳುಳ್ಳ ಆದಿತ್ಯ ಸ್ತೋತ್ರವನ್ನು ಮಾಡಿದೆನು.

'ಸಪ್ತಸಪ್ತಿರಚಿಂತ್ಯಾತ್ಮಾ ಮಹಾಕಾರುಣಿಕೋತ್ತಮಃ ।
ಸಂಜೀವನೋ ಜಯೋ ಜೀವಃ ಜೀವನಾಥೋ ಜಗತ್ಪತಿಃ ॥

ಕಾಲಕ್ರಿಯಃ ಕಾಲಕರ್ತಾ ಮಹಾಯೋಗೀ ಮಹಾಮತಿಃ ।
ಭೂತಾಂತಃಕರಣೋ ದೇವೋ ಕಮಲಾನಂದನಂದನಃ ॥

ಸಹಸ್ರಪಾಚ್ಛ್ಯ ವರದೋ ದಿವ್ಯ ಮಂಡಲ ಮಂಡಿತಃ ॥
ಧರ್ಮಪ್ರಿಯೋಽಷ್ಪರ್ಜಿತಾತ್ಮಾ ಸವಿತಾ ವಾಯು ವಾಹನಃ ॥

ಆದಿತ್ಯೋಽಕ್ರೋಧನಃ ಸೂರ್ಯಃ ರುಕ್ಮ ಮಾಲೀ ವಿಭಾವಸುಃ ।
ದಿನಕೃತ್, ದಿನಹೃತ್ ಮೌನೀ, ಸುರಥೋ ರಥಿನಾಂ ವರಃ ॥

ರಾಜ್ಞಾಂಪತಿ ಸ್ವರ್ಣ ರೇತಾಃ ಪೂಷಾ ತ್ವಷ್ಟಾ ದಿವಾಕರಃ ।
ಆಕಾಶ ತಿಲಕೋ ಧಾತಾ ಸಂವಿಭಾಗಃ ಮನೋಹರಃ ॥

ಪ್ರಾಜ್ಞಃ ಪ್ರಜ್ಞಾಪತಿ ರ್ಧನ್ಯೋ ವಿಷ್ಣು ಶ್ರೀಶೋಭಿಷಗ್‌ವರಃ ।
ಆಲೋಕಕೃಲ್ಲೋಕನಾಥೋ ಲೋಕಪಾಲನಮಸ್ಕೃತಃ ॥

ವಿದಿತಾಶಯೋಽತಿಸುನಯಃ ಮಹಾತ್ಮಾ ಭಕ್ತವತ್ಸಲಃ ।
ಕೀರ್ತಿಃ ಕೀರ್ತಿಕರೋ ನಿತ್ಯೋ ರೋಚಿಷ್ಣು ಕಲ್ಮಷಾಪಹಃ ॥

ಜಿತಾನಂದೋ ಮಹಾ ವೀರ್ಯೋ ಕಂಸಸಂಹಾರ ಕಾರಕಃ ।
ಕೃತಕೃತ್ಯೋಽಹ್ಯಸಂಗಶ್ಚ ಬಹುಜ್ಞೋ ವಚಸಾಂ ಪತಿಃ ।

ವಿಶ್ವಪೂಜ್ಯೋ ಮೃತ್ಯುಹಾರೀ, ಘೃಣೀ ಸದ್ ಧರ್ಮಕಾರಣಃ ।
ಪ್ರಣತಾರ್ತಿ ಹರೋಽರೋಗ ಆಯುಷ್ಮಾನ್ ಸುಖದ ಸುಖೀಃ ॥

ಮಂಗಲಃ ಪುಂಡರೀಕಾಕ್ಷಃ ವ್ರತೀ ವ್ರತಫಲಪ್ರದಃ ।
ಶುಚಿಃಪೂರ್ಣೋ ಮೋಕ್ಷಮಾರ್ಗೋ ದಾತಾ ಭೋಕ್ತಾ ಬಲಪ್ರದಃ ।

ಧನ್ವಂತರಿಃ ಪ್ರಿಯಾಭಾಸೋ ಧನುರ್ವೇದ ವಿದೇಕರಾಟ್ ।
ಜಗತ್‌ಪಿತಾ ಧೂಮಕೇತು ರ್ವಿದ್ಯುತ್ ಧ್ವಾಂತಹರೋ ಗುರುಃ ॥

ಗೋ ಪತಿ ಶ್ಚ ಕೃತಾತಿಥ್ಯಃ ಶುಭಾಚಾರಃ ಶುಚಿಪ್ರಿಯಃ ॥
ಸಾಮಪ್ರಿಯೋ ಲೋಕಬಂಧುಃ ನೈಕ ರೂಪೋ ಯುಗಾದಿಕೃತ್ ॥
ಧರ್ಮ ಸೇತುಃ ಲೋಕಸಾಕ್ಷೀಖೇಶೋಽರ್ಕಃ ಸರ್ವದಃ ಪ್ರಭುಃ ।

ಹೀಗೆ ಒಂದುನೂರಾ ಎಂಟು ಸೂರ್ಯನಾಮಗಳಿಂದ ಆ ಭಗವಾನ್ ಭಾಸ್ಕರನನ್ನು ನಾನು ಸ್ತೋತ್ರ ಮಾಡಿದೆ. ನಾನು ಮಾಡಿದ ಈ ಸ್ತೋತ್ರದಿಂದ ಪ್ರಸನ್ನನಾದ ಪ್ರಕಾಶದ ಅಧಿದೇವತೆ ಆ ಪ್ರಭಾಕರನು ನನಗೆ ಹೇಳಿದನು :

**ಸೂರ್ಯ :** ದೇವರ್ಷಿಯೇ ! ನಿನ್ನ ತಪಸ್ಸು ನನಗೆ ಅಭಿಮತ. ನಿನ್ನ ಸ್ತೋತ್ರದಿಂದ ನನಗೆ ಮೆಚ್ಚುಗೆ. ನಿನ್ನ ಭಕ್ತಿಗೆ ನಾನು ಪ್ರೀತ. ನಿನ್ನ ಭಾವನೆಗೆ ನಾನು ಪ್ರಸನ್ನ. ನಿನ್ನ ಮನಸ್ಸಿನ ಅಪೇಕ್ಷೆ ನನಗೆ ಸುವಿದಿತ. ನಿನ್ನ ಇಚ್ಛೆಯಂತೆ ನನ್ನ ಒಂದು ಅಂಶದಿಂದ ಈ ಸ್ಥಳದಲ್ಲಿ ವಾಸಮಾಡುತ್ತೇನೆ. ಭಟ್ಟಾದಿತ್ಯ ಎಂದು ನನಗೆ ಹೆಸರು ಬರುವುದು. ಈ ಭಟ್ಟಾದಿತ್ಯನ ಪೂಜೆಯನ್ನು ಭಕ್ತಿಯಿಂದ ಮಾಡಿದವನಿಗೆ ಸಾಕ್ಷಾತ್ ಸೂರ್ಯನಾರಾಯಣನ ಪೂಜೆ ಮಾಡಿದಷ್ಟೇ ಫಲ. ಈ ಸ್ಥಳದಲ್ಲಿ ರವಿವಾರ, ಷಷ್ಠಿ, ಸಪ್ತಮಿ ದಿನದಂದು ಕೆಂಪು ಕಮಲ, ಕಲ್ಹಾರ, ಕೇಶರ ಮತ್ತು ನೂರು ಎಲೆಗಳುಳ್ಳ ಶತಪತ್ರ ಎಂಬ ಕಮಲ ಪುಷ್ಪಗಳಿಂದ ಪೂಜೆಮಾಡಿದವರ ಕಾಮನಾಪೂರ್ತಿ ನಿಶ್ಚಿತ. ಭಕ್ತಿಯಿಂದ ದರ್ಶನ ಮಾಡಿದವರಿಗೆ ರೋಗ ಪರಿಹಾರ, ನಾಮಸ್ಮರಣೆ ಮಾಡಿದವರಿಗೆ ದಾರಿದ್ರ್ಯನಾಶ, ನಮಸ್ಕಾರದಿಂದ ಸ್ವರ್ಗ. ಭಕ್ತಿಯಿಂದ ಅರ್ಥತಿಳಿದುಕೊಂಡು ನನ್ನ ಸ್ತೋತ್ರ ಮಾಡಿದರೆ, ಮೋಕ್ಷ.

**ನಾರದ :** ಅರ್ಜುನ, ಕಾಮರೂಪ ಎಂಬ ದೇಶದಲ್ಲಿ, ಬಹೂದಕ ಎಂಬ ಹೆಸರಿನ ಒಂದು ತೀರ್ಥವಿದೆ. ಆ ಬಹೂದಕ ತೀರ್ಥವು ಇಲ್ಲಿಯ ತೀರ್ಥದಲ್ಲಿ ಬಂದು ಮಿಲಿತವಾಗಿ ಪ್ರಕಟವಾಯಿತು. ಆ ಅದ್ಭುತ ಸಮಾಚಾರವನ್ನು ಹೇಳುತ್ತೇನೆ ಕೇಳು. ಮಹಾತ್ಮನಾದ ಕಪಿಲಮುನಿಯ ಹೆಸರನ್ನು ಕೇಳದವರು ಯಾರು? ಆ ಮುನಿಯು ಇಲ್ಲಿ ಬಹುಕಾಲದವರೆಗೆ ಇದ್ದು ಘೋರ ತಪಸ್ಸನ್ನು ಆಚರಿಸಿದ. ಅತ್ಯಂತ ಸುಂದರವಾದ ಒಂದು ಶಿವಲಿಂಗವನ್ನೂ ಸ್ಥಾಪಿಸಿದ. ಕಪಿಲೇಶ್ವರ ಎಂದು ಅದಕ್ಕೆ ಹೆಸರು. ಅರ್ಜುನ, ಕೇವಲ ಬ್ರಾಹ್ಮಣ, ಕ್ಷತ್ರಿಯರು ಮಾತ್ರ ಈ ಶಿವಲಿಂಗವನ್ನು ಪೂಜಿಸುತ್ತಿದ್ದಿಲ್ಲ. ಎಲ್ಲ ಜಾತಿಯವರೂ ಈ ಕಪಿಲೇಶ್ವರ ಲಿಂಗವನ್ನು ಪೂಜಿಸುತ್ತಿದ್ದರು. ಅವರಲ್ಲಿ 'ನಂದಭದ್ರ' ಎಂಬ ವೈಶ್ಯನೂ ಮಹಾ ಶಿವಭಕ್ತ. ಧರ್ಮಶಾಸ್ತ್ರದಲ್ಲಿಯಂತೂ ಅವನೊಬ್ಬ ಧರ್ಮರಾಜನೇ. ಧರ್ಮಶಾಸ್ತ್ರದ ಸೂಕ್ಷ್ಮ ಮರ್ಮವನ್ನು ಅರಿತ ಶ್ರದ್ಧಾಳು. ಅವನು ಎಲ್ಲರಿಗೂ ಮಿತ್ರ. ಸರ್ವರ ಹಿತ ಸಾಧನದಲ್ಲಿ ಸರ್ವದಾ ಆಸಕ್ತ. ಮನಸ್ಸು, ಮಾತು, ಕೃತಿ ಮೂರರಿಂದಲೂ ಪರೋಪಕಾರಗೈಯುವದೇ ಆತನ ಮುಖ್ಯ ಧರ್ಮ. ಧರ್ಮಶಾಸ್ತ್ರದ ಕಡಲನ್ನೇ ತನ್ನ ಬುದ್ಧಿಯಿಂದ ಕಡೆದು ಬೆಣ್ಣೆಯಂಥ ಸಾರತತ್ವವನ್ನು ತಿಳಿದುಕೊಂಡಿದ್ದ.

ಈ ಲೋಕದಲ್ಲಿ ಬಾಳುವೆ ಮಾಡಬಯಸುವ ಮನುಷ್ಯನಿಗೆ ಯಾವುದಾದರೂ ಒಂದು ಉಪಜೀವನ ಬೇಕಲ್ಲವೇ ! ಉಪಜೀವನದ ಸಾಧನದಲ್ಲಿ , ವಾಣಿಜ್ಯವೇ ಮೇಲು ಎಂದು ನಂದಭದ್ರನ ಅಭಿಪ್ರಾಯ. ತಾನು ಅದನ್ನೇ ಅವಲಂಬಿಸಿದ್ದ. ಹುಲ್ಲು ಕಟ್ಟಿಗೆಯಿಂದ ಒಂದು ಮನೆಯನ್ನು ಕಟ್ಟಿಕೊಂಡಿದ್ದ. ಅಲ್ಪಪ್ರಮಾಣದಲ್ಲಿ ವ್ಯಾಪಾರವನ್ನು ಸ್ವಲ್ಪ ಲಾಭ ಇಟ್ಟುಕೊಂಡು ಮಾಡುತ್ತಿದ್ದ. ನಿಷಿದ್ಧ ವಸ್ತುಗಳನ್ನು ಮಾರುತ್ತಿದ್ದಿಲ್ಲ. ಮದ್ಯವನ್ನು ಎಂದೂ ಅಂಗಡಿಯಲ್ಲಿ ಇಡುತ್ತಿದ್ದಿಲ್ಲ. ಸುಳ್ಳು, ಮೋಸ, ಅಧಿಕ ಲಾಭ, ಲೋಭ ಒಂದೂ ಅವನಲ್ಲಿ ಇರಲಿಲ್ಲ. ಯಾವ ಅವ್ಯಾಪಾರ,

ದುರ್ವ್ಯಾಪಾರ , ಕಾಪಟ್ಯ, ಕೌಟಿಲ್ಯಗಳಿಲ್ಲದೇ ಸರಳತನದಿಂದ ವಸ್ತುಗಳನ್ನು ತಂದು ನ್ಯಾಯವಾದ ಬೆಲೆಗೆ ಮಾರಿಬಿಡುತ್ತಿದ್ದನು. ಕೆಲವರು ಯಜ್ಞಯಾಗಗಳನ್ನು ಪ್ರಶಂಸಿಸುವರು. ಆದರೆ ನಂದಭದ್ರನು ಯಜ್ಞದ ಆಡಂಬರಕ್ಕಿಂತ ಶ್ರದ್ದೆಯಿಂದ ದೇವರ ಪೂಜೆ, ನಮಸ್ಕಾರ, ಪಾರಾಯಣ, ನೈವೇದ್ಯ, ಆತ್ಮನಿವೇದನ ಮುಂತಾದ ಸತ್ಕರ್ಮಗಳು ಯಜ್ಞಕ್ಕಿಂತ ಪುಣ್ಯದಾಯಕ ಎಂದು ನಂಬಿ ಹಾಗೆಯೇ ಮಾಡುತ್ತಿದ್ದ.

ಕೆಲವರು ಸನ್ಯಾಸ ಧರ್ಮವನ್ನು ಶ್ರೇಷ್ಠವೆಂದು ಹೊಗಳುವರು. ಆದರೆ ಬಹುಜನರು ಸನ್ಯಾಸಿಗಳಾಗಿಯೂ ವಿಷಯಗಳನ್ನು ಹೊರಗಿನಿಂದ ಮಾತ್ರ ತೊರೆದಂತೆ ನಟಿಸಿ ಮನದಿಂದ ಆ ವಿಷಯಗಳನ್ನು ನೆನೆಸುತ್ತ ಅಂತರಂಗದಲ್ಲಿ ವಿಷಯಲಾಲಸರೇ ಆಗಿರುತ್ತಾರೆ. ಇಂಥವರು ಗೃಹಸ್ಥಧರ್ಮದಿಂದಲೂ ಸನ್ಯಾಸ ಧರ್ಮದಿಂದಲೂ ಚ್ಯುತರಾಗಿ ಇತೋಭ್ರಷ್ಟ, ತತೋಭ್ರಷ್ಟ ಆಗುವರು. ಆದಕ್ಕಿಂತ ಗೃಹಸ್ಥಾಶ್ರಮದಲ್ಲಿಯೇ ಇದ್ದು ಹಿತಮಿತವಾಗಿ ಅನಿಷಿದ್ಧವಾದ ಸುಖವನ್ನು ಭೋಗಿಸುತ್ತ ಭಗವಂತನ ಧ್ಯಾನ ತತ್ಪರನಾಗಿ ಇರುವದು ಒಳ್ಳೆಯದು ಎಂದು ಹೇಳುತ್ತಿದ್ದನು. ಮತ್ತು ತಾನು ಅದರಂತೆ ವರ್ತಿಸುತ್ತಿದ್ದನು. ಅವನು ಯಾರ ವಿರೋಧವನ್ನೂ ಮಾಡುತ್ತಿರಲಿಲ್ಲ. ಅತಿ ಸ್ನೇಹವನ್ನೂ ಮಾಡುತ್ತಿರಲಿಲ್ಲ, ಚಿನ್ನ, ಮಣ್ಣು, ಹೊಗಳುವಿಕೆ, ತೆಗಳುವಿಕೆ, ಲಾಭ, ಹಾನಿ, ಎಲ್ಲವೂ ಅವನಿಗೆ ಸಮಾನ. ಅವನು ಮಾಡುವ ಕರ್ಮಗಳಿಗೆ ಫಲಾಪೇಕ್ಷೆಯನ್ನು ಮಾಡುತ್ತಿದ್ದಿಲ್ಲ. ತಾನು ಮಾಡಿದ ಪ್ರತಿಯೊಂದು ಕರ್ಮವನ್ನು ಶಂಕರನಲ್ಲಿ ಅರ್ಪಿಸಿ ಬಿಡುತ್ತಿದ್ದ. ಅವನ ಪ್ರತಿಯೊಂದು ಕಾರ್ಯವೂ ಶಿವಾರ್ಪಣ ಬುದ್ಧಿಯಿಂದ ನಡೆಯುತ್ತಿದ್ದವು. ನಂದಭದ್ರನು ಬೇಸಾಯವನ್ನು ಪ್ರಶಂಸಿಸುತ್ತಿದ್ದ. ಆದರೆ ಹೊಲದಲ್ಲಿ ನೇಗಿಲ ಹೊಡೆಯಲು ಎರಡೇ ಎತ್ತುಗಳನ್ನು ಹೂಡಿದರೆ ಅವುಗಳಿಗೆ ಭಾರವಾಗುವದು. ಆದ್ದರಿಂದ ಬೇಸಾಯಗಾರರು ಎಂಟು ಎತ್ತುಗಳನ್ನು ಇಟ್ಟುಕೊಂಡು ಉತ್ತಿ ಬಿತ್ತುವ ಕೆಲಸವನ್ನು ಯಾವ ಎತ್ತುಗಳಿಗೂ ಶ್ರಮವಾಗದಂತೆ ಮಾಡಬೇಕು ಮತ್ತು ಆ ಪಶುಗಳನ್ನು ಮಕ್ಕಳಂತೆ ಒಳ್ಳೆಯ ಆಹಾರ ಕೊಟ್ಟು ರಕ್ಷಿಸಿ ಕಾಳಜಿಯಿಂದ ಅವುಗಳನ್ನು ದುಡಿಸಿಕೊಳ್ಳಬೇಕು ಎಂದು ಪ್ರತಿಪಾದಿಸುತ್ತಿದ್ದ. ತಾನೂ ಅದರಂತೆ ಬೇಸಾಯ ಮಾಡುತ್ತಿದ್ದ. ಆ ಬೇಸಾಯದಿಂದ ಬಂದ ಲಾಭದಲ್ಲಿ ದೇವತೆಗಳಿಗೂ, ಪಿತೃಗಳಿಗೂ ಅತಿಥಿಗಳಿಗೂ, ಬ್ರಾಹ್ಮಣ, ಪಶುಪಕ್ಷಿ, ದನ, ಕರು, ಯಾಚಕ, ಮುಂತಾದವರಿಗೆಲ್ಲ ಪ್ರತಿದಿನವೂ ತಪ್ಪದೇ ಅನ್ನದಾನ ಮಾಡಿ ತಾನು ಊಟಮಾಡುತ್ತಿದ್ದ. ಇಂದ್ರಾದಿ ದೇವತೆಗಳಿಗೂ ಕೂಡ ನಂದಭದ್ರನ ಈ ತೂಕ, ವಿವೇಕ ವರ್ತನೆಗಳನ್ನು ಕಂಡು ಆಶ್ಚರ್ಯವಾಗುತ್ತಿತ್ತು.

ನಂದಭದ್ರನ ಮನೆಯ ಹತ್ತಿರವೇ ಸತ್ಯವ್ರತ ಎಂಬ ಓರ್ವ ಶೂದ್ರನಿದ್ದ. ಅವನು ಮಹಾ ನಾಸ್ತಿಕ ಮತ್ತು ದುರಾಚಾರಿ, ನಂದಭದ್ರನ ನಿಂದೆಯಲ್ಲಿ ಅವನಿಗೆ ಒಳ್ಳೆಯ ಆನಂದ, ಅವನಲ್ಲಿ ತಪ್ಪು ಹುಡುಕುವುದೇ ಅವನ ಉದ್ಯೋಗ. ನಂದಭದ್ರನಿಗೆ ಕಾಲಕ್ರಮದಿಂದ ವಯಸ್ಸು ಆಯಿತು. ಮುಪ್ಪು ಬಂದಿತು. ಅವನಿಗೆ ಒಬ್ಬನೇ ಒಬ್ಬ

ಮಗ. ಜನ್ಮಾಂತರದ ದುಷ್ಕೃತದಿಂದ ಆ ಮಗನೂ ಸತ್ತು ಹೋದ. ಆಗಲೂ ನಂದಭದ್ರ ಸ್ಥಿತಪ್ರಜ್ಞ. ಇದೂ ಒಂದು ಭಗವಂತನ ಇಚ್ಛೆ ಎಂದು ತಿಳಿದುಕೊಂಡು ಪುತ್ರಮರಣಕ್ಕಾಗಿ ಅವನು ಶೋಕಿಸಲಿಲ್ಲ. ನಂದಭದ್ರನ ಮಡದಿ ಕನಕಾ, ಗುಣದಲ್ಲಿ ಅವಳೊಬ್ಬ ಅರುಂಧತಿ. ಪತಿಯ ಹೆಜ್ಜೆಯ ಮೇಲೆಯೇ ಹೆಜ್ಜೆ. ಗೃಹಸ್ಥಧರ್ಮದ ಸಾಕ್ಷಾತ್ ಮೂರ್ತಿಯೇ ಆಗಿದ್ದಳು ಆ ಕನಕೆ. ಒಂದು ದಿನ ಅವಳೂ ಮರಣ ಹೊಂದಿದಳು. ಈಗ ಮಾತ್ರ ನಂದಭದ್ರನಿಗೆ ದುಃಖವಾಯಿತು. ಅದಕ್ಕೆ ಕಾರಣ ಪ್ರೇಯಸಿಯ ವಿಯೋಗವಲ್ಲ. ಅವನು ಒಳ್ಳೆಯ ಜಿತೇಂದ್ರಿಯ. ಪತ್ನಿ ಇಲ್ಲದಿದ್ದರೆ ಗೃಹಸ್ಥ ಧರ್ಮವನ್ನು ಸರಿಯಾಗಿ ಪಾಲಿಸಲು ಆಗುವದಿಲ್ಲ ಎಂದು ಅವನಿಗೆ ದುಃಖವಾಗಿತ್ತು. ಅತಿಥಿಸತ್ಕಾರ, ಪರೋಪಕಾರ, ಜನಸೇವೆ ಮುಂತಾದ ಕಾರ್ಯಗಳಲ್ಲಿ ಅವಳ ಸಹಕಾರ ತಪ್ಪಿದ್ದರಿಂದ ಅವನಿಗೆ ದುಃಖವಾಯಿತು. ಇದರಿಂದ ಅವನ ಪಕ್ಕದ ಮನೆಯ ಸತ್ಯವ್ರತನಿಗೆ ಮಾತ್ರ ಬಹಳ ಆನಂದವಾಯಿತು. ಅವನು ನಂದಭದ್ರನ ಬಳಿಗೆ ಬಂದು ಮಾತನಾಡಿಸಿದ -

''ನಂದಭದ್ರ ನನ್ನ ದೃಷ್ಟಿಯಲ್ಲಿ ನೀನು ಒಳ್ಳೆ ಧರ್ಮಾತ್ಮ. ಧರ್ಮವನ್ನೇ ಸರ್ವಸ್ವ ಎಂದು ನಂಬಿ ನಡೆದವ. ಅಂಥ ನಿನಗೆ ಇಂಥ ಪರಿಸ್ಥಿತಿ ಬಂದುದನ್ನು ನೋಡಿದರೆ, ಧರ್ಮ ಕರ್ಮಗಳೆಲ್ಲವೂ ವ್ಯರ್ಥ ಎನಿಸುವದು. ಧರ್ಮ ಮಾಡುವವರಿಗೆ ದುಃಖ ಅನಂತ; ಸಾವು, ನೋವು, ಇದಕ್ಕೆ ನೀನೇ ದೃಷ್ಟಾಂತ. ನನ್ನ ಹೆಸರು ಸತ್ಯವ್ರತ, ನಾನು ನಿಜವನ್ನೇ ನುಡಿಯುತ್ತೇನೆ. ಆದ್ದರಿಂದ ನನಗೆ ಸತ್ಯವ್ರತ ಎಂದು ಹೆಸರು ಬಂದಿದೆ. ನನ್ನ ಮಾತನ್ನು ಕೇಳು. ನೀನು ಎಂದಿನಿಂದಲೂ ಕಲ್ಲಿನ ಮೂರ್ತಿಯನ್ನು ದೇವರ ಮೂರ್ತಿಯೆಂದು ಪೂಜಿಸುತ್ತೀಯೆ. ಇದರಿಂದ ನಿನಗೆ ಯಾವ ಒಳ್ಳೆಯ ಫಲ ದೊರಕಿದೆ? ಇದ್ದ ಒಬ್ಬ ಮಗನೂ ಸತ್ತುಹೋದ, ಅರುಂಧತಿಯಂಥ ಹೆಂಡತಿಯೂ ತೀರಿಕೊಂಡಳು. ಇದಕ್ಕೆಲ್ಲ ಕಾರಣ ನೀನು ವ್ಯರ್ಥವಾಗಿ ಮಾಡುವ ಆ ನಿಷ್ಫಲ ಕರ್ಮಾಚರಣೆ. ದೇವರು ದಿಂಡರು ಎಲ್ಲವೂ ಸುಳ್ಳು, ಇದೆಲ್ಲವೂ ಕಪಟಿಯಾದ ಬ್ರಾಹ್ಮಣರು ಹೂಡಿದ ಹೂಟ. ಜನರು ಪಿತೃಗಳ ಉದ್ದೇಶದಿಂದ ಅನ್ನ ನೀಡುವರು. ಇದನ್ನು ನೋಡಿದರೆ ನನಗಂತೂ ನಗೆ ಬರುವದು. ಇದೆಲ್ಲವೂ ಒಂದು ರೀತಿಯ ಅನ್ನಧ್ವಂಸವೇ ಸರಿ. ಸತ್ತ ಮಾನವನಿಗೆ ಇಲ್ಲಿ ನೀಡಿದ ಅನ್ನದ ಪಿಂಡವು ತಲುಪುವ ಬಗೆ ಹೇಗೆ? ಮೂರ್ಖರು, ಧೂರ್ತರು, ಸ್ವಾರ್ಥಸಾಧಕರೂ ಆದ ಆ ನೀಚ ಬ್ರಾಹ್ಮಣರು ದೇವರ ಹೆಸರನ್ನೂ ಪಿತೃಗಳ ಹೆಸರನ್ನೂ ಹೇಳಿ ತಾವೇ ಅನ್ನವನ್ನು ಊಟ ಮಾಡುತ್ತಾರೆ. ''ಪ್ರಪಂಚವೆಲ್ಲವೂ ಸುಳ್ಳು, ಅಶಾಶ್ವತ, ಈ ದೇಹ ಅಸ್ಥಿರ, ಅದಕ್ಕಾಗಿ ಬ್ರಾಹ್ಮಣರಿಗೆ ದಾನ ದಕ್ಷಿಣೆ ಕೊಡಿ,'' ಎಂಬುದೇ ಅವರ ಉಪದೇಶದ ವೈಖರಿ.

ವಸ್ತುಸ್ಥಿತಿ ಎಂದರೆ ಈ ಪ್ರಪಂಚವು ಮಿಥ್ಯೆಯಲ್ಲ ಸತ್ಯ. ಈ ಪ್ರಪಂಚದ ಎಲ್ಲ ಘಟನೆಗಳ ಆಗುಹೋಗುಗಳಿಗೆ ದೇವರೇ ಕಾರಣ ಎಂಬ ಈ ಬುಡುಬುಡುಕೆಯ ಬ್ರಾಹ್ಮಣರ ಹೇಳಿಕೆ ಬುಡಮುಟ್ಟ ಸುಳ್ಳು. ಸೂರ್ಯ ಬೆಳಗುವದು, ನಕ್ಷತ್ರಗಳು ತಿರುಗುವದು, ಭೂಮಿ ಸುತ್ತುವದು ಆ ವಸ್ತುಗಳ ಸ್ವಭಾವ, ಇದಕ್ಕೆ ಯಾವ ದೇವರೂ ಕಾರಣವಲ್ಲ. ಮಾನವನ ಕರ್ಮವೂ ಕಾರಣವಲ್ಲ. ಸೂರ್ಯನೇ ಮೊದಲಾದ ಗ್ರಹಗಳು

ತಮ್ಮ ಸ್ವಭಾವದಿಂದಲೇ ಆಗಸದ ಅಂಗಳದಲ್ಲಿ ಪರಿಭ್ರಮಿಸುತ್ತವೆ. ಗಾಳಿ ತನ್ನ ಸ್ವಭಾವದಿಂದಲೇ ಬೀಸುತ್ತದೆ. ಅದಕ್ಕೆ ಯಾವ ದೇವರ ಪ್ರೇರಣೆಯೂ ಬೇಡ. ಸಮುದ್ರದ ನೀರನ್ನು ತಂದು ಮುಗಿಲಿನಿಂದ ಧಾರಾಕಾರವಾಗಿ ಸುರಿಸುವುದು ಮೋಡಗಳ ಸ್ವಭಾವ. ಇದಕ್ಕೆ ದೇವರು ಏಕೆ ಬೇಕು? ನೆಲದಲ್ಲಿ ಬಿತ್ತಿದ ಬೀಜ ಅಂಕುರಿಸಿ ಪೈರಾಗಿ ತೆನೆಮೂಡಿ ಕಾಳು ಹಿಡಿಯುವುದು. ಧಾನ್ಯ ಹಿಡಿಯುವುದು ತನ್ನ ಸ್ವಭಾವದಿಂದಲೇ.

ಪೃಥ್ವಿ ಸ್ಥಿರವಾಗಿ ಇರುವದು ಸ್ವಭಾವದಿಂದಲೇ. ನದಿ ಹರಿಯುವದು ಅವುಗಳ ಸ್ವಭಾವ. ತನ್ನ ಸ್ವಭಾವದಿಂದಲೇ ಪರ್ವತವು ಅಚಲ, ಭೂಮಿ ಚಲ, ತನ್ನ ಸ್ವಭಾವದಿಂದಾಗಿಯೇ ಸಮುದ್ರದ ನೀರು ಮೇರೆ ಮೀರುವುದಿಲ್ಲ. ದೇಶದಲ್ಲಿ ನುಗ್ಗಿ ಹರಿಯುವದಿಲ್ಲ. ಬಸಿರಿದ್ದ ಹೆಣ್ಣುಮಕ್ಕಳು ಮಕ್ಕಳನ್ನು ಹಡೆಯುವದು ದೇವರ ದಯೆಯಿಂದಲ್ಲ. ಹೊಟ್ಟೆಯಲ್ಲಿ ಮೂಡಿದ ಪಿಂಡವು ಒಂಬತ್ತು ತಿಂಗಳಿಗೆ ಭೂಮಿಗೆ ಇಳಿಯುವದು ಅದರ ಸ್ವಭಾವ. ಬಗೆ ಬಗೆಯ ಜೀವರಾಶಿಗಳು ಹುಟ್ಟುವದು ಅವುಗಳ ಸ್ವಭಾವ. ಋತುಕಾಲದಲ್ಲಿ ಒಂದೊಂದು ಬಗೆಯ ಎಲೆ, ತಳಿರು, ಕಾಯಿ, ಹಣ್ಣು, ಹೂವು, ಹುಟ್ಟಿ ಬೆಳೆಯುವದಿಲ್ಲವೆ? ಅದರಂತೆ ಬಗೆ ಬಗೆಯ ಜಾತಿಯ ಜನಾವರ, ಜನ, ಜೀವಜಂತುಗಳು ತಮ್ಮ ಸ್ವಭಾವದಿಂದಲೇ ಈ ಪ್ರಪಂಚದಲ್ಲಿ ಹುಟ್ಟಿಕೊಳ್ಳುತ್ತವೆ. ತಮ್ಮ ತಮ್ಮ ಯೋನಿಗಳಲ್ಲಿ ಸ್ವಭಾವದಿಂದಲೇ ಹುಟ್ಟಿ ಕ್ಲಿಪ್ತವಾಗಿ ಮರಣ ಹೊಂದುತ್ತವೆ. ಮುಂಜಾನೆ ಹುಟ್ಟಿದ ಹೂ ಸಂಜೆಗೆ ತನ್ನ ಸ್ವಭಾವದಿಂದಲೇ ಉರುಳಿ ಬೀಳುತ್ತದೆ. ಇದರಂತೆಯೇ ಎಲ್ಲ ಜೀವರಾಶಿಗಳು ತಮ್ಮ ತಮ್ಮ ಸ್ವಭಾವಕ್ಕನುಗುಣವಾಗಿ ಮರಣವನ್ನು ಹೊಂದುತ್ತವೆ. ಇದಕ್ಕೆ ಯಾವ ದೇವರೂ ಕಾರಣವಲ್ಲ. ಧೂರ್ತ ಬ್ರಾಹ್ಮಣರು ಸ್ವಾರ್ಥ ಸಾಧನೆಗಾಗಿ ದೇವರನ್ನು ಹುಟ್ಟಿಸಿದ್ದಾರೆ. ಈ ಧರ್ಮವು ಕೂಡ ಬ್ರಾಹ್ಮಣರದೇ ಸೃಷ್ಟಿ.

''ಎಲ್ಲ ಜನ್ಮಗಳಿಗಿಂತ ಮಾನವ ಜನ್ಮ ಶ್ರೇಷ್ಠ. ಮಾನವನೇ ಉತ್ಕೃಷ್ಟ. ವಿಷಯ ಸುಖಗಳಲ್ಲಿ ಮಗ್ನರಾಗಿ ಈ ಜನ್ಮವನ್ನು ಹಾಳು ಮಾಡಿಕೊಳ್ಳಬೇಡಿ. ದೇವರ ಧ್ಯಾನ ಮಾಡಿರಿ. ಧರ್ಮಸಾಧನೆ ಮಾಡಿರಿ'' ಇದೇ ಇವರ ಉಪದೇಶದ ಸಾರವಷ್ಟೇ? ಮನುಷ್ಯ ಯೋನಿಗಿಂತ ಮಿಗಿಲಾದ ದುಃಖವು ಹಾಗೂ ಕಷ್ಟ ನಷ್ಟಗಳು ಬೇರೆ ಯಾವ ಯೋನಿಯ ಪ್ರಾಣಿಗಳಿಗೂ ಬರುವದಿಲ್ಲ. ಈ ಭೂಮಿಯಲ್ಲಿ ಹುಟ್ಟಿ ಮಾನವನು ಪಡುವ ಕಡು ಕಷ್ಟವು ಹಾಗೂ ಭೋಗಿಸುವ ಬವಣೆಯೂ ಯಾವ ನಮ್ಮ ವೈರಿಗೂ ಬರುವದು ಬೇಡ. ಮನುಷ್ಯನಿಗೆ ನೋವು ನೂರು, ಯಾತನೆ ಅಸಂಖ್ಯ. ಅವನ ಮೇಲೆ ಆಗುವ ಆಘಾತಗಳಿಗಂತೂ ಲೆಕ್ಕವೇ ಇಲ್ಲ. ಅವಮಾನ, ಅನಾರೋಗ್ಯ, ಅನರ್ಥ, ಕುತ್ತು ವಿಪತ್ತುಗಳಂತೂ ಸುತ್ತಿಕೊಂಡೇ ಇರುತ್ತವೆ ಈ ಮಾನವ ಜೀವಿಯನ್ನು. ಈ ಮಾನವ ಜೀವನವೆಂದರೆ, ಒಂದು ದೊಡ್ಡ ಬಂದೀಖಾನೆ. ಯಾರೋ ಕೆಲವು ಸುದೈವಿಗಳು ಮಾತ್ರ ಇಲ್ಲಿಯ ದೈನ್ಯ ದಾರಿದ್ರ್ಯ ದುಃಖ ದುರವಸ್ಥೆಗಳಿಂದ ಪಾರಾಗುವರು. ಆದರೆ ಈ ಪಶುಪಕ್ಷಿಗಳನ್ನು ನೋಡಿರಿ. ಎಷ್ಟು

ಆನಂದದಿಂದ ಇರುತ್ತವೆ. ಚಕ್ಕಂದದಿಂದ ಕ್ರೀಡಿಸುತ್ತವೆ. ಸ್ವಚ್ಛಂದದಿಂದ ಮನ ಬಂದಲ್ಲಿ ಸಂಚರಿಸುತ್ತವೆ. ಆಹಾರ, ವಿಹಾರ, ವಿಲಾಸ, ವಿನೋದ ಯಾವುದರಲ್ಲಿಯೂ ನಿಯಮವೂ ಇಲ್ಲ, ನಿರ್ಬಂಧವೂ ಇಲ್ಲ. ಇವುಗಳಿಗಿಂತ ಮರ ಬಳ್ಳಿಗಳು ಬೆಟ್ಟ ಬಯಲುಗಳು ಇನ್ನೂ ಸುಖ ಉಳ್ಳವುಗಳು. ಅವುಗಳಿಗೆ ಯಾವ ದುಃಖವೂ ಇಲ್ಲ; ಯಾವ ಚಿಂತೆಯೂ ಇಲ್ಲ. ಈ ಪ್ರಪಂಚದಲ್ಲಿ ಒಟ್ಟಾರೆ ಮಾನವನಷ್ಟು ದುಃಖಿಗಳು ಯಾರೂ ಇಲ್ಲ. ಈ ಮಾನವ ಜನ್ಮದಷ್ಟು ದುಃಖಿಜನ್ಮವೂ ಬೇರೆ ಯಾವುದೂ ಇಲ್ಲ. ಆದರೆ ಈ ಧೂರ್ತ ಸ್ವಾರ್ಥಿ ಬ್ರಾಹ್ಮಣರು ಹೇಳುವದೇನು? ''ಮಾನವ ಜನ್ಮ ದೊಡ್ಡದು ಈ ಮನುಷ್ಯ ಜನ್ಮವು ಅತ್ಯಂತ ಶ್ರೇಷ್ಠ'' ಎಂದು.

ಆದರೆ ವಿಚಾರ ಮಾಡಿ ನೋಡಿದರೆ ಇದೆಲ್ಲವೂ ಸುಳ್ಳು. ಮಾನವನ ಹೊರತು ಇತರ ಎಲ್ಲ ಜೀವಿಗಳೂ ಈ ಪ್ರಪಂಚದಲ್ಲಿ ಸುಖಿಗಳಾಗಿವೆ. ಜಗತ್ತಿನಲ್ಲಿ ಕೆಲವು ಸುದೈವಿ ಜೀವಿಗಳು ಮರ, ಬಳ್ಳಿ, ಪಶು, ಪಕ್ಷಿ, ಕ್ರಿಮಿ, ಕೀಟಗಳಾಗಿ ಜನಿಸಿದರೆ ಹಲವರು ಮಾನವರಾಗಿ ಜನಿಸುತ್ತಾರೆ. ಇದೆಲ್ಲದಕ್ಕೂ ಸ್ವಭಾವವೇ ಕಾರಣ. ಪುಣ್ಯ ಪಾಪ ಮೊದಲಾದವುಗಳೆಲ್ಲವೂ ಧೂರ್ತರ ಸ್ವಾರ್ಥದ ಕಲ್ಪನಾಜಾಲ ಮಾತ್ರ. ಆದುದರಿಂದ ನಂದಭದ್ರನೇ, ನೀನು ಈ ಸುಳ್ಳು ಧರ್ಮವನ್ನು ಬಿಟ್ಟುಬಿಡು. ವ್ಯರ್ಥವಾಗಿ ಧರ್ಮದ ಹೆಸರಿನಲ್ಲಿ ಹೊಟ್ಟೆ ಕಟ್ಟಬೇಡ. ಉಪವಾಸ ಬೀಳಬೇಡ. ಇರುವವರೆಗೆ ಆನಂದದಿಂದ ಧರ್ಮವನ್ನು ಬಿಟ್ಟು ಸುಖ ಪಡು. ಯಾವದೂ ನಿಷಿದ್ಧವಲ್ಲ. ರುಚಿ ಹತ್ತಿದ್ದನ್ನು ತಿನ್ನು, ಸವಿ ಹತ್ತಿದ್ದನ್ನೆಲ್ಲ ಭಕ್ಷಿಸು. ನಿನಗೆ ಮನರಂಜನೆ ಎನಿಸುವ ಆಟವನ್ನು ಆಡು, ನೋಡಬೇಕು ಎನಿಸಿದ್ದನ್ನು ನೋಡು, ಸಾಧ್ಯವಿದ್ದ ಎಲ್ಲ ಸುಖೋಪಭೋಗಗಳನ್ನು ಅನುಭವಿಸು. ಈ ಪೃಥ್ವಿಯಲ್ಲಿ ಬದುಕಿರುವವರೆಗೆ ಬೇಕಾದ ಸುಖೋಪಭೋಗಗಳನ್ನು ಯಥೇಚ್ಛ ಭೋಗಿಸು. ಸತ್ಯವ್ರತನ ಈ ವಾಕ್ಯಗಳಿಂದ ನಂದಭದ್ರನ ಮನದ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಸತ್ಯವ್ರತನ ಮಾತುಗಳೆಲ್ಲವೂ ಅಸಂಗತ, ಅಯುಕ್ತ, ಅಪದ್ಧ ಎಂದು ಮಾತ್ರ ಅವನಿಗೆ ಅರಿವಾಯಿತು. ಅವನು ನಗುತ್ತಲೇ ಸತ್ಯವ್ರತನಿಗೆ ಉತ್ತರವಿತ್ತ.

**ನಂದಭದ್ರ :** ಸತ್ಯವ್ರತನೇ, ಧರ್ಮವನ್ನು ಪಾಲಿಸುವ ಮಾನವರು ದುಃಖಿಗಳಾಗುವರು ಎಂದು ನೀನು ಮೊದಲು ಹೇಳಿದೆಯಷ್ಟೇ! ಇದು ಸುಳ್ಳು, ಇದಕ್ಕೆ ನನ್ನ ದೃಷ್ಟಾಂತವನ್ನು ನೀನು ತೋರಿಸಿದ್ದೂ ತಪ್ಪು. ಮಡದಿ ಮಕ್ಕಳ ಸಾವು ನೋವು ಹಾಗೂ ಬೇರೆ ಬೇರೆ ಕುತ್ತು ಆಪತ್ತುಗಳು ಧರ್ಮಿಷ್ಠರಿಗೆ ಮಾತ್ರ ಬರುತ್ತವೆ ಎಂಬ ಮಾತು ಸರಿಯಲ್ಲ. ಧರ್ಮ ಬಿಟ್ಟವರಿಗೂ ಈ ತರಹದ ದುಃಖ ದುರವಸ್ಥೆಗಳು ಬಂದೇ ಬರುತ್ತವೆ. ಪ್ರಪಂಚದಲ್ಲಿ ಹುಟ್ಟಿದ ಎಲ್ಲ ಪ್ರಾಣಿಗಳಿಗೂ ಕಷ್ಟ, ನಷ್ಟ ಕುತ್ತು, ವಿಪತ್ತು, ಸಾವು, ನೋವು, ಸುಖ, ಸಮಾಧಾನ, ಹಿಗ್ಗು, ಕುಗ್ಗುಗಳು ಪರ್ಯಾಯವಾಗಿ ಬಂದೇ ಬರುತ್ತವೆ. ಇದಕ್ಕೆಲ್ಲ ಅವರ ಪ್ರಾರಬ್ಧವೇ ಕಾರಣ. ಧರ್ಮ ಏನು ಮಾಡೀತು? ಧರ್ಮಾಚರಣೆಯಿಂದ ಬರುವ ದುಃಖಗಳು ಎಷ್ಟೋ ಕಡಿಮೆ ಆಗುವವು.

ನೀತಿ ನಿಯಮಗಳ ಪಾಲನೆಯಿಂದ ಸಮಾಜದಲ್ಲಿ ಜನರಿಗೆ ನೆಮ್ಮದಿಯಿಂದ ಬದುಕಲಿಕ್ಕಾಗುವದು. ಧರ್ಮಾತ್ಮನಾದ ಮಾನವನಿಗೆ ದೈವಿಕವಾಗಿ ಏನಾದರೂ ಕಷ್ಟ ನಷ್ಟಗಳು ಒದಗಿದರೆ ಜನರ ಸಹಾನುಭೂತಿಯಾದರರೂ ಇರುವುದು. ಪಾಪಿಗಳಿಗೆ ಈ ಸಹಾನುಭೂತಿಯೂ ಸಿಗಲಾರದು. ಧರ್ಮ, ನೀತಿ ಇಲ್ಲದಿದ್ದರೆ ಬಲಿಷ್ಠರಾದ ದುಷ್ಟರು ಮನೆ ಮನೆಗೆ ನುಗ್ಗಿ ಹಣವನ್ನೆಲ್ಲ ದೋಚಿಕೊಂಡು ಹೋಗುವರು. ಮಹಿಳೆಯರ ಮಾನಭಂಗ ಮಾಡುವರು. ಪಾಪ ಪುಣ್ಯ ಧರ್ಮ, ನೀತಿ ಯಾವುದೂ ಇಲ್ಲದಿದ್ದರೆ ಅವರನ್ನು ಹಿಂಸೆ ಕೊಳ್ಳೆಗಳಿಂದ ತಡೆಯುವವರು ಯಾರು ? ಅಧಮ ನೀಚರು ತಮ್ಮ ಸುಖೋಪಭೋಗಕ್ಕಾಗಿ ಹಿಂಸೆ, ಸ್ತ್ರೀ ಬಲಾತ್ಕಾರ, ಕೊಲೆ, ದರೋಡೆ, ಕಳವು ಅತ್ಯಾಚಾರಗಳನ್ನು ಮುಂಗೈ ಜೋರಿನಿಂದ ಏಕೆ ಮಾಡಬಾರದು? ನಿನ್ನ ಸ್ವಂತ ಮನೆಗೇ ನಿನಗಿಂತ ಬಲಿಷ್ಠ ಅಷ್ಟೇ ದುಷ್ಟ ಒಬ್ಬ ಕಳ್ಳನು ನುಗ್ಗಿ ನಿನ್ನ ಹಣ ಕದ್ದು ನಿನ್ನ ಹೆಂಡತಿಯ ಮಾನಭಂಗ ಮಾಡಿದರೆ ಅವನಿಗೆ ನೀನು ಏನು ಉತ್ತರ ಹೇಳುವೆ? ಪಾಪದ ಭೀತಿಯಿಲ್ಲ, ಧರ್ಮದ ನೀತಿಯಿಲ್ಲ, ದೇವರ ಭಯವಿಲ್ಲ - ಅಂದ ಬಳಿಕ ಅವನನ್ನು ಪಾಪಕೃತ್ಯದಿಂದ ಪರಾವೃತ್ತನನ್ನಾಗಿ, ನಿನ್ನ ಹೆಣ್ಣು ಹಣ ಮುಟ್ಟದಂತೆ ಮಾಡುವ ಮಾಡುವ ಬಗೆ ಹೇಗೆ? ದುಷ್ಟರೂ ಬಲಿಷ್ಠರೂ ಗುಂಪುಗೂಡಿ ದುರ್ಬಲರ ಹಣವನ್ನೆಲ್ಲ ಕಸಿದು, ಮನೆ ಹೊಲ ಆಸ್ತಿಗಳನ್ನೆಲ್ಲ ಕಿತ್ತುಕೊಂಡು, ಅವರ ಹೆಂಗಸರನ್ನೆಲ್ಲ ಬಲಾತ್ಕಾರದಿಂದ ಭೋಗಿಸಿ, ಕೆಡಿಸಿ, ತಡೆಯಬಂದವರನ್ನೆಲ್ಲ ಕಡಿದು ಕೊಂದು ಹಾಕಿದರೆ ಕೇಳುವವರಾರು! ಪಾಪದ ಭಯವೇ ಇಲ್ಲದಿದ್ದರೆ ಜಗತ್ತಿನಲ್ಲಿ ದುರ್ಬಲರು ಬಾಳಿ ಬದುಕಲಿಕ್ಕೆ ಶಕ್ಯವಿಲ್ಲ. ಬಲಿಷ್ಠರಾದ ದುಷ್ಟರು ಅವರಲ್ಲಿ ಇದ್ದು ಬಿದ್ದುದನ್ನೆಲ್ಲ ಹೊಡೆದು ಬಡೆದು ದೋಚಿಕೊಂಡು ಹೋಗುವರು. ಅವರ ಸ್ತ್ರೀಯರನ್ನು ಭೋಗಿಸುವರು. ಅವನಿಗಿಂತ ಬಲಿಷ್ಠ ದುಷ್ಟರು ಬಂದರೆ ಇವನನ್ನು ಮುರಿದು ಮಣ್ಣುಗೂಡಿಸುವರು. ಹೀಗಾಗಿ ಜಗತ್ತಿನಲ್ಲಿ ಎಲ್ಲರಿಗೂ ಯಾವಾಗಲೂ ಭಯ ತಮಗಿಂತ ಬಲಿಷ್ಠರಿಂದ . ಸಂತತವೂ ಅಪಾಯದ ಶಂಕೆ ಗುಂಪುಗೂಡಿದ ಗಾಂಪರಿಂದ. ಯಾವಾಗಲೂ ಪರಸ್ಪರರಲ್ಲಿ ಬಡೆದಾಟ ಹೊಡೆದಾಟ. ಯಾವಾಗಲೂ ಆಕ್ರಮಣದ ಭೀತಿ. ಯಾರಿಗೂ ನೆಮ್ಮದಿ ಇಲ್ಲ. ಬದುಕಿನಲ್ಲಿ ಭರವಸೆಯೇ ಇಲ್ಲ. ಇಡೀ ಜೀವನವೆಲ್ಲವೂ ಶಾಂತಿ ಸಮಾಧಾನಗಳಿಲ್ಲದೆ ಭಯ ಭ್ರಾಂತಿಗಳಲ್ಲಿಯೇ ಕಳೆದು ಹೋಗುವದು. ಒಬ್ಬರನ್ನೊಬ್ಬರು ಹೊಡೆಯುತ್ತಲೇ ಹೋಗುವರು. ಹಾಗಾದರೆ ಈ ಪ್ರಪಂಚವೆಲ್ಲವೂ ಒಂದು ಕುರುಕ್ಷೇತ್ರವಾಗಿ ಮಾರ್ಪಡುವದು. ಈ ನರಲೋಕ ಎಲ್ಲವೂ ನರಕ ಲೋಕದಂತೆ ಯಾತನಾ ಕೇಂದ್ರವಾಗುವದು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೂವತ್ತಮೂರನೇಯ ಅಧ್ಯಾಯ ಮುಗಿದುದು**

# ಕುಂಬಾರನಿಲ್ಲದೆ ಕೊಡವಿಲ್ಲ, ನೇಕಾರನಿಲ್ಲದೆ ಬಟ್ಟೆ ಇಲ್ಲ, ದೇವರಿಲ್ಲದೆ ಜಗತ್ತು ಹೇಗೆ?

ಅಧ್ಯಾಯ-34

ನಿನ್ನ ಎರಡನೆಯ ಹೇಳಿಕೆ, ಈ ಸಂಸಾರದ ಸರ್ವವಸ್ತುಗಳ ಸೃಷ್ಟಿಗೆ ಮತ್ತು ಎಲ್ಲ ಘಟನೆಗಳ ಆಗು ಹೋಗುಗಳಿಗೆ ಈಶ್ವರನು ಕಾರಣವಲ್ಲ. ಅದೆಲ್ಲದಕ್ಕೂ ಸ್ವಭಾವವೇ ಕಾರಣ ಎಂಬುದು. ಇದು ಅಂತೂ ಅಪ್ಪಟ ಸುಳ್ಳು. ಈಶ್ವರನು ಇಲ್ಲದಿದ್ದರೆ ಈ ಪ್ರಪಂಚವನ್ನು ಸೃಷ್ಟಿಸಿದವರು ಯಾರು ? ಯಾರೂ ಸೃಷ್ಟಿಸದೇ ಈ ಜಗತ್ತಿನಲ್ಲಿ ಯಾವುದಾದರೂ ಒಂದು ವಸ್ತು ತಾನಾಗಿಯೇ ಜನಿಸುವದೆ? ನಮ್ಮ ಕಣ್ಣಿಗೆ ಕಾಣುವ ಕೊಡ, ಮಡಿಕೆ, ಬಟ್ಟೆ, ಧಾನ್ಯ, ಅನ್ನ, ಪಾತ್ರೆ, ಮನೆ, ಪೀಠ, ಉಪಕರಣ, ಒಂದಲ್ಲ-ಸಾವಿರಾರು ವಸ್ತುಗಳಲ್ಲಿ ಒಂದಾದರೂ ಒಬ್ಬ ಕರ್ತಾರನಿಲ್ಲದೇ ತನ್ನಷ್ಟಕ್ಕೆ ತಾನೇ ಜನಿಸಿರುವವೆ? ಅಂದಬಳಿಕ ಸೃಷ್ಟಿಸುವವನು ಒಬ್ಬನು ಇಲ್ಲದೇ ಈ ಎಲ್ಲ ಅನಂತ ಜೀವರಾಶಿಗಳ ಸೃಷ್ಟಿಯು ಆಯಿತು ಎಂಬುವುದನ್ನು ಹೇಗೆ ಒಪ್ಪುವುದು ?

ಸ್ವಭಾವದಿಂದಲೇ ಎಲ್ಲ ಪದಾರ್ಥಗಳೂ ರೂಪಗೊಳ್ಳುತ್ತವೆ ಎಂಬುದು ಸತ್ಯವಾದರೆ, ಅಡಿಗೆಯವನಿಲ್ಲದೇ ಸ್ವಭಾವದಿಂದಲೇ ಅನ್ನ ಏಕೆ ತಾನಾಗಿ ಸಿದ್ಧವಾಗುವದಿಲ್ಲ? ನೇಕಾರನಿಲ್ಲದೇ ಒಳ್ಳೆಯ ಬಟ್ಟೆಗಳು ಏಕೆ ನಿರ್ಮಾಣವಾಗುವದಿಲ್ಲ? ಸ್ವಭಾವದಿಂದ ತಾನಾಗಿಯೇ ವಸ್ತುಗಳು ಹುಟ್ಟುವುದಾದರೆ ಕುಂಬಾರನಿಲ್ಲದೇ ಕೊಡ, ಕಂಬಾರನಿಲ್ಲದೆ ಚಕ್ಕಡಿ, ಉಪ್ಪಾರನಿಲ್ಲದೇ ಮನೆ, ಹೂಗಾರನಿಲ್ಲದೆ ಹೂವಿನಮಾಲೆ, ಅಕ್ಕಸಾಲಿಗನಿಲ್ಲದೆ ಆಭರಣ, ಸರಕಾರವಿಲ್ಲದೇ ರಾಜ್ಯಶಾಸನ, ಅಡಿಗೆಯವನಿಲ್ಲದೇ ಪಕ್ವಾನ್ನಗಳು, ಬಡಿಗನು ಇಲ್ಲದೇ ಪೀಠೋಪಕ[illegible]ಗಳೂ ಏಕೆ ಸ್ವಭಾವದಿಂದಲೇ ತಾವಾಗಿಯೇ ತಯಾರಾಗುವದಿಲ್ಲ? ಈ ಪ್ರಪಂಚದಲ್ಲಿ ಕರ್ತಾರನಿಲ್ಲದೇ ಕಾರ್ಯವಿಲ್ಲ. ಸ್ಥಾವರ ಜಂಗಮಾತ್ಮಕವಾದ ಆ ಪ್ರಪಂಚಕ್ಕೆ ನಾನು ನೀನು ಅಥವಾ ಬೇರೆ ಅಸ್ವಂತ್ರರಾದ, ಅಲ್ಪರಾದ, ದುರ್ಬಲರಾದ ಮಾನವರು, ಕರ್ತಾರರು, ಸ್ರಷ್ಟಾರರು ಆಗಲು ಸಾಧ್ಯವಿಲ್ಲ. ಅದಕ್ಕಾಗಿ ಸರ್ವಕರ್ತಾರನಾದ ಸರ್ವಭರ್ತಾರನಾದ ಈಶ್ವರನನ್ನು ಎಲ್ಲರೂ ಒಪ್ಪಲೇ ಬೇಕು.

## ಅಂಧನಿಗೆ ಸೂರ್ಯನಿಲ್ಲ, ಮಂದನಿಗೆ ದೇವರಿಲ್ಲ

ಕಲ್ಲಿನ ದೇವರನ್ನು ಈ ಶಿವಲಿಂಗವನ್ನು ವ್ಯರ್ಥವಾಗಿ ಏಕೆ ಪೂಜೆಮಾಡುತ್ತೀ ಎಂದು ನೀನು ಕೇಳಿದೆಯಷ್ಟೇ? ಇದು ನಿನ್ನ ಅಗಾಧ ಅಜ್ಞಾನ. ಶಿವಲಿಂಗ ಮಹಿಮೆಯನ್ನು ನೀನು ಅರಿತಿಲ್ಲ. ನಿನಗೆ ಅದರ ಉಪಯುಕ್ತತೆಯ ಗುರುತಿಲ್ಲ. ಕುರುಡನಿಗೆ ಸೂರ್ಯನ ಸ್ವರೂಪ ಜ್ಞಾನ ಆಗುವದೆಂತು? ಮಾನವರಲ್ಲಿ ಅತ್ಯಂತ ಬುದ್ಧಿವಂತರೂ ರಾಜ ಮಹಾರಾಜರೂ ಶಿವಲಿಂಗವನ್ನು ಪೂಜಿಸುವರು. ಬ್ರಹ್ಮಾದಿದೇವತೆಗಳೂ ಲಿಂಗಪೂಜೆ ಮಾಡುವರು. ಅಲ್ಲಲ್ಲಿ ಲಿಂಗಪೂಜೆಯ ಮಹಾಮಹಿಮೆಯನ್ನು ಅರಿತ ಮಹಾ ಮಹಿಮರೂ, ದೇವತಾ ಧುರೀಣರೂ ಲೋಕೋಪಕಾರಕ್ಕಾಗಿ ಶಿವಲಿಂಗಗಳನ್ನು ಎಲ್ಲ ಕಡೆಗಳಲ್ಲಿಯೂ ಪ್ರತಿಷ್ಠೆ ಮಾಡಿದ್ದಾರೆ. ಸ್ವಯಂ ಆ ಶಿವಲಿಂಗಗಳ ಪೂಜೆಯನ್ನೂ ಮಾಡಿದ್ದಾರೆ.

## ಮಹಾತ್ಮರಿಂದ ಮಹಾದೇವರ ಪ್ರತಿಷ್ಠೆ, ಲಿಂಗಪೂಜೆಯ ಲಾಭಗಳು

ಭಗವಾನ್ ಶ್ರೀ ರಾಮಚಂದ್ರನು ರಾವಣನನ್ನು ಕೊಂದು ದಕ್ಷಿಣ ಸಮುದ್ರದ ದಂಡೆಯ ಮೇಲೆ ಶಿವಲಿಂಗವನ್ನು ಸ್ಥಾಪಿಸಿದ್ದಾನೆ. ರಾಮೇಶ್ವರ ಎಂದು ಅದು ಈಗಲೂ ಪ್ರಸಿದ್ಧವಿದೆ. ಇವೆಲ್ಲವೂ ಸುಳ್ಳೆ? ಇಂದ್ರನು ವೃತ್ರಾಸುರನನ್ನು ಸಂಹರಿಸಿ ಮಹೇಂದ್ರ ಪರ್ವತದಲ್ಲಿ ಶಿವಲಿಂಗವನ್ನು ಸ್ಥಾಪಿಸಿದ್ದಾನೆ. ವೃತ್ರ ಹತ್ಯೆಯ ಪಾಪ ತಗಲಿದಾಗ ಅದೇ ಶಿವಲಿಂಗವನ್ನು ಭಕ್ತಿ ಭಾವ ಯುಕ್ತನಾಗಿ ಪೂಜಿಸಿದ. ಪಾಪಮುಕ್ತನಾಗಿ ಅದರಿಂದ ಇಂದಿಗೂ ಸ್ವರ್ಗಾಧಿಪತ್ಯದ ಸೌಭಾಗ್ಯ ಸಂಪದಗಳ ಸೌಖ್ಯವನ್ನು ಅನುಭವಿಸುತ್ತಾನೆ. ಚಂದ್ರನು ಪಶ್ಚಿಮ ಸಮುದ್ರ ತೀರದ ಪ್ರಭಾಸ ಕ್ಷೇತ್ರದಲ್ಲಿ ಶಿವಲಿಂಗವನ್ನು (ಸೋಮನಾಥ ನಾಮದ) ಪ್ರತಿಷ್ಠೆ ಮಾಡಿದ್ದಾನೆ. ಕುಬೇರನು ಕಾಶಿಯಲ್ಲಿ, ಕಶ್ಯಪ ಮುನಿಗಳು ಸಹ್ಯಾದ್ರಿ ಶಿಖರದಲ್ಲಿ, ವಾಯುದೇವರು ನೈಮಿಷಾರಣ್ಯದಲ್ಲಿ, ಯಮಧರ್ಮನು ಗಂಗಾ ತಟಾಕದಲ್ಲಿ, ವರುಣ ದೇವನು ನೈಮಿಷ ಕ್ಷೇತ್ರದಲ್ಲಿ, ಭಗವಾನ್ ಸ್ಕಂದಸ್ವಾಮಿಯು ಈ ಸ್ತಂಭ ತೀರ್ಥದಲ್ಲಿ ಬೇರೆ ಬೇರೆ ಹೆಸರಿನ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿ ಪೂಜಿಸಿ ಅದರಿಂದ ಫಲವನ್ನು ಪಡೆದಿದ್ದಾರೆ. ಹೀಗೆ ಅನೇಕ ದೇವತೆಗಳು, ರಾಜರ್ಷಿಗಳು, ಬ್ರಹ್ಮರ್ಷಿಗಳು ಬೇರೆ ಬೇರೆ ಸ್ಥಳದಲ್ಲಿ ಅಸಂಖ್ಯ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿದ್ದಾರೆ. ಅವುಗಳ ಎಣಿಕೆ ನನ್ನ ಅಳವಿಗೆ ಮೀರಿದ್ದು. ಹೀಗೆ ಭೂಲೋಕ, ಸ್ವರ್ಗಲೋಕ, ಪಾತಾಳ ಲೋಕದ ಜನರು ಕೂಡ ಲಿಂಗಾರ್ಚನೆ ಶಿವಾರ್ಚನೆಗಳನ್ನು ಮಾಡಿ ಪುಣ್ಯಫಲವನ್ನು ಕಂಡಿದ್ದಾರೆ. ಅದರಿಂದ ಲಭ್ಯವಾದ ಆನಂದ ಭೋಗಗಳನ್ನು ಉಂಡಿದ್ದಾರೆ. ಇವರೆಲ್ಲರೂ ಮೂರ್ಖರೆ? ಚಂದ್ರ, ರಾಮ ಚಂದ್ರ, ಇಂದ್ರ ಮುಂತಾದ ಮಹಾಮಹಿಮರು ಮಾಡಿದ ಕಾರ್ಯ ವ್ಯರ್ಥವೇ? ಸುಳ್ಳೆ? ಸತ್ಯವ್ರತ ಎಂದು ಹೆಸರಿಟ್ಟುಕೊಂಡ ಮಾತ್ರಕ್ಕೆ ನೀನು ಹೇಳಿದ್ದು ಮಾತ್ರ ಸತ್ಯವೇ ?

## ದುಃಖಿ ಯಾರು? ಜನರೋ ಜನಾವರಗಳೋ?

ನಿನ್ನ ಮತ್ತೊಂದು ಮುಖ್ಯ ನಿರೂಪಣೆ - ಎಲ್ಲ ಪ್ರಾಣಿಗಳಲ್ಲಿ ಮಾನವನೇ ಮಹಾ ದುಃಖಿ. ಈ ನಿನ್ನ ಹೇಳಿಕೆಯನ್ನು ಯಾವ ವಿವೇಕಿಯೂ ಒಪ್ಪಲಾರ. ನಾನು ಈವರೆಗೆ ಯಾರ ಬಾಯಿಯಿಂದಲೂ ಇಂಥ ಮಾತನ್ನು ಕೇಳಿಲ್ಲ. ಯಾವುದೇ ಇಂದ್ರಿಯ ಸೌಖ್ಯವಾಗಲಿ, ಮಾತಾಡುವ ಶಕ್ತಿಯಾಗಲೀ ಇಲ್ಲದಿರುವ ಮೂಕ ಪ್ರಾಣಿಗಳಿಗೆ ದುಃಖ ಉಂಟೋ ಇಲ್ಲವೋ ಯಾರಿಗೆ ಗೊತ್ತು? ಮಾನವನ ಕೈಯಲ್ಲಿ ಸಿಕ್ಕು ಊಳಿಗದ ಆಳಿಗಿಂತ ಕೀಳಾಗಿ ಹೊಡೆತ ಬಡಿತ ತಿಂದು ದುಡಿಯುವ ಎತ್ತು, ಕತ್ತೆ, ಕುದುರೆ, ನಾಯಿ, ಎಮ್ಮೆ, ಆಕಳು, ಕೋಣ, ಆನೆ, ಕುರಿ, ಕೋಳಿ - ಮುಂತಾದ ಪ್ರಾಣಿಗಳನ್ನು ಹೊಟ್ಟೆತುಂಬ ಆಹಾರ ಕೊಡದೇ ಬಿಸಿಲು ಮಳೆಗಾಳಿಗಳಲ್ಲಿ ನಿರ್ದಯವಾಗಿ ದುಡಿಸಿಕೊಂಬುವದನ್ನೂ, ಮಾನವರು ಚಾವಟಿ, ಬಾರುಕೋಲುಗಳಿಂದ ಹೊಡೆಯುವದನ್ನೂ, ಆ ಮೂಕ ಪ್ರಾಣಿಗಳು ಗೋಳಾಡುತ್ತ ಕಣ್ಣೀರು ಸುರಿಸುತ್ತ

ಮಾನವರನ್ನೂ ಹೊರಲಾರದ ಭಾರವನ್ನೂ ಹೊತ್ತುಕೊಂಡು ಓಡುತ್ತಿರುವದನ್ನೂ ನಾವು ಕಣ್ಣಾರೆ ನೋಡುತ್ತಿದ್ದೇವೆ. ಈ ಪ್ರಾಣಿಗಳಿಗಂತೂ ಸುಖವಿಲ್ಲ ಎಂಬುದು ಪ್ರತ್ಯಕ್ಷ ಸಿದ್ಧ.

## ಜೀವೋ ಜೀವಸ್ಯ ಜೀವನಮ್

ಬೇರೆ ಸ್ಥಳಗಳಲ್ಲಿ ಇರುವ ಪಶುಪಕ್ಷಿಗಳಿಗೆ ತಮಗಿಂತ ಬಲಿಷ್ಠವಾದ ಪ್ರಾಣಿಗಳಿಂದಲೂ ತನ್ನ ಜಾತಿಯವೇ ಆದ ಬಲಿಷ್ಠ ಜೀವಿಗಳಿಂದಲೂ ನಿರಂತರವೂ ಅಪಾಯ ತಪ್ಪಿದ್ದಲ್ಲ. ಮೀನ, ಏಡಿ ಮುಂತಾದ ಜಲಚರ ಪ್ರಾಣಿಗಳನ್ನು ಸಾಮೂಹಿಕವಾಗಿ ಮಾನವರು ಬಲೆ ಗಾಳ ಹಾಕಿ, ಹಾಗೂ ಹೋಡಿ, ನೌಕೆ, ತೆಪ್ಪ, ಹರಗೋಲ, ಹಡಗುಗಳಲ್ಲಿ ಹೋಗಿ ಬೇಟೆಯಾಡಿ ಪ್ರಚಂಡ ಪ್ರಮಾಣದಲ್ಲಿ ಹಿಡಿದು ತಂದು, ಕೊಂದು, ತಿಂದು ಹಾಕುವದು ಎಲ್ಲರಿಗೂ ತಿಳಿದ ವಿಷಯ. ದೇಶದ ನಾನಾ ಭಾಗಗಳಲ್ಲಿ ಮಾಂಸಾಹಾರಿಗಳಾದ ಮಾನವರಿಗಾಗಿ ಲಕ್ಷ ಲಕ್ಷ ಸಂಖ್ಯೆಯಲ್ಲಿ ಹಂದಿ, ಕೋಣ, ಕೋಳಿ, ಆಡು, ದನಕರುಗಳನ್ನು ಕೊಂದು ಮಾಂಸವನ್ನೂ ಮೂಳೆ ತೊಗಲುಗಳನ್ನೂ ಮಾರುತ್ತಾರೆ. ಉಗುರು, ತೊಗಲು, ಬಾಲ, ಮೂಳೆ, ಹಲ್ಲು, ಕೋಡು, ಮುಂತಾದವುಗಳಿಗಾಗಿ ಹುಲಿ, ಸಿಂಹ, ಆನೆ, ಚಿಗರೆ, ಕಸ್ತೂರಿ, ಮೃಗ, ಹಸು, ಕಾಡುಕೋಣ, ರೇಶ್ಮೆಹುಳು, ಪುನಗಿನ ಬೆಕ್ಕು, ಹಂದಿ, ಮುಂತಾದ ಪ್ರಾಣಿಗಳೂ ಖಗಮೃಗ ಪಶುಪಕ್ಷಿಗಳೂ ಪ್ರತಿನಿತ್ಯವೂ ಬೇಟೆಯಾಡಿ ಕೊಲ್ಲಲ್ಪಡುತ್ತವೆ. ಪ್ರಾಣವುಳ್ಳ ವೃಕ್ಷ, ವನಸ್ಪತಿ, ತರಕಾರಿ, ಸಸ್ಯ ಬೆಳೆ, ಪೈರು, ಹಸಿರು ಹುಲ್ಲು, ತೊಪ್ಪಲು - ಮುಂತಾದವುಗಳ ನಿತ್ಯ ವಿನಾಶವು ನಡೆದೇ ಇರುತ್ತದೆ. ಎಷ್ಟೋ ಕ್ರಿಮಿ ಕೀಟಗಳು, ಹುಳು ಹುಪ್ಪಡಿಗಳು ಹದ್ದು, ಕಾಗೆ,ಕಪ್ಪೆ, ಗುಬ್ಬಿ - ಮುಂತಾದವುಗಳಿಗೆ ಆಹಾರವಾಗುತ್ತವೆ. ಮಾನವರ ಶ್ವಾಸೋಚ್ಛ್ವಾಸದಿಂದಲೂ ಪ್ರಾಣಿಗಳ ನಡೆದಾಟ, ತುಳಿದಾಟಗಳಿಂದಲೂ ಸಾಯುವ ಸಣ್ಣ ಜೀವಿಗಳು ಅಸಂಖ್ಯ. ಮಳೆಯಾದರೆ ಕೋಟಿ ಕೋಟಿ ಹುಳ ಹುಪ್ಪಡಿಗಳ ನಾಶ. ಬಿಸಿಲು ಬಿದ್ದರೂ ನಾಶ. ಗಾಳಿ ಬೀಸಿದರೆ ಕೆಲವು ಜೀವಿಗಳ ನಾಶ. ಹೀಗೆ ಕ್ಷಣ ಕ್ಷಣಕ್ಕೂ ಸಾವು, ನೋವು, ಹೊಡೆತ, ಬಡೆತ, ಉಪವಾಸ, ವನವಾಸಗಳಿಗೆ ಪಕ್ಕಾಗಿ ದುಃಖದ ಕುಲುಮೆಯಲ್ಲಿ ಬೇಯುವ ಮನುಷ್ಯೇತರ ಪ್ರಾಣಿಗಳು ಸುಖಿಗಳು ಎಂದು ಹೇಳುವುದು ಹಾಸ್ಯಾಸ್ಪದ. ಅನುಭವಕ್ಕೆ ವಿರುದ್ಧ. ಯುಕ್ತಿಬಾಹಿರ.

ಮಾನವನಿಗೆ ಭಗವಂತನು ವಿಷಯ ಹಾಗೂ ವಸ್ತುಗಳ ಸ್ವರೂಪ ಜ್ಞಾನವನ್ನು ಕೊಟ್ಟಿದ್ದಾನೆ. ಯಾವುದರಿಂದ ಸುಖ? ಯಾವುದರಿಂದ ದುಃಖ? ಎನ್ನುವ ವಿವೇಕವನ್ನು ಕೊಟ್ಟಿದ್ದಾನೆ. ದುಃಖವನ್ನು ಪರಿಹರಿಸಿಕೊಂಡು ಸುಖವನ್ನು ಸಾಧಿಸಿಕೊಳ್ಳಲು ಬೇಕಾಗುವ ಇಂದ್ರಿಯ ಪಾಟವವನ್ನು, ದೇಹಸಾಮರ್ಥ್ಯವನ್ನು , ಕೈಕಾಲುಗಳಲ್ಲಿ ಶಕ್ತಿಯನ್ನೂ ಕರುಣಿಸಿದ್ದಾನೆ. ಈ ಎಲ್ಲ ಸುಖ ದುಃಖ ವಿವೇಕವನ್ನೂ, ದುಃಖ ತಪ್ಪಿಸಿ ಸುಖಪಡೆಯುವ ಶಕ್ತಿಯುಕ್ತಿಗಳನ್ನೂ, ಅದಕ್ಕೆ ಬೇಕಾದ ಸಾಧನ ಸಲಕರಣೆಗಳನ್ನೂ ಮಾಡಿದವನೇ ದೇವರು. ನೀಡಿದವನೂ ದೇವರೇ. ಆ ದೇವರು ಕೊಟ್ಟ ಎಲ್ಲ ಶಕ್ತಿ ಸಾಮರ್ಥ್ಯವನ್ನು ಅತ್ಯಲ್ಪ, ಅಸ್ಥಿರ, ಕ್ಷುದ್ರಲೌಕಿಕ ವಿಷಯ

ಸಾಧನೆಗಳಿಗಾಗಿ ಉಪಯೋಗಿಸದೇ ಶಾಶ್ವತ ಸುಖಕೊಡುವ ಆ ದೇವನ ಸೇವೆಗೈದು ಆನಂದವನ್ನು ಪಡೆಯಲು ಅವನು ಕೊಟ್ಟ ನಮ್ಮ ಎಲ್ಲ ಇಂದ್ರಿಯಗಳನ್ನು ಉಪಯೋಗಿಸಬೇಕು. ವೇದ ಶಾಸ್ತ್ರಗಳೂ, ಹಿಂದಿನ ಋಷಿಮುನಿಗಳೂ ದಾನ ಧರ್ಮ ಪುಣ್ಯಕರ್ಮಾದಿಗಳನ್ನು ಮಾಡುವ ದಾರಿಯನ್ನು ಹೇಳಿಕೊಟ್ಟಿದ್ದಾರೆ. ತಾವು ನುಡಿದಂತೆ ನಡೆದು, ಅಂಥ ಸೌಖ್ಯವನ್ನು ಪಡೆದು ಆ ಮಾರ್ಗದಿಂದ ಬರಲು ನಮಗೆ ಉಪದೇಶಿಸಿದ್ದಾರೆ. ಆದರಿಂದ ಈಗ ನಮಗೆ ತುಸು ಕಷ್ಟವೆನಿಸಿದರೂ ಮುಂದೆ ನಿರಂತರ ನಿತ್ಯಾನಂದ ಪ್ರಾಪ್ತಿ ನಿಶ್ಚಿತ.

## ಅಸತ್ಯ - ಅಪಥ್ಯ

ನೀನು ಸತ್ಯವನ್ನು ನುಡಿಯುತ್ತೇನೆ ಎಂದು ಮೊದಲು ಹೇಳಿ ಆಡಂಬರದ ಪೀಠಿಕೆ ಹಾಕಿ ಈಗ ರುಕ್ಷ ತರ್ಕದ ಮಾತುಗಳನ್ನು ಹೇಳುತ್ತಿರುವಿ. ನೀನು ಹೇಳುವದು ಅವಿವೇಕದ ದಾರಿ. ಸೂಕ್ಷ್ಮ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ನಿನ್ನ ವ್ಯರ್ಥವಾದ ಆ ವಚನ ರಾಶಿಯಲ್ಲಿ ಸಾಸಿವೆಯಷ್ಟು ಕೂಡ ಸತ್ಯವಿಲ್ಲ. ಗುಂಜಿ ತೂಕದಷ್ಟೂ ತಥ್ಯವಿಲ್ಲ. ಇನ್ನೊಬ್ಬರನ್ನು ವಂಚಿಸಿ ದುರ್ಮಾರ್ಗಕ್ಕೆ ಎಳೆಯುವ ದುರ್ಬುದ್ಧಿಯು ನಿನ್ನ ಮಾತಿನ ಹಿನ್ನೆಲೆಯಲ್ಲಿ ಒಡೆದು ಕಾಣುತ್ತದೆ. ಇದರಲ್ಲಿ ನಿನ್ನದೇನೂ ತಪ್ಪಿಲ್ಲ. ಇಷ್ಟು ಹೊತ್ತು ಸುಮ್ಮನೇ ಕುಳಿತು ನಿನ್ನ ದುಸ್ತರ್ಕದ ನಿರ್ಮೂಲವಾದ ನಾಸ್ತಿಕವಾದವನ್ನು ಕೇಳಿದ್ದು ನನ್ನದೇ ತಪ್ಪು.

## ದುರ್ಜನ ಸಹವಾಸ, ಆತ್ಮನಾಶ

ಪ್ರತಿದಿನವೂ ಸಾಧು ಸಜ್ಜನರ ಸಹವಾಸವನ್ನು ಮಾಡಬೇಕು. ಪಂಡಿತರು, ಮಹಾತ್ಮರು, ಜ್ಞಾನವೃದ್ಧರು, ತಪಸ್ವಿಗಳು, ಮಂತ್ರಸಿದ್ಧರೂ ಆದ ಮಹಾಪುರುಷರೊಡನೆ ಸಂಪರ್ಕವನ್ನು ಸಾಧಿಸಬೇಕು. ಆದರಿಂದ ಸನ್ಮಾರ್ಗದಲ್ಲಿ ಮುಂದುವರೆಯುವ ಬಗೆ ಗೊತ್ತಾಗುವದು. ದುಷ್ಟರ ದರ್ಶನ, ಸ್ಪರ್ಶನ, ಸಂಭಾಷಣೆ, ಸಹವಾಸ, ಸಹಭೋಜನ ಮುಂತಾದವುಗಳಿಂದ ಮಹಾ ಅನರ್ಥವೇ ಉಂಟಾಗುವದು. ದುಷ್ಟರ ಸಹವಾಸದಿಂದ ಮಾನವನ ಬುದ್ಧಿಯು ಹ್ರಾಸವಾಗುವದು.

**"ಬುದ್ಧಿಶ್ಚ ಹೀಯತೇ ಪುಂಸಾಂ ನೀಚೈಃ ಸಹ ಸಮಾಗಮಾತ್ ।**
**ಮಧ್ಯಸ್ಥೈ ರ್ಮಧ್ಯತಾಂ ಯಾತಿ ಶ್ರೇಷ್ಠತಾಂ ಯಾತಿ ಚೋತ್ತಮೈಃ ॥**

ಅಧಮ ಮಾನವರ ಸಮಾಗಮ ಮಾಡಿದರೆ ಬುದ್ಧಿಯು ನಾಶವಾಗುವುದು. ಮಧ್ಯಮ ಜನರ ಸಹವಾಸದಿಂದ ಬುದ್ಧಿಯು ಮಧ್ಯಸ್ಥವಾಗಿರುವದು. ಉತ್ತಮರ ಸಹವಾಸದಿಂದ ಬುದ್ಧಿಯು ಅತ್ಯುತ್ತಮವಾಗಿರುವದು. ಆದ್ದರಿಂದ ನನಗೆ ಇನ್ನು ಮುಂದೆ ನಿನ್ನೊಡನೆ ಕೂಡುವ ಅಥವಾ ಮಾತಾಡುವ ಇಚ್ಛೆಯಿಲ್ಲ. ನೀನು ಯಾವಾಗಲೂ ಬ್ರಾಹ್ಮಣರ ಹಾಗೂ ಜ್ಞಾನಿಗಳ ನಿಂದೆಯನ್ನು ಮಾಡುತ್ತಿರುವಿ. ವೇದ, ಸ್ಮೃತಿ ಮತ್ತು ಧರ್ಮಾರ್ಥಯುಕ್ತ ವಚನ ಇವು ಮೂರನ್ನೂ ಪ್ರಮಾಣವೆಂದು ನೀನು ಮನ್ನಿಸುವುದಿಲ್ಲ. ಇಂಥ ನಾಸ್ತಿಕನಾದ ನಿನ್ನ ಮಾತನ್ನು ನಾನು ಹೇಗೆ ಮನ್ನಿಸಬೇಕು? ನಿನ್ನಂಥ ದೇವದ್ರೋಹಿ, ಧರ್ಮದ್ವೇಷಿ, ವೇದನಿಂದಕರೊಡನೆ ಮಾತನಾಡುವದು ಕೂಡ ಮಹಾಪಾಪ".

ಮಹಾತ್ಮನಾದ ನಂದಭದ್ರನು ಸತ್ಯವ್ರತನಿಗೆ ಹೀಗೆ ಹೇಳಿ ಅಲ್ಲಿಂದ ಎದ್ದು ಬಿಟ್ಟನು. ತನ್ನ ಮನೆಯನ್ನು ಬಿಟ್ಟು ಹೊರಗೆ ಹೊರಟು ಬಿಟ್ಟನು, ಅಲ್ಲಿಂದ ಹೊರಟು ನೇರವಾಗಿ ಭಟ್ಟಾದಿತ್ಯನ ಪರಮ ಪಾವನವಾದ ಬಹೂದಕ ತೀರ್ಥಕ್ಕೆ ಬಂದು ಮುಟ್ಟಿದನು.

**ನಾರದ :** ಅನಂತರ ಪರಮ ಬುದ್ಧಿವಂತನಾದ ನಂದಭದ್ರನು ಬಹೂದಕ ತೀರ್ಥದಲ್ಲಿ ಮಿಂದನು. ಅಲ್ಲಿಯೇ ತೀರದಲ್ಲಿ ಕಪಿಲೇಶ್ವರ. ಆ ಲಿಂಗದಲ್ಲಿ ಸದಾಶಿವನ ನಿತ್ಯ ಸನ್ನಿಧಾನ. ಅತ್ಯಂತ ಭಕ್ತಿಯಿಂದ ಮಾಡಿದನು ಆ ಕಪಿಲೇಶ್ವರನ ಪೂಜೆಯನ್ನು. ಶ್ರದ್ಧೆಯಿಂದ ಕೈ ಜೋಡಿಸಿದ. ನಮ್ರತೆಯಿಂದ ತಲೆ ಬಾಗಿಸಿದ. ಆ ಶಿವಲಿಂಗದ ಎದುರು ಮೈ ಬಾಗಿ ನಿಂತ. ವಿಕೃತವಾದ ಈ ಸಾಂಸಾರಿಕ ಚಿತ್ರವನ್ನು ನೋಡಿ ಅವನ ಹೃದಯವು ದುಃಖಿತವಾಗಿತ್ತು. ಸಾಕ್ಷಾತ್ ಪರಮೇಶ್ವರನ ದರ್ಶನವಾದರೆ ಅವನನ್ನೇ ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದು ಅವನು ನಿರ್ಧರಿಸಿದ್ದ. ಭಗವಂತನ ಭೇಟಿಯಾದಾಗ ಅವನಿಗೆ ಹಾಕುವ ಸವಾಲುಗಳನ್ನು ತನ್ನ ಮನಸ್ಸಿನಲ್ಲಿಯೇ ಅವನು ಸಿದ್ಧಪಡಿಸಿಕೊಂಡಿದ್ದ. ''ಭಗವನ್! ನೀನು ಶುದ್ಧ. ಪರಿಪೂರ್ಣ. ಈ ಜಗತ್ತೆಲ್ಲವನ್ನೂ ನೀನೇ ಸೃಷ್ಟಿ ಮಾಡಿರುವೆಯಲ್ಲವೆ? ಅಂದಬಳಿಕ ಈ ಎಲ್ಲ ಜಗತ್ತನ್ನು ನಿನಗೆ ಸಮಾನವಾದುದನ್ನೇ ಏಕೆ ಮಾಡಲಿಲ್ಲ? ಎಲ್ಲ ಚೇತನರನ್ನೂ ರಾಗದ್ವೇಷಾದಿಗಳಿಂದ ರಹಿತರಾದ ವೀತರಾಗ ಪೂತಾತ್ಮರನ್ನಾಗಿಯೇ ಏಕೆ ನಿರ್ಮಿಸಲಿಲ್ಲ? ನೀನು ಶುದ್ಧ. ನಿರ್ದುಷ್ಟ, ಆದರೆ ನೀನು ನಿರ್ಮಿಸಿದ ಈ ಜಗತ್ತು ಮಾತ್ರ ಅಶುದ್ಧ, ಅಪದ್ಧ, ಅಪ್ರಾಮಾಣಿಕ, ದುಷ್ಟ ಭ್ರಷ್ಟ, ಆಗಿದೆ. ಈ ವೈಪರೀತ್ಯವೇಕೆ? ನೀನು ದೋಷ ದೂರ, ಗುಣಗಳ ಗಣಿ, ನಿರ್ವೈರ, ಸಮದರ್ಶಿ, ಆದರೆ, ನೀನು ಸೃಷ್ಟಿಸಿದ ಈ ಪ್ರಾಣಿಗಳೆಲ್ಲರೂ ವೈರ ದ್ವೇಷ, ಭಾವನಾಪೂರ್ಣರೂ ಪಕ್ಷಪಾತಿಗಳೂ ಆಗಿದ್ದಾರೆ. ನೀನು ನಿರ್ದುಃಖ ಆದರೆ ನಿನ್ನಿಂದ ಸೃಷ್ಟವಾದ ಜಗತ್ತಿನಲ್ಲಿ ಮಹಾದುಃಖ. ನೀನು ದೋಷರಹಿತ. ನೀನು ಸೃಷ್ಟಿಸಿದವರೆಲ್ಲ ದೋಷಸಹಿತ. ಇದು ಹೀಗೇಕೆ? ಎಲ್ಲರನ್ನೂ ನಿನ್ನಂತೆ ನಿರ್ದುಷ್ಟರನ್ನೂ ಸದ್ಗುಣ ಪರಿಪುಷ್ಟರನ್ನೂ ಆನಂದಪೂರ್ಣರನ್ನೂ ಆಗಿ ಏಕೆ ನಿರ್ಮಿಸಲಿಲ್ಲ? ಕ್ಷೇಮಂಕರನಾದ ಶಂಕರ ! ನಿನ್ನ ಈ ಚಿತ್ರ ವಿಚಿತ್ರವಾದ ಚರ್ಯೆಯಿಂದ ನಾನು ಚಕಿತನಾಗಿದ್ದೇನೆ. ನಾನು ಇನ್ನು ಮೇಲೆ ಬೇರೆ ಎಲ್ಲಿಗೂ ಹೋಗುವದಿಲ್ಲ. ಅನ್ನ ನೀರು ಮುಟ್ಟುವದಿಲ್ಲ. ಇಲ್ಲಿಯೇ ಪ್ರಾಯೋಪವೇಶಕ್ಕೆ ಕೂಡುವೆ, ಪರಿಪೂರ್ಣ ಆದ ದೇವರ ಸೃಷ್ಟಿಯಲ್ಲಿ ಈ ಅಪೂರ್ಣತೆ, ಕುಂದುಕೊರತೆ, ವೈಷಮ್ಯ ಏಕೆ? ಎಂದು ವಿಚಾರಿಸುತ್ತ ಮೃತ್ಯು ಬರುವವರೆಗೂ ಇರುತ್ತೇನೆ.''

ಹೀಗೆ ನಂದಭದ್ರನು ಶಿವಲಿಂಗದ ಎದುರು ಬದ್ಧಪದ್ಮಾಸನದಲ್ಲಿ ಕುಳಿತು ಭಗವಂತನಿಗೆ ಒಂದು ಸವಾಲನ್ನೇ ಹಾಕಿದ್ದ. ಮೂರು ದಿನ ಹೀಗೆ ಉಪವಾಸದಲ್ಲಿ ಉರುಳಿದವು. ನಾಲ್ಕನೆಯ ದಿನ ಅರುಣ ಉದಿಸಿದ. ನಂದಭದ್ರನು ಹಾಸಿಗೆಯಿಂದ ಎದ್ದನು. ಅರುಣೋದಯದಲ್ಲಿ ಎದ್ದು ಸ್ನಾನ ಮಾಡುವುದು ಅವನ ರೂಢಿ. ಅಂದೂ ಆದರಂತೆ ಎದ್ದ. ಬಹೂದಕದ ಸುಂದರ ತಟಾಕಕ್ಕೆ ಬಂದ. ಅಲ್ಲಿ ಒಬ್ಬ ಏಳು ವರ್ಷದ ಬಾಲಕ. ಕಾಡಿಗೆಯಂತೆ ತಲೆಯ ಮೇಲೆ ಕಪ್ಪು ಮುಂಗುರುಳು, ಸುಂದರ ಶರೀರ, ಆದರೆ ಮಾಡುವುದು ಏನು ! ಆ ಹುಡುಗನ ಮೈತುಂಬ ತೊನ್ನು. ಆದ್ದರಿಂದ ಅವನಿಗೆ ಹೆಜ್ಜೆ ಹೆಜ್ಜೆಗೂ ಮೂರ್ಛೆ. ಎಚ್ಚರಿದ್ದಾಗಲೆಲ್ಲ ಮೈತುಂಬ ಉರಿ ಸಂಕಟ. ಇಷ್ಟಾದರೂ ಆ ಹುಡುಗನು ಬಹಳ ಕಷ್ಟದಿಂದ ತನ್ನ ದುಃಖಗಳನ್ನೆಲ್ಲ ನುಂಗಿಕೊಂಡು ನಂದಭದ್ರನನ್ನು ಕೇಳಿದನು.

**ಬಾಲಕ :** ''ಭದ್ರಪುರುಷನೆ ! ನಿನ್ನ ಅಂಗಾಂಗಗಳೆಲ್ಲವೂ ಸುಂದರವಾಗಿವೆ ಹಾಗೂ ಆರೋಗ್ಯದಿಂದಿವೆ. ಬಲಿಷ್ಠವಾಗಿವೆ, ಆದರೂ ನೀನು ದುಃಖಿತನಂತೆ ಕಾಣುವೆ. ಇದಕ್ಕೆ ಕಾರಣವೇನು?'' ಆ ಬಾಲಕನ ಪ್ರಶ್ನೆಯನ್ನು ಕೇಳಿ ನಂದಭದ್ರನಿಗೆ ಎಷ್ಟೋ ಸಮಾಧಾನವಾಯಿತು. ನನ್ನ ದುಃಖದ ಆಳವನ್ನು ಅರಿತು ಒಬ್ಬನಾದರೂ ಆ ಕುರಿತು ನನ್ನನ್ನು ವಿಚಾರಿಸಿದನಲ್ಲ ಎಂದು ಅವನು ಆ ಬಾಲಕನಿಗೆ ತನ್ನ ದುಃಖದ ಕಾರಣಗಳನ್ನೆಲ್ಲ ವಿವರಿಸಿ ಹೇಳಿದ. ಈ ವಿಚಿತ್ರವಾದ ಜಗತ್ತಿನಲ್ಲಿ ಪಾಪಿಗಳನ್ನು ಅವರ ಪಾಪಕೃತ್ಯಗಳನ್ನೂ ನೋಡುತ್ತ ಕೂಡುವದಕ್ಕಿಂತ ಸಾಯುವದೇ ಮೇಲು ಎನಿಸಿದೆ ಎಂದು ತನ ಸಂಕಲ್ಪವನ್ನು ಅವನಿಗೆ ತಿಳಿಸಿಕೊಟ್ಟ. ಅದನ್ನು ಕೇಳಿ ಆ ಏಳು ವರ್ಷದ ಬಾಲಕನಿಗೂ ಬಹಳ ದುಃಖವಾಯಿತು. ಅವನು ನಂದಭದ್ರನನ್ನು ಸಂತೈಸುತ್ತ ನುಡಿದ- ''ಅಯ್ಯಾ ! ವಿದ್ವಾನ್ ಪುರುಷರೂ ಕೂಡ ತಮ್ಮ ಕರ್ತವ್ಯವೇನು ಎನ್ನುವುದನ್ನು ತಿಳಿದುಕೊಳ್ಳಲಾರದಷ್ಟು ಮೂರ್ಖರಾಗಿದ್ದಾರೆ. ಇದು ನಿಜವಾಗಿಯೂ ನನಗೆ ಬಹಳ ದುಃಖವೆನಿಸಿದೆ. ನೀನು ಬದುಕುವದಕ್ಕಿಂತ ಸಾಯುವದೇ ಮೇಲು ಎಂಬ ನಿರ್ಣಯಕ್ಕೆ ಬರಲು ಸರಿಯಾಗಿ ವಿಚಾರ ಮಾಡದಿರುವದೇ ಕಾರಣ. ಇನ್ನೂ ನನಗೆ ಅತ್ಯಾಶ್ಚರ್ಯ ಹಾಗೂ ಅತಿ ದುಃಖವಾಗುವದಕ್ಕೆ ಕಾರಣವೆಂದರೆ ಶರೀರವು ನೀರೋಗವಾಗಿದ್ದು ಇಂದ್ರಿಯಗಳೆಲ್ಲವೂ ಸರಿಯಾಗಿ ಇದ್ದು, ಅಂಗಾಂಗಗಳೆಲ್ಲವೂ ಗಟ್ಟಿ ಮುಟ್ಟಿಯಾಗಿ ಇದ್ದಾಗಲೂ ತಿಳಿವಳಿಕೆಯುಳ್ಳ ಮಾನವರೂ ಕೂಡ ಸಾಯಬೇಕು ಎಂಬ ಇಚ್ಛೆಯನ್ನು ಮಾಡುತ್ತಾರೆ. ನೀನು ಕೇಳಿಲ್ಲವೇ ! ಹಿಂದೆ ಖಟ್ವಾಂಗ ಎಂಬ ರಾಜರ್ಷಿಯು ಎರಡೇ ಎರಡು ಕ್ಷಣಗಳಲ್ಲಿ ಮೋಕ್ಷಮಾರ್ಗವನ್ನು ಇದೇ ಭಾರತದಲ್ಲಿ ಕಂಡುಕೊಂಡ. ಅದೇ ಭಾರತದಲ್ಲಿ ಜೀವಿಸಿರುವ ಒಂದು ಪ್ರಾಣಿಯು ಅರ್ಥಾತ್ ನಿನ್ನಂಥವನು ಆಯುಷ್ಯವು ಗಟ್ಟಿಯಾಗಿದ್ದರೂ ಈ ಭಾರತ ವರ್ಷವನ್ನೂ ತನ್ನ ಪ್ರಾಣಗಳನ್ನೂ ಬಿಟ್ಟು ಹೋಗಲು ಹೇಗೆ ಸಿದ್ಧನಾಗುವನು ?

ನನ್ನನ್ನೇ ನೋಡು, ನನಗೆ ತಾಯಿ ಇಲ್ಲ, ತಂದೆ ಇಲ್ಲ, ಚೆನ್ನಾಗಿ ನಡೆಯಲು ಕೂಡ ಬರುವದಿಲ್ಲ. ಮೈ ಎಲ್ಲ ಕುಷ್ಠ. ಆ ರೋಗದ ಉಲ್ಬಣತೆಯಿಂದ ನನ್ನ ಒಂದೊಂದೇ ಅವಯವಗಳು ಕೊಳೆತು ಉದುರಿಬೀಳುತ್ತಿವೆ. ಇಷ್ಟಾದರೂ ನಾನು ಒಮ್ಮೆಯೂ ಸಾಯಬೇಕು ಎಂದು ಎಂದೂ ಬಯಸುವದಿಲ್ಲ. ಧೈರ್ಯವಂತನಿಗೆ ಸಕಲ ಸುಖಗಳೂ ಲಭ್ಯ, ಇದು ವೇದವಚನ. ನಿಮ್ಮ ಶರೀರವು ನಿರೋಗಿ ತೇಜಸ್ವಿಯಾಗಿದೆ ದೃಢತರವಾಗಿದೆ. ನನಗೆ ನಿಮ್ಮಂತೆ ಆರೋಗ್ಯ ಪ್ರಾಪ್ತವಾದರೆ, ನನಗೆ ಈಗ ಅಂಟಿದ ರೋಗಗಳೆಲ್ಲವೂ ಕಳೆದು ಹೋದರೆ ನಾನು ಕ್ಷಣ ಕ್ಷಣಗಳಲ್ಲಿಯೂ ಸತ್ಕರ್ಮವನ್ನು ಮಾಡುವೆನು, ಸಾಮಾನ್ಯ ಸತ್ಕರ್ಮವಲ್ಲ. ಒಂದುಕ್ಷಣ ಅಂಥ ಸತ್ಕರ್ಮಗಳನ್ನು ಇಂಥ ಕಾಲದಲ್ಲಿ ಭಕ್ತಿಯಿಂದ ಮಾಡಿದರೆ ಯುಗಯುಗಾಂತರಗಳ ವರೆಗೆ ಅದರಿಂದ ಭೋಗಭಾಗ್ಯಗಳನ್ನು ಅನುಭವಿಸುವಂತಾಗುವದರಲ್ಲಿ ಸಂದೇಹವಿಲ್ಲ. ಇಂದ್ರಿಯಗಳು ವಶದಲ್ಲಿದ್ದು, ಬುದ್ಧಿ ಸ್ವಾಧೀನವಿದ್ದು, ವಿವೇಕವಿದ್ದು, ಶರೀರವು

ಗಟ್ಟಿಮುಟ್ಟಿಯಾಗಿದ್ದರೆ ಅಂಥ ಮಾನವನು ಅಧ್ಯಾತ್ಮ ಸಾಧನೆಯನ್ನು ಬಿಟ್ಟು ಬೇರೆ ವಸ್ತುವನ್ನು ಬಯಸಿದರೆ, ಕ್ಷುದ್ರ ಹೇಯ ಸುಖಕ್ಕೆ ಹಂಬಲಿಸಿದರೆ ಅವನಂಥ ಮೂರ್ಖನು ಯಾರು ?

**"ಶೋಕಸ್ಥಾನ ಸಹಸ್ರಾಣಿ ಹರ್ಷಸ್ಥಾನ ಶತಾನಿ ಚ**
**ದಿವಸೇ ದಿವಸೇ ಮೂಢಮಾವಿಶಂತಿ ನ ಪಂಡಿತಮ್ ॥**

ಮೂರ್ಖ ಮಾನವನಿಗೆ ಅನುದಿನವೂ ಸಾವಿರ ದುಃಖದ ಸಂದರ್ಭಗಳೂ, ನೂರಾರು ಸಂತೋಷದ ಪ್ರಸಂಗಗಳೂ ಬಂದು ಹೋಗುತ್ತವೆ. ಬಲ್ಲವರಿಗೆ ಇದಾವುದೂ ಇಲ್ಲ. ಮೂರ್ಖನು ತನಗೆ ದೇವರು ಕೊಟ್ಟ ಜ್ಞಾನಶಕ್ತಿ ಇಂದ್ರಿಯ ಶಕ್ತಿಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಲಾರದೇ ಹೆಜ್ಜೆ ಹೆಜ್ಜೆಗೂ ದುಃಖವನ್ನು ಅನುಭವಿಸುತ್ತಾನೆ.

## ವಿವೇಕಿ ಯಾರು ? ಅವಿವೇಕಿ ಯಾರು ?

ವಿವೇಕಿಯಾದ ಮಾನವನು ತನ್ನ ಬುದ್ಧಿಯ ಬಲದಿಂದ ಕರ್ತೃತ್ವದ ಶಕ್ತಿಯಿಂದ ತನಗೆ ಎದುರಾದ ವಿಘ್ನ, ವೈಷಮ್ಯ, ವಿರೋಧ, ವೈರಸ್ಯ ವೈಪರೀತ್ಯಗಳನ್ನೆಲ್ಲ ಪರಿಹಾರ ಮಾಡಿಕೊಂಡು ಸುಖವನ್ನೇ ದೇವರ ಸೇವೆಯಿಂದ ಸಾಧಿಸುವನು. ಶ್ರುತಿ ಸ್ಮೃತಿಗಳನ್ನು ಅನುಸರಿಸಿಕೊಂಡು ಹೋಗುವ ನಿಮ್ಮಂಥ ನಿರ್ಮಲ ಬುದ್ಧಿಯ ಮಾನವರು ಸಂಕಟಗಳಿಗೆ ಹೆದರುವದಿಲ್ಲ. ಆಕಸ್ಮಿಕವಾಗಿ ಬಂದ ಕುತ್ತು ವಿಪತ್ತುಗಳಿಂದ ತಮ್ಮ ಮಾನಸಿಕ ಸಮತೋಲನವನ್ನು ಎಂದೂ ಕಳೆದುಕೊಳ್ಳುವದಿಲ್ಲ. ನಿಜವಾದ ಪಂಡಿತನು ತನಗೆ ಪ್ರಾಪ್ಯ ಅಥವಾ ಅಪ್ರಾಪ್ಯವಾದ ವಸ್ತುವನ್ನು ಪಡೆಯಬೇಕೆಂದು ಬಯಸುವದಿಲ್ಲ. ನಷ್ಟವಾದ ವಸ್ತುಗಳ ಬಗ್ಗೆ ದುಃಖವನ್ನೂ ಮಾಡುವದಿಲ್ಲ. ಈ ಜಗತ್ತೆಲ್ಲವೂ ಮಾನಸಿಕ ಹಾಗೂ ಶಾರೀರಿಕ ದುಃಖದಿಂದ ಪೀಡಿತವಿರುತ್ತದೆ. ಈ ಎರಡೂ ವಿಧವಾದ ದುಃಖಗಳ ಉಪಶಮನದ ಉಪಾಯವನ್ನು ಹೇಳುತ್ತೇನೆ ಕೇಳು.

## ದುಃಖದ ಕಾರಣ, ಪರಿಹಾರದ ಸೂತ್ರ

ರೋಗ, ಅನಿಷ್ಟ ವಸ್ತುವಿನ ಸಂಯೋಗ, ಇಷ್ಟ ವಸ್ತುವಿನ ವಿಯೋಗ ಹಾಗೂ ಪರಿಶ್ರಮ ಈ ನಾಲ್ಕು ಕಾರ್ಯಗಳಿಂದ ಮಾನವನಿಗೆ ಶಾರೀರಿಕ ಹಾಗೂ ಮಾನಸಿಕ ದುಃಖಗಳು ಉತ್ಪನ್ನವಾಗುತ್ತವೆ. ಇದರಲ್ಲಿ ರೋಗ ಮತ್ತು ಪರಿಶ್ರಮ ಇವು ಎರಡೂ ಶಾರೀರಿಕ ದುಃಖಕ್ಕೆ ಕಾರಣ. ಇಷ್ಟವಿಯೋಗ ಅನಿಷ್ಟ ಸಂಯೋಗ ಇವು ಎರಡೂ ಮಾನಸಿಕ ದುಃಖಕ್ಕೆ ಕಾರಣ. ಕಬ್ಬಿಣವು ಕಾಯ್ದಿದ್ದರೆ ಅದರ ಮೇಲೆ ಇಟ್ಟ ಪಾತ್ರೆಯೂ ಕೂಡ ಬಿಸಿಯಾಗಿ ಸುಡುತ್ತದೆ. ಅದೇ ರೀತಿ ಮಾನಸಿಕ ದುಃಖದಿಂದ ಶರೀರವು ಸಂತಪ್ತವಾಗುತ್ತದೆ. ಆದ್ದರಿಂದ ಬೇಗನೇ ಔಷಧಾದಿಗಳಿಂದ ಪ್ರತೀಕಾರ ಮಾಡಿದರೆ ಶಾರೀರಿಕ ದುಃಖವು ಉಪಶಮನವಾಗುವದು. ಅಭಿಮಾನ ತ್ಯಾಗ ಮಾಡಿಬಿಟ್ಟರೆ ಮಾನಸಿಕ ದುಃಖವು ದೂರವಾಗುವದು. ನೀರಿನಿಂದ ಆರಿಸಿದರೆ ಬೆಂಕಿಯು ಶಾಂತವಾಗುವದಿಲ್ಲವೆ? ಇದರಂತೆ ಜ್ಞಾನದಿಂದ ಸರಿಯಾದ ತಿಳುವಳಿಕೆಯಿಂದ

ಮಾನಸಿಕ ದುಃಖವನ್ನು ಶಾಂತ ಮಾಡಬೇಕು. ಮಾನಸಿಕ ದುಃಖವು ಶಾಂತವಾದ ಬಳಿಕ ಶಾರೀರಿಕ ದುಃಖವು ತಾನಾಗಿಯೇ ಶಾಂತವಾಗುತ್ತದೆ.

## ಆಶೆ ಬಿಡು - ಸುಖ ಪಡು

ಮಾನವನ ಶರೀರಕ್ಕೆ ಹಲವಾರು ರೋಗಗಳಿದ್ದಂತೆ ಮನಸ್ಸಿಗೂ ಕೆಲವು ರೋಗಗಳಿವೆ. ರಾಗ, ದ್ವೇಷ, ತೃಷ್ಣಾ ಅರ್ಥಾತ್ ದುರಾಶೆ - ಇವೆಲ್ಲವೂ ಮನೋ ರೋಗಗಳು. ರಾಗದಿಂದಲೇ ಸ್ನೇಹ, ಸ್ನೇಹದಿಂದ ಆಸಕ್ತಿ. ಈ ಸ್ನೇಹಾಸಕ್ತಿಗಳಿಂದ ಶೋಕ, ಹರ್ಷ, ಆಯಾಸ, ಮುಂತಾದವುಗಳು ಉಂಟಾಗುತ್ತವೆ. ಸ್ನೇಹವನ್ನು ತ್ಯಜಿಸಿಬಿಟ್ಟರೆ ಆಸಕ್ತಿಯು ಕಡಿಮೆ ಆಗುತ್ತದೆ. ಅದರಿಂದ ದುಃಖವು ತಾನಾಗಿಯೇ ದೂರವಾಗುವುದು. ಈ ಸ್ನೇಹ ತ್ಯಾಗವನ್ನು ಮಾಡಿದ್ದರಿಂದಲೇ ಜ್ಞಾನಿಗಳು, ಸಿದ್ಧ ಪುರುಷರು ದುಃಖಾತೀತರಾಗಿರುತ್ತಾರೆ. ರಾಗ, ಸ್ನೇಹ , ಆಸಕ್ತಿಗಳಿಂದ ಅಭಿಭೂತನಾದ ಮಾನವನ ಮನಸ್ಸಿನಲ್ಲಿ ಕಾಮ ಮತ್ತು ಭೋಗೇಚ್ಛೆಗಳು ಉತ್ಪನ್ನವಾಗುತ್ತವೆ. ಆ ಇಚ್ಛೆಯಿಂದ ಮಾನವನಲ್ಲಿ ತೃಷ್ಣಾ ಅಥವಾ ಲೋಭವು ಉತ್ಪನ್ನವಾಗುತ್ತದೆ. ಆ ತೃಷ್ಣೆಯಿಂದ ಅಧರ್ಮಕ್ಕೆ ಹತ್ತು ಮುಖಗಳು ಮೂಡಿ ನಿಲ್ಲುತ್ತವೆ.

**ತೃಷ್ಣಾ ಹಿ ಸರ್ವ ಪಾಪಿಷ್ಠಾ ನಿತ್ಯೋದ್ವೇಗಕರೀ ಮತಾ ।**
**ಅಧರ್ಮಬಹುಲಾ ಚೈವ ಘೋರರೂಪ ಬಂಧಿತಾ ॥**

**ಯಾ ದುಸ್ತ್ಯಜಾ ದುರ್ಮತಿಭಿರ್ಯಾನ ಜೀರ್ಯತಿ ಜೀ ರ್ಯತಃ ।**
**ಯಾಽ ಸೌ ಪ್ರಾಣಾಂತಕೋ ರೋಗಸ್ತಾಂ ತೃಷ್ಣಾಂ ತ್ಯಜತಸ್ಸುಖಮ್ ॥**

ತೃಷ್ಣೆಯು ಎಲ್ಲಕ್ಕಿಂತಲೂ ಹೆಚ್ಚಿನ ಪಾಪ ಸಾಧನವಾದ ದುರ್ಗುಣ. ಅದರಿಂದ ಮಾನವರಿಗೆ ನಿತ್ಯವೂ ಉದ್ವೇಗ - ಈ ತೃಷ್ಣೆಯಿಂದಲೇ ಅನೇಕ ಅಧರ್ಮ ಕಾರ್ಯಗಳನ್ನು ಮನುಷ್ಯನು ಮಾಡುತ್ತಾನೆ. ಈ ತೃಷ್ಣೆಯ ರೂಪವೇ ನಿಜವಾಗಿ ಭೀಕರವಾಗಿದೆ. ದುರ್ಮತಿಗಳು ಇದನ್ನು ಎಂದೂ ಬಿಡಲಾರರು. ಮಾನವನು ಮುಪ್ಪಾದರೂ ತೃಷ್ಣೆಯು ಮಾತ್ರ ಮುಪ್ಪಾಗುವುದಿಲ್ಲ. ಅವನ ಮುಪ್ಪಿನಲ್ಲಿ ಆಶೆಗೆ ಒಳ್ಳೆ ಹರೆಯ. ಈ ಆಶೆ ಎನ್ನುವುದೇ ಒಂದು ದೊಡ್ಡ ರೋಗ. ಒಮ್ಮೊಮ್ಮೆ ಪ್ರಾಣಾಂತಿಕವೂ ಆಗುವುದುಂಟು. ಈ ತೃಷ್ಣಾ ರೋಗ. ಇದನ್ನು ಪೂರ್ಣ ಬಿಟ್ಟವನಿಗೆ ಪೂರ್ಣ ಸುಖ. ಆದುದರಿಂದ ಮಾನವನು ಜ್ಞಾನದಿಂದ ಹಾಗೂ ಇಂದ್ರಿಯ ಸಂಯಮದಿಂದ ಈ ಮನೋರೋಗವನ್ನು ಕಡಿಮೆ ಮಾಡಿಕೊಳ್ಳಬೇಕು. ಮನಶ್ಶಾಂತಿಯ ಮೂಲಕ ದೈಹಿಕ ರಾಗ ರೋಗಾದಿಗಳನ್ನು ಕಡಿಮೆ ಮಾಡಿಕೊಳ್ಳಬೇಕು.

## ಒಂದು ಮಾರ್ಮಿಕ ಪ್ರಶ್ನೆ

**ನಂದಭದ್ರ :** ಬುದ್ಧಿವಂತನಾದ ಬಾಲಕನೆ ! ಈ ಲೋಕದಲ್ಲಿ ಪಾಪಿಗಳು ಅನೇಕ ಅನ್ಯಾಯದ ಮತ್ತು ಅಧರ್ಮದ ಕೆಲಸಗಳನ್ನು ಮಾಡಿದರೂ ಹೆಣ್ಣು, ಹೊನ್ನು ಮುಂತಾದ ಸುಖೋಪಭೋಗಸಾಮಗ್ರಿಗಳಿಂದ ಆನಂದಾನುಭವವನ್ನು

ಹೊಂದುತ್ತಾರೆ. ನಿರಾತಂಕವಾಗಿ ಜೀವಿಸುವರು. ಧರ್ಮ, ಕರ್ಮ, ಪುಣ್ಯ ಕಾರ್ಯಗಳನ್ನು ಮಾಡುವವರು ಕಷ್ಟಪಡುತ್ತ ದುಃಖ ಜೀವನವನ್ನು ನಡೆಸುವರು. ಇದು ಹೇಗೆ?

## ಸಮಂಜಸ ಸಮಾಧಾನ

**ಬಾಲಕ** : ಪೂರ್ವ ಜನ್ಮದಲ್ಲಿ ಯಾರು ತಾಮಸಭಾವದಿಂದ ದಾನ ಧರ್ಮಗಳನ್ನು ಮಾಡಿರುವರೋ ಅವರಿಗೆ ಈ ಜನ್ಮದಲ್ಲಿ ಆ ತಾಮಸ ದಾನದ ಫಲವು ಅನುಭವಕ್ಕೆ ಬಂದಿರುತ್ತದೆ. ಆದರೆ ಅವರ ಹಿಂದಿನ ಕರ್ಮವು ತಾಮಸವಾದುದರಿಂದ ಅವರಿಗೆ ಧರ್ಮದಲ್ಲಿ ಅನುರಾಗವು ಮಾತ್ರ ಹುಟ್ಟುವುದಿಲ್ಲ. ಈ ಜನ್ಮದಲ್ಲಿ ಪುಣ್ಯಫಲವನ್ನು ಅನುಭವಿಸಿ, ಆ ಮಾನವನು ಮುಂದೆ ತನ್ನ ಆ ತಾಮಸ ದಾನದ ಫಲವಾಗಿ ನರಕದಲ್ಲಿಯೇ ಬೀಳುತ್ತಾನೆ. ಇದರಲ್ಲಿ ಸಂಶಯವಿಲ್ಲ. ಈ ವಿಷಯದಲ್ಲಿ ಪೂರ್ವಕಾಲದಲ್ಲಿ ಮಾರ್ಕಂಡೇಯರು ಒಂದು ಮಾತನ್ನು ಹೇಳಿದ್ದಾರೆ. ಅದನ್ನು ಹೇಳುತ್ತೇನೆ ಕೇಳು : ಈ ಪ್ರಪಂಚದಲ್ಲಿ ನಾಲ್ಕು ಬಗೆಯ ಮಾನವರು ಇರುತ್ತಾರೆ.

1) ಕೆಲವು ಮನುಷ್ಯರಿಗೆ ಈ ಲೋಕದಲ್ಲಿ ಸುಖ, ಭೋಗ, ಐಶ್ವರ್ಯ, ಸಮೃದ್ಧಿ ಆದರೆ ಪರಲೋಕದಲ್ಲಿ ಏನೂ ಇಲ್ಲ.

2) ಈ ಎರಡನೆಯ ಬಗೆಯ ಮನುಷ್ಯರಿಗೆ ಪರಲೋಕದಲ್ಲಿ ಯಥೇಚ್ಛ ಭೋಗೋಪಭೋಗ, ಸುಖ, ಸಮೃದ್ಧಿ, ಆದರೆ ಈ ಲೋಕದಲ್ಲಿ ಯಾವ ಸುಖವೂ ಇಲ್ಲ.

3) ಮೂರನೆಯ ವರ್ಗದ ಮನುಷ್ಯರಿಗೆ ಇಲ್ಲಿ ಬದುಕಿ ಇರುವವರೆಗೆ ಸೌಖ್ಯ, ಸಮೃದ್ಧಿ, ತೃಪ್ತಿ, ಆನಂದಾನುಭವ, ಪರಲೋಕದಲ್ಲಿಯೂ ಸಂಪೂರ್ಣ ಸುಖೋಪಭೋಗ. ಹೀಗೆ ಇಲ್ಲಿಯೂ ಅಲ್ಲಿಯೂ ಎರಡೂ ಕಡೆ ಸುಖೋಪಭೋಗ ಈ ವರ್ಗದ ಸುದೈವಿ ಮಾನವರಿಗೆ.

4) ನಾಲ್ಕನೆಯ ಶ್ರೇಣಿಯಲ್ಲಿ ಬರುವ ನರರಿಗೆ ಈ ಲೋಕದಲ್ಲಿಯೂ ಸುಖವಿಲ್ಲ. ಆ ಲೋಕದಲ್ಲಿಯೂ ಸುಖವಿಲ್ಲ. ಇಲ್ಲಿ ಅಲ್ಲಿ ಕೂಡಿಯೇ ದುಃಖ.

ಇವರಲ್ಲಿ ಮೊದಲನೆಯ ವರ್ಗದ ಮಾನವರು ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯದ ಫಲವನ್ನು ಈ ಜನ್ಮದಲ್ಲಿ ಅನುಭವಿಸುತ್ತಾರೆ. ಈ ಜನ್ಮದಲ್ಲಿ ಬೇಕಾದಷ್ಟು ಐಶ್ವರ್ಯ, ಅಧಿಕಾರ ದೊರೆತರೂ ಸೌಭಾಗ್ಯ, ಸ್ಥಾನ, ಗೌರವ, ಮಾನಗಳಿದ್ದರೂ ಅವರು ಯಾವ ಪುಣ್ಯ ಸಾಧನವನ್ನೂ ಈ ಜನ್ಮದಲ್ಲಿ ಲಂಪಟರಾಗಿ ಮಾಡುವದಿಲ್ಲ. ಆದುದರಿಂದ ಇವರಿಗೆ ಈ ಜನ್ಮದಲ್ಲಿ ಮಾತ್ರ ಸುಖ. ಪರಲೋಕದಲ್ಲಿ ಇವರಿಗೆ ಕಿಂಚಿತ್ತಾದರೂ ಸುಖವಿಲ್ಲ. ನಿಜವಾಗಿಯೂ ಪುಣ್ಯಕರ್ಮಗಳನ್ನು ಮಾಡಿ ಮುಂದಿನ ಅನೇಕ ಜನ್ಮಗಳಲ್ಲಿಯೂ ಸೌಭಾಗ್ಯ ಸೌಖ್ಯವನ್ನು ಪಡೆಯುವದು ಕೈಯಲ್ಲಿದ್ದರೂ ಸಾಧಿಸಿಕೊಳ್ಳದಿದ್ದ ಈ ಒಂದನೆಯ ವರ್ಗದ ಜನ ಮಂದಭಾಗ್ಯರೇ ಸರಿ. ಇನ್ನು ಎರಡನೆಯ ವರ್ಗದ ಜನರಿಗೆ ಇಲ್ಲಿ ಸುಖವಿಲ್ಲ. ಪರಲೋಕದಲ್ಲಿ ಮಾತ್ರ ಸುಖ. ಏಕೆಂದರೆ ಇವರಿಗೆ ಪೂರ್ವ ಜನ್ಮದ ಸಾಧನವಿಲ್ಲದ್ದರಿಂದ ಈಗ ಸುಖವಿಲ್ಲ. ಆದುದರಿಂದ ಈ ಲೋಕದಲ್ಲಿ ಸುಖವು ಇಲ್ಲ. ಆದರೆ ಇವರು ಈ

ಜನ್ಮದಲ್ಲಿ ಧರ್ಮಿಷ್ಠರಾಗಿ ಕಷ್ಟಪಟ್ಟು ದೇವತಾರಾಧನೆ ಮಾಡಿ ಜಪತಪ, ವ್ರತ, ಉಪವಾಸಗಳಿಂದ ದಾನ ಧರ್ಮ, ಧ್ಯಾನ , ಉಪಾಸನೆ - ಮುಂತಾದವುಗಳಿಂದ ದೇಹದಂಡನೆ ಮಾಡಿ ಇಲ್ಲಿ ಇರುವವರೆಗೆ ಕಷ್ಟಪಡುವರು. ಇವರು ನಿಜವಾಗಿಯೂ ಬುದ್ಧಿವಂತರು. ಇಲ್ಲಿ ಕಷ್ಟಪಟ್ಟರೂ ಜನ್ಮಾಂತರಗಳಲ್ಲಿ ಸಮೃದ್ಧವಾದ ಸುಖೋಪಭೋಗಗಳನ್ನು ಅನುಭವಿಸುವರು.

ಮೂರನೆ ವರ್ಗದ ಮಾನವರು : ಇವರು ಪೂರ್ವ ಜನ್ಮದಲ್ಲಿ ಪುಣ್ಯವನ್ನು ರಾಶಿ ರಾಶಿಯಾಗಿ ಮಾಡಿರುತ್ತಾರೆ. ಅದರ ಫಲವನ್ನು ಈ ಜನ್ಮದಲ್ಲಿ ವಿವಿಧ ಅಧಿಕಾರ, ಐಶ್ವರ್ಯ, ಸ್ಥಾನಮಾನ, ಗೌರವ, ವೈಭವ, ಸಂತಾನ, ಸತೀಮಣಿಯಾದ ಹೆಂಡತಿ ಭೋಗೋಪಭೋಗ - ಮುಂತಾದವುಗಳಿಂದ ಸಮೃದ್ಧವಾದ ಸುಖಮಯ ಜೀವನವನ್ನು ಅನುಭವಿಸುತ್ತಾರೆ. ದೇವರು ಕೊಟ್ಟ ಕಾಲಕ್ಕೆ ಈಗಲೇ ಮತ್ತೆ ಹೇರಳವಾಗಿ ದಾನ, ಧರ್ಮ ಪುಣ್ಯಕರ್ಮಗಳನ್ನು ಹಿಂದಿನಂತೆ ಮತ್ತೆ ಮತ್ತೆ ಮಾಡಿ ಧರ್ಮದಿಂದ ವಿಪುಲವಾದ ಸುಕೃತ ರಾಶಿಯನ್ನೇ ಸಂಪಾದಿಸುತ್ತಾರೆ. ಆದರಿಂದ ಅವರಿಗೆ ಪರಲೋಕದಲ್ಲಿಯೂ ಮುಂದೆ ಸ್ವರ್ಗಾದಿ ಲೋಕ ಪ್ರಾಪ್ತಿ. ಈಗಲೂ ವಿವಿಧ ಭೋಗಾನಂದಗಳ ಅವಾಪ್ತಿ. ಎರಡೂ ಆಗುತ್ತವೆ. ನರಕುಲದಲ್ಲಿ ನಿಜವಾಗಿ ಇವರೇ ಭಾಗ್ಯವಂತರು. ಇವರದು ಸುಖ ಪ್ರಾರಬ್ಧ, ಇಲ್ಲಿಯೂ ಸುಖ ಅಲ್ಲಿಯೂ ಸುಖ ; ಈಗಲೂ ಭೋಗ ಆಗಲೂ ಭೋಗ.

ಇನ್ನು ನಾಲ್ಕನೆಯ ವರ್ಗದ ಜನರು ಅತ್ಯಂತ ದುರ್ದೈವಿಗಳು. ಅವರು ಹಿಂದೆ ಪುಣ್ಯ ಮಾಡಲಿಲ್ಲ. ಆದರಿಂದ ಈಗ ಅವರಿಗೆ ಸುಖವಿಲ್ಲ. ಈ ಜನ್ಮದಲ್ಲಿ ಅವರ ಪಾಲಿಗೆ ಕೇವಲ ದುಃಖ ಮಾತ್ರ. ಈಗ ಸಮೃದ್ಧಿಯಿಲ್ಲದ್ದರಿಂದ ಯಾವುದೇ ಪುಣ್ಯ ಕಾರ್ಯ ಅಥವಾ ಸತ್ಕಾರ್ಯ ದಾನ ಧರ್ಮ ಹರಿಗುರುಗಳ ಸೇವೆ ಭಗವದಾರಾಧನೆ, ವ್ರತ ಉಪವಾಸ ಮುಂತಾದವುಗಳನ್ನು ಕೊಂಚವೂ ಮಾಡದೇ ಇರುವದರಿಂದ ಅವರಿಗೆ ಪರಲೋಕದಲ್ಲಿಯೂ ಪರಜನ್ಮದಲ್ಲಿಯೂ ಸುಖದ ಸುದ್ದಿಯೇ ಇಲ್ಲ. ಅಂಥವರಿಗೆ ಇಲ್ಲಿಯೂ ದುಃಖ. ಅಲ್ಲಿಯೂ ದುಃಖ. ಅವರು ಇತೋ ಭ್ರಷ್ಟ, ತತೋ ಭ್ರಷ್ಟ ನಿಜವಾಗಿಯೂ ಈ ನಾಲ್ಕನೆ ವರ್ಗದ ಜನರು ಅಧಮಾಧಮರು ನರಾಧಮರು. ಇಂಥ ನರಾಧಮರಿಗೆ ಧಿಕ್ಕಾರ. ಅವರ ಜನ್ಮಕ್ಕೆ ಧಿಕ್ಕಾರ. ಅವರ ಜಾತಿಗೇ ತಿರಸ್ಕಾರ. ಅವರ ಬಾಳು ಎಂದೆಂದಿಗೂ ಹಾಳು. ಬದುಕಿನುದ್ದಕ್ಕೂ ಗೋಳು. ಮಹಾಪುರುಷನೇ! ಇದನ್ನೆಲ್ಲ ಅರಿತುಕೊಂಡು ನೀನು ಎಲ್ಲ ಕಾರ್ಯಗಳನ್ನು ಬಿಟ್ಟು ಸದಾಶಿವನ ಧ್ಯಾನ ಮಾಡು. ವರ್ಣಾಶ್ರಮದ ಧರ್ಮಗಳನ್ನು ಪರಿಪಾಲಿಸು. ವರ್ಣಧರ್ಮ, ಆಶ್ರಮಧರ್ಮಗಳ ಪರಿಪಾಲನೆಗಿಂತ ಪುಣ್ಯ ಕರ್ಮವೇ ಇಲ್ಲ. ಯಾವ ಮನುಷ್ಯನು ತನ್ನ ಇಷ್ಟಪ್ರಾಪ್ತಿಯಾದಾಗಲೂ, ಇಷ್ಟ ನಷ್ಟವಾದಾಗಲೂ ಶೋಕ ಮಾಡುವನೋ, ಅಥವಾ ದೇವರು ಕೊಟ್ಟ ಭೋಗಭಾಗ್ಯಗಳಿಂದ ತೃಪ್ತನಾಗುವುದಿಲ್ಲವೋ ಅವನು ಮುಂದೆ ಕಷ್ಟದಲ್ಲಿ ಬೀಳುತ್ತಾನೆ.

**ನಂದಭದ್ರ :** ಮಗು, ನೀನೇನೋ ಚಿಕ್ಕ ಕೂಸಿನ ರೂಪದಿಂದ ಅಜ್ಞನಾದ ನನ್ನ ಸ್ಥೂಲ ದೃಷ್ಟಿಗೆ ಮಗುವಾಗಿ ಕಾಣುವಿ. ಆದರೆ ನಿನ್ನ ಪರಿಪಕ್ವ ವಿಚಾರ, ಪ್ರಗಾಢ ಪಾಂಡಿತ್ಯ, ಪಾಮರರಿಗೂ ತಿಳಿಹೇಳುವ ಜಾಣ್ಮೆ , ಧರ್ಮ ಸೂಕ್ಷ್ಮದ ಅರಿವುಗಳನ್ನು ನೋಡಿದರೆ ನೀನು ಬಾಲಕನಲ್ಲ. ನೀನೊಬ್ಬ ಮಹಾ ಬುದ್ಧಿವಂತನಾದ ಸಾಧು ಸಂತ. ಮಹಾಮಹಿಮೆಯುಳ್ಳ ಮಹಾಂತ. ನೀನು ಚಿಕ್ಕವನಾದರೂ ನಿನಗೆ ನನ್ನ ನಮಸ್ಕಾರ. ಸಾಷ್ಟಾಂಗ ಪ್ರಣಾಮ ಪರಂಪರೆ. ನಿನ್ನನ್ನು ನೋಡಿದಾಗಲೂ ನಿನ್ನ ತತ್ತ್ವಾರ್ಥಭರಿತವಾದ ಉಪದೇಶವನ್ನು ಕೇಳಿದಾಗಲೂ ನನ್ನ ಕೌತುಕಕ್ಕೆ ಕೊನೆ ಇಲ್ಲ. ನಿನ್ನ ನಿಜವಾದ ರೂಪವನ್ನು ತಿಳಿಯಬೇಕೆಂಬ ತವಕ ಈ ನಂದಭದ್ರನಿಗೆ. ನಿನ್ನ ಯಥಾರ್ಥ ಸ್ವರೂಪವನ್ನು ಅರಿಯಲು ನಾನೀಗ ಅತ್ಯಂತ ಉತ್ಸುಕ. ನನ್ನ ಜೀವನದಲ್ಲಿ ಅನೇಕಾನೇಕ ವೃದ್ಧ ಪುರುಷರನ್ನು ನೋಡಿದ್ದೇನೆ. ಅಯುತಾಮಿತ ಸಿದ್ಧ ಪುರುಷರನ್ನು ಕಂಡಿದ್ದೇನೆ. ಆದರೆ ಇಂಥ ಪರಿಪಕ್ವ ಜ್ಞಾನಿಯು ಈ ಲೋಕದಲ್ಲಿ ನನಗೆ ದೊರಕಿಲ್ಲ. ಇಂಥ ಶಾಸ್ತ್ರ ಶುದ್ಧ, ಪ್ರಮಾಣಬದ್ಧವಾದ ಉಪದೇಶವನ್ನು ನಾನು ಇಂದಿನವರೆಗೂ ಕೇಳಲಿಲ್ಲ ಈ ಕಿವಿಗಳಿಂದ. ಇಂಥ ಜ್ಞಾನದ ನಿಧಿಯನ್ನು ಒಮ್ಮೆಯೂ ನೋಡಲಿಲ್ಲ ಈ ಕಣ್ಣುಗಳಿಂದ, ನಿನ್ನಿಂದ ನನ್ನ ಜನ್ಮದ ಎಲ್ಲ ಸಂದೇಹಗಳೂ ದೂರವಾಗಿವೆ. ಜೀವನದ ಸಮಸ್ಯೆಗಳಿಗೆಲ್ಲ ಸಮಂಜಸವಾದ ಪರಿಹಾರ ದೊರಕಿದಂತಾಗಿದೆ. ನೀನು ಯಾರು ಎಂಬುದನ್ನು ಹೇಳುವುದು ಬಿಡುವುದು ನಿನ್ನ ಇಷ್ಟ. ನಾನಂತೂ ನಿಶ್ಚಯಿಸಿ ಬಿಟ್ಟಿರುವೆ. ನೀನೊಬ್ಬ ದೈವೀಪುರುಷ. ಗೂಢ ಯೋಗಿ, ಗುಪ್ತಜ್ಞಾನದ ನಿಧಿ, ಭೂದಿ ಮುಚ್ಚಿದ ಕೆಂಡ, ಮಣ್ಣು ಮೆತ್ತಿದ ಮಣಿ, ತುಂಬಿದ ಕೊಡ.

**ಬಾಲಕ :** ಅಯ್ಯೋ, ನನ್ನದೊಂದು ದೊಡ್ಡ ಕಥೆ. ಗೊಡ್ಡು ಕಥೆ ಕೂಡ. ಅದನ್ನೇ ಕೇಳಲು ನೀನು ಕೌತುಕಪಟ್ಟಿದ್ದೀಯ. ಹೇಳಿಬಿಡುತ್ತೇನೆ ಚಿತ್ತವಿಟ್ಟು ಆಲಿಸು. ಈ ಜನ್ಮದಿಂದ ಹಿಂದೆ ಎಂಟನೇಯ ಜನ್ಮ ಇರಬಹುದು ನನ್ನದು. ಬ್ರಾಹ್ಮಣ ಕುಲದಲ್ಲಿ ನಾನು ಹುಟ್ಟಿದೆನು. ನನ್ನ ನೆನಪು ಇನ್ನೂ ನಿಚ್ಚಳವಾಗಿದೆ. ನನ್ನ ಊರು ಆ ಕಾಲದಲ್ಲಿಯೇ ಸುಪ್ರಸಿದ್ಧವಾದ ವಿದಿಶಾ ಪಟ್ಟಣ. ಆಗ ನನ್ನ ಹೆಸರು ಧರ್ಮಪಾಲಿಕ. ವೇದ ವೇದಾಂಗಳನ್ನೆಲ್ಲ ಅರೆದು ಕುಡಿದಿದ್ದೆ. ಧರ್ಮಶಾಸ್ತ್ರಗಳೆಲ್ಲವೂ ನನ್ನ ಅಂಗೈಯಲ್ಲಿಯ ನೆಲ್ಲಿಕಾಯಿ. ಆ ಕಾಲದಲ್ಲಿ ಬದುಕಿ ಇದ್ದ ಪಂಡಿತ ಮಂಡಲಿಯಲ್ಲಿಯೇ ನಾನು ಪ್ರಚಂಡ. ನನಗೆ ಭೂತಲದ ಬೃಹಸ್ಪತಿ ಎನ್ನುತ್ತಿದ್ದರು ನನ್ನ ಜ್ಞಾನದ ಇತಿಮಿತಿಗಳನ್ನು ತಿಳಿದ ಹಾಗೂ ತಿಳಿಯದ ಜನ. ಪ್ರವಚನ ಅಥವಾ ವ್ಯಾಖ್ಯಾನಕ್ಕೆ ನಿಂತರೆ, ನಾನೊಬ್ಬ ವಸುಧಾ ವಾಚಸ್ಪತಿ. ಜನರೆದುರು ಧರ್ಮದ ವಿಸ್ತಾರವಾದ ವರ್ಣನೆಯನ್ನು ಬಣ್ಣಿಸಿ ಧರ್ಮ ಸೂಕ್ಷ್ಮತೆಯನ್ನು ಎಲ್ಲರಿಗೂ ತಿಳಿಸಿ ಹೇಳುತ್ತಿದ್ದೆ ನನ್ನ ವಾಗ್ವೈಖರಿಯಿಂದ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೂವತ್ತ ಐದನೇಯ ಅಧ್ಯಾಯ ಮುಗಿದುದು.**

# ಹೊರಗೆ ಧರ್ಮಧುರಂದರ, ಒಳಗೆ ಧರ್ಮಬಾಹಿರ

ಅಧ್ಯಾಯ-35

ಇದೆಲ್ಲವೂ ನನ್ನ ಪರೋಪದೇಶ ಪಾಂಡಿತ್ಯ. ಜನರಿಗೆಲ್ಲ ಧರ್ಮದ ಮರ್ಮವನ್ನು ಪರಿಣಾಮಕಾರಿಯಾದ ವಚನ ರಚನೆಯಿಂದ ಬಿಂಬಿಸಿ ಹೇಳುತ್ತಿದ್ದೆ. ಸ್ವಂತಕ್ಕೆ ಮಾತ್ರ ನಾನು ಪೂರ್ಣ ಅನಾಚಾರಿ. ಅನಾಚಾರಿ ಇಷ್ಟೇ ಅಲ್ಲ ದುರಾಚಾರಿ ಕೂಡ. ಮಾಂಸ, ಮದ್ಯ ಯಾವುದೂ ನನಗೆ ನಿಷಿದ್ಧವಾಗಿರಲಿಲ್ಲ. ಪರಸ್ತ್ರೀ ಸಂಗವಂತೂ ನನ್ನ ನಿತ್ಯವ್ಯಸನ. ಪಾಪಿ ಪುರುಷರಿಗೆಲ್ಲ ಒಂದು ದೃಷ್ಟಿಯಿಂದ ನಾನೇ ಅರಸ. ಸುಳ್ಳು, ಮೋಸ, ಲೋಭ, ಶಾಠ್ಯ, ದೌಷ್ಟ್ಯ, ನಾಸ್ತಿಕ್ಯ , ಸ್ವಾರ್ಥಾಂಧತೆ - ಎಲ್ಲ ದುರ್ಗುಣಗಳ ಖಣಿಯೇ ಆಗಿದ್ದೆ. ಆ ಕಾಲದಲ್ಲಿ ಪುಣ್ಯವನ್ನು ಗಳಿಸಲಿಲ್ಲ. ಸ್ವೈರ ಆಚಾರ, ಸ್ವಚ್ಛಂದ ವಿಹಾರ, ಯಥೇಚ್ಛ ಭೋಗ, ರಮಣೀರಾಗ, ಸರ್ವ ಸುಖೋಪಭೋಗ - ಇದೇ ನನ್ನ ಜೀವನದ ಹೆಗ್ಗುರಿ ಆಗಿತ್ತು. ನನ್ನ ಈ ಸ್ವರೂಪವನ್ನು ಬಲ್ಲವರು 'ಧರ್ಮಬಾಹಿರ' ಎಂದು ನನ್ನನ್ನು ಕರೆಯುತ್ತಿದ್ದರು.

## ಪಾಪಿಚೇತನ, ನೂರಾರು ಯಮಯಾತನಾ

ಹೀಗೆ ನಾನು ಬದುಕಿ ಇರುವವರೆಗೂ ಎಲ್ಲ ವಿಧವಾದ ಪಾಪಗಳನ್ನೂ ಮಾಡಿ ಮುಗಿಸಿದೆ. ಎಷ್ಟು ದಕ್ಕೀತು ಪಾಪ? ಅತ್ಯುತ್ಕಟವಾದ ಪಾಪದ ಫಲವನ್ನು ಇಲ್ಲಿಯೇ ಅನುಭವಿಸಬೇಕಾಗುತ್ತದೆಯೆಂದು ಹಿರಿಯರ ನುಡಿ. ಅದರಂತೆ ನಾನು ಮರಣವನ್ನು ಹೊಂದಿದೆ. ಯಮದೂತರು ಪಾಶ ಹಾಕಿ ಜಗ್ಗಿದರು. ಯಮಲೋಕಕ್ಕೆ ಸೆಳೆದೊಯ್ದರು 'ಕೂಟಶಾಲ್ಮಲೀ' ಎಂಬ ಘೋರ ನರಕದಲ್ಲಿ ನನ್ನನ್ನು ಒಗೆದರು. ನಾನು ಮಾಡಿದ ಪಾಪ ಕೃತ್ಯಗಳನ್ನು ಒಂದೊಂದಾಗಿ ನೆನಪಿಗೆ ತಂದು ಕೊಟ್ಟು, ಭರ್ಚಿಯಿಂದ ಒಂದೊಂದು ಏಟು ಕೊಟ್ಟು, ಮುಳ್ಳಿನ ಕಂಟಿಗಳ ಮೇಲೆ ಮೂಳೆಗಳ ಹಾಸಿಕೆಯ ಮೇಲೆ ಆಚೀಚೆ ಎಳೆದಾಡುತ್ತಿದ್ದರು. ಭರ್ಚಿಯಿಂದ ಚುಚ್ಚಿ ನಾಯಿಗಳಿಂದ ಕಚ್ಚಿಸಿ, ಮೇಲೆ ಖಡ್ಗಗಳಿಂದ ಚುಚ್ಚಿ ಕೊಚ್ಚಿ ಚಚ್ಚುತ್ತಿದ್ದರು. ಅಂಗಾಂಗಗಳನ್ನು ಹರಿತವಾದ ಕುಡುಗೋಲುಗಳಿಂದ ಕಡಿಕಡಿದು ಕೊಚ್ಚುತ್ತಿದ್ದರು. ಕ್ಷಣಕ್ಷಣಕ್ಕೂ ಆ ಯಮಯಾತನೆಯನ್ನು ತಾಳದೆ ಮೂರ್ಛೆ, ಮತ್ತೆ ಶುದ್ಧಿ, ಶುದ್ಧಿ ಬಂದ ಕೂಡಲೆ ಒದೆ, ತುಳಿ, ಹೊಡೆ, ಚುಚ್ಚು, ಬಡೆ, ಕೊಲ್ಲು, ಹೆಚ್ಚು, ಕೊಚ್ಚು, ಕಡಿ ಎಂದು ಪ್ರಹಾರಗಳ ವಿವಿಧ ಪ್ರಕಾರಗಳ ಸುರಿಮಳೆ. ಒದೆತ ಹೊಡೆತಗಳ ಸರಮಾಲೆ. ಮೂರ್ಛೆ, ಮತ್ತೆ ಎಚ್ಚರ, ಕ್ಷಣಕ್ಕೊಮ್ಮೆ ಸಾವು, ಕ್ಷಣಕ್ಕೊಮ್ಮೆ ನೋವು. ಹೀಗೆ ಮಾನವರು ನರಕ ಲೋಕದಲ್ಲಿ ಕೊಳೆಯುತ್ತಿರುವಾಗ, ಘೋರ ಯಮಯಾತನೆಯನ್ನು ಅನುಭವಿಸುತ್ತಿರುವಾಗ ಯಾವ ಬುದ್ಧಿ, ಎಂಥ ವಿವೇಕ ತಲೆದೋರುವುದೋ ಅಂಥ ನಿರ್ಮಲ ಬುದ್ಧಿಯು, ನಿರ್ವಿಕಾರ ವಿಚಾರವು, ನಿರ್ದುಷ್ಟ ವಿವೇಕವು ಈ ಮಾನವ ಜನ್ಮದಲ್ಲಿ ಒಮ್ಮೆಯಾದರೂ ಬಂದರೆ ಸಾಕು. ಮನುಷ್ಯ ಧನ್ಯ ಧನ್ಯ. ಆದರೆ ಈ ಭೂಲೋಕದಲ್ಲಿ ಆಹಾರ ವಿಹಾರಗಳಲ್ಲಿ ಮೈ ಮರೆತ ಮಾನವನಿಗೆ ಬುದ್ಧಿ ಹೇಗೆ ಬಂದೀತು?

ಹೀಗೆ ನಾನು ಬಹುಕಾಲ ನಾನಾ ನರಕಗಳಲ್ಲಿ ನರಳಿದೆ. ಬಳಿಕ ಸ್ಥಾವರ ಯೋನಿಯಲ್ಲಿ ಬಹುವರ್ಷ ಗಿಡಗಂಟಿಯಾಗಿ ಬಿಸಿಲು ಮಳೆ ಛಳಿಗಳಲ್ಲಿ ಕ್ಲೇಶಪಟ್ಟೆ. ಜಗದ ಜನರ ಕೊಡಲಿಯ ಪೆಟ್ಟು ತಿಂದು, ಸ್ಮಶಾನ ಕಟ್ಟಿಗೆಯಾಗಿ ಸುಟ್ಟುಹೋಗಿ, ಆ ಸ್ಥಾವರ ಜನ್ಮದಿಂದ ಮುಕ್ತನಾದೆ. ಅನಂತರ ಸರಸ್ವತೀ ನದಿಯ ತೀರದಲ್ಲಿ ನಾನೊಂದು ಹುಳವಾಗಿ ಹುಟ್ಟಿದೆ.

**ಹಿಂದಿನ ಜನ್ಮದ ಹುಳದ ಕಥೆ** : ನನಗೆ ಇನ್ನೂ ಚೆನ್ನಾಗಿ ನೆನಪಿದೆ ನನ್ನ ಈ ಹಿಂದಿನ ಜನ್ಮದ ಆ ಘಟನೆ. ನಾನೊಂದು ಕ್ಷುದ್ರ ಕೀಟವಾಗಿ ಬೀದಿಯ ಬದಿಯಲ್ಲಿ ಬಿದ್ದುಕೊಂಡಿದ್ದೆ. ನಿದ್ದೆ ಹತ್ತಿತ್ತೋ ಏನೋ ! ಅಥವಾ ಅರನಿದ್ರೆ ಇದ್ದರೂ ಇರಬಹುದು. ಒಮ್ಮೆಲೇ ರಭಸದಿಂದ ಬರುವ ಒಂದು ರಥದ ಗಾಲಿಯ ಧಡ ಧಡ ಶಬ್ದ. ಸುಖವಾಗಿ ಬೀದಿಯ ಹುಡಿಯ ಹಾಸಿಗೆಯ ಮೇಲೆ ಹಾಯಾಗಿ ಮಲಗಿದ ನನಗೆ ಆ ತೇರಿನ ಗಾಲಿಯ ಉರುಳುವಿಕೆಯ ಸಪ್ಪಳವನ್ನು ಕೇಳಿ ಭಾರೀ ಹೆದರಿಕೆಯಾಯಿತು. ಆ ಮಾರ್ಗವನ್ನು ಬಿಟ್ಟು ಬಹು ವೇಗದಿಂದ ನಾನು ದೂರ ಓಡತೊಡಗಿದೆ. ಅದೇ ವೇಳೆಯಲ್ಲಿ ಅಲ್ಲಿಗೆ ಯದೃಚ್ಛೆಯಿಂದ ಭಗವಾನ್ ವೇದವ್ಯಾಸರ ಆಗಮನ. ಮಹಾಮುನಿಗಳು ನನ್ನ ಪಲಾಯನ ಸಂಭ್ರಮವನ್ನು ನೋಡಿದರು. ಕರುಣಾರಸವು ಉಕ್ಕಿ ನನ್ನ ಕಡೆ ಹರಿಯಿತು. ಅವರ ದಯಾದೃಷ್ಟಿ ನನ್ನ ಮೇಲೆ ಅಮೃತ ವೃಷ್ಟಿ. ನನ್ನ ಜನ್ಮ ಜನ್ಮಾಂತರದ ಜಾತಕವನ್ನೆಲ್ಲ ಜಾಲಾಡಿ ಬಿಟ್ಟಿತು ಅವರ ಆ ಕ್ಷಣದ ಒಂದು ನೋಟ. ನಾನು ನನ್ನ ಎರಡು ಜನ್ಮಗಳ ಹಿಂದೆ ಬ್ರಾಹ್ಮಣನಾಗಿದ್ದೆ . ಆಗ ಧರ್ಮಶಾಸ್ತ್ರವನ್ನೂ ಪರಿಣಾಮಕಾರಿಯಾಗಿ ಉಪದೇಶ ಮಾಡಿ ಜನರ ಮನಸ್ಸಿನಲ್ಲಿ ಬಿಂಬಿಸಿದ್ದೆ. ಅದು ಅಷ್ಟೇ ಹಿಂದೆ ನಾನು ಮಾಡಿದ ಹಿತೋಪದೇಶ. ಆ ಕಾಲದ ನನ್ನ ಧರ್ಮೋಪದೇಶವನ್ನು ಕೇಳಿ ಪ್ರಭಾವಿತರಾಗಿ ಎಷ್ಟೋ ಜನರು ಧರ್ಮಮಾರ್ಗಕ್ಕೆ ಹತ್ತಿದ್ದರು.

ನನ್ನ ವಾಗ್ವೈಭವದಿಂದ ಮತ್ತು ಧರ್ಮಪ್ರವಚನದಿಂದ ಮುಗ್ಧರಾಗಿ ಜಪಮಾಡಿದವರೆಷ್ಟೋ ! ತಪ ಮಾಡಿದವರೆಷ್ಟೋ! ಧ್ಯಾನ ಸಮಾಧಿಯನ್ನು ಅಂಗೀಕರಿಸಿ ಅತಿಶಯಿತ ಭಕ್ತಿಯಿಂದ ಭಗವಧಾರಾಧನೆ ಮಾಡಿ, ಭಗವಂತನನ್ನು ಸಾಕ್ಷಾತ್ ಆಗಿ ಕಂಡವರೆಷ್ಟೋ ! ಅಧ್ಯಾತ್ಮ ರಸವನ್ನು ಉಂಡವರೆಷ್ಟೋ ! ಅಷ್ಟೆಲ್ಲ ಜನರ ಚಿತ್ತವನ್ನು ದೇವರೆಡೆಗೆ ತಿರುಗಿಸಲು ಸಾಧನವಾಗಿತ್ತು ನನ್ನ ಧರ್ಮೋಪದೇಶ. ಆ ಎಲ್ಲ ಪುಣ್ಯರಾಶಿಯು ಒಟ್ಟೈಸಿದ್ದರಿಂದ ಈಗ ನನಗೆ ಈ ಕೀಟ ಜನ್ಮದಲ್ಲಿ ವೇದವ್ಯಾಸ ದೇವರ ಕಣ್ಣಿಗೆ ನಾನು ಬೀಳುವ ಭಾಗ್ಯ ಒದಗಿ ಬಂದಿತು.

## ಬದುಕಿನ ಬಗೆಯನ್ನೇ ಕೆದಕಿದ ಬಾದರಾಯಣರ ಪ್ರಶ್ನೆ

ಸರ್ವಜ್ಞರು ತಾನೇ ಆ ವ್ಯಾಸಮಹರ್ಷಿ ! ಎಲ್ಲ ಭಾಷೆಗಳನ್ನು ಚೆನ್ನಾಗಿ ಬಲ್ಲರು ಮಹಾಭಾರತ ಬರೆದ ಆ ಮಹಾಮುನಿ. ಕ್ರಿಮಿ ಕೀಟಗಳ ಭಾಷೆಗಳ ಅರಿವು ಅವರಲ್ಲಿ ನಿತ್ಯ ಜಾಗರೂಕ. ನನ್ನ ಆಗಿನ ಆ ಕ್ರಿಮಿ ಭಾಷೆಯಲ್ಲಿಯೇ ಅವರು ನನ್ನನ್ನು ತಡೆದು ನಿಲ್ಲಿಸಿ ಕೇಳಿದರು - ''ಎಲ್ಲವೋ ಕೀಟವೇ ! ಇಷ್ಟೇಕೆ ಓಡುತ್ತಿರುವೆ? ಸಾವಿಗೆ ಇಷ್ಟು ಅಂಜುವುದೆ? ನೀನೊಂದು ಭಾರೀ ಪುಕ್ಕಲು ಪ್ರಾಣಿ. ಮನುಷ್ಯನು ಸಾವಿಗೆ ಹೆದರಿ ಹೌಹಾರಿ ನಿಲ್ಲುವನು. ಅದು ಉಚಿತವೇ. ಮನುಷ್ಯ ಜನ್ಮ ಸುಖೋಪಭೋಗದ ತವರು.

ಆನಂದವನ್ನು ಅನುಭವಿಸಲು ಅದರಲ್ಲಿ ಎಲ್ಲ ವಿಧವಾದ ಸೌಕರ್ಯ, ಸೌವಿಧ್ಯಗಳು ಉಂಟು. ಆದುದರಿಂದ ಅಂಥ ಅಪರೂಪವಾದ ಮಾನವಜನ್ಮ ಹೋದೀತೆಂಬ ಭಯದಿಂದ ಮಾನವನು ಮೃತ್ಯುವಿಗೆ ಹೆದರುವುದೆ ಔಚಿತ್ಯ ಪೂರ್ಣ. ಆದರೆ ಈ ಕೀಳು ಕುಲದ ಕೀಟಗಳು ಏಕೆ ಸಾವಿಗೆ ಹೆದರಬೇಕು। ಅದರಲ್ಲಿ ಏನು ಸುಖ ಇದೆಯೆಂದು ಅವು ಬಯಸಬೇಕು ಬದುಕಲಿಕ್ಕಾಗಿ? ಅಂಥ ಗೋಳಿನ ಬಾಳಿನ ಹಾಳು ಜನ್ಮದಲ್ಲಿ ಬದುಕೇ ಒಂದು ಶಾಪ. ಸಾವೇ ಒಂದು ವರ. ಅಂಥ ಸಾವು ತಾನಾಗಿಯೇ ಒದಗಿ ಬಂದಾಗ ನಿನಗೆ ಹೆದರಿಗೆ ಏಕೆ? ಸತ್ತರೆ ಜನ್ಮ ನೀಗಿತು. ಇದ್ದರೆ ಬಾಳು ಸಾಗಿತು, ಅಂದಬಳಿಕ ನೀನೇಕೆ ಇಂಥ ನಾಗಾಲೋಟದಿಂದ ಓಡತೊಡಗಿರುವೆ?

## ಕೀಟಕೊಟ್ಟ ಉತ್ತರ

ವೇದವ್ಯಾಸ ದೇವರ ಕರುಣ ದೃಷ್ಟಿ ನನ್ನ ಮೇಲೆ ಬಿದ್ದ ಕೂಡಲೇ ನನ್ನಲ್ಲಿ ಪೂರ್ವ ಜನ್ಮದ ಸಂಸ್ಕಾರ ಉದ್ಬುದ್ಧವಾಯಿತು. ಅರಿವು ಮೆರೆಯಿತು. ತಿಳಿವು ತಿಳಿಗಟ್ಟಿತು. ಬುದ್ಧಿ ಜಾಗೃತವಾಯಿತು. ನಾನು ಆ ಯೋಗೀಶ್ವರರ ಅಡಿದಾವರೆಯ ಹುಡಿಯಲ್ಲಿ ಹೊರಳಾಡಿದೆ. ನನ್ನ ಕ್ರಿಮಿ ಭಾಷೆಯಲ್ಲಿಯೇ ಅವರಿಗೆ ಉತ್ತರಿಸಿದೆ. ''ವಿಶ್ವ ವಂದ್ಯರಾದ ವಿಭೂತಿ ಪುರುಷರೇ ! ನನಗೆ ತಮ್ಮ ದಯೆಯಿಂದ ಜ್ಞಾನ ಕೆನೆಗಟ್ಟಿದೆ. ನನಗೆ ಸಾವಿನ ಭಯ ತಿಲ ಮಾತ್ರವೂ ಇಲ್ಲ. ಆದರೆ ನನಗೆ ಇದ್ದ ಭಯ ಒಂದೇ- ಈ ಜನ್ಮದಿಂದ ನಾನು ಮರಣ ಹೊಂದಿದ ಬಳಿಕ ಇದಕ್ಕಿಂತ ಕೆಟ್ಟ ಯೋನಿಯಲ್ಲಿ ಎಲ್ಲಿ ಹೋಗಿ ಬೀಳುವನೋ ಎಂದು . ಈ ನನ್ನ ಕ್ರಿಮಿಜನ್ಮವು ಒಳ್ಳೆಯದೆಂದು ನಾನು ಭಾವಿಸಿಲ್ಲ. ಈ ಕೀಟ ಜನ್ಮವೂ ನನಗೆ ಇಚ್ಛಿತವಲ್ಲ. ಇದು ಕೂಡ ತುಚ್ಛಿತವೇ. ಆದರೆ, ಇದಕ್ಕಿಂತ ತುಚ್ಛಾತಿ ತುಚ್ಛವಾದ ಅಧಮಾಧಮ ಹುಳ ಹುಪ್ಪಡಿಗಳು ಕೋಟಿ ಕೋಟಿ ಉಂಟು ಭಗವಂತನ ಈ ಸೃಷ್ಟಿಯಲ್ಲಿ.

ಇದ್ದುದರಲ್ಲಿಯೇ ನಾನು ಸುಖವಾಗಿ ಇರುವೆ ಈ ಕ್ರಿಮಿ ಜನ್ಮದಲ್ಲಿ. ಹಾಯಾಗಿ ಹಾರಾಡುವೆ. ಸಡಗರದಿಂದ ನಡೆದಾಡುವೆ. ಸ್ವಚ್ಛಂದದಿಂದ ತಿರುಗಾಡುವೆ. ನಿದ್ದೆ ಬಂದಲ್ಲಿ ಮಲಗುವೆ. ನಿನ್ನ ದಯೆಯಿಂದ ನನಗೆ ಈ ಕೀಟ ಜನ್ಮದಲ್ಲಿ ಈ ವರೆಗೂ ಯಾವ ಕೀಟಲೆ ಕಾಟಗಳು ಒದಗಿಲ್ಲ. ಊಟ, ನಿದ್ದೆ, ಆಹಾರ, ವಿಹಾರ, ಯಾವುದಕ್ಕೂ ಕೊರತೆ ಇಲ್ಲ. ಇದಕ್ಕಿಂತ ಕಠಿಣತರವಾದ ಕ್ಷುಲ್ಲಕ ಕ್ಷುದ್ರ ಕೀಟ ಆಗಿ ಜನಿಸುವ ಪ್ರಸಂಗ ಬರಬಾರದು ಎಂದು ಸಾವಿಗೆ ಹೆದರುತ್ತಿದ್ದೇನೆ.

**ವೇದವ್ಯಾಸ :** ಕೀಟವೇ, ನೀನು ಹೆದರಬೇಡ, ನೀನು ಹಿಂದಿನಂತೆ ಪುನಃ ನಿನ್ನ ಬ್ರಾಹ್ಮಣ ಶರೀರವನ್ನು ಪಡೆಯುವವರೆಗೆ ನಿನ್ನ ಪ್ರಾರಬ್ಧವಶದಿಂದ ಅನೇಕ ಯೋನಿಗಳು ಬರಲಿಕ್ಕೆ ಉಂಟು. ಆ ಎಲ್ಲ ಯೋನಿ ಜನ್ಮಗಳಿಂದಲೂ ಬೇಗ ಬೇಗನೇ ಬಿಡುಗಡೆ ಮಾಡುತ್ತೇನೆ. ಒಪ್ಪಿಗೆಯೇ ?

ವ್ಯಾಸ ಮುನಿಗಳ ಈ ವಚನವು ನನ್ನ ಚೇತನಕ್ಕೆ ಒಂದು ದೊಡ್ಡ ಸವಾಲನ್ನು ಒಡ್ಡಿತ್ತು. ನಾನು ಸಂಪೂರ್ಣ ಭರವಸೆಯನ್ನು ಇಟ್ಟಿದ್ದೆ ಆ ಭಗವಂತನ ಮೇಲೆ. ಅವನ ಮಾತು ನನಗೆ ವೇದಕ್ಕಿಂತ ಪ್ರಮಾಣ. ಅಂಬಿಗರ ಹೆಣ್ಣಿನ ಮಗನಾದ ಆ ಬಾದರಾಯಣನನ್ನು ನಾನು ಪೂರ್ಣವಾಗಿ ನಂಬಿದೆ. ಸಾವನ್ನು ಎದುರಿಸಲು

ಸಿದ್ಧನಾದೆ. ಬೀದಿಯಿಂದ ದೂರ ಓಡಿ ಹೋದವ ಮತ್ತೆ ಮರಳಿದೆ. ಮೃತ್ಯು ಕರೆದಿತ್ತು. ಸಾವಿನ ಸಮೀಪಕ್ಕೆ ಬುದ್ಧಿಪೂರ್ವಕವಾಗಿಯೇ ತೆರಳಿದೆ. ರಥ ಬರುವಷ್ಟರಲ್ಲಿ ಬೀದಿಯ ಮಧ್ಯದಲ್ಲಿ ನಾನು ಸಂತೋಷದಿಂದ ಉಪಸ್ಥಿತ. ರಥ ಬಂದಿತು. ಬೀದಿಯಲ್ಲಿ ಉರುಳಿತು. ಆ ಗಾಲಿಯ ಗುರಿಯಿಟ್ಟುಕೊಂಡೇ ನಾನು ಮೃತ್ಯುವಿನ ಅತಿಥಿಯಾಗಿ ಕಾದುಕೊಂಡಿದ್ದೆ. ರಥ ನನ್ನ ಮೈ ಮೇಲೆಯೇ ಹರಿದು ಹೋಯಿತು. ನನ್ನ ಹುಳದ ಜನ್ಮ ತೇರಿನ ಗಾಲಿಯ ಕೆಳಗೆ ನುಚ್ಚು ನೂರು. ತೇರಿನ ಗಾಲಿಯ ಕೆಳಗೆ ಸಿಕ್ಕು ತೀರಿ ಹೋಯಿತು ನನ್ನ ತಿರ್ಯಗ್ ಜನ್ಮ.

## ಜನನ ಮರಣಗಳ ಜಾಲ : ವ್ಯಾಸರ ಕರುಣೆಯ ಲೀಲಾ

ನಾನು ಮುಂದಿನ ಜನ್ಮದಲ್ಲಿ ಕಾಗೆಯಾದೆ. ನರಿಯಾದೆ, ನಂತರ ನಾಯಿ, ಹದ್ದು, ಹಂದಿ ಏನೇನೋ ಆದೆ. ಅದೆಲ್ಲವೂ ನನ್ನ ಪ್ರಾರಬ್ಧದಿಂದ ಒದಗಿ ಬಂದದ್ದು. ಆದರೆ ನನ್ನ ಪ್ರತಿಯೊಂದು ಜನ್ಮದಲ್ಲಿಯೂ ವ್ಯಾಸರು ಮಾತ್ರ ಪ್ರತ್ಯಕ್ಷ ಆಗುತ್ತಿದ್ದರು. ಎಲ್ಲ ಜನ್ಮದಲ್ಲಿಯೂ ಬಾದರಾಯಣರ ಸುಂದರ ಸ್ವರೂಪದ ಸಾಕ್ಷಾತ್ ಸಂದರ್ಶನ. ಪ್ರೀತಿಯ ಹಸ್ತಾವಮರ್ಶನ. ಆದರಿಂದ ನನ್ನ ಎಲ್ಲ ಪಾಪಗಳ ಕರ್ಶನ. ಬಂದಾಗಲೆಲ್ಲ ಆ ಮಹನೀಯರು ನನಗೆ ಹಿಂದಿನ ಜನ್ಮದ ನೆನಪನ್ನು ಎತ್ತಿಕೊಡುತ್ತಿದ್ದರು. ''ಈ ಜನ್ಮವನ್ನು ಕೊನೆಗಾಣಿಸಲು ನಿನ್ನ ಒಪ್ಪಿಗೆಯೇ?'' ಎಂದು ಕೇಳುತ್ತಿದ್ದರು. ಎಲ್ಲ ಜನ್ಮಗಳಲ್ಲಿಯೂ ನನ್ನ ಅದೃಷ್ಟ ದೇವತೆಯಾದ ಭಗವಾನ್ ಶ್ರೀ ವೇದವ್ಯಾಸರ ಅನನ್ಯ ಭಕ್ತಿಯಿಂದ ಅಡಿದಾವರೆಗಳ ಅಪ್ಪುಗೆಯೇ ಅವರಿಗೆ ನನ್ನ ಒಪ್ಪಿಗೆಯನ್ನು ಸೂಚಿಸುತ್ತಿತ್ತು. ಕೂಡಲೇ ನನಗೆ ಆ ಜನ್ಮದಿಂದ ಬಿಡುಗಡೆ. ಮತ್ತೆ ಮತ್ತೊಂದು ಜನ್ಮದಲ್ಲಿ ಬಂಧನ. ಹೀಗೆ ಅನೇಕಾನೇಕ ಯೋನಿಗಳಲ್ಲಿ ''ಪುನರಪಿ ಜನನಂ ಪುನರಪಿ ಮರಣಂ'' ಎಂದು ಜನನ ಮರಣದ ಜಾಲದಲ್ಲಿ ಸಿಕ್ಕು ಪಾರಾಗುತ್ತ ಕೊನೆಗೆ ನಾನು ಮಾನವನಾಗಿ ಅದರಲ್ಲಿಯೂ ಬ್ರಾಹ್ಮಣ ಶರೀರವನ್ನು ಹೊತ್ತು ಬಂದೆ. ಇದೇ ನನ್ನ ಆ ಬ್ರಾಹ್ಮಣ ಜನ್ಮ.

ಈ ವಿಪ್ರ ಜನ್ಮದಲ್ಲಿಯೂ ದುಃಖ, ದುರವಸ್ಥೆ, ದೌರ್ಭಾಗ್ಯ ಬಿಟ್ಟಿಲ್ಲ ನನ್ನ ಈ ಪಿಂಡವನ್ನು. ಹುಟ್ಟಿದ ಕೂಡಲೇ ತಾಯಿಯ ಮರಣ. ಬೆಳೆದ ಕೂಡಲೇ ತಂದೆ ಕಣ್ಣು ಮುಚ್ಚಿದ. ನಾನೀಗ ಅನಾಥ ಒಬ್ಬಂಟಿಗ. ದಿಕ್ಕಿಲ್ಲ ದಾದಿಲ್ಲ. ಮೇಲೆ ದೇಹಕ್ಕೆ ಅಂಟಿಕೊಂಡ ಕುಷ್ಠರೋಗ ಬೆಂಕಿ. ಇದರ ವೇದನೆ ಯಾವ ಯಾತನೆಗಿಂತ ಭೀಕರ. ನಾನು ಐದು ವರ್ಷದವನಾಗಿದ್ದಾಗ ವ್ಯಾಸರ ಪುನರಾಗಮನ. ಎಲ್ಲ ಕೀಳು ಯೋನಿಗಳಿಗಿಂತ ನಿಕೃಷ್ಟವಾಗಿತ್ತು ನನ್ನ ಈ ಬ್ರಾಹ್ಮಣ ದೇಹದ ದುರ್ದಶೆ. ಅವರ ಹೃದಯ ಕೋಮಲ, ಅಂತಃಕರಣ ನಿರ್ಮಲ.

## ವ್ಯಾಸರ ಹಸ್ತ, ಜ್ಞಾನ ಸಮಸ್ತ.

ಒಂದು ದಿನ ಅವರು ನನ್ನ ಬಳಿಗೆ ಬಂದರು. ಹತ್ತಿರ ಬಾ ಎಂದು ಕರೆದರು. ಕಿವಿಯಲ್ಲಿ ಸಾರಸ್ವತ ಮಂತ್ರವನ್ನು ಉಪದೇಶಿಸಿದರು. ಎಷ್ಟೆಂದರೂ ದೊಡ್ಡವರಲ್ಲವೆ ಆ ದ್ವೈಪಾಯನ ಮಹರ್ಷಿ ! ಆಮೇಲೆ ಅವರು ನನಗೆ ಉಪದೇಶಿಸಿದ್ದು ಸಾರಸ್ವತ ಮಂತ್ರ. ಕೇಳಬೇಕೆ ? ನನ್ನ ಮಿದುಳು ತುಂಬಿತು ಸರಸ್ವತಿಯ ತತ್ವದಿಂದ. ಅವರು

ಉಪದೇಶ ಮಾಡಿದ ಮರುಚಣದಲ್ಲಿಯೇ ಪ್ರತಿಭಾನ್ವಿತನಾಗಿದ್ದೆ. ನನ್ನ ನಿಲುವು ಗಿಡ್ಡ. ಆದರೂ ಜ್ಞಾನದಲ್ಲಿ ನಾನು ಮುಟ್ಟದ ಎತ್ತರ ಉಚ್ಚೈಸ್ತರ. ನಾಲ್ಕು ವೇದಗಳು ನನ್ನ ನಾಲಿಗೆಯ ತುದಿಯಲ್ಲಿ, ಆರು ಶಾಸ್ತ್ರಗಳು ಅಂಗೈಸಲ್ಲಿ, ಎಲ್ಲ ಧರ್ಮ ಗ್ರಂಥಗಳು ನನ್ನ ಮಿದುಳಿನ ಮೈದಾನದಲ್ಲಿ. ನಾನೊಂದು ಈಗ ತುಂಬಿದ ಕೊಡ. ಪೂರ್ಣ ಜ್ಞಾನದ ಕುಂಭ. ಆದರೆ ಇವೆಲ್ಲವೂ ಭಗವಾನ್ ಶ್ರೀ ವ್ಯಾಸರ ದಯಾಪೂರ್ಣ ದೃಷ್ಟಿಯ ಫಲ ಪ್ರಸಾದ. ಮಂತ್ರೋಪದೇಶದ ಪ್ರಭಾವ ಎಂಬುವ ಎಚ್ಚರ ಪೂರ್ಣ ನನಗೆ ಇದೆ. ಆದ್ದರಿಂದ ನನ್ನ ಈ ಜ್ಞಾನರಾಶಿಗೆ ಅಹಂಕಾರದ ಸೋಂಕು ಇಲ್ಲ. ಆ ಜ್ಞಾನ ಮೇರುವಿಗೆ ನಾನು ಮಣಿದು ಕೇಳಿದೆ - ''ಏನು ಅಪ್ಪಣೆ'' ಎಂದು? ಅವರ ಉತ್ತರ-

ಕಾರ್ತಿಕೇಯ ಕ್ಷೇತ್ರಕ್ಕೆ ಹೋಗು. ಅಲ್ಲಿ ನನ್ನ ಧೀಮಂತ ಭಕ್ತನೊಬ್ಬನಿದ್ದಾನೆ. ನಂದಭದ್ರ ಎಂದು ಅವನ ಹೆಸರು. ಅವನನ್ನು ಸಂತೈಸು. ಅನಂತರ ಬಹೂದಕ ತೀರ್ಥಕ್ಕೆ ಹೋಗು. ಅಲ್ಲಿ ತಪೋನುಷ್ಠಾನವನ್ನು ಮಾಡು. ಅಲ್ಲಿಯೇ ನಿನ್ನ ಪ್ರಾಣಾರ್ಪಣವೂ ಆಗಲಿ, ಮಹೀಸಾಗರ ಸಂಗಮ ತೀರ್ಥದಲ್ಲಿ ನಿನ್ನ ಮೂಳೆಗಳು ಬೀಳಲಿ, ಅನಂತರ ನೀನು ಮಹಾಮಹರ್ಷಿ ಆಗುವೆ. ಬ್ರಹ್ಮರ್ಷಿ ಪದವಿಯು ನಿನಗೆ ಆ ಜನ್ಮದಲ್ಲಿ ಸುಲಭ. ಮೈತ್ರೇಯ ಮಹರ್ಷಿ ಎಂದು ಸಿದ್ಧಿ ಹಾಗೂ ಪ್ರಸಿದ್ಧಿ ಪಡೆಯುವೆ. ತಪಃ ಪ್ರಸಿದ್ಧಿ ಹೊಂದುವೆ. ಅದೇ ನಿನಗೆ ಶ್ರೇಷ್ಠವಾದ ಪರಮ ದೇಹ ಮತ್ತು ಚರಮ ದೇಹ. ಆ ಮೈತ್ರೇಯ ಮುನಿಯ ಜನ್ಮದಿಂದಲೇ ನಿನಗೆ ಮುಕ್ತಿ.''

## ನನ್ನ ಕಥೆ ಜನ್ಮಜನ್ಮಾಂತರ ವ್ಯಥೆ

ಹೀಗೆ ಶ್ರೀ ವಾಶಿಷ್ಠ ಕೃಷ್ಣ ಎಂಬ ಹೆಸರುಳ್ಳ ವೇದವ್ಯಾಸ ದೇವರು ನನಗೆ ಅಪ್ಪಣೆ ನೀಡಿದರು. ಅವರ ಆಜ್ಞೆಯನ್ನು ತಲೆಯಲ್ಲಿ ಹೊತ್ತುಕೊಂಡು ಬಹುಕಷ್ಟದಿಂದ ನಾನು ಈ ತೀರ್ಥ ಸ್ಥಳಕ್ಕೆ ಬಂದಿದ್ದೇನೆ. ರೋಗದಿಂದ ಜರ್ಜರಿತವಾದ ಈ ದೇಹವನ್ನು ಹೊತ್ತುಕೊಂಡು ಇಲ್ಲಿಯವರೆಗೆ ಬರುವದು ನನ್ನಿಂದ ಶಕ್ಯವಾಗಲಿಲ್ಲ. ಕೂಲಿಯಿಂದ ತಲೆಹೊರೆ ಹೊತ್ತುಕೊಂಡು ಒಯ್ಯುವ ಭಾರವಾಹಕರು ನನಗೆ ಸಹಾಯಕರಾದರು. ನನ್ನನ್ನು ಹೊತ್ತು ತಂದು ಇಲ್ಲಿ ಇರಿಸಿದರು. ಭಗವದವತಾರ ಭೂತರಾದ ಭಗವಾನ್ ಬಾದರಾಯಣರ ಆದೇಶವನ್ನು ನಿನಗೆ ತಲುಪಿಸಿದ್ದೇನೆ. ನನ್ನ ಕಥೆಯನ್ನೂ ವ್ಯಥೆಯನ್ನೂ ನಿನಗೆ ಹೇಳಿದ್ದೇನೆ. ನಾನು ಎಂಟು ಜನ್ಮಗಳ ಹಿಂದೆ ಬ್ರಾಹ್ಮಣ ದೇಹದಲ್ಲಿ ಮಾಡಿದ ಪಾಪವು ಇನ್ನೂ ನನಗೆ ಗಂಟು ಬಿದ್ದಿದೆ. ವ್ಯಾಸ ಭಗವಾನರ ದರ್ಶನವಾದ ಬಳಿಕವೂ ಇನ್ನೂ ಅಂಟಿಕೊಂಡಿದೆ. ಪ್ರಾರಬ್ಧವನ್ನು ಯಾರಿಗೂ ಬಿಡಿಸುವದಾಗುವುದಿಲ್ಲ. ಪ್ರಾರಬ್ಧವನ್ನು ಅನುಭವಿಸಲೇಬೇಕೆಂದು ದೇವರ ನಿಯಮ. ಅದಕ್ಕೆಲ್ಲ ಅವನ ಆದೇಶ. ''ಭೋಗೇನೈವ ಪರಿಕ್ಷಯಃ'' ಅನುಭವಿಸೇ ತೀರಬೇಕು ಆ ಪ್ರಾರಬ್ಧದ ಸಾಲವನ್ನು. ಆದುದರಿಂದ ಇಂಥ ದುರ್ಯೋನಿ ದುರ್ಜನ್ಮಗಳು ಬರುವಂಥ ಪಾಪಗಳನ್ನೇ ಮಾಡಬಾರದು ವಿವೇಕಿಯಾದ ಮಾನವ. ಆದುದರಿಂದ ನೀನಾದರೂ ಅಂಥ ಪಾಪಗಳಿಂದ ದೂರವಿದ್ದು ಭಗವಂತನನ್ನು ಆರಾಧಿಸು.

## ನಿಮ್ಮ ಉಪಕಾರ, ತೀರಿಸಲಾರದ ಭಾರ

**ನಂದಭದ್ರ :** ಪೂಜ್ಯರೆ, ಏನು ಆಶ್ಚರ್ಯ ಈ ನಿಮ್ಮ ಚರಿತ್ರೆ ! ಎಷ್ಟು ವಿಚಿತ್ರ! ನಿಜವಾಗಿಯೂ ನಾನು ಚಕಿತ ಚಮತ್ಕೃತನಾದೆ ನಿಮ್ಮ ಈ ಚಿತ್ರ ವಿಚಿತ್ರವಾದ ಚಾರು

ಚರಿತ್ರೆಯಿಂದ. ನಿಮ್ಮ ಅದ್ಭುತವಾದ ಕಥಾ ಶ್ರವಣದಿಂದ ನನ್ನ ಹೃದಯದಲ್ಲಿ ನೂರುಮಡಿ ಹೆಚ್ಚಾಗಿದೆ ದೇವರಲ್ಲಿ ಭಕ್ತಿ. ಪೂಜ್ಯರೆ, ನೀವು ನಿಮ್ಮ ಕಥೆಯನ್ನು ಕೇಳಿಸಿ, ನನ್ನ ಧರ್ಮಶ್ರದ್ಧೆಯನ್ನು ನೂರ್ಮಡಿ ಹೆಚ್ಚು ಮಾಡಿದಿರಿ. ನನಗೆ ಧರ್ಮೋಪದೇಶವನ್ನು ನೀಡಿದಿರಿ. ಮುಂದಿನ ಧರ್ಮಪಥವನ್ನು ನಿಚ್ಚಳವಾಗಿ ತೋರಿಸಿದಿರಿ. ನಿಮ್ಮ ಉಪಕಾರ ನನ್ನ ಮೇಲೆ ಬಹಳವಾಗಿದೆ. ಈ ನಿಮ್ಮ ಪರಮೋಪಕಾರವನ್ನು ನಾನು ಹೇಗೆ ತೀರಿಸಲಿ? ನೀವು ನೀಡಿದ ಧರ್ಮೋಪದೇಶಕ್ಕೆ ಬದಲಾಗಿ ನಾನು ನಿಮ್ಮ ಸೇವೆಯನ್ನು ಮಾಡಬೇಕೆಂದು ನಿರ್ಧರಿಸಿದ್ದೇನೆ. ದಯಮಾಡಿ ನನ್ನ ಸೇವೆಯನ್ನು ಸ್ವೀಕರಿಸಿರಿ. ನಾನು ನಿಮ್ಮ ಯಾವ ಸೇವೆಯನ್ನು ಮಾಡಬೇಕೋ ಅಪ್ಪಣೆ ಕೊಡಿರಿ.

**ಬಾಲಕ** : ನಂದಭದ್ರನೇ, ನಾನು ಈ ತೀರ್ಥದಲ್ಲಿ ಏಳು ದಿನ ಸೂರ್ಯ ನಾರಾಯಣನ ಮಂತ್ರ ಜಪವನ್ನು ಮಾಡುತ್ತೇನೆ. ನಾನು ಕೈಕೊಂಡಿರುವ ಮಂತ್ರ ಜಪದ ಸಪ್ತಾಹದಲ್ಲಿ ಏಳೂ ದಿನಗಳಲ್ಲಿಯೂ ನಾನು ಆಹಾರವನ್ನು ಸ್ವೀಕರಿಸುವುದಿಲ್ಲ. ಪೂರ್ಣ ಉಪವಾಸವಿದ್ದು ಸೂರ್ಯಮಂತ್ರವನ್ನು ಜಪಿಸುತ್ತೇನೆ. ಅನಂತರ ಈ ಶರೀರವನ್ನು ತ್ಯಾಗ ಮಾಡುತ್ತೇನೆ. ಅನಂತರ ನೀನು ಒಂದು ಕೆಲಸ ಮಾಡಬೇಕು. ನನ್ನ ಸಲುವಾಗಿ ನಾನು ಪ್ರಾಣ ಪರಿತ್ಯಾಗ ಮಾಡಿದ ಬಳಿಕ ಆ ನನ್ನ ಪಾಂಚಭೌತಿಕ ಶರೀರವನ್ನು ಬರ್ಬರಿಕಾ ತೀರ್ಥಕ್ಕೆ ತೆಗೆದುಕೊಂಡು ಹೋಗು. ಆ ತೀರ್ಥದ ತೀರದಲ್ಲಿ ದಂಡೆಯ ಮೇಲೆಯೇ ಆ ನನ್ನ ಬ್ರಾಹ್ಮಣ ಶರೀರಕ್ಕೆ ಅಗ್ನಿ ಸಂಸ್ಕಾರ ಮಾಡು. ಆ ದಗ್ಧ ದೇಹದ ಮೂಳೆಗಳನ್ನು ಈ ತೀರ್ಥದಲ್ಲಿಯೇ ತಂದು ಹಾಕು. ಈ ಬಹೂದಕ ತೀರ್ಥದ ತೀರದಲ್ಲಿ ನಾನು ಪ್ರಾಣತ್ಯಾಗ ಮಾಡಿದ ಸ್ಥಳದಲ್ಲಿ ಸೂರ್ಯನ ಒಂದು ಮೂರ್ತಿಯನ್ನು ಪ್ರತಿಷ್ಠೆ ಮಾಡು, ಸೂರ್ಯದೇವನೆಂದರೆ, ಸಾಮಾನ್ಯನಲ್ಲ. ದೇವತೆಗಳಲ್ಲಿ ಸರ್ವಶ್ರೇಷ್ಠ. ಬ್ರಾಹ್ಮಣ ಶಕ್ತಿ ಸರ್ವಸ್ವ, ವೇದಮೂರ್ತಿ. ಕರ್ಮಸಾಕ್ಷಿ ಜಗಚ್ಚಕ್ಷು. ಜಗದೀಶನ ಚಕ್ಷು ಕೂಡ ಆಗಿದ್ದಾನೆ. ನಾರಾಯಣನ ಆಸನ ಕೂಡ ಆಗಿದ್ದಾನೆ. ಅದಕ್ಕಾಗಿ ಸೂರ್ಯನಾರಾಯಣ ಎಂದೇ ಕರೆಯುವರು ಆ ಸವಿತೃ ದೇವನನ್ನು. ನೀನಾದರೂ ಇಲ್ಲಿ ಭಗವಾನ್ ಸೂರ್ಯದೇವನ ಆರಾಧನೆಯನ್ನು ನಿತ್ಯ ನಿರಂತರವೂ ಮಾಡು. ಈ ಬಹೂದಕ ಕುಂಡದಲ್ಲಿ ಸ್ನಾನಮಾಡಿ ಸೂರ್ಯೋಪಾಸನೆಯನ್ನು ಅನವರತವೂ ಆಚರಿಸುವವರಿಗೆ ಅನಂತಾನಂತ ಪುಣ್ಯ. ಶಾಶ್ವತ ಸದ್ಗತಿ.'' ಹೀಗೆ ಪರಾಶರ ಪುತ್ರರಾದ ವ್ಯಾಸರು ನನ್ನ ಮುಂದೆ ಹೇಳಿದಂತೆಯೇ ನಾನು ನಿನ್ನ ಮುಂದೆ ಸಂಕ್ಷಿಪ್ತವಾಗಿ ಹೇಳಿದ್ದೇನೆ. ಇದನ್ನೆಲ್ಲ ನೀನು ಕೇಳಿದೆ. ಮಾಘ ಶುದ್ಧ ಸಪ್ತಮಿ ದಿನದಂದು ಈ ಬಹೂದಕ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಅಕ್ಷಯ ಪುಣ್ಯ. ಅವರ ಪಿತೃಗಳಿಗೆ ಅಕ್ಷಯ ತೃಪ್ತಿ. ಈ ಬಹೂದಕ ಕುಂಡದಲ್ಲಿ ಮಾಡಿದ ಎಂದೇ ಆಗಲಿ - ಸ್ನಾನ, ದಾನ, ಜಪ, ಹೋಮ, ಮುಂತಾದ ಎಲ್ಲ ಪುಣ್ಯ ಕರ್ಮಗಳು ಅನಂತ ಫಲಪ್ರದ.

## ಜಪಮಾಡಿ ಜೀರ್ಣನಾದ : ತಪಮಾಡಿ ತೀರಿಕೊಂಡ

**ನಾರದ** : ಹೀಗೆ ಹೇಳಿ ರೋಗಿಷ್ಠನಾದ ಆ ಬ್ರಾಹ್ಮಣ ಬಾಲಕನು ತನ್ನ ಹೇಳಿಕೆಯನ್ನು ಮುಗಿಸಿದನು. ಅನಂತರ ಬಹೂದಕ ಕುಂಡಕ್ಕೆ ಹೋಗಿ ಸ್ನಾನಮಾಡಿದನು. ಅಲ್ಲಿಯೇ ತೀರದಲ್ಲಿ ಇರುವ ಒಂದು ಗಿಡದ ಕೆಳಗೆ ಕುಳಿತು ಬದ್ಧ ಪದ್ಮಾಸನನಾಗಿ ನಿಶ್ಚಲವಾದ

ಮನಸ್ಸಿನಿಂದ ಸೂರ್ಯಮಂತ್ರವನ್ನು ಜಪಿಸತೊಡಗಿದನು. ಊಟವಿಲ್ಲ, ಉಪಹಾರವಿಲ್ಲ, ನಿದ್ದೆಯಿಲ್ಲ, ನೀರಡಿಕೆ ಇಲ್ಲ, ವಿಶ್ರಾಂತಿ ಇಲ್ಲ, ವಿರಾಮವಿಲ್ಲ, ವಿಚ್ಛೇದನವಿಲ್ಲ, ಅವಿಚ್ಛಿನ್ನವಾಗಿ ಹಗಲು, ರಾತ್ರಿ, ಮುಂಜಾವು - ಸಂಜೆ ದಿನದ ಇಪ್ಪತ್ನಾಲ್ಕು ಗಂಟೆಗಳಲ್ಲಿಯೂ ಜಪವೇ ಜಪ. ತಪವೇ ತಪ. ಏಳನೆಯ ದಿನ ಆ ಬ್ರಾಹ್ಮಣ ಬಾಲಕನ ಪ್ರಾಣಪಕ್ಷಿಯು ಹಾರಿ ಹೋಯಿತು. ಅವನ ಆದೇಶದ ಮೇರೆಗೆ ನಂದಭದ್ರನು ಅವನ ಶವವನ್ನು ಹೊತ್ತುಕೊಂಡು ಬರ್ಬರಿಕಾ ಕ್ಷೇತ್ರದ ಬಹೂದಕ ತೀರದಲ್ಲಿ ದಹನ ಸಂಸ್ಕಾರ ಮಾಡಿದ. ಸೂರ್ಯನ ದಿವ್ಯವಾದ ಮಂತ್ರವನ್ನು ಜಪಿಸುತ್ತಾ ಆ ಬಾಲಕನು ಪ್ರಾಣ ಪರಿತ್ಯಾಗ ಮಾಡಿದ ಸ್ಥಳದಲ್ಲಿ ಸೂರ್ಯ ದೇವನ ಒಂದು ಮೂರ್ತಿಯನ್ನು ಪ್ರತಿಷ್ಠೆ ಮಾಡಿದ. ಆ ಬಾಲಕನ ಭಕ್ತಿಗೆ ಮೆಚ್ಚಿ ಬಂದಿದ್ದರಿಂದ ಬಾಲಾದಿತ್ಯ ಎಂದು ವಿಗ್ರಹವು ಪ್ರಸಿದ್ಧಿ ಪಡೆಯಿತು. ಬಹೂದಕ ತೀರ್ಥದಲ್ಲಿ ಸ್ನಾನಮಾಡಿ ಆ ಬಾಲಾದಿತ್ಯನ ಪೂಜೆ ಮಾಡುವವರ ಮೇಲೆ ಪ್ರಸನ್ನನಾಗುತ್ತಾನೆ ಆ ಪ್ರಭಾಕರ, ಆರೋಗ್ಯ ಭಾಗ್ಯವನ್ನು ಕರುಣಿಸುತ್ತಾನೆ. ಮೋಕ್ಷದ ಉಪಾಯವನ್ನು ಸೂಚಿಸುತ್ತಾನೆ.

ಅನಂತರ ನಂದಭದ್ರನು ಬೇರೊಬ್ಬ ಮಡದಿಯೊಂದಿಗೆ ವಿವಾಹ ಮಾಡಿಕೊಂಡನು. ಅವಳ ಹೊಟ್ಟೆಯಿಂದ ಅನೇಕ ಮಕ್ಕಳನ್ನು ಹಡೆದನು. ಅವರೆಲ್ಲರೂ ಸೂರ್ಯನ ಭಕ್ತರೇ. ಎಲ್ಲರೂ ಸೂರ್ಯನ ಉಪಾಸಕರೇ. ಬದುಕಿ ಇರುವವರೆಗೆ ಬಾಲಾದಿತ್ಯನನ್ನು ಪೂಜಿಸಿದರು, ಮರಣಾನಂತರ ಶಿವಸಾಮೀಪ್ಯವನ್ನು ಹೊಂದಿದರು. ಅವರಾರಿಗೂ ಪುನರ್ಜನ್ಮವಿಲ್ಲ. ಈ ಬಹೂದಕ ಕ್ಷೇತ್ರದ ಮತ್ತು ಆ ಬಾಲಾದಿತ್ಯನ, ಈ ಬಾಲಕ ಭಕ್ತನ, ಮತ್ತು ಆ ನಂದಭದ್ರನ ಕಥೆಯನ್ನು ಭಕ್ತಿಯಿಂದ ಕೇಳಿದವರ ಮೇಲೆ ಸೂರ್ಯನಾರಾಯಣನು ಪ್ರಸನ್ನನಾಗುತ್ತಾನೆ.

## ನಾರದರಿಂದ ಕ್ಷೇತ್ರ ರಕ್ಷಣೆಗಾಗಿ ವಿವಿಧ ದೇವಿಯರ ಪ್ರತಿಷ್ಠಾಪನೆ

**ನಾರದ :** ಕೌಂತೇಯ, ಅನಂತರ ನಾನು ಈ ತೀರ್ಥವನ್ನು ರಕ್ಷಣೆ ಮಾಡಲು ಅನೇಕ ದೇವಿಯರನ್ನು ಆರಾಧಿಸಿದೆ ಮತ್ತು ಸಂರಕ್ಷಕರನ್ನಾಗಿ ಅಲ್ಲಿ ಸ್ಥಾಪಿಸಿದೆ ಅನೇಕ ದೇವಿಯರನ್ನು. ಆ ಪ್ರಸಂಗವನ್ನು ಹೇಳುವೆ ಕೇಳು. ಪರಮೇಶ್ವರನ ಅವನ ಪ್ರಕೃತಿಯಾದ ಶಕ್ತಿಯ ಪ್ರಸಾದದಿಂದಲೂ ಸಮಸ್ತ ವಿಧವಾದ ಸುಖಸಂಪತ್ತುಗಳು ಲಭಿಸುವವು. ಭಗವತೀ ಈಶ್ವರಿಯು ಎಲ್ಲ ಪ್ರಾಣಿಗಳಲ್ಲಿಯೂ ಈ ರೀತಿಯಾಗಿ ಇರುತ್ತಾಳೆ. ಈ ದೇವಿಯ ರೂಪಗಳು ಬುದ್ಧಿ, ಹ್ರೀ, ಪುಷ್ಟಿ, ಲಜ್ಜಾ, ತುಷ್ಟಿ, ಶಾಂತಿ, ಕ್ಷಮಾ, ಸ್ಪೃಹಾ, ಶ್ರದ್ಧಾ, ಚೇತನಾ, ಉತ್ಸಾಹ ಶಕ್ತಿ, ಮಂತ್ರ ಶಕ್ತಿ, ಪ್ರಭುಶಕ್ತಿ - ಎಂದು ಬಗೆ ಬಗೆಯ ನಾಮಗಳಿಂದ ಪ್ರಸಿದ್ಧವಾಗಿವೆ. ಇವುಗಳಲ್ಲಿ ಪರಮೇಶ್ವರೀ ಶಕ್ತಿಯು ವಿಶ್ವವ್ಯಾಪಕ. ಅವಿದ್ಯಾಬಂಧನದಿಂದ ಮಾನವನನ್ನು ಪಾರುಗೊಳಿಸಿ ವಿದ್ಯಾರೂಪವಾದ ಮೋಕ್ಷವನ್ನು ಕೊಡಲು ಈ ಭಗವತೀ ಶಕ್ತಿಯೇ ಕಾರಣವಾಗುತ್ತಿದೆ. ಇಂದ್ರಾದಿ ದೇವತೆಗಳು ಈ ಪರಮೇಶ್ವರೀ ಶಕ್ತಿಯನ್ನು ಆರಾಧಿಸಿಯೇ ಐಶ್ವರ್ಯವನ್ನು ಪಡೆದಿದ್ದಾರೆ. ಈ ಭಗವತೀ ಶಕ್ತಿಗೆ ಪರಾಪ್ರಕೃತಿ ಎಂದೂ ಹೆಸರು. ಈ ಪರಾಪ್ರಕೃತಿಯೇ ಬೇರೆ ಬೇರೆ ಹೆಸರುಗಳಿಂದ ಸರ್ವಭೂತಗಳ ಅಂತಃಪ್ರತಿಷ್ಠಿತವಾಗಿ ಪ್ರಪಂಚವನ್ನು ನಿಯಮನ ಮಾಡುತ್ತದೆ. ಆದ್ದರಿಂದ ನಾನು ಈ ಎಲ್ಲ ಶಕ್ತಿ

ಸ್ವರೂಪಿಣಿಯರಾದ ಮಹಾದೇವಿಯರನ್ನು ಅಲ್ಲಲ್ಲಿ ಪ್ರತಿಷ್ಠಾಪನೆಗೈದು ಈ ಕ್ಷೇತ್ರ ಪಾಲಿನಿಯರನ್ನಾಗಿ ಮಾಡಿದೆ.

## ದಿಕ್ಕು ದಿಕ್ಕಿಗೊಂದೊಂದು ದೇವತೆ

ಪೂರ್ವ ದಿಕ್ಕಿನಲ್ಲಿ ಸ್ಕಂದಸ್ವಾಮಿಯಿಂದ ಸಿದ್ಧಾಂಬಿಕೆಯನ್ನು ಸ್ಥಾಪನೆಮಾಡಿಸಿದೆ. ಸೃಷ್ಟಿಯ ಆದಿಕಾಲದಲ್ಲಿ ಆವಿರ್ಭೂತಳಾದ ಈ ಶಕ್ತಿಯನ್ನು ಮೂಲ ಪ್ರಕೃತಿ ಎಂದು ಕರೆಯುತ್ತಾರೆ. ಸಿದ್ಧಪುರುಷರು ಈ ಈಶ್ವರಿಯನ್ನು ನಿರಂತರವೂ ಆರಾಧಿಸುತ್ತಾರೆ. ಸಿದ್ಧಾಂಬಿಕೆ ಎಂದು ಅವಳಿಗೆ ಹೆಸರು ಬರಲು ಇದೇ ಕಾರಣ. ದಕ್ಷಿಣ ದಿಕ್ಕಿನಲ್ಲಿ ನಾನು ತಾರಾದೇವಿಯ ಸ್ಥಾಪನೆಯನ್ನು ಮಾಡಿರುವೆನು, ಹಿಂದೆ ದೇವತೆಗಳೆಲ್ಲರೂ ದುಃಖಸಾಗರದಿಂದ ತಮ್ಮನ್ನು ತಾರಣ ಮಾಡಲಿಕ್ಕಾಗಿ ಕೂರ್ಮ ರೂಪಿಯಾದ ಹರಿಯನ್ನು ಆಶ್ರಯಿಸಿದರು. ಶ್ರೀ ವಿಷ್ಣುವು ಕಚ್ಛಪರೂಪದಿಂದ ತಾರಾದೇವಿಯಲ್ಲಿ ಆವಿಷ್ಟನಾಗಿ ದೇವತೆಗಳ ಸಂರಕ್ಷಣೆ ಮಾಡಿದನು. ಪರ್ವತ ಪುತ್ರಿಯಾದ ಶಕ್ತಿದೇವಿಯು ಕೂರ್ಮರೂಪಿ ಭಗವಂತನ ಆವೇಶದಿಂದ ದೇವತೆಗಳನ್ನು ತಾರಣ ಮಾಡಿದ್ದರಿಂದ ಅವಳಿಗೆ ತಾರಾದೇವಿ ಎಂಬ ಹೆಸರು ಬಂದಿತು. ನನ್ನ ಭಕ್ತಿಯುಕ್ತವಾದ ಆರಾಧನೆಯಿಂದ ಪ್ರಸನ್ನಳಾಗಿ ಆ ತಾರಾದೇವಿಯು ದಕ್ಷಿಣ ದಿಕ್ಕಿನಲ್ಲಿ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಬಂದು ನೆಲೆಸಿದ್ದಾಳೆ.

## ಪಶ್ಚಿಮದಲ್ಲಿ ಭಾಸ್ವರಾ, ಉತ್ತರದಲ್ಲಿ ನಂದಿನಿ

ಈ ಪ್ರಕಾರ ಪಶ್ಚಿಮ ದಿಕ್ಕಿನಲ್ಲಿ ಭಾಸ್ವರಾ ದೇವಿಯು ಪ್ರತಿಷ್ಠಿತಳಾಗಿದ್ದಾಳೆ. ಈ ದೇವಿಯ ಪ್ರಭಾಪುಂಜದಿಂದಲೇ ಸಂಪೂರ್ಣ ನಕ್ಷತ್ರ ಮಂಡಲವು ಉದ್ಭಾಸಿತವಾಗಿರುತ್ತದೆ. ಇವಳ ಶಕ್ತಿಯಿಂದಲೇ ಸಂಪೂರ್ಣ ನಕ್ಷತ್ರ ಮಂಡಲವು ಗಗನಾಂಗಣದಲ್ಲಿ ಬೆಳಗುತ್ತಿದೆ. ನಾನು ಆರಾಧನೆ ಮಾಡಿ ಬ್ರಹ್ಮಾಂಡದ ಮೇಲಿನ ಮುಚ್ಚಳದ ಅಂಚಿನಲ್ಲಿದ್ದು ಗ್ರಹಣಗಳನ್ನೆಲ್ಲ ವ್ಯಾಪಿಸಿದ್ದ ಆ ಶಕ್ತಿಯನ್ನು ಇಲ್ಲಿಗೆ ಕರೆತಂದಿದ್ದೇನೆ. ಅನೇಕ ಕೋಟಿ ದೇವಿಯರಿಂದ ಕೂಡಿಕೊಂಡು ಪ್ರಚಂಡಳಾದ ಈ ಭಾಸ್ವರಾ ಶಕ್ತಿಯು ಪಶ್ಚಿಮ ದಿಕ್ಕನ್ನು ರಕ್ಷಿಸುತ್ತಾಳೆ, ಉತ್ತರ ದಿಕ್ಕಿನಲ್ಲಿ ಯೋಗ ನಂದಿನೀ ದೇವಿಯನ್ನು ಪ್ರತಿಷ್ಠಾಪಿಸಲಾಗಿದೆ. ಪೂರ್ವ ಕಾಲದಲ್ಲಿ ಪರಾಕೃತಿಯ ಶರೀರದಿಂದ ಇವಳು ಪ್ರಕಟ. ಇವಳ ಕೃಪಾ ದೃಷ್ಟಿಯಿಂದ ಸನಕಾದಿಗಳಿಗೆ ಯೋಗ ಸಿದ್ಧಿಪ್ರಾಪ್ತಿ. ಅದರಿಂದಲೇ ಸಂತುಷ್ಟರಾದ ಆ ಮಹಾತ್ಮರು ಇವಳನ್ನು ಯೋಗೀಶ್ವರ ಎಂದು ಕರೆದರು. ಬ್ರಹ್ಮಾಂಡ ಕಟಾಹದ ಇನ್ನೊಂದು ಅಂಚಿನಲ್ಲಿ ನೆಲೆಸಿದ ಈ ದೇವಿಯನ್ನು ನಾನು ಆರಾಧನೆಗೈದು ಉತ್ತರ ದಿಶೆಯಲ್ಲಿ ಸನ್ನಿಹಿತಳಾಗಬೇಕೆಂದು ಪ್ರಾರ್ಥಿಸಿ ಪ್ರತಿಷ್ಠಿಸಿದ್ದೇನೆ.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೂವತ್ತೈದನೇ ಅಧ್ಯಾಯ ಮುಗಿದುದು**

# ನವದುರ್ಗೆಯ ಪ್ರತಿಷ್ಠೆ

ಅಧ್ಯಾಯ-36

ಅನಂತರ ನವದುರ್ಗೆಯರನ್ನು ಸ್ತೋತ್ರ ಮಾಡಿ ಮೆಚ್ಚಿಸಿ ಇಲ್ಲಿಗೆ ಕರೆತಂದಿದ್ದೇನೆ. ಪೂರ್ವಕಾಲದಲ್ಲಿ ತ್ರಿಪುರಾಸುರನನ್ನು ಸಂಹರಿಸುವಾಗ ಜಗದೀಶ್ವರನಾದ ಶಂಕರನು ತಾನೇ ಭಕ್ತಿಯಿಂದ ದುರ್ಗಾದೇವಿಯನ್ನು ಸ್ತೋತ್ರ ಮಾಡಿದನು. ಅದರಿಂದ ತುಷ್ಟಳಾದ ದುರ್ಗಾದೇವಿಯು ತ್ರಿಪುರವಧೆಯ ಕಾಲಕ್ಕೆ ಪರಮೇಶ್ವರನಲ್ಲಿ ಸನ್ನಿಹಿತಳಾಗಿ ತ್ರಿಪುರಾಸುರನನ್ನು ಭಸ್ಮ ಮಾಡಿದಳು. ಇದರಿಂದ ಆವಳಿಗೆ ತ್ರಿಪುರೇಶ್ವರಿ ಎಂಬ ಹೆಸರು ಬಂದಿತು. ಅಮರೇಶ್ವರ ಪರ್ವತದಲ್ಲಿ ಇದ್ದ ಲೋಕವಂದ್ಯಳಾದ ಈ ಮಹಾದೇವಿಯನ್ನು ಭಟ್ಟಾದಿತ್ಯನ ಸಮೀಪದಲ್ಲಿ ತಂದು ಪ್ರತಿಷ್ಠೆ ಮಾಡಿದ್ದೇನೆ. ವರಾಹ ರೂಪಿಯಾದ ಭಗವಾನ್ ವಿಷ್ಣುವಿನ ಆವೇಶದಿಂದ ವಿಶ್ವವಂದ್ಯಳಾದ ಕೋಲಾಂಬಾ ದೇವಿಯನ್ನು ನಾನು ಆರಾಧಿಸಿ ವರಾಹ ಗಿರಿಯಿಂದ ಇಲ್ಲಿ ತಂದು ಪ್ರತಿಷ್ಠಾಪಿಸಿದ್ದೇನೆ.

ಇದೇ ಪೂರ್ವದಿಕ್ಕಿನಲ್ಲಿ ಕಾರ್ತಿಕೇಯನಿಂದ ಕಪಾಲೇಶ್ವರೀ ಎಂಬ ಹೆಸರಿನ ಮಹಾದೇವಿಯನ್ನು ಪ್ರತಿಷ್ಠಿಸಲಾಗಿದೆ. ಹೀಗೆ ತ್ರಿಪುರಾ, ಕೋಲಾಂಬಾ, ಕಪಾಲೇಶ್ವರೀ ಎಂಬ ಮೂರು ಶಕ್ತಿಗಳು ಪೂರ್ವದಿಕ್ಕಿನಲ್ಲಿ ಪ್ರತಿಷ್ಠಿತವಾಗಿವೆ. ಇದೇ ಕ್ರಮದಿಂದ ಪಶ್ಚಿಮ ದಿಕ್ಕಿನಲ್ಲಿಯೂ ಸುವರ್ಣಾಕ್ಷಿ, ಚರ್ಚಿತಾ, ತ್ರೈಲೋಕ್ಯವಿಜಯಾ ಎಂಬ ಮೂರು ಮಹಾದುರ್ಗೆಯ ಶಕ್ತಿರೂಪಗಳನ್ನು ನಾನು ಪ್ರತಿಷ್ಠಿತಗೊಳಿಸಿದ್ದೇನೆ. ಇವರಲ್ಲಿ ಸುವರ್ಣಾಕ್ಷೀ ದೇವಿಯು ಬ್ರಹ್ಮಾಂಡದ ಸಂರಕ್ಷಣಕಾರಿಣಿ ಆಗಿದ್ದಾಳೆ. ಇವಳನ್ನು ಭಕ್ತಿಯಿಂದ ನಮಸ್ಕರಿಸಿ ಆರಾಧನೆ ಮಾಡಿದರೆ ಮೂವತ್ತೂರುಕೋಟಿ ದೇವಿಯರು ಪ್ರಸನ್ನರಾಗುವರು. ಸರ್ವಕಾಮಪ್ರದಳಾವ ಚರ್ಚಿತಾದೇವಿಯನ್ನು ಭಕ್ತಿಯಿಂದ ಬೇಡಿಕೊಂಡು ನಾನು ರಸಾತಳದಿಂದ ಕರೆದು ತಂದಿದ್ದೇನೆ. ಮೂರನೇಯವಳಾದ ತ್ರೈಲೋಕ್ಯವಿಜಯಾ ದೇವಿಯನ್ನು ನಾನು ಚಂದ್ರಮಂಡಲದಿಂದ ಪ್ರಾರ್ಥನೆ ಮಾಡಿ ಕರೆತಂದಿದ್ದೇನೆ. ರೋಹಿಣೀ ರಮಣನಾದ ಚಂದ್ರನು ಇವಳ ಆರಾಧನೆಯಿಂದ ತ್ರಿಭುವನದ ವಿಜಯವನ್ನು ಹೊಂದಿದ. ಅದರಿಂದಲೇ ಇವಳಿಗೆ ತ್ರಿಭುವನವಿಜಯಾ ಎಂಬ ಹೆಸರು.

ಉತ್ತರ ದಿಕ್ಕಿನಲ್ಲಿ ನಾನು ಬ್ರಹ್ಮಲೋಕದಿಂದ ಏಕವೀರಾ ದೇವಿಯನ್ನು ಕರೆತಂದು ಪ್ರತಿಷ್ಠಾಪಿಸಿದ್ದೇನೆ. ಅವಳು ತನ್ನನ್ನು ಆರಾಧಿಸುವ ಮಾನವರಿಗೆ ಎಲ್ಲ ಅಭೀಷ್ಟಗಳನ್ನು ನೀಡುವಳು. ಶಾಖೋತ್ತರ ಎಂಬ ಸ್ಥಾನದಿಂದ ನಾನು ತಪಸ್ಸು ಮಾಡಿ 'ಹರಸಿದ್ಧಿ' ಎಂಬ ಹೆಸರಿನ ದುರ್ಗಾದೇವಿಯನ್ನು ಇಲ್ಲಿಗೆ ಬರಮಾಡಿಕೊಂಡಿದ್ದೇನೆ. ಉತ್ತರ ದಿಕ್ಕಿನಲ್ಲಿ ಪ್ರತಿಷ್ಠಿತಳಾದ ಈ ದೇವಿಯು ಉಪಾಸಕರ ಬಳಿಯಲ್ಲಿ ಶಾಕಿನಿ ಡಾಕಿನಿ ಮುಂತಾದ ದುಷ್ಟ ಶಕ್ತಿಗಳು ಸುಳಿಯಲಾರವು.

ಮೂರನೇಯ ದುರ್ಗಾದೇವಿಯು ಈಶಾನ ಕೋಣದಲ್ಲಿ ಪ್ರತಿಷ್ಠಿತಳಾಗಿದ್ದಾಳೆ. ಪಾರ್ವತಿದೇವಿಯ ಶರೀರದಿಂದ ಹೊರಬಿದ್ದು ಚಂಡಮುಂಡ ಎಂಬ ದೈತ್ಯರನ್ನು ಇದೇ ಚಂಡೀದೇವಿಯು ಕೊಂದು ಹಾಕಿದಳು. ಈ ಚಂಡಿಕಾ ಎಂಬ ಹೆಸರಿನ ದುರ್ಗಾ ದೇವಿಯ ಸುತ್ತಲೂ ಕೋಟ್ಯಾವಧಿ ದೇವಿಯರು ನಿಂತುಕೊಂಡು ಸೇವೆ

ಗೈಯುತ್ತಿರುವರು. ಈ ದೇವಿಯ ಪ್ರಣಾಮ ಪೂಜೆ, ಪರ್ಯುಪಾಸನೆಗಳನ್ನು ಮಾಡುವ ಮಾನವರು ಎಲ್ಲ ವಿಧವಾದ ಅರಿಷ್ಟಗಳಿಂದಲೂ, ಅನಿಷ್ಟಗಳಿಂದಲೂ ಬಿಡುಗಡೆ ಹೊಂದುವರು. ಹೀಗೆ ನಾನು ಈ ತೀರ್ಥದ ನಾಲ್ಕೂ ದಿಕ್ಕುಗಳಲ್ಲಿಯೂ ಭಕ್ತ ಜನರ ಮನೋವಾಂಛಿತ ಪೂರ್ತಿಗಾಗಿ ಈ ವಿವಿಧ ದೇವಿಯರನ್ನು ಒಲಿಸಿಕೊಂಡು ತಂದು ಪ್ರತಿಷ್ಠಾಪಿಸಿದ್ದೇನೆ. ಇವರು ಈ ಸ್ಥಾನ, ಈ ತೀರ್ಥ, ಈ ಕ್ಷೇತ್ರ ಇವುಗಳನ್ನು ತಮ್ಮ ಅನುಚರೀ ದೇವೀಗಳಿಂದಲೂ ತಮ್ಮ ಸಹಚರೀ ಶಕ್ತಿಯರಿಂದಲೂ ಕೂಡಿಕೊಂಡು ಸಂರಕ್ಷಣೆ ಮಾಡುತ್ತಿರುತ್ತಾರೆ.

## ಸೋಮನಾಥನ ಪ್ರಾದುರ್ಭಾವ, ಮಾನವನ ಗರ್ಭವಾಸ ಹಾಗೂ ಶರೀರ ಉತ್ಪತ್ತಿಯ ಪ್ರಕಾರದ ನಿರೂಪಣೆ, ಸೋದರರ ತೀರ್ಥಯಾತ್ರೆ

**ನಾರದ :** ಈಗ ನಾನು ಸೋಮನಾಥನ ಮಹಿಮೆಯನ್ನು ನಿರೂಪಿಸುತ್ತೇನೆ. ಅರ್ಜುನ, ಇದು ಬಹಳ ಹಿಂದಿನ ಮಾತು. ತ್ರೇತಾಯುಗದ ಸಮಾಚಾರ, ಗೌಡ ದೇಶದಲ್ಲಿ ಊರ್ಜಯಂತ, ಪ್ರಾಳೇಯ ಎಂಬ ಇಬ್ಬರು ಬ್ರಾಹ್ಮಣರು. ಇಬ್ಬರೂ ಬ್ರಹ್ಮಜ್ಞರು. ಇಬ್ಬರೂ ಮಹಾತೇಜಸ್ವಿಗಳು. ಶಾಸ್ತ್ರದಲ್ಲಿ ಪಾರಂಗತರು. ವೇದಗಳಲ್ಲಿ ಕೋವಿದರು, ಶಾಸ್ತ್ರ ಪಾರಂಗತರು ಕೂಡ. ಅವರಿಬ್ಬರೂ ಒಂದು ದಿನ ಪುರಾಣ ಗ್ರಂಥಗಳನ್ನು ಪರಿಶೀಲಿಸುತ್ತಿದ್ದರು. ಅವರ ಕಣ್ಣಿಗೆ ಒಂದು ಶ್ಲೋಕ ಬಿದ್ದಿತು.

**''ಪ್ರಭಾಸಾದ್ಯಾನಿ ತೀರ್ಥಾನಿ ಪುಲಸ್ತ್ಯಾಯಾಽಹ ಪದ್ಮಭೂಃ ।**
**ನ ಯೈಸ್ತತ್ರಾಪ್ಲುತಂ ಚೈವ ನ ತೈಸ್ತೀರ್ಥಮುಪಾಸಿತಮ್ ।**

ಪ್ರಭಾಸತೀರ್ಥ ಮೊದಲಾದ ಪುಣ್ಯತೀರ್ಥಗಳ ಬಣ್ಣನೆಯನ್ನು ಸ್ವಯಂ ಬ್ರಹ್ಮದೇವರೇ ಮಾಡಿದ್ದಾರೆ. ಆ ಚತುರ್ಮುಖನ ಮುಖದಿಂದ ಪ್ರಭಾಸಾದಿ ತೀರ್ಥದ ಮಹಿಮೆಯನ್ನು ಶ್ರವಣ ಮಾಡಿದ ಪುಣ್ಯಾತ್ಮರು ಪುಲಸ್ತ್ಯರು. ಈ ತೀರ್ಥಗಳಲ್ಲಿ ಯಾರು ಸ್ನಾನ ಮಾಡಿಲ್ಲವೋ ಅವರಿಗೆ ತೀರ್ಥಸ್ನಾನದ ಪುಣ್ಯವಿಲ್ಲ'' ಈ ಪದ್ಯವನ್ನು ನೋಡಿದ ಕೂಡಲೇ ಅವರಿಗೆ ಬಹಳ ವಿಷಾದ ಎನಿಸಿತು. ಇಷ್ಟು ದಿನ ಪ್ರಭಾಸತೀರ್ಥಕ್ಕೆ ಹೋಗಿ ಸ್ನಾನ ಮಾಡದ ತಮ್ಮ ಜನ್ಮ ವ್ಯರ್ಥ ಎನಿಸಿತು. ಕೂಡಲೇ ಅವರು ತೀರ್ಥಯಾತ್ರೆಗೆ ಹೊರಟರು. ಪಾದಚಾರಿಗಳಾಗಿ ಬೆಟ್ಟ ಬಯಲುಗಳನ್ನು ಹೊಳೆ ಹಳ್ಳಗಳನ್ನು ದಾಟುತ್ತ ತಮ್ಮ ಯಾತ್ರೆಯನ್ನು ಮುಂದು ಮುಂದುವರಿಸಿದರು. ದಾರಿಯಲ್ಲಿ ನರ್ಮದಾ ತಟಾಕಕ್ಕೆ ಬಂದರು. ಅನೇಕ ಮುನಿ ಮಹರ್ಷಿಗಳು ನರ್ಮದಾ ತೀರದಲ್ಲಿ ಪರ್ಣಕುಟೀರಗಳನ್ನು ನಿರ್ಮಿಸಿಕೊಂಡು ತಪಂಗೈಯುತ್ತಿದ್ದರು. ದಾರಿಯಲ್ಲಿ ಅವರು ಗುಪ್ತಕ್ಷೇತ್ರವಾದ ಮಹೀಸಾಗರ ಸಂಗಮತೀರ್ಥದ ಮಹಾಮಹಿಮೆಯನ್ನು ಕೇಳಿಕೊಂಡು, ಅಲ್ಲಿ ಸ್ನಾನಮಾಡಿ ಮತ್ತೆ ಪ್ರಭಾಸದ ದಾರಿಯನ್ನು ಹಿಡಿದರು. ದಾರಿಯಲ್ಲಿ ಯಾವ ಊರೂ ಇರಲಿಲ್ಲ. ನಿರ್ಜನ ಪ್ರದೇಶ. ಅವರಿಬ್ಬರೂ ಯಾತ್ರಿಕರು ಹಸಿವೆ ನೀರಡಿಕೆಯಿಂದ ಬಳಲಿದರು. ಎಲ್ಲಿಯೂ ಅವರಿಗೆ ಒಂದು ತುತ್ತು ಅನ್ನ ದೊರೆಯಲಿಲ್ಲ. ಒಂದು ಹನಿ ನೀರೂ ಕುಡಿಯಲು ಸಿಕ್ಕಲಿಲ್ಲ. ಸಿದ್ಧಲಿಂಗ ಕ್ಷೇತ್ರದ ಬಳಿಯಲ್ಲಿ ಬಂದಾಗ ಅವರಿಬ್ಬರೂ ಬಹಳ

ಬಸವಳಿದು ಬವಳಿ ಬಂದು ಬಿದ್ದುಬಿಟ್ಟರು. ಮೂರ್ಛ್ಛಾಕ್ರಾಂತರಾದರು. ಕೆಲವು ಕ್ಷಣಗಳ ಮೇಲೆ ತಂಗಾಳಿ ಬೀಸಿತು. ಇಬ್ಬರಿಗೂ ಎಚ್ಚರ ಬಂದಿತು. ಆಗ ಪ್ರಾಳೇಯನು, ಊರ್ಜಯಂತನನ್ನು ಕುರಿತು ನುಡಿದನು.

''ಮಿತ್ರನೇ, ನಾನು ಹಿರಿಯರಿಂದ ಕೇಳಿದ ಒಂದು ಮಾತು ಈಗ ನೆನಪಿಗೆ ಬರುತ್ತದೆ. ತೀರ್ಥಯಾತ್ರೆಯ ಪರಿಶ್ರಮದಿಂದ ಕೊರಗಿ ಸೊರಗಿ ಕಳೆಗೆಟ್ಟು ಕ್ಷೀಣನಾದ ಮಾನವನು ಎಷ್ಟೇ ದಾನ ಮಾಡಲಿ, ಏನನ್ನೇ ದಾನ ಮಾಡಲಿ ಅದರಿಂದ ಭಗವಾನ್ ಸೋಮನಾಥನು ಸುಪ್ರಸನ್ನ ಆಗುತ್ತಾನೆ.'' ಪ್ರಾಳೇಯನ ಈ ಮಾತು ಅವನ ಮಿತ್ರನಿಗೂ ಸಮ್ಮತ ಎನಿಸಿತು. ಅವರಿಬ್ಬರೂ ಮೂರ್ಛೆ ತಿಳಿದೆದ್ದು ಮತ್ತೆ ಮುಂದಿನ ದಾರಿ ಹಿಡಿದರು. ಪ್ರಭಾಸದತ್ತ ಹೆಜ್ಜೆ ಹಾಕಿದರು.

ಈ ಇಬ್ಬರೂ ಶೋತ್ರಿಯ ಯಾತ್ರಿಕರ ಹರ - ನಿಷ್ಠೆಯನ್ನೂ ತೀರ್ಥಸ್ನಾನ ದೀಕ್ಷೆಯನ್ನೂ ನೋಡಿ ಪರಮ ಪ್ರಸನ್ನನಾದ ಆ ಪರಮೇಶ್ವರ. ಅವರಿಬ್ಬರಿಗೂ ದಾರಿಯಲ್ಲಿಯೇ ತನ್ನ ಪ್ರತ್ಯಕ್ಷ ದರ್ಶನ ನೀಡಿದ. ಭಗವಂತನ ಕೃಪಾಪೂರ್ಣ ದೃಷ್ಟಿಯು ಅವರ ಮೇಲೆ ಬಿದ್ದಕೂಡಲೇ ಅವರಿಗೊಂದು ಹೊಸ ಚೈತನ್ಯವೇ ಬಂದಂತಾಯಿತು, ಕಳೆಗುಂದಿದ ದೇಹದಲ್ಲಿ ಬಲ ಬಂದಿತು. ಉಪವಾಸ ಹಾಗೂ ಮಾರ್ಗಾಯಾಸದಿಂದ ತ್ರಾಣಗೆಟ್ಟು ಕ್ಷೀಣವಾದ ಅವರ ಶರೀರಗಳು ಪರಮೇಶ್ವರನ ಕರುಣಾ ಕಟಾಕ್ಷದ ನಿರೀಕ್ಷಣೆಯಿಂದ ಚೈತನ್ಯದ ಚಿಲುಮೆಗಳಾಗಿ ಕಳೆ, ಕಾಂತಿಗಳಿಂದ ಕಂಗೊಳಿಸತೊಡಗಿದವು. ಅವರಿಬ್ಬರೂ ಮುಂದೆ ಪ್ರಭಾಸತೀರ್ಥಕ್ಕೆ ಬಂದು ಅಲ್ಲಿ ಪುಣ್ಯೋದಕದಲ್ಲಿ ಮಿಂದು, ಸೋಮನಾಥನನ್ನು ಭಕ್ತಿಯಿಂದ ಆರಾಧಿಸಿದರು. ಅವರ ಭಕ್ತಿಯುಕ್ತವಾದ ಆರಾಧನೆ, ಉಪವಾಸ, ಉಪಾಸನೆಯಿಂದ ಪರಿತುಷ್ಟನಾದ ಸೋಮನಾಥನು, ಅವರಿಬ್ಬರಿಗೂ ತನ್ನ ಪಾರ್ಷದರಾಗಿ ಅಲ್ಲಿಯೇ ಇರಲು ಅಪ್ಪಣೆ ಮಾಡಿದನು. ಅವರು ಈಗಲೂ ಸೋಮನಾಥದ ಸಿದ್ದೇಶ್ವರಲಿಂಗ ಸಮೀಪದಲ್ಲಿ ನಿಂತುಕೊಂಡಿದ್ದಾರೆ. ಪಶ್ಚಿಮದಲ್ಲಿ ಊರ್ಜಯಂತ, ಪೂರ್ವದಲ್ಲಿ ಪ್ರಾಳೇಯ. ಸೋಮಕುಂಡ ತೀರ್ಥದಲ್ಲಿಯೂ ಮಹೀಸಾಗರ ಸಂಗಮದಲ್ಲಿಯೂ ಸ್ನಾನ ಮಾಡಿ ಸೋಮನಾಥನ ಸೇವೆಗಾಗಿ ನಿಂತ ಆ ಇಬ್ಬರು ಬ್ರಾಹ್ಮಣ ಪಾರ್ಷದರನ್ನು ಪೂಜೆ ಮಾಡಿದವರಿಗೆ ಸರ್ವಪಾಪಗಳಿಂದಲೂ ಬಿಡುಗಡೆ. ಬ್ರಹ್ಮ ದೇವರು ಹಿಂದೆ ಇದೇ ಸ್ಥಳದಲ್ಲಿ ಹಾಟಕೇಶ್ವರ ಎಂಬ ಲಿಂಗವನ್ನು ಸ್ಥಾಪನೆ ಮಾಡಿದ್ದಾರೆ. ಮತ್ತು ಏಕಾಗ್ರಚಿತ್ತದಿಂದ ತನ್ನ ನಾಲ್ಕೂ ಮುಖಗಳಿಂದ ಈ ಹಾಟಕೇಶ್ವರನನ್ನು ಸ್ತೋತ್ರ ಮಾಡಿದರು. ಆ ಸ್ತೋತ್ರವನ್ನು ಕೇಳು.

## ಬ್ರಹ್ಮಕೃತ ಶಿವಸ್ತುತಿ

''ಭಗವಂತನಾದ ರುದ್ರನೇ, ಸೂರ್ಯನಂತೆ ಅಮಿತ ಕಾಂತಿಯಿಂದ ಕಳಕಳಿಸುವ ನಿನಗೆ ನನ್ನ ನಮಸ್ಕಾರ. ಈ ಜಗತ್ತಿನ ಹುಟ್ಟು ಸಾವುಗಳಿಗೆ ನೀನೇ ಕಾರಣ. ಪಂಚಮಹಾಭೂತಗಳು ನಿನ್ನ ಒಂದೊಂದು ರೂಪಗಳೇ ಆಗಿದ್ದು, ಸರ್ವಲೋಕಗಳನ್ನು ನೀನೇ ರಕ್ಷಣೆ ಮಾಡುವ ಕರ್ಮಯೋಗಿಯೂ

ಅಮೃತಸ್ವರೂಪಿಯೂ ಉಗ್ರ ರೂಪಿಯೂ, ಕಾಮಸಂಹಾರಕನೂ, ಯಜಮಾನ ಮೂರ್ತಿಯೂ ಆದ ನಿನಗೆ ನನ್ನ ವಂದನೆ ''

**ಅರ್ಜುನ :** ''ಮಹರ್ಷಿಯೇ ! ನೀನು ಸ್ಥಾಪಿಸಿದ ಮಹೀಸಾಗರ ಸ್ಥಾನದಲ್ಲಿ ಮುಖ್ಯ ಮುಖ್ಯವಾದ ತೀರ್ಥಗಳು ಯಾವವು? ಅವುಗಳ ಬಣ್ಣನೆಯನ್ನು ಮಾಡು.''

## ಸೂರ್ಯ-ನಾರದರ ಸಂವಾದ

**ನಾರದ :** ''ಅರ್ಜುನ, ಮಹೀಸಾಗರದಲ್ಲಿ ಜಯಾದಿತ್ಯ ಎಂಬ ಹೆಸರಿನ ಒಂದು ತೀರ್ಥವಿದೆ. ಅದರಲ್ಲಿ ಸ್ವಯಂ ಸೂರ್ಯನಾರಾಯಣನೇ ವಾಸವಾಗಿದ್ದಾನೆ. ಅದರ ಪ್ರಾದುರ್ಭಾವದ ಕತೆಯನ್ನು ಹೇಳುತ್ತೇನೆ ಕೇಳು. ನಾನು ಈ ಮಹೀಸಾಗರ ಸಂಗಮವನ್ನು ಸ್ಥಾಪನೆ ಮಾಡಿದ ಬಳಿಕ ಭಗವಾನ್ ಸೂರ್ಯದೇವನ ದರ್ಶನಕ್ಕೆ ಸೌರಲೋಕಕ್ಕೆ ಹೋಗಿದ್ದೆ. ಅಲ್ಲಿ ಆ ಭಾಸ್ಕರನಿಗೆ ನಮಸ್ಕಾರ ಮಾಡಿ ಆಸನದ ಮೇಲೆ ಆಸೀನನಾದೆ. ಆ ಕಮಲಿನೀಪತಿಯು ಅರ್ಘ್ಯ ಪಾದ್ಯಾದಿಗಳಿಂದ ನನ್ನನ್ನು ಪೂಜಿಸಿ ಮಂದಹಾಸ ಮಧುರವಾದ ವಾಣಿಯಲ್ಲಿ ಕೇಳಿದನು - ''ಬ್ರಹ್ಮರ್ಷಿಗಳೇ ! ತಾವು ಎಲ್ಲಿಂದ ದಯಮಾಡಿಸಿದಿರಿ? ಮುಂದೆ ಎತ್ತ ಪ್ರಯಾಣ ? '' ಅದಕ್ಕೆ ನಾನು ನಮ್ರತೆಯಿಂದ ಉತ್ತರಿಸಿದೆ - ''ಪ್ರಭಾಕರ, ಭಾರತವರ್ಷದ ಮಹೀಸಾಗರ ಸಂಗಮಸ್ಥಾನದಿಂದ ನಾನು ನಿನ್ನ ದರ್ಶನಕ್ಕಾಗಿ ಇಲ್ಲಿಗೆ ಬಂದಿದ್ದೇನೆ.''

**ಸೂರ್ಯ :** ''ಮಹರ್ಷಿಗಳೇ, ನೀವು ಸ್ಥಾಪನೆ ಮಾಡಿದ ಆ ಮಹೀಸಾಗರ ಸ್ಥಾನದಲ್ಲಿ ಈಗ ಯಾವ ಬ್ರಾಹ್ಮಣರು ಇರುತ್ತಾರೆ? ಅವರ ಸ್ವರೂಪ ಏನು? ಸ್ವಭಾವ ಯಾವ ವಿಧ? ಅವರ ಗುಣಗಳು ಏನು? ಎಲ್ಲವನ್ನು ನನಗೆ ಹೇಳಿರಿ.''

ಭಗವಾನ್, ಕಿರಣಮಾಲಿಯು ಕೇಳಿದ ಈ ಪ್ರಶ್ನೆಗಳಿಗೆ ನಾನು ನಮ್ರತೆಯಿಂದ ಹೀಗೆ ಉತ್ತರಿಸಿದೆ - ''ಸೂರ್ಯ ನಾರಾಯಣನೇ ! ಇದೀಗ ನನಗೆ ಧರ್ಮಸಂಕಟ. ಆ ಮಹೀಸಾಗರ ಸಂಗಮಸ್ಥಾನದಲ್ಲಿ ಇದ್ದ ಬ್ರಾಹ್ಮಣರನ್ನು ಪ್ರಶಂಸಿಸಿದರೆ, ತನ್ನ ಸ್ಥಾನದಲ್ಲಿ ಇದ್ದವರು ಎಂಬ ಅಭಿಮಾನದಿಂದ ಸ್ತೋತ್ರ ಮಾಡುತ್ತಾನೆ ಎಂದು ನಿಮಗೆ ಎನಿಸಬಹುದು. ಅವರನ್ನು ನಿಂದೆ ಮಾಡಿದರೆ ಅವರಿಗೆ ಅನ್ಯಾಯ ಮಾಡಿದಂತಾಗುವದು. ವಸ್ತುತಃ ಅವರು ನಿಂದನೆಗೆ ಪಾತ್ರರೇ ಅಲ್ಲ. ವಂದನೆಗೇ ಅವರು ಅರ್ಹರು. ಅವರ ಗುಣಗಳು ಪ್ರಶಂಸನೀಯ, ಸ್ವಭಾವ ವರ್ಣನೀಯ, ಮಹಿಮೆ ಮಾನನೀಯ. ಅದನ್ನು ಕಡಿಮೆ ಮಾಡಿ ಹೇಳಿದರೆ ನನಗೆ ದೋಷ. ಆದ್ದರಿಂದ ತಮ್ಮಲ್ಲಿ ನನ್ನದೊಂದು ವಿಜ್ಞಪ್ತಿ. ಆ ಪುಣ್ಯಕ್ಷೇತ್ರದ ಬ್ರಾಹ್ಮಣರ ಸ್ವರೂಪವನ್ನು ಸ್ವತಃ ನೀನೇ ಅಲ್ಲಿಗೇ ಬಂದು ಏಕೆ ನೋಡಬಾರದು?'' ಈ ನನ್ನ ಮಾತನ್ನು ಕೇಳಿ ಅತ್ಯಾಶ್ಚರ್ಯ ಭಗವಾನ್ ಭಾನುಮಾಲಿಗೆ. ಅವನು ನನ್ನ ಆ ಪುಣ್ಯಸ್ಥಳಕ್ಕೆ ಅವಶ್ಯವಾಗಿ ಬರುತ್ತೇನೆ ಎಂದು ಆಶ್ವಾಸನೆ ನೀಡಿ ನನ್ನನ್ನು ಬೀಳ್ಕೊಟ್ಟ. ನಾನು ಅಲ್ಲಿಂದ ಹೊರಟೆ.

## ಬ್ರಾಹ್ಮಣರೂಪದಲ್ಲಿ ಭಾಸ್ಕರ

ಇತ್ತ ಆ ಸೂರ್ಯನಾರಾಯಣನು ಒಂದು ರೂಪದಿಂದ ತನ್ನ ಮೂಲಸ್ಥಳವಾದ ನಕ್ಷತ್ರಲೋಕದ ವಕ್ಷಸ್ಥಳದಲ್ಲಿಯೇ ಇದ್ದುಕೊಂಡು ಯೋಗಶಕ್ತಿಯಿಂದ ಮತ್ತೊಂದು ರೂಪ ತೆಗೆದುಕೊಂಡು ಭೂಲೋಕದ ಸಮುದ್ರ ತೀರಕ್ಕೆ ಐತಂದನು. ಮಹಾ

ತೇಜಸ್ವಿಯಾದ ಓರ್ವ ವೃದ್ಧ ಬ್ರಾಹ್ಮಣನ ರೂಪದಿಂದ ಅವನು ಆ ಮಹೀಸಾಗರ ಸ್ಥಾನಕ್ಕೆ ದಯಮಾಡಿಸಿದನು. ಅವನ ತೇಜಸ್ವಿಯಾದ ಮುಖ ಮಂಡಲ. ಪಿಂಗಲವರ್ಣದ ಜಟಾಮಂಡಲ, ಬ್ರಹ್ಮವರ್ಚಸ್ಸು, ಮತ್ತು ದೇಹದೀಪ್ತಿಯನ್ನು ಕಂಡು ನನ್ನ ಕ್ಷೇತ್ರದಲ್ಲಿದ್ದ ಹಾರೀತ ಮೊದಲಾದ ಬ್ರಾಹ್ಮಣರು ನಮಸ್ಕಾರ ಮಾಡಿದರು. ಪ್ರೀತಿಯಿಂದ ಸ್ವಾಗತಿಸಿದರು. ಪ್ರಸನ್ನ ಮನದಿಂದ ಪ್ರಶ್ನೆ ಮಾಡಿದರು.

''ಬ್ರಾಹ್ಮಣ ಶ್ರೇಷ್ಠರೇ ! ಇಂದಿನ ದಿನವೇ ನಮಗೆ ಸುದಿನ. ಈ ಸ್ಥಾನವು ಇಂದು ಧನ್ಯ. ತಮ್ಮಂಥ ಮಹನೀಯರು ಸ್ವಸಂತೋಷದಿಂದ ಇಲ್ಲಿ ಪಾದಾರ್ಪಣ ಮಾಡಿದ್ದರಿಂದ ಈ ಭೂಮಿಯು ಪಾವನತಮವಾಯಿತು. ಶ್ರೇಷ್ಠರಾದ ಬ್ರಹ್ಮಜ್ಞಾನಿಗಳು ಅತಿಥಿರೂಪದಿಂದ ಬಂದರೆ ಗೃಹಸ್ಥರ ಜೀವನವೇ ಧನ್ಯ. ಅವರ ಮನೆ ಪರಮ ಪವಿತ್ರ. ಆದ್ದರಿಂದ ತಾವು ದಯಮಾಡಿ ನಮ್ಮ ಮನೆಗಳಿಗೆ ಬರಬೇಕು. ಪಾದಧೂಳಿಯಿಂದ ನಮ್ಮ ಗೃಹಗಳನ್ನು ಪವಿತ್ರಗೊಳಿಸಬೇಕು. ನಮ್ಮ ಆತಿಥ್ಯವನ್ನು ಸ್ವೀಕರಿಸಿ ಅಲ್ಲಿ ಭೋಜನ ಮಾಡಿ, ವಿಶ್ರಾಂತಿಯನ್ನು ತೆಗೆದುಕೊಂಡು ನಮ್ಮನ್ನೂ ನಮ್ಮ ಸ್ಥಾನವನ್ನೂ ಪುನೀತಗೊಳಿಸಬೇಕು.

**ವೃದ್ಧ ಬ್ರಾಹ್ಮಣ :** ''ವಿಪ್ರೋತ್ತಮರೇ, ಭೋಜನ ಎರಡು ಬಗೆಯಾಗಿದೆ.'' ನೀವು ತಿಳಿದಿರುವಿರಷ್ಟೇ? ಪ್ರಾಕೃತಭೋಜನ ಪರಮಭೋಜನ ಎಂದು. ನಾನು ಈಗ ನಿಮ್ಮಿಂದ ಪರಮಭೋಜನವನ್ನು ಪಡೆಯಬಯಸುತ್ತೇನೆ. ನೀಡುವಿರಷ್ಟೇ?'' ವೃದ್ಧ ಬ್ರಾಹ್ಮಣನ ಈ ಅಪೇಕ್ಷೆಯನ್ನು ಕೇಳಿ ಹಾರೀತಮುನಿಯು ತನ್ನ ಪಕ್ಕದಲ್ಲಿಯೇ ನಿಂತ ಓರ್ವ ವಿಪ್ರ ವಟುವಿಗೆ ಹೇಳಿದ.

## ಪ್ರಾಕೃತಭೋಜನ ಮತ್ತು ಪರಮಭೋಜನ

''ವತ್ಸ ಕಮಠ ! ಈ ವೃದ್ಧ ಬ್ರಾಹ್ಮಣರು ಕೇಳಿದ ಪರಮಭೋಜನ ಎಂದರೆ ಏನು ಎಂಬುವದನ್ನು ನೀನು ತಿಳಿದಿರುವೆಯಾ ?''

**ಕಮಠ :** ತಂದೆಯೇ, ನಾನು ನಿಮ್ಮೆಲ್ಲರಿಗೂ ನಮಸ್ಕಾರಮಾಡಿ ಆ ಪರಮ ಭೋಜನದ ಪರಿಚಯವನ್ನು ಮಾಡಿಕೊಡುತ್ತೇನೆ. ಮತ್ತು ಈ ವೃದ್ಧ ಬ್ರಾಹ್ಮಣರಿಗೆ ಅಂಥ ಪರಮಭೋಜನವನ್ನು ಮಾಡಿಸುತ್ತೇನೆ. ಹಾಗೂ ಅವರನ್ನು ಸಂತೃಪ್ತಿ ಪಡಿಸುತ್ತೇನೆ. ಪ್ರಕೃತಿ ಮೊದಲಾದ ಇಪ್ಪತ್ನಾಲ್ಕು ತತ್ವಗಳನ್ನೂ. ಆ ತತ್ವಾಭಿಮಾನಿ ದೇವತೆಗಳನ್ನೂ ತೃಪ್ತಿಪಡಿಸುವ ಊಟಕ್ಕೆ ಪ್ರಾಕೃತಭೋಜನ ಎನ್ನುವರು. ಈ ಪ್ರಾಕೃತಭೋಜನವು ಮಧುರ, ಆಮ್ಲ, ಕಟು, ಲವಣ, ಕಷಾಯ, ತಿಕ್ತ ಎಂದು ಆರು ರಸವುಳ್ಳದ್ದು ಆಗಿರುತ್ತದೆ. ಸಿಹಿ, ಹುಳಿ, ಕಹಿ, ಉಪ್ಪು, ಒಗರು, ಖಾರ ಇವೇ ಆರು ರಸಗಳು. ಈ ಭೋಜನವು ಭಕ್ಷ್ಯ, ಭೋಜ್ಯ, ಪೇಯ, ಲೇಹ್ಯ, ಚೋಷ್ಯ ಎಂದರೆ ಉಣ್ಣುವುದು, ತಿನ್ನುವುದು, ಕುಡಿಯುವುದು, ನೆಕ್ಕುವದು, ಚೀಪುವುದು ಎಂದು ಐದು ಬಗೆಯಾಗಿದೆ. ಈ ತರಹದ ಪ್ರಾಕೃತಭೋಜನದಿಂದ ಕ್ಷೇತ್ರ ಎಂಬ ಹೆಸರಿನ ಪಾಂಚಭೌತಿಕ ಶರೀರವು ತೃಪ್ತಿಯನ್ನು ಪಡೆಯುತ್ತದೆ. ಇನ್ನು ಎರಡನೆಯ ಬಗೆಯ

ಭೋಜನಕ್ಕೆ ಪರಮಭೋಜನ ಎನ್ನುವರು. ಸ್ವಯಂ ಆತ್ಮನಿಗೆ ನೀಡುವ ಭೋಜನವೇ ಪರಮಭೋಜನ ಎನಿಸುವದು. ಬಗೆ ಬಗೆಯ ಧಾರ್ಮಿಕ ಗ್ರಂಥಗಳಾದ ಶ್ರುತಿ, ಸ್ಮೃತಿ, ಪುರಾಣಗಳ ಶ್ರವಣ ಮಾಡಿಸಿ ಜ್ಞಾನರೂಪ ಅನ್ನವನ್ನು ಉಣಬಡಿಸುವುದಕ್ಕೆ ಅಧ್ಯಾತ್ಮ ಭೋಜನ ಎನ್ನುವರು. ಕ್ಷೇತ್ರಜ್ಞನಾದ ಆತ್ಮನು ಇಂಥ ಜ್ಞಾನಾನ್ನವನ್ನು ಉಣ್ಣುವ ಭೋಕ್ತಾರ. ಶರೀರದ ಎರಡು ಕಿವಿಗಳೇ ಈ ಅನ್ನಗ್ರಹಣಕ್ಕೆ ಮುಖ. ತಂದೆಯೇ, ಈ ಪರಮ ಭೋಜನವನ್ನು ನಾನು ಇಂದು ನಮ್ಮ ಮನೆಗೆ ಬಂದ ಈ ಬ್ರಾಹ್ಮಣರೂಪೀ ಅತಿಥಿದೇವತೆಗೆ ಅರ್ಪಿಸುತ್ತೇನೆ.'' ಎಂದು ತಂದೆಯ ಅಪ್ಪಣೆ ಪಡೆದುಕೊಂಡು ಆ ಕಮಠ ಎಂಬ ಹೆಸರಿನ ವಿಪ್ರ ವಟುವು ಆ ವೃದ್ಧ ಬ್ರಾಹ್ಮಣನ ಕಡೆಗೆ ತಿರುಗಿ ವಿನಯದಿಂದ ಕೇಳಿಕೊಂಡನು.

**ಕಮಠ :** ''ವಿಪ್ರೋತ್ತಮರೇ, ತಮ್ಮ ಇಚ್ಛೆಯಂತೆ ಪ್ರಶ್ನೆ ಮಾಡಿರಿ. ಇಲ್ಲೆಲ್ಲಾ ನೆರೆದವರು ಬ್ರಾಹ್ಮಣರು. ಇವರೆಲ್ಲರೂ ವಿದ್ವನ್ ಮಣಿಗಳು. ಈ ಪಂಡಿತ ಮಂಡಳಿಯ ಸಭೆಯಲ್ಲಿ ನಾನು ತಮ್ಮ ಪ್ರಶ್ನೆಗಳಿಗೆ ನನ್ನ ಶಕ್ತ್ಯಾನುಸಾರ ಉತ್ತರ ಕೊಡುತ್ತೇನೆ. ತಮಗೆ ಅಪೇಕ್ಷಿತವಾದ ಪರಮಭೋಜನವನ್ನು ಯಥಾಶಕ್ತಿ ಮಾಡಿಸುತ್ತೇನೆ. ತಮ್ಮನ್ನು ಸಂತೋಷಪಡಿಸಲು ಪ್ರಯತ್ನಿಸುತ್ತೇನೆ.'' ಯಥಾಶಕ್ತಿ ಮಾಡಿಸುತ್ತೇನೆ. (ಚಿಕ್ಕ ಮಗುವಾದ ಕಮಠನ ಭಾವಗರ್ಭಿತವಾದ ಈ ನುಡಿಯನ್ನು ಕೇಳಿ, ಅತಿಥಿ ಬ್ರಾಹ್ಮಣನು ಮನಸ್ಸಿನಲ್ಲಿಯೇ ತೇಜೋಬೀಜದಂತಿರುವ ಆ ವಿಪ್ರ ವಟುವನ್ನು ಮೆಚ್ಚಿದ. ಅಚ್ಚರಿಯಿಂದ ಕಣ್ಣನ್ನು ಅಗಲಿಸಿ ನೋಡಿದ. ಆ ಎಳೆ ಕಂದಮ್ಮನ ಎದುರು ಅಧ್ಯಾತ್ಮಿಕ ಮುಂಡಿಗೆಯಂತಿದ್ದ ತನ್ನ ಪ್ರಥಮ ಪ್ರಶ್ನೆಯನ್ನು ಮಂಡಿಸಿದ - ''ಜೀವನು ಹೇಗೆ ಉತ್ಪತ್ತಿಯನ್ನು ಹೊಂದುತ್ತಾನೆ?''

## ಚಿಕ್ಕ ಮಗು - ಪಕ್ವ ವಿಚಾರ

**ಕಮಠ:** ''ಬ್ರಹ್ಮನ್ ! ಉತ್ತರ ಕೊಡುವದಕ್ಕಿಂತ ಮೊದಲು ನನಗೆ ಗುರು ವಂದನೆಯನ್ನು ಮಾಡಲು ಅನುಮತಿ ನೀಡಿರಿ. ಮೊದಲು ನನ್ನ ವಿದ್ಯಾಗುರುವಿಗೂ ಅನಂತರ ಸನಾತನ ಧರ್ಮಕ್ಕೂ ನಮಸ್ಕಾರ ಮಾಡಿ ತಮ್ಮ ಈ ಮೊದಲಿನ ಪ್ರಶ್ನೆಗೆ ವೇದಾರ್ಥ ಸಮ್ಮತವಾದ ಸಮಾಧಾನವನ್ನು ಹೇಳುತ್ತೇನೆ. ಜೀವನು ಈ ಲೋಕದಲ್ಲಿ ಜನ್ಮ ಪಡೆಯಲು ಮೂರು ವಿಧವಾದ ಕರ್ಮವು ಕಾರಣವಾಗಿದೆ. ಪುಣ್ಯ, ಪಾಪ, ಮಿಶ್ರಿತ ಎಂದು ಮೂರು ಬಗೆಯಾಗಿದೆ ಕರ್ಮ. ಸಾತ್ವಿಕ, ರಾಜಸ, ತಾಮಸ, ಎಂದೂ ಈ ಕರ್ಮವು ತ್ರಿವಿಧವಾಗಿದೆ. ಈ ಕರ್ಮಗಳಿಗೆ ಅನುಸಾರವಾಗಿ ಸಾತ್ವಿಕ ಪುರುಷರು ಸ್ವರ್ಗಕ್ಕೆ ಹೋಗುತ್ತಾರೆ. ತಮ್ಮ ಪುಣ್ಯ ರಾಶಿಯು ಸವೆದ ಬಳಿಕ ಸ್ವರ್ಗ ಚ್ಯುತರಾಗಿ ಕೆಳಗೆ ಬರುತ್ತಾರೆ. ಈ ಸಂಸಾರದಲ್ಲಿ ಸಿರಿವಂತರಾಗಿ ಧರ್ಮಿಷ್ಠರಾಗಿ ಸುಖೋಪಭೋಗಗಳನ್ನು ಅನುಭವಿಸುತ್ತಾರೆ. ತಮೋಗುಣಿಗಳಾದ ಜನರು ನರಕದಲ್ಲಿ ಬೀಳುತ್ತಾರೆ. ಅಲ್ಲಿ ಯಮಯಾತನೆಗಳನ್ನು ಅನುಭವಿಸುತ್ತಾರೆ. ಅನಂತರ ಮರ, ಬಳ್ಳಿ, ಕಂಟಿ, ಪೊದೆ ಮುಂತಾದ ಸ್ಥಾವರ ಯೋನಿಯಲ್ಲಿ ಜನ್ಮ ಪಡೆಯುತ್ತಾರೆ. ಆ ಬಳಿಕ ಬಹುಕಾಲ ಕಳೆಯಬೇಕು. ದೊಡ್ಡವರು ಯಾರಾದರೂ ಯೋಗಾಯೋಗದಿಂದ ಈ ಸ್ಥಾವರಗಳಿದ್ದಲ್ಲಿಯೇ ಬಂದರೆ ಅವರ ಸಂದರ್ಶನ, ಸಹವಾಸ, ಸ್ಪರ್ಶಗಳಿಂದ ಅವುಗಳಿಗೆ ಸ್ಥಾವರ ಶರೀರದಿಂದ ಮುಕ್ತಿಯಾಗಿ ಮಾನವ ಜನ್ಮ ಪಡೆಯುವರು.

ಮಾನವರಾದ ಮೇಲೆ ಕೂಡ ಅವರು ದುಃಖಿಗಳೂ ದರಿದ್ರರೂ ಆಗಿರುತ್ತಾರೆ. ಅಥವಾ ಕುರುಡ, ಕುಂಟ ಮೂಕ, ಕೆಪ್ಪ, ಕುಳ್ಳ ಗೂನ ಮುಂತಾಗಿ ಅಂಗವಿಕಲರಾಗಿ ಜನಿಸುವರು. ಇಂಥ ಜನರನ್ನು ಈಗ ನಾವು ಎಲ್ಲ ಕಡೆಗೂ ಕಾಣುತ್ತೇವೆ. ಇವೆಲ್ಲವೂ ಜನ್ಮಾಂತರದಲ್ಲಿ ಮಾಡಿದ ಬಹುಪಾಪದ ಪ್ರತ್ಯಕ್ಷ ಸಾಕ್ಷಿಗಳು. ಪಾಪ ಪುಣ್ಯ ಮಿಶ್ರವಾದ ಕರ್ಮಗಳನ್ನು ಮಾಡುವ ಮಾನವರು ಪಶುಪಕ್ಷಿ ಮುಂತಾದ ಯೋನಿಗಳಲ್ಲಿ ಹುಟ್ಟುವರು. ಅನಂತರ ಅವರು ಮಾನವರಾಗಿ ಹುಟ್ಟುತ್ತಾರೆ. ಅಧಿಕಾಧಿಕ ಪುಣ್ಯ, ಅತ್ಯಲ್ಪ ಪಾಪ ಮಾಡಿದ ಮಾನವರು, ಮೊದಲು ದುಃಖ ಅನುಭವಿಸಿ ಅನಂತರ ಬಹುಕಾಲ ಸುಖವನ್ನು ಅನುಭವಿಸುವರು. ಹೆಚ್ಚು ಹೆಚ್ಚು ಪಾಪ, ಅತ್ಯಲ್ಪ ಪುಣ್ಯವನ್ನು ಹಿಂದೆ ಮಾಡಿದ ಮಾನವರು ಈಗ ಮೊದ ಮೊದಲು ಸುಖಿಗಳಾಗಿದ್ದು ಅನಂತರ ದುಃಖಿಗಳಾಗಿರುವರು. ಇದು ಮಿಶ್ರಿತ ಕರ್ಮದ ಲಕ್ಷಣವಾಗಿರುತ್ತದೆ. ಇನ್ನು ಮೇಲೆ ಮನುಷ್ಯ ಉತ್ಪತ್ತಿಯ ಪ್ರಸಂಗವನ್ನು ಹೇಳುತ್ತೇನೆ ಕೇಳಿರಿ.

## ಜೀವನ ಹುಟ್ಟು

ಸ್ತ್ರೀ -ಪುರುಷರ ಸಂಪರ್ಕದಿಂದ ಸೂಕ್ಷ್ಮವಾದ ಜ್ಞಾನೇಂದ್ರಿಯ, ಮನಸ್ಸು, ಬುದ್ಧಿ ಮತ್ತು ಶುಭಾಶುಭ ಕರ್ಮಗಳ ಸಂಸ್ಕಾರದಿಂದ ಒಡಗೂಡಿಕೊಂಡು ಜೀವನು ಗರ್ಭದಲ್ಲಿ ಪ್ರವೇಶಮಾಡಿ ರಜೋವೀರ್ಯಮಯವಾದ ಗರ್ಭಾಶಯದಲ್ಲಿ ಉಳಿದು ಕೊಳ್ಳುತ್ತಾನೆ. ಹೀಗೆ ಒಂದು ತಿಂಗಳವರೆಗೆ ಜೀವಾತ್ಮನಿಗೆ ಗರ್ಭಗುಹೆಯಲ್ಲಿ ಮೂರ್ಛಾವಸ್ಥೆಯೇ ಇರುತ್ತದೆ. ಎರಡನೆಯ ತಿಂಗಳು ಭ್ರೂಣಾಕಾರದ ಆ ಜೀವನು ಸ್ವಲ್ಪ ಘನೀಭಾವವನ್ನು ಹೊಂದುತ್ತಾನೆ. ಮೂರನೆ ತಿಂಗಳಲ್ಲಿ ಅವನಿಗೆ ಅವಯವಗಳು ಮೂಡತೊಡಗುತ್ತವೆ. ಹೀಗೆ ಏಳನೆ ತಿಂಗಳಷ್ಟೊತ್ತಿಗೆ ಜೀವನ ಅಂಗ ರಚನೆಯು ಪೂರ್ತಿಗೊಂಡು ಭೂಮಿಗೆ ಬರಲು ಸಿದ್ಧತೆಯಾಗಿರುತ್ತದೆ. ಏಳನೆಯ ತಿಂಗಳಲ್ಲಿ ತಾಯಿಯು ತಿಂದ ಅನ್ನ, ಕುಡಿದ ನೀರುಗಳ ಸಾರಭೂತವಾದ ಅಂಶವನ್ನು ಗರ್ಭಸ್ಥ ಜೀವನು ಗ್ರಹಣ ಮಾಡತೊಡಗುತ್ತಾನೆ. ಎಂಟು ಒಂಬತ್ತು ತಿಂಗಳಲ್ಲಿ ಆ ಮಗುವಿಗೆ ಕಸುವು ಬಂದು ಭೂಮಿಯಲ್ಲಿ ಬಾಳುವ ಬಲ ಧೈರ್ಯ ಸ್ಥೈರ್ಯಗಳು ಪ್ರಾಪ್ತವಾಗುತ್ತವೆ. ಇದರ ಜೊತೆಗೆ ಗರ್ಭವಾಸದ ಬಂಧನ ಹಾಗೂ ವಿವಿಧ ವೇದನೆಗಳಿಂದ ಭಯಂಕರ ದುಃಖೋದ್ವೇಗವು ಆರಂಭ ಆಗಿರುತ್ತದೆ. ಆ ಗರ್ಭವು ಉದರದ ಮಧ್ಯಭಾಗದಲ್ಲಿದ್ದರೆ ನಪುಂಸಕ, ಎಡಭಾಗದಲ್ಲಿದ್ದರೆ ಹೆಣ್ಣು, ಬಲಭಾಗದಲ್ಲಿದ್ದರೆ ಗಂಡುಮಗುವಾಗಿ ಹುಟ್ಟುವುದು. ಇದೇ ವೇಳೆಯಲ್ಲಿ ಜನ್ಮಾಂತರದ ಸ್ಮರಣೆ ಜೀವನಿಗೆ ಬರುತ್ತದೆ. ತನ್ನ ದುಷ್ಕರ್ಮಗಳ ನೆನಪು ಉಂಟಾಗುತ್ತದೆ. ದೇವರಲ್ಲಿ ''ಇನ್ನೊಮ್ಮೆ ಹೀಗೆ ಮಾಡುವುದಿಲ್ಲ. ಇದೊಂದು ಸಲ ನನ್ನನ್ನು ಸುಖರೂಪದಿಂದ ಪಾರುಮಾಡು. ಮಾನವನಾಗಿ ಹುಟ್ಟಿದ ಬಳಿಕ ನಿನ್ನ ಆರಾಧನೆಯಲ್ಲಿಯೇ ಕಾಲ ಕಳೆಯುತ್ತೇನೆ'' ಎಂದು ಕ್ಷಮೆ ಬೇಡಿಕೊಳ್ಳುತ್ತಾನೆ.

ಆ ಗರ್ಭಾಶಯವೆಂದರೆ ಒಂದು ಕಗ್ಗತ್ತಲೆಯ ಕೋಣೆ. ಅಲ್ಲಿ ಸಿಕ್ಕು ಹಾಕಿಕೊಂಡ ಪ್ರಾಣಿಯೇ ಜೀವ. ಅಲ್ಲಿಯ ದುರ್ಗಂಧ ವಾಸನೆಯಿಂದ ಮೂರ್ಛೆ ಬರುತ್ತದೆ ಮೇಲಿಂದ ಮೇಲೆ ಆ ಜೀವಕ್ಕೆ. ತಾಯಿ ತಣ್ಣೀರು ಕುಡಿದರೆ ಶೀತವಾಗುತ್ತದೆ. ಬಿಸಿನೀರು ಕುಡಿದರೆ ಉಷ್ಣವಾಗುತ್ತದೆ ಆ ಗರ್ಭಸ್ಥ ಜೀವಕ್ಕೆ. ತಾಯಿಯು ಶ್ರಮ,

ವೇಗದಿಂದ ಆಟ, ಓಡಾಟ ಅಥವಾ ದೀರ್ಘ ಚಿಂತೆ ಮುಂತಾದವುಗಳನ್ನು ಮಾಡಿದರೆ ಹೊಟ್ಟೆಯಲ್ಲಿಯೇ ಒದ್ದಾಡುತ್ತದೆ ಆ ಜೀವ. ಅತ್ಯಂತ ಕೋಮಲವಾಗಿರುತ್ತದೆ ಆ ಗರ್ಭಗತ ಜೀವನ ದೇಹ.

ಆದರಿಂದ ಆ ಭ್ರೂಣದ ಅವಯವಗಳಿಗೆ ಅಲ್ಪಾಲ್ಪ ಗಾಯ ಆಘಾತ ಆದರೂ ಭಯಂಕರ ವೇದನೆ ಉಂಟಾಗುತ್ತದೆ. ತಾಯಿಗೆ ಏನಾದರೂ ರೋಗ ಬಂದರೆ ಪಿಂಡವು ಅದರಿಂದ ಪೀಡಿತವಾಗುತ್ತದೆ. ನಾಲಿಗೆಯ ರುಚಿಗೆ ತಾಯಿ ಉಪ್ಪು ಖಾರ ಹುಳಿ ಪದಾರ್ಥತಿಂದರೆ, ಕೂಸಿನ ಮೈಯಲ್ಲೆಲ್ಲ ಉರಿ, ಸಂಕಟ, ಒಂದೊಂದು ಕ್ಷಣವೂ ಒಂದೊಂದು ವರ್ಷದಂತೆ ದುಃಸಹವಾಗಿರುತ್ತದೆ. ಕೊನೆಯ ಎರಡು ತಿಂಗಳಂತೂ ಉದರದ ಹೊದರಿನಲ್ಲಿರುವ ಆ ಜೀವಕ್ಕೆ ನರಕಯಾತನೆ. ಜನನ ಸಮಯ ಬಂದಾಗ ಪ್ರಸೂತಿವಾಯುವಿನಿಂದ ಆ ಗರ್ಭ ಕೆಳಗೆ ತಳ್ಳಲ್ಪಡುತ್ತದೆ. ಸಂಕುಚಿತ ದ್ವಾರದಿಂದ ಹೊರಬರುವಾಗ ಪ್ರಾಣಾಂತಿಕ ವೇದನೆ. ಮೈಯನ್ನೆಲ್ಲ ಜಜ್ಜಿದಂತೆ, ಚುಚ್ಚಿದಂತೆ, ಚರ್ಮಸುಲಿದಂತೆ ಮೈಯೆಲ್ಲ ಗುದ್ದಿದಂತೆ ಏನೇನೋ ವಿಚಿತ್ರ ದುಃಖದ ಅನುಭವ. ಸಾವು ಬದುಕಿನ ಘೋರ ಸೆಣಸಾಟ. ಅಂತೂ ಆಯುಷ್ಯ ಗಟ್ಟಿ ಇದ್ದರೆ, ಜೀವಂತ ನೆಲವನ್ನು ಸ್ಪರ್ಶಮಾಡಿದರೆ, ಪುಣ್ಯ. ಭೂ ಸ್ಪರ್ಶವಾದಕೂಡಲೇ ಗರ್ಭದಲ್ಲಿ ಇರುವಾಗ ಇದ್ದ ಜ್ಞಾನವೆಲ್ಲವೂ ನಷ್ಟವಾಗುವುದು. ಪುನಃ ಕರ್ಮಪ್ರವಾಹದಲ್ಲಿ ಈಜಾಟ. ಜೀವನದ ರಂಗಭೂಮಿಯಲ್ಲಿ ಪ್ರವೇಶ. ಬೇರೆ ಬೇರೆ ಆಟ. ತಾಮಸ, ರಾಜಸ, ಸಾತ್ವಿಕ ವಿವಿಧವ್ಯಾಪಾರ.

## ಈ ದೇಹ ಒಂದು ಗೇಹ

ಈ ಮಾನವ ಶರೀರವು ಒಂದು ವಿಚಿತ್ರ ಮನೆ, ಮೂಳೆಗಳೆ ಮುಖ್ಯ ಕಂಬಗಳು, ಮುಖವೇ ಇದರ ಬಾಗಿಲು, ಎರಡು ಕಣ್ಣು, ಎರಡು ಕಿವಿ, ಎರಡು ಮೂಗಿನ ಹೊರಳೆ, ಗುದದ್ವಾರ, ಲಿಂಗ ಇವು ಎಂಟು ಕಿಟಕಿಗಳು. ಈ ಮನೆಯು ಮೃತ್ಯುವಿನ ಮುಖದ ಅಗ್ನಿ ಜ್ವಾಲೆಯ ಸಮೀಪದಲ್ಲಿಯೇ ಇರುತ್ತದೆ. ಯಾವಾಗ ಆ ಬೆಂಕಿಯ ಬಾಯಲ್ಲಿ ಬೀಳುವದೋ ನಿಯಮವಿಲ್ಲ. ಬದುಕಿ ಇದ್ದಾಗೆಲ್ಲ ರಾಗ ದ್ವೇಷಗಳಿಂದ ಈ ಜೀವ ತ್ರಸ್ತ ಗ್ರಸ್ತ. ಬಗೆ ಬಗೆಯ ದುಃಖಗಳ ಉತ್ಪತ್ತಿ ಸ್ಥಾನ ಈ ದೇಹವೆಂಬ ಗೇಹ. ಕ್ಷೇತ್ರಜ್ಞನಿಗೆ ವಿಧೇಯನಾಗಿ ಮನೆಯನ್ನು ಶುದ್ಧವಾಗಿ ಇಟ್ಟುಕೊಂಡರೆ, ಅವುಗಳಿಂದ ಅಧ್ಯಾತ್ಮ ಸಾಧನವನ್ನು ಮಾಡಿಕೊಂಡರೆ, ಸಾಧಕನಿಗೆ ಸ್ವರ್ಗ ಮೋಕ್ಷಾದಿ ಪುರುಷಾರ್ಥಗಳೂ ದೊರಕುವವು.''

## ಬ್ರಹ್ಮಾಂಡದ ಪ್ರತಿರೂಪ ಪಿಂಡಾಂಡ ಪಿಂಡಾಂಡದ ರೂಪರೇಷೆ ಹಾಗೂ ರಚನೆ

**ವೃದ್ಧಬ್ರಾಹ್ಮಣ :** '' ಜಾಣ ಮಗು, ನೀನು ವಯಸ್ಸಿನಿಂದ ಬಾಲ. ಆದರೆ ನಿನ್ನ ಬುದ್ಧಿ ಜ್ಞಾನವೃದ್ಧರಂತೆ ಅಭಿವೃದ್ಧ, ನಿನ್ನ ಒಳ್ಳೆಯ ಸೂಕ್ಷ್ಮವಿಷಯ ಪ್ರತಿಪಾದನೆ ನಿನ್ನ ಪರಿಣತ ಪ್ರಜ್ಞೆಗೆ ಸಾಕ್ಷಿ. ಈಗ ನಾನು ನಿನ್ನ ಬಾಯಿಂದ ಶರೀರದ ಲಕ್ಷಣಗಳನ್ನು ಕೇಳಬಯಸುತ್ತೇನೆ.''

**ಕಮಠ :** ''ಅತಿಥಿ ಬ್ರಾಹ್ಮಣ, ಈ ಬ್ರಹ್ಮಾಂಡದ ಕಲ್ಪನೆ ನಿನಗೆ ಇದೆಯಷ್ಟೇ ! ಈ ಶರೀರವು ಅದರ ಒಂದು ಸಂಕ್ಷಿಪ್ತ ಪ್ರತಿರೂಪ. ಅದು ಬ್ರಹ್ಮಾಂಡ, ಇದು ಪಿಂಡಾಂಡ. ಈ ಶರೀರರೂಪ ಬ್ರಹ್ಮಾಂಡದಲ್ಲಿ ಪಾದಗಳ ತಳವೇ ಪಾತಾಳ. ಪಾದದ ಮೇಲ್ಭಾಗ ರಸಾತಳ. ಎರಡು ಹಿಮ್ಮಡ ತಲಾತಲ, ಎರಡು ಮೊಣಗಂಡಗಳು ಮಹಾತಲ. ಎರಡು ಮಂಡೆಗಳೇ ಸುತಲ, ಎರಡು ತೊಡೆ ಹಾಗೂ ಕಟಿಭಾಗವೇ ಅತಲಲೋಕ. ಹೊಕ್ಕಳವೇ ಭೂಲೋಕ. ಹೊಟ್ಟೆ ಭುವರ್ಲೋಕ. ಎದೆ ಸ್ವರ್ಗ ಲೋಕ. ಕೊರಳು ಮಹರ್ಲೋಕ, ಮುಖ ಜನಲೋಕ ಎರಡು ಕಣ್ಣು ತಪೋಲೋಕ, ತಲೆಯೇ ಸತ್ಯಲೋಕ.

ಹೀಗೆ ಶರೀರರೂಪವಾದ ಪಿಂಡಾಂಡವೇ ಒಂದು ಬ್ರಹ್ಮಾಂಡವಿದ್ದಂತೆ. ಪೃಥ್ವಿಯಲ್ಲಿ ಏಳು ದ್ವೀಪಗಳು ಇರುವವಷ್ಟೇ ! ಈ ಶರೀರರೂಪ ಪಿಂಡಾಂಡದಲ್ಲಿ ತೊಗಲು ನೆತ್ತರ, ಮಾಂಸ, ಮೇದಸ್ಸು, ಮೂಳೆ, ಮಜ್ಜಾ, ವೀರ್ಯ ಇವು ಏಳು ಧಾತುಗಳು ಇರುತ್ತವೆ, ಈ ಶರೀರದಲ್ಲಿ ಮುನ್ನೂರಾ ಅರವತ್ತು ಮೂಳೆಗಳು. ಮೂವತ್ತು ಲಕ್ಷ ಐವತ್ತಾರು ಸಾವಿರ ನಾಡಿಗಳು. ನೆಲದಲ್ಲಿ ನದಿಗಳು ಹರಿಯುವಂತೆ ಈ ನಾಡಿಗಳು ದೇಹದ ತುಂಬಾ ರಸವು ಸಂಚರಿಸುವಂತೆ ಮಾಡುತ್ತವೆ. ಮೂರುವರೆ ಕೋಟಿ ಸ್ಥೂಲ ರೋಮಗಳಿಂದ ಈ ದೇಹ ಗೇಹವು ಆಚ್ಛಾದಿತ. ಸ್ಥೂಲ ರೋಮಗಳು ಕಣ್ಣಿಗೆ ಕಾಣುತ್ತವೆ. ಸೂಕ್ಷ್ಮಗಳು ಕಾಣುವದಿಲ್ಲ.

ಹೃದಯವು ಒಂದು ಕಮಲ. ಅದರ ದೇಟು ಮೇಲೆ, ಮುಖ ಕೆಳಗೆ. ಹೃದಯ ಕಮಲದ ಎಡಬದಿಯಲ್ಲಿ ಪ್ಲೀಹ, ಬಲಭಾಗದಲ್ಲಿ ಯಕೃತ್. ಶರೀರದಲ್ಲಿ ಮಜ್ಜಾ ಮೇದಸ್, ವಸಾ, ಮೂತ್ರ, ಪಿತ್ರ, ಕಫ, ವಿಷ್ಠಾ, ರಕ್ತ, ಹಾಗೂ ರಸದ ಗ್ರಂಥಿಗಳು ಎರಡೆರಡು ಬೆರಳಿನ ಪ್ರಮಾಣದಲ್ಲಿ ಇರುತ್ತವೆ. ಆ ಗ್ರಂಥಿಗಳಿಂದ ರಸವು ಹೊಮ್ಮಿ ಹರಿದು, ಶರೀರ ಧಾರಣ ಮಾಡುತ್ತದೆ. ಈ ದೇಹದಲ್ಲಿ ಏಳು ವಿಶೇಷ ನಾಡಿಗಳು ಇರುತ್ತವೆ. ಐದು ತಲೆಯ ಕಡೆಗೆ. ಒಂದು ಲಿಂಗದ ವರೆಗೆ, ಮತ್ತೊಂದು ನಾಲಿಗೆಯ ವರೆಗೆ ಚಾಚಿದೆ. ಎಲ್ಲ ನಾಡಿಗಳೂ ನಾಭಿಕಮಲದಿಂದಲೇ ಹೊರಟು , ಎಲ್ಲ ಕಡೆ ಹಬ್ಬುತ್ತವೆ. ತಲೆಯ ಕಡೆ ಹೋದ ಐದು ನಾಡಿಗಳಲ್ಲಿ ಸುಷುಮ್ನಾ ಇಡಾ ಮತ್ತು ಪಿಂಗಲಾ. ಈ ಮೂರು ನಾಡಿಗಳು ಪ್ರಧಾನ. ಇಡಾ ಪಿಂಗಲಾ ನಾಡಿಗಳು ಮೂಗಿನ ವರೆಗೆ ಹೋಗಿ ತಲುಪಿರುತ್ತವೆ. ಶರೀರದಲ್ಲಿ ವಾಯು, ಅಗ್ನಿ, ಚಂದ್ರ ಇವು ಮೂರು ಎದೆಯ ಭಾಗದಲ್ಲಿ ವಿಭಕ್ತವಾಗಿವೆ.

## ಪಿಂಡಾಂಡದಲ್ಲಿ ವಾಯು ವ್ಯಾಪಾರ

ವಾಯು, ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಎಂದು ಐದು ಬಗೆಯಾಗಿದೆ. ಉಸಿರನ್ನು ಮೇಲೆ ಎಳೆಯುವದು ಕೆಳಗೆ ಬಿಡುವದು, ಅಂದರೆ ಹೊರಗೆ ಹಾಕುವದು. ಮತ್ತು ಅನ್ನ ನೀರು ದೇಹದ ಒಳಗೆ ತಲುಪಿಸುವುದು, ಇವು ಮೂರು ಪ್ರಾಣವಾಯುವಿನ ಮುಖ್ಯ ಕಾರ್ಯವಾಗಿವೆ. ಕಂಠದಿಂದ ತಲೆಯವರೆಗೆ ಈ ಪ್ರಾಣವಾಯು ಇರುವ ಸ್ಥಾನ. ಮಲ,ಮೂತ್ರ, ಹಾಗೂ ವೀರ್ಯಗಳನ್ನು ಹೊರಗೆ

ತಳ್ಳುವದು, ಗರ್ಭದಿಂದ ಮಗುವನ್ನು ಹೊರಗೆ ದೂಡುವದು, ಇದು ಅಪಾನ ವಾಯುವಿನ ಕಾರ್ಯ. ಗುದದ್ವಾರದ ಮೇಲೆ ಈ ಅಪಾನವಾಯು ಇರುತ್ತದೆ. ಸಮಾನ ವಾಯು ಊಟ ಮಾಡಿದ ಅನ್ನವನ್ನು ಗ್ರಹಿಸಿ ಅದರಲ್ಲಿಯ ಬೇರೆ ಬೇರೆ ಅಂಶಗಳನ್ನು ಬೇರ್ಪಡಿಸಿ, ಸಂಪೂರ್ಣ ಶರೀರದೊಳಗೆ ರಸಸಂಚಾರವನ್ನು ಮಾಡುತ್ತ, ಅನಿರ್ಬಂಧವಾಗಿ ಸಂಚರಿಸುತ್ತದೆ. ಶಬ್ದಗಳನ್ನು ನುಡಿಯುವದು ಕಂಠದಿಂದ ಉದ್ಗಾರ ತೆಗೆಯುವದು ಇದು ಉದಾನ ವಾಯುವಿನ ಕಾರ್ಯ. ವ್ಯಾನವಾಯು ಸದಾ ಹೃದಯದಲ್ಲಿ ಇದ್ದು, ಸಂಪೂರ್ಣ ದೇಹ ಪೋಷಣೆಯನ್ನು ಮಾಡುವದು. ಧಾತುವನ್ನು ಅಭಿವೃದ್ಧಿ ಪಡಿಸುವದು. ಬೆವರನ್ನು ಹೊರಗೆ ಹಾಕುವದು. ಕಣ್ಣಿನ ಎವೆಗಳನ್ನು ಮುಚ್ಚಿ ತೆರೆಯುವದು, ಇದೆಲ್ಲವೂ ವ್ಯಾನ ವಾಯುವಿನ ಕಾರ್ಯ ಇವೆಲ್ಲವೂ ಈ ಪಿಂಡಾಂಡದಲ್ಲಿ ನಡೆಯುವ ಪಂಚವಾಯುಗಳ ವ್ಯಾಪಾರ.

## ಪಾವಕನ ಪಂಚಾಚಾರ

ಪಾಚಕ, ರಂಜಕ, ಸಾಧಕ, ಆಲೋಚಕ, ಭ್ರಾಬಾಜಕ - ಎಂದು ಐದು ರೂಪಗಳಿಂದ ಅಗ್ನಿಯು ಈ ಶರೀರದ ಒಳಗೆ ಇರುತ್ತದೆ. ಪಾಚಕ ಅಗ್ನಿಯು ಜಠರದಲ್ಲಿ ಇದ್ದು ಕೊಂಡು ಉಂಡ ಅನ್ನವನ್ನೆಲ್ಲ ಜೀರ್ಣಿಸುತ್ತದೆ. ರಂಜಕ ಅಗ್ನಿಯು ಆಮಾಶಯದಲ್ಲಿ ಇದ್ದುಕೊಂಡು ಅನ್ನದ ರಸವನ್ನು ರಕ್ತದ ರೂಪದಲ್ಲಿ ಪರಿಣತಗೊಳಿಸುತ್ತದೆ. ಮೂರನೇಯದಾದ ಸಾಧಕ ಅಗ್ನಿಯು ಹೃದಯದಲ್ಲಿ ಇದ್ದು, ಬುದ್ಧಿ ಮತ್ತು ಉತ್ಸಾಹಗಳನ್ನು ಬೆಳೆಸುತ್ತದೆ. ನಾಲ್ಕನೇಯದಾದ ಆಲೋಚಕ ಅಗ್ನಿಯು ಕಣ್ಣಿನಲ್ಲಿ ಇರುತ್ತದೆ. ನೋಡುವ ಶಕ್ತಿಯನ್ನು ಹೆಚ್ಚಿಸುತ್ತದೆ. ಐದನೇಯದಾದ ಭ್ರಾಬಾಜಕ ಅಗ್ನಿಯು ದೇಹದ ಚರ್ಮದಲ್ಲಿ ಇದ್ದು, ಶರೀರವನ್ನು ಕಾಂತಿಯುಕ್ತವನ್ನಾಗಿ ಮಾಡುತ್ತದೆ.

ಕ್ಲೇದಕ, ಬೋಧಕ, ತರ್ಪಣ, ಶ್ಲೇಷಣ, ಆಲಂಬಕ ಎಂಬ ಐದು ರೂಪಗಳಿಂದ ಚಂದ್ರನೇ ಶರೀರದ ಒಳಗಡೆ ನೆಲಸಿರುತ್ತಾನೆ. ಕ್ಲೇದಕ ಚಂದ್ರನು ಪಕ್ವಾಶಯದಲ್ಲಿ ಇದ್ದು, ಪ್ರತಿದಿನವೂ ಉಂಡ ಅನ್ನವನ್ನು ಶೋಧಿಸುತ್ತಾನೆ. ಬೋಧಕ ಚಂದ್ರನು ಜಿಹ್ವೇಂದ್ರಿಯದಲ್ಲಿ ಇದ್ದು ರಸಗಳನ್ನು ಅನುಭವಕ್ಕೆ ತಂದುಕೊಡುತ್ತಾನೆ. ತರ್ಪಣ ಚಂದ್ರನು ಮಸ್ತಕದಲ್ಲಿ ಇದ್ದು, ಕಣ್ಣು, ಕಿವಿ ಮೂಗು ಮುಂತಾದ ಇಂದ್ರಿಯಗಳನ್ನು ತೃಪ್ತಿಪಡಿಸುತ್ತಾನೆ. ಶ್ಲೇಷಣಾ ಚಂದ್ರನು ದೇಹದ ಸಂಧಿ ಬಂಧಗಳನ್ನೆಲ್ಲ ವ್ಯಾಪಿಸಿ ಅವು ಒಂದಕ್ಕೊಂದು ಕೂಡುವಂತೆ ಮಾಡುತ್ತಾನೆ. ಕೊನೆಯದಾದ ಆಲಂಬಕ ಚಂದ್ರನು ಹೃದಯದಲ್ಲಿ ಇದ್ದು, ಶರೀರದ ಎಲ್ಲ ಅವಯವಗಳನ್ನು ಪರಸ್ಪರ ಸಾಪೇಕ್ಷವಾಗಿ ಮಾಡುತ್ತಾನೆ.

ಈ ರೀತಿಯಾಗಿ ಐದೈದು ರೂಪಗಳಿಂದ ವಾಯು, ಅಗ್ನಿ, ಹಾಗೂ ಚಂದ್ರರು ಈ ಶರೀರವನ್ನು ಧಾರಣ ಮಾಡುತ್ತಾರೆ. ಇಂದ್ರಿಯಗಳ ಛಿದ್ರ ಮತ್ತು ರೋಮಕೂಪ ಹಾಗೂ ಹೊಟ್ಟೆಯೊಳಗಿನ ಪೊಳ್ಳು ಇದೆಲ್ಲವೂ ಪಿಂಡಾಂಡದೊಳಗೆ ಆಕಾಶ ಜನಿತವಾದ ಅವಕಾಶ ಎಂದು ತಿಳಿಯಬೇಕು. ಮೂಗು, ಕೂದಲು, ಉಗುರು, ಮೂಳೆ, ಸ್ಥೈರ್ಯ, ತ್ವಚಾ, ಮಾಂಸ, ಹೃದಯ, ಗುದ, ನಾಭಿ, ಮಜ್ಜಾ, ಕರುಳು, ಆಮಾಶಯ, ಶಿರ, ಸ್ನಾಯು, ಪಕ್ವಾಶಯ ಮುಂತಾದ ದೇಹ ಘಟಕ ಎಲ್ಲ ಭಾಗಗಳನ್ನು ವೇದ ವಿದ್ವಾಂಸರು ಪೃಥ್ವಿ ಅಂಶ ಎಂದು ಹೇಳುವರು. ಕಣ್ಣುಗಳಲ್ಲಿರುವ ಬಿಳಿಭಾಗವು ಕಫದಿಂದ , ಕರಿಭಾಗವು, ವಾಯುವಿನಿಂದ ಉತ್ಪನ್ನವಾಗುತ್ತವೆ. ಕಣ್ಣಿನಲ್ಲಿ ಐದು ಮಂಡಲಗಳಿರುತ್ತವೆ. ಪಕ್ಷ್ಮ

ಮಂಡಲ, ಚರ್ಮ ಮಂಡಲ, ಶುಕ್ಲ ಮಂಡಲ, ಕೃಷ್ಣ ಮಂಡಲ, ದೃಜ್ ಮಂಡಲ ಎಂದು. ಹಾಗೂ ಕಣ್ಣಿನಲ್ಲಿ ಎರಡು ಭಾಗ, ಒಂದು ಉಪಾಂಗ ಇನ್ನೊಂದು ಅಪಾಂಗ. ಕಣ್ಣಿನ ಕೊನೆಯ ಅಂಚು ಉಪಾಂಗ. ಅದಕ್ಕೆ ನೇತ್ರಾಂಚಲ ಎಂದು ಹೆಸರು. ಮೂಗಿನ ಮೂಲಭಾಗದಿಂದ ಮಿಲಿತವಾದ ಒಂದು ಕಣ್ಣಿನ ಅಂಶವು ಅಪಾಂಗ. ಎರಡೂ ಅಂಡಕೋಶಗಳು, ಮೇದಸ್ಸು, ರಕ್ತ, ಕಫ, ಮಾಂಸ ಈ ನಾಲ್ಕು ಧಾತುಗಳಿಂದ ಕೂಡಿರುತ್ತವೆ. ಎಲ್ಲ ಪ್ರಾಣಿಗಳ ದೇಹವು ನಾಲಿಗೆ, ರಕ್ತ, ಮಾಂಸ, ರಸಗ್ರಂಥಿಗಳಿಂದ ಕೂಡಿರುತ್ತದೆ. ಎರಡು ಕೈ, ಎರಡು ತುಟಿ, ಲಿಂಗ, ಮತ್ತು ಕುತ್ತಿಗೆ ಈ ಆರು ಸ್ಥಾನಗಳು ಚರ್ಮಪ್ರಧಾನವಾಗಿದ್ದು, ಮಾಂಸ ರಕ್ತಗಳಿಂದ ತುಂಬಿರುತ್ತವೆ. ಈ ರೀತಿಯಾಗಿ ಏಳು ಧಾತುಗಳಿಂದ ನಿರ್ಮಿತವಾಗಿ ಇಪ್ಪತ್ತೈದು ತತ್ವಗಳಿಂದ ಕೂಡಿದ ಈ ದೇಹದಲ್ಲಿ ಜೀವನು ವಾಸಮಾಡುತ್ತಾನೆ.

## ಪಂಚಭೂತಗಳ ಕಾರ್ಯ

ಈ ಪಾಂಚ ಭೌತಿಕ ಶರೀರವು, ಪಂಚ ಮಹಾಭೂತಗಳಿಂದ ಉತ್ಪನ್ನವಾಗಿ ಅನ್ನ ನೀರುಗಳಿಂದ ತುಷ್ಟಿಯನ್ನು, ಪುಷ್ಟಿಯನ್ನು ಹೊಂದುತ್ತದೆ. ದೇಹಧಾರಿಯಾದ ಜೀವವು ಒಂದೊಂದು ತುತ್ತುಗಳ ಮುಖಾಂತರ ಉಂಡ ಅನ್ನವನ್ನು ಪ್ರಾಣವಾಯು ಸ್ಥೂಲಾಶಯದಲ್ಲಿ ಒಟ್ಟೈಸುತ್ತದೆ. ಮುಂದೆ ಅದೇ ಪ್ರಾಣವಾಯುವು ಅನ್ನದೊಳಗೆ ಪ್ರವೇಶಿಸಿ, ಅವುಗಳನ್ನು ಬೇರೆ ಬೇರೆ ಮಾಡುತ್ತದೆ. ಅದರಲ್ಲಿ ಇರುವ ನೀರನ್ನು ಅಗ್ನಿಯ ಮೇಲೆ ಇಟ್ಟು, ಅದರ ಮೇಲೆ ಅನ್ನವನ್ನು ಇರಿಸಿ, ತಾನು ನೀರಿನ ಕೆಳಗೆ ಇದ್ದು ಮೆಲ್ಲ ಮೆಲ್ಲನೆ, ಅಗ್ನಿಯನ್ನು ಉದ್ದೀಪಿತಗೊಳಿಸುತ್ತದೆ. ವಾಯುವಿನಿಂದ ಉದ್ದೀಪ್ತವಾದ ಅಗ್ನಿಯು ನೀರನ್ನು ಕುದಿಯುವಂತೆ ಉಷ್ಣವನ್ನಾಗಿ ಮಾಡುತ್ತದೆ. ಆ ಉಷ್ಣಜಲದಿಂದ ಅನ್ನವು ಎಲ್ಲ ಕಡೆಯಿಂದಲೂ ಪಕ್ವವಾಗತೊಡಗುತ್ತದೆ. ಅದು ಪಕ್ವವಾದ ಬಳಿಕ ಅದರಲ್ಲಿ ಎರಡು ಭಾಗಗಳು ಆಗುತ್ತವೆ. ಅದರಲ್ಲಿಯ ಕಶ್ಮಲ ಭಾಗವು ಬೇರೆಯಾಗುತ್ತದೆ ರಸವು ಬೇರೆಯಾಗುತ್ತದೆ. ಕಶ್ಮಲ ಭಾಗವೇ ಮಲವಾಗಿ ಹೊರಬಿದ್ದು ಹೋಗುತ್ತದೆ. ಕಣ್ಣು, ಕಿವಿ, ಮೂಗು, ನಾಲಿಗೆ, ಲಿಂಗ, ಗುದ, ಉಗುರು, ರೋಮಕೂಪ ಇವು ಹನ್ನೆರಡು ಮಲ ಭಾಗದ ಆಶ್ರಯ ಸ್ಥಾನಗಳು. ಶರೀರದ ಎಲ್ಲ ನಾಡಿಗಳನ್ನು ಆ ರಸದಿಂದ ಪರಿಪೂರ್ಣವಾಗಿ ಮಾಡುತ್ತದೆ. ಅನಂತರ ಉಳಿದ ಆ ರಸಪೂರ್ಣ ನಾಡಿಗಳು ಆ ರಸವನ್ನು ದೇಹದ ಎಲ್ಲ ಕಡೆಗೂ ಹೋಗಿ ಮುಟ್ಟಿಸುತ್ತವೆ. ನಾಡಿಯಲ್ಲಿರುವ ಆ ರಸವು ರಂಜಕ ಅಗ್ನಿಯ ಉಷ್ಣತೆಯಿಂದ ಪಕ್ವವಾಗತೊಡಗುತ್ತದೆ. (ಮತ್ತು ರಕ್ತರೂಪದಲ್ಲಿ ಪರಿಣತವಾಗುತ್ತದೆ.)

ಅನಂತರ, ತ್ವಚ, ರೋಮ, ಕೇಶ, ಮಾಂಸ, ಸ್ನಾಯು, ಶಿರಸ್ಸು, ಮೂಳೆ, ಉಗುರು, ಮಜ್ಜಾ, ಇಂದ್ರಿಯ ವೃದ್ಧಿ, ವೀರ್ಯ ವೃದ್ಧಿ ಇವಿಷ್ಟು ಕಾರ್ಯಗಳು ರಕ್ತದಿಂದ ಕ್ರಮವಾಗಿ ಆಗುತ್ತವೆ. ಈ ಪ್ರಕಾರ ಹನ್ನೆರಡು ರೂಪದಲ್ಲಿ ಅನ್ನವು ಪರಿಣಾಮವನ್ನು ಹೊಂದುತ್ತದೆ. ಮೇಲೆ ಹೇಳಿದ ಎಲ್ಲ ಧಾತುಗಳಿಂದ ನಿರ್ಮಿತವಾದ ಈ ಶರೀರವು ಪುಣ್ಯ ಸಾಧನ ಮಾಡಿಕೊಳ್ಳಲಿಕ್ಕಾಗಿಯೇ ಬಂದಿರುತ್ತದೆ. ಉತ್ತಮೋತ್ತಮವಾದ ತಿಂಡಿ ತೀರ್ಥ, ತಿನಿಸು, ಉಣಿಸು, ಸ್ನಾನ, ಪಾನಗಳಿಂದ ಹಾಗೂ

ಉತ್ತಮ ಸ್ವಾದಿಷ್ಟ ಭೋಜನಗಳಿಂದ ಪರಿಪುಷ್ಟವಾದ ಈ ಶರೀರದಿಂದ ಮಾನವನು ಪುಣ್ಯ ಸಂಪಾದನ ಮಾಡದಿದ್ದರೆ, ಬದುಕಿ ಏನು ಫಲ? ಪುಣ್ಯವನ್ನು ಗಳಿಸದಿದ್ದರೆ ಆ ಮನುಷ್ಯನು ಪಶು ಇದ್ದಂತೆ. ಈ ದೃಷ್ಟಿಯಲ್ಲಿ ನಮ್ಮ ಪ್ರಾಚೀನರು ಹೇಳಿದ ಈ ಶ್ಲೋಕವನ್ನು ನೆನಪಿನಲ್ಲಿಡುವುದು ಅವಶ್ಯಕವಾಗಿದೆ.

**ಯಸ್ಮಿನ್ಕಾಲೇ ಚ ದೇಶೇಚ ವಯಸಾ ಯಾದೃಶೇನ ಚ ।**
**ಕೃತಂ ಶುಭಾಶುಭಂ ಕರ್ಮ ತತ್ತಥಾ ತೇನ ಭುಜ್ಯತೇ ॥**

**ತಸ್ಮಾತ್ ಸದಾ ಶುಭಂ ಕಾರ್ಯಮವಿಚ್ಛಿನ್ನಸುಖಾರ್ಥಿಭಿಃ ।**
**ವಿಚ್ಛಿದ್ಯಂತೇಽನ್ಯಥಾ ಭೋಗಾ ಗ್ರೀಷ್ಮೇ ಕುಸರಿತೋ ಯಥಾ ॥**

**ಯಸ್ಮಾತ್ ಪಾಪೇನ ದುಃಖಾನಿ ತೀವ್ರಾಣಿ ಸುಬಹೂನ್ಯಪಿ ।**
**ತಸ್ಮಾತ್ಪಾಪಂ ನ ಕರ್ತವ್ಯಮಾತ್ಮಪೀಡಾಕರಂ ಹಿ ತತ್ ॥**

ಯಾವ ಕಾಲದಲ್ಲಿ, ಯಾವ ದೇಶದಲ್ಲಿ, ಯಾವ ವಯಸ್ಸಿನಲ್ಲಿ ಯಾವ ತರಹದ ಶುಭಾಶುಭ ಕರ್ಮಗಳನ್ನು ಮಾನವನು ಮಾಡುತ್ತಾನೋ ಅದೇ ದೇಶ ಕಾಲ ವಯಸ್ಸಿನಲ್ಲಿ ಕರ್ತನು ತನ್ನ ಶುಭಾಶುಭ ಕರ್ಮಗಳ ಫಲವನ್ನು ಉಣ್ಣಬೇಕಾಗುವದು. ಆದ್ದರಿಂದ ಅವಿಚ್ಛಿನ್ನವಾಗಿ ಸಂತತವೂ ಸೌಖ್ಯವೇ ಆಗಬೇಕು ಎಂದು ಬಯಸುವವನು ಯಾವಾಗಲೂ ಪುಣ್ಯಕಾರ್ಯಗಳನ್ನು ಮಾಡುತ್ತಲೇ ಇರಬೇಕು. ಬೇಸಿಗೆ ಕಾಲದಲ್ಲಿ ಕ್ಷುದ್ರ ನದಿಗಳು ಒಣಗಿ ಹೋಗುವವು. ಅದರಂತೆ ಪಾಪ ಕರ್ಮ ಮಾಡುವವರ ಸುಖೋಪ ಭೋಗಗಳೆಲ್ಲವೂ ನಷ್ಟವಾಗಿ ಹೋಗುವವು. ಆದ್ದರಿಂದ ವಿವೇಕಿಯಾದ ಮಾನವನು ಪಾಪಕಾರ್ಯಗಳನ್ನು ಎಂದೂ ಮಾಡಬಾರದು. ಅವುಗಳಿಂದ ಆತ್ಮನಿಗೆ ಪೀಡೆ ತಪ್ಪದು.

ಮಹಾತ್ಮರೇ, ನಾನು ಈ ರೀತಿಯಾಗಿ ತಮ್ಮ ಪ್ರಶ್ನೆಗಳಿಗೆ ಯಥಾಶಕ್ತಿ ಉತ್ತರ ನೀಡಿದ್ದೇನೆ. ಪ್ರಾಣಿಯು ಯಾವ ರೀತಿಯಿಂದ ಉತ್ಪತ್ತಿ ಹೊಂದುವದು ಎನ್ನುವದನ್ನು ನಾನು ತಿಳಿಸಿ ಹೇಳಿದೆ. ಇನ್ನು ಜೀವಿಗಳಿಗೆ ಸಾವು ಬರುವ ಬಗೆಯನ್ನು ವಿವರಿಸುತ್ತೇನೆ, ಕೇಳಿರಿ.

## ಜೀವನ ಸಾವಿನ ಬಗೆ

ಕರ್ಮಾನುಸಾರ ಮಾನವ ಪ್ರಾಣಿಗೆ ಮರಣ ಕಾಲವು ಉಪಸ್ಥಿತವಾಗುವದು. ಆಗ ಯಮದೂತರು ಶರೀರದಿಂದ ಪ್ರಾಣಗಳನ್ನು ಸೆಳೆಯುವರು. ಪುಣ್ಯ ಪಾಪಗಳ ಬಂಧನದಲ್ಲಿ ಬದ್ಧನಾದ ಜೀವನು, ಶಬ್ದ, ಸ್ಪರ್ಶ, ರೂಪ, ರಸ ಗಂಧ ಎಂಬ ಐದು ತನ್ಮಾತ್ರೆಗಳನ್ನೂ, ಮನಸ್ಸು ಬುದ್ಧಿ ಅಹಂಕಾರಗಳನ್ನೂ ಜೊತೆಗೆ ತೆಗೆದುಕೊಂಡು ದೇಹವನ್ನು ಬಿಡುತ್ತಾನೆ. ಪುಣ್ಯ ಪುರುಷರುಗಳ ಪ್ರಾಣಗಳು ಮುಖಮಂಡಲದಲ್ಲಿದ್ದ ಎರಡು ಕಿವಿ, ಎರಡು ಕಣ್ಣು, ಎರಡು ಮೂಗಿನ ಹೊರಳೆ, ಏಳನೇಯದು ಬಾಯಿ. ಹೀಗೆ ಸಪ್ತಛಿದ್ರಗಳಲ್ಲಿ ಒಂದು ರಂಧ್ರದಿಂದ ಹೊರಬೀಳುವದು. ಪಾಪಿಗಳ ಪ್ರಾಣ, ಗುದದ್ವಾರದಿಂದ ಹೊರಬೀಳುವದು. ಆದರೆ ಯೋಗೀಪುರುಷರ ಪ್ರಾಣವು ಮಾತ್ರ ತಮ್ಮ ಬ್ರಹ್ಮರಂಧ್ರ ಸ್ಫೋಟದಿಂದ ಉತ್ಕ್ರಾಂತವಾಗಿ ಊರ್ಧ್ವಗಮನವನ್ನು ಮಾಡುತ್ತದೆ. ಮರಣಾನಂತರದಲ್ಲಿ ಜೀವವು ತನ್ನ ಅಂಗುಷ್ಠ ಆಕಾರದ ಒಂದು ಸೂಕ್ಷ್ಮ ಶರೀರವನ್ನು

ಧಾರಣ ಮಾಡುತ್ತದೆ. ಅದಕ್ಕೆ ಅತಿವಾಹಕ ಶರೀರ ಎಂದು ಹೇಳುತ್ತಾರೆ. ಪ್ರಾಣಿಯ ಈ ಅತಿವಾಹಕ ಶರೀರವನ್ನು ಯಮದೂತರು ಯಮಪಾಶದಿಂದ ಬಿಗಿದು ಬಲಾತ್ಕಾರದಿಂದ ಯಮಲೋಕದ ಮಾರ್ಗದಲ್ಲಿ ಸೆಳೆದು ಒಯ್ಯುತ್ತಾರೆ. ಆ ಯಮಲೋಕದ ಮಾರ್ಗವು ಕಾದಕಬ್ಬಿಣದ ತುಂಡಿನಂತೆ ಸುಡುತ್ತಿರುತ್ತದೆ. ಬಿಸಿಲಿಗೆ ಹುರುಪಳಿಸುವ ಉಸುಕಿನ ಮೈದಾನದ ರಣಭೂಮಿಯಂತೆ ಕಾಯ್ದ ತಗಡಿನಂತೆ ಸುಡುತ್ತಿರುತ್ತದೆ. ಎಂಬತ್ತಾರು ಸಾವಿರ ಯೋಜನದ ಈ ಯಮಪಟ್ಟಣಕ್ಕೆ ಯಮದೂತರು ಪಾಪಿಗಳನ್ನು ನೆಲದ ಮೇಲೆ ಜಗ್ಗುತ್ತಾ ಒಯ್ಯುತ್ತಾರೆ. ದಾರಿಗುಂಟ ಭಾರಿ ಕತ್ತಲೆ, ವಿಪರೀತ ಚಳಿ, ದುರ್ಗಮ ಸ್ಥಾನ, ಮೇಲೆ ಕಾಗೆ, ಹದ್ದು, ನರಿ, ನೊಣ ಹಾವು, ಚೇಳು ಮಧ್ಯ ಮಧ್ಯದಲ್ಲಿ ಕಚ್ಚುತ್ತ ಚುಚ್ಚುತ್ತ ಇರುತ್ತವೆ. ಒಮ್ಮೊಮ್ಮೆ ಕ್ರೂರ ರಕ್ಕಸರು ಬಂದು ಕೈ ಕಾಲು ಕಡಿದು ಕಚ್ಚಿ ಆಚೀಚೆ ಎಳೆದಾಡಿ ಒಗೆಯುತ್ತಾರೆ. ಯಮಪಟ್ಟಣದ ಈ ದುಸ್ತರವಾದ ಮಾರ್ಗವನ್ನು ಹತ್ತು ಮುಹೂರ್ತ ಎಂದರೆ ನಾಲ್ಕು ಗಂಟೆಗಳಲ್ಲಿ ದಾಟಿ ರಕ್ತದ ಧಾರೆಯು ಹರಿಯುತ್ತಿರುವ ವೈತರಣಿ ನದಿಯಲ್ಲಿ ಎದ್ದಿ, ಮುಳುಗಿಸಿ, ತೇಲಿಸಿ ಯಮರಾಜನ ಸಂಯಮನೀಪುರಕ್ಕೆ ಕರೆದೊಯ್ಯುತ್ತಾರೆ.

ಆ ಯಮಲೋಕದಲ್ಲಿ ಪಾಪೀ ಜೀವರು ಅತ್ಯಂತ ಭಯಂಕರ ಆಕಾರದ ಯಮನನ್ನು ಎದುರಿಸಬೇಕಾಗುವದು. ಪುಣ್ಯಪುರುಷರಿಗೆ ಅತ್ಯಂತ ಶಾಂತವಾದ ಸೌಮ್ಯವಾದ ರೂಪದಿಂದ ಯಮಧರ್ಮನು ದರ್ಶನ ನೀಡುವನು. ಯಮಲೋಕ ಪ್ರಯಾಣವು ಮಾನವಜೀವಿಗಳಿಗೆ ಮಾತ್ರ. ಬೇರೆ ಪ್ರಾಣಿಗಳು ಸತ್ತ ಕೂಡಲೇ ಮತ್ತೆ ಬೇರೆ ಯೋನಿಯಲ್ಲಿ ಹುಟ್ಟಿ ಬಿಡುತ್ತವೆ. ಕೇವಲ ಮಾನವರು ಮಾತ್ರ ಬುದ್ಧಿ ಪೂರ್ವಕವಾಗಿ ಪಾಪಪುಣ್ಯಗಳನ್ನು ಮಾಡಿರುವದರಿಂದ, ಪ್ರೇತರಾಗಿ ಯಮಲೋಕಕ್ಕೆ ಹೋಗುತ್ತಾರೆ. ಧರ್ಮಾತ್ಮರಾದ ಸತ್ಪುರುಷರು ಯಮಲೋಕಕ್ಕೆ ಹೋದರೂ ಹೆದರುವ ಕಾರಣವಿಲ್ಲ. ಅಲ್ಲಿಯೂ ಅವರಿಗೆ ಗೌರವ ಸತ್ಕಾರ. ಪಾಪಿಗಳಿಗೆ ಮಾತ್ರ ದುರಂತ ದುಃಖಭೋಗ.

## ಪುಣ್ಯಕರ್ಮಗಳ ಶುಭಫಲ

ವಿಪ್ರೋತ್ತಮರೇ, ಪುಣ್ಯ ಪುರುಷರು ಪರಲೋಕಕ್ಕೆ ಪ್ರಯಾಣ ಮಾಡುವ ಮಾರ್ಗವನ್ನು ವರ್ಣಿಸುತ್ತೇನೆ. ಯಾವನು ಈ ಲೋಕದಲ್ಲಿ ಉಪವನಗಳನ್ನು ದಾನ ಮಾಡುವನೋ ಹಾಗೂ ಮರಗಳನ್ನು ದಾರಿಯ ಎಡಬದಿಗಳಲ್ಲಿ ಬೆಳಿಸಿ ನೆರಳನ್ನು ಉಂಟು ಮಾಡುವನೋ ಅಂಥ ಪುಣ್ಯಾತ್ಮನು, ದಟ್ಟ ನೆರಳುಳ್ಳ ಹೆಮ್ಮರಗಳ ತಣ್ಣೆಳಲಿನ ಮಾರ್ಗದಲ್ಲಿ ಸುಖರೂಪವಾಗಿ ಯಮಪುರಿಯ ಯಾತ್ರೆಯನ್ನು ಕೈಕೊಳ್ಳುತ್ತಾನೆ. ಕೊಡೆಯ ದಾನ ಮಾಡಿದ ಮಾನವನಿಗೆ ದಾರಿ ತುಂಬ ನೆರಳು. ಪಾದರಕ್ಷೆಯನ್ನು ದಾನ ಮಾಡಿದವನಿಗೆ ಯಾವದಾದರೂ ವಾಹನದ ಮೇಲೆ ಪ್ರಯಾಣ. ಕೆರೆ ಬಾವಿ ತೋಡಿಸಿ, ಜಲದಾನ ಮಾಡಿದವನಿಗೆ ದಾರಿಗುಂಟ ಬಾಯಾರಿಕೆ ಆಗದಂತೆ ಪಾನೀಯಗಳ ಏರ್ಪಾಡು ಇರುತ್ತದೆ. ಹಾಸಿಗೆ, ಆಸನ, ವಾಹನಗಳನ್ನು ದಾನ ನೀಡಿದವನಿಗೆ ವಿಮಾನದಲ್ಲಿ ಕೂಡಿಸಿ ಗೌರವದಿಂದ ಕರೆದೊಯ್ಯಲಾಗುವದು. ಇಲ್ಲಿ ಅನ್ನದಾನ ಮಾಡಿದವರಿಗೆ ದಾರಿಗುಂಟ ಭಕ್ಷ್ಯ, ಭೋಜ್ಯ, ದೀಪದಾನ ಮಾಡಿದವರಿಗೆ

ದಾರಿತುಂಬ ಬೆಳಕು. ಗೋದಾನ ನೀಡಿದವರು ವೈತರಣಿ ನದಿಯನ್ನು ಸುಖವಾಗಿ ದಾಟುವರು. ಬದುಕಿ ಇರುವವರೆಗೂ ಸೂರ್ಯ, ಶಿವ ಅಥವಾ ವಿಷ್ಣುವಿನ ಪೂಜೆ ಮಾಡುವವರನ್ನು ಯಮದೂತರು ತಾವೇ ಪೂಜೆ ಮಾಡಿ ಭಗವನ್ ಮಂದಿರಕ್ಕೆ ತಲುಪಿಸುವರು.

## ಊರ್ಧ್ವಲೋಕದ ಕ್ರಿಯಾಕಲಾಪದ ಆವಶ್ಯಕತೆ

ಚಿತ್ರಗುಪ್ತರು ಈ ಲೋಕದಲ್ಲಿ ಪಾಪಿಗಳು ಹಾಗೂ ಪುಣ್ಯ ಪುರುಷರು ಮಾಡಿದ ಪಾಪಕರ್ಮಗಳ ಹಾಗೂ ಪುಣ್ಯಕರ್ಮಗಳ ವಿವರವಾದ ಯಾದಿಯನ್ನು ಯಮನಿಗೆ ಒಪ್ಪಿಸುವರು. ಒಂದು ವರ್ಷ ಜೀವನು ಪ್ರೇತರೂಪದಲ್ಲಿ ವಾಸಮಾಡುವನು. ಅದೇ ವರ್ಷದಲ್ಲಿ ಆ ಜೀವಕ್ಕೆ ಭೋಗದೇಹವು ಪ್ರಾಪ್ತವಾಗುವದು. ಅವರ ಮಕ್ಕಳು ಬಂಧು ಬಳಗದವರು, ನೀರು ತುಂಬಿದ ಕುಂಭದಾನ, ಮತ್ತು ಅನ್ನದಾನ ಮಾಡಿದರೆ, ಅಥವಾ ತಾನು ಬದುಕಿದ್ದಾಗ ವಿಪುಲವಾಗಿ ಜಲದಾನ, ಅನ್ನದಾನವನ್ನು ಮಾಡಿದ್ದರೆ ಅದೆಲ್ಲವೂ ಈ ಯಮಲೋಕದಲ್ಲಿ ಹಸಿವು ಬಾಯಾರಿಕೆಯಿಂದ ಬಳಲಬೇಕಾಗುವದು. ಸತ್ತ ಬಳಿಕ ಅವನು ಸಂಬಂಧಿಕರು ಶ್ರದ್ಧೆಯಿಂದ ಪ್ರತಿ ತಿಂಗಳೂ ದಾನ, ಹಾಗೂ ಮಾಸಿಕ ಶ್ರಾದ್ಧಗಳನ್ನು ಮಾಡದಿದ್ದರೆ ಪ್ರೇತಯೋನಿಯಿಂದ ಮುಕ್ತಿಯೇ ಇಲ್ಲ ಆ ಜೀವಕ್ಕೆ. ಪ್ರೇತಲೋಕದ ದಿನಮಾನ ಮಾನವಲೋಕದ ದಿನಮಾನಕ್ಕೆ ಸಮಾನವಾಗಿಯೇ ಇದೆ. ಆದ್ದರಿಂದ ಸತ್ತವನನ್ನು ಉದ್ದೇಶಿಸಿ ಪ್ರತಿದಿನವೂ ಒಂದು ವರ್ಷದವರೆಗೆ ಅನ್ನದಾನ ಮಾಡುತ್ತಾ ಇದ್ದರೆ, ಅದು ಆ ಪ್ರೇತಯೋನಿಯಲ್ಲಿ ಇರುವವರೆಗೆ ಯಥೇಚ್ಛ ಭೋಜನವನ್ನು ಮಾಡಲು ಆ ಪ್ರೇತಕ್ಕೆ ಅನುಕೂಲವಾಗುವದು. ಸಂಬಂಧಿಗಳು ಈ ಲೋಕದಲ್ಲಿ ಷೋಢಶ ಶ್ರಾದ್ಧ ಮತ್ತು ಓರ್ಧ್ವದೇಹಿಕ ಮರಣೋತ್ತರ ಕ್ರಿಯಾಕಲಾಪಗಳನ್ನು ಎಲ್ಲ ವಿಧ, ಪ್ರೇತಸಂಸ್ಕಾರಗಳನ್ನು ಮಾಡದಿದ್ದರೆ, ಜೀವಕ್ಕೆ ಪ್ರೇತಯೋನಿಯಿಂದ ಬಿಡುಗಡೆಯೇ ಆಗುವದಿಲ್ಲ. ಹೀಗೆ ಸತ್ತಕೂಡಲೇ ಹನ್ನೆರಡು ದಿನ ಪ್ರೇತಕಾರ್ಯವನ್ನು ಮಾಡಿದ ಬಳಿಕ, ಅವನ ಬಂಧು, ಪುತ್ರ, ಪರಿವಾರದವರು ಒಂದು ವರ್ಷದವರೆಗೆ ಮೃತಾತ್ಮನ ಹೆಸರಿನಿಂದ ದಾನ ಮಾಡುತ್ತಿದ್ದು, ಸಪಿಂಡೀಕರಣ ಶ್ರಾದ್ಧವನ್ನು ಕೊನೆಗೆ ಮಾಡಿದ ಬಳಿಕ ಜೀವನಿಗೆ ಒಳ್ಳೇ ಭೋಗಶರೀರ ಪ್ರಾಪ್ತಿಯು ಪೂರ್ಣವಾಗುತ್ತದೆ. ಪಾಪಿಗಳಿಗೆ ದಾರುಣ ದೇಹವು, ಪುಣ್ಯ ಪುರುಷರಿಗೆ ಉತ್ತಮ ಶರೀರವು ಪ್ರಾಪ್ತವಾಗುತ್ತವೆ. ಅನಂತರ ಜೀವನು ತನ್ನ ಕರ್ಮಾನುಸಾರ ಸ್ವರ್ಗ ಅಥವಾ ನರಕಕ್ಕೆ ಹೋಗುತ್ತಾನೆ. ಪಾಪಿಗಳು ಪಾತಾಲ ಲೋಕ ಮುಂತಾದ ರೌರವ ನರಕದಲ್ಲಿ ಬೀಳುತ್ತಾರೆ. ಪುಣ್ಯಪುರುಷರು ಸ್ವರ್ಗಾದಿ ಪುಣ್ಯ ಲೋಕಗಳಿಗೆ ಪ್ರಯಾಣ ಮಾಡುತ್ತಾರೆ.

## ಕರ್ಮಾನುರೂಪ ಫಲ

ಒಂದು ವರ್ಷ ಮೊದಲೇ ಸಪಿಂಡೀಕರಣ ಶ್ರಾದ್ಧವನ್ನು ಮಾಡಿದರೂ ಮೃತಾತ್ಮನ ಪ್ರೇತತ್ವವು ಒಂದು ವರ್ಷದವರೆಗೆ ಇದ್ದೇ ಇರುವದು. ಯಾರು ಅಶ್ವಮೇಧಾದಿ ಮೂರು ಯಜ್ಞಗಳ ಮುಖಾಂತರ ಭಗವಂತನ ಸೇವೆಯನ್ನು ಮಾಡಿರುವರೋ ಅಥವಾ ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂವರ ಪೂಜೆಯನ್ನು ಭಕ್ತಿಪೂರ್ವಕವಾಗಿ ಮಾಡಿರುವರೋ ಅಥವಾ ಸಮ್ಮುಖ ಯುದ್ಧದಲ್ಲಿ ರಣಾಂಗಣದಲ್ಲಿಯೇ ಹೋರಾಡುತ್ತ ಪ್ರಾಣ ಬಿಟ್ಟಿರುವರೋ ಅಂಥ

ಪುಣ್ಯ ಪುರುಷರು ಎಂದೂ ಪ್ರೇತ ಲೋಕಕ್ಕೆ ಹೋಗುವದಿಲ್ಲ. ಅವರು ಒಮ್ಮೆಲೇ ಸ್ವರ್ಗಲೋಕಕ್ಕೆ ಪ್ರಯಾಣ ಮಾಡುವರು. ಕೇವಲ ಪಾಪವನ್ನೇ ಜನ್ಮಾವಧಿ ಮಾಡಿದ ಪಾಪಿಗಳು ಕಗ್ಗತ್ತಲೆಯಿಂದ ತುಂಬಿದ ಘೋರಾತ್ ಘೋರತರವಾದ ನರಕಲೋಕದಲ್ಲಿ ಭಯಂಕರವಾದ ದುಃಖ ವೇದನೆಗಳನ್ನು ಅನುಭವಿಸುತ್ತ ಬಹುಕಾಲ ನೆರಳಿ ನವೆಯುವರು. ಅತೀ ಉತ್ಕಟ ಪುಣ್ಯ ಮಾಡಿದವರು ಶ್ರೇಷ್ಠವಾದ ಮುಕ್ತಿಮಂದಿರಕ್ಕೆ ತೆರಳುವರು. ಪಾಪ ಪುಣ್ಯ ಎರಡನ್ನು ಮಾಡಿದವರು ಸ್ವರ್ಗ, ನರಕ ಮತ್ತೆ ಭೂಲೋಕ ಮೂರು ಲೋಕಗಳಲ್ಲಿ ಪರಿಭ್ರಮಣ ಮಾಡುತ್ತ ಜನನ ಮರಣ ಚಕ್ರದಲ್ಲಿ ಸುತ್ತುತ್ತ ಇರುತ್ತಾರೆ. ವೃದ್ಧ ಬ್ರಾಹ್ಮಣ! ಜನ್ಮ , ಮೃತ್ಯು ಹಾಗೂ ಪರಲೋಕ ವಿಷಯದಲ್ಲಿಯ ನಿನ್ನ ಮೂರೂ ಪ್ರಶ್ನೆಗಳಿಗೆ ನಾನು ನನ್ನ ತಂದೆಯಿಂದ ಓದಿ, ಕೇಳಿ ತಿಳಿದುಕೊಂಡ ಪ್ರಕಾರ ಯಥಾಶಕ್ತಿ ಉತ್ತರವನ್ನು ಕೊಟ್ಟಿದ್ದೇನೆ. ಈಗ ತಾವು ಮತ್ತೆ ಏನನ್ನು ತಿಳಿಯಬಯಸುವಿರಿ?''

## ಯಾವ ಪಾಪಕ್ಕೆ ಎಂಥ ಫಲ? ಪಂಚ ಮಹಾಪಾತಕಗಳ ವಿವರಣೆ

**ಅತಿಥಿ :** ''ನೀನು ಹೇಳಿದ ಪರಲೋಕದಲ್ಲಿಯ ಮಾನವನ ಸ್ಥಿತಿಗತಿಗಳ ವಿವರಣೆ ಶಾಸ್ತ್ರೋಕ್ತವಾಗಿದೆ, ಸರಿಯಾಗಿದೆ. ಇದರಲ್ಲಿ ಸಂದೇಹವಿಲ್ಲ. ಆದರೆ ನಾಸ್ತಿಕರಿಗೂ ದುರ್ಬುದ್ಧಿಗಳಿಗೂ ಹಾಗೂ ಮಂದಬುದ್ಧಿಯ ಮಾನವರಿಗೂ ಸಂದೇಹ ನಿವೃತ್ತಿ ಆಗುವದಿಲ್ಲ. ಅದಕ್ಕಾಗಿ ನೀನು ಶುಭಾಶುಭ ಕರ್ಮಗಳ ಫಲ, ಪರಿಣಾಮಗಳನ್ನು ನಿರೂಪಿಸು. ಯಾವ ಪಾಪಕರ್ಮಗಳಿಂದ ಎಂಥ ಘೋರ ಪರಿಣಾಮ ಹಾಗೂ ದುಷ್ಫಲವನ್ನು ಜೀವನು ಅನುಭವಿಸಬೇಕಾಗುವದು ಎಂಬುದನ್ನು ವಿವರಿಸಿ ಹೇಳು.''

**ಕಮಠ :** ''ವೃದ್ಧ ಬ್ರಾಹ್ಮಣ ರೂಪದಿಂದ ಬಂದ ಪುಣ್ಯಾತ್ಮನಾದ ಅತಿಥಿಯೇ, ಈ ವಿಷಯದಲ್ಲಿ ನಮ್ಮ ತಂದೆಯು ನನಗೆ ಉಪದೇಶ ಮಾಡಿದಂತೆ ನಾನು ನಿಮಗೆ ವಿಷಯವನ್ನು ನಿರೂಪಿಸುತ್ತೇನೆ ಸ್ಥಿರಚಿತ್ತದಿಂದ ಆಲಿಸಿರಿ. ಬ್ರಹ್ಮಹತ್ಯಾ ಮಾಡಿದ ಪಾಪಿಗಳು ಭಯಂಕರ ಕ್ಷಯರೋಗದಿಂದ ಪೀಡಿತರಾಗುವರು, ಶೆರೆಕುಡಿಯುವದರಿಂದ ಹಲ್ಲುಗಳು ಕಪ್ಪಾಗುವವು. ಬಂಗಾರ ಕಳವು ಮಾಡಿದವನ ಉಗುರುಗಳು ಕೆಟ್ಟಿರುವವು. ಗುರುಪತ್ನಿಯ ದೇಹ ಸಂಪರ್ಕ ಮಾಡಿದವನ ಚರ್ಮವು ವಿದ್ರೂಪವಾಗುವದು. ಮಡಿ ಮೈಲಿಗೆ ವಿಚಾರವಿಲ್ಲದೇ ಎಲ್ಲ ಜಾತಿಯ ಜನರೊಡನೆ ಸಂಪರ್ಕ ಮಾಡುವ ಜನರ ದೇಹದಲ್ಲಿ ಎಲ್ಲ ರೋಗಗಳು ಮನೆ ಮಾಡುವವು. ಇವು ಐದು ಪಂಚ ಮಹಾ ಪಾಪ ಎನಿಸುವವು. ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರು ಪತ್ನೀಗಮನ ಇವು ನಾಲ್ಕು ಮಹಾಪಾತಕಗಳು. ಈ ನಾಲ್ಕು ಮಹಾಪಾಪ ಮಾಡಿದ ಮಹಾಪಾಪಿಗಳ ಸಂಪರ್ಕ, ಸಹವಾಸ ಮಾಡುವದು ಐದನೇಯ ಮಹಾ ಪಾಪ. ಇದನ್ನು ಮಾಡಿದವನು ಐದನೆಯ ಮಹಾಪಾಪಿ. ಈ ಪಂಚಮಹಾಪಾಪ ಗಳನ್ನು ಮಾಡಿದವನಿಗೆ ಘೋರ ನರಕ ತಪ್ಪಿದ್ದಲ್ಲ.

## ಹಿಂದಿನದಕ್ಕೆ ಜ್ಞಾಪಕ ಮುಂದಿನದಕ್ಕೆ ಸೂಚಕ

ಇದರಂತೆ ಮುಂದೆ ನಾನು ಹೇಳುವ ಘೋರ ಪರಿಣಾಮಗಳು ಹಾಗೂ ಕಟುಫಲಗಳು ಆ ಪಾಪಗಳ ಪರಿಪಾಕದಿಂದ ಉಂಟಾಗುತ್ತವೆ. ಮತ್ತು ಮುಂದೆ ಆಗುವ ದುರಂತ ಪರಿಣಾಮಗಳನ್ನು ಈಗಲೇ ಸೂಚಿಸುತ್ತವೆ. ಹಾಗೂ ಹಿಂದೆ

ಮಾಡಿದ ಘೋರ ಪಾಪಗಳ ಜ್ಞಾಪಕವೂ ಆಗಿರುತ್ತವೆ. ಈಗ ಮಹಾತ್ಮರ ಹಾಗೂ ಭಗವದ್ಭಕ್ತರ ನಿಂದೆಯನ್ನು ಆನಂದದಿಂದ ಕುಳಿತು ಕೇಳಿದವನು ಮುಂದೆ ಕೆಪ್ಪ, ಕಿವುಡ ಆಗುವನು. ಈಗ ಕಿವುಡನಾದವನು ಹಿಂದಿನ ಜನ್ಮದಲ್ಲಿ ಮಹಾಪುರುಷರ ನಿಂದೆಯನ್ನು ಕೇಳಿದ್ದಾನೆ ಎಂದು ಅರ್ಥ. ಹೀಗೆ ಈಗ ನಮಗೆ ಪ್ರತ್ಯಕ್ಷವಾಗಿ ಕಾಣುವ ಮಾನವರ ಅಂಗಹೀನತೆ, ದುಃಖ-ದುರವಸ್ಥೆಗಳು ಹಿಂದಿನ ಆ ಜೀವರ ದುಷ್ಕರ್ಮಗಳಿಗೆ ಜ್ಞಾಪಕವೂ ಆಗಿರುತ್ತವೆ. ಆದ್ದರಿಂದ ಅಂಥ ದೈನ್ಯ, ದುರವಸ್ಥೆ, ದುಷ್ಪರಿಣಾಮಗಳು ಆಗಬಾರದೆಂದು ಬಯಸುವ ಮಾನವರು ಈ ಪಾಪಗಳನ್ನು ಮುಂದೆ ಮಾಡಬಾರದು ಎಂದು ಭವಿಷ್ಯ ಕರ್ತವ್ಯ ಸೂಚಕವೂ ಆಗಿರುತ್ತವೆ.

ಜನರೆದುರು ಯಾವಾಗಲೂ ತನ್ನದೇ ಆತ್ಮ ಪ್ರಶಂಸೆ ಮಾಡಿಕೊಳ್ಳುವ, ಬಡಾಯಿಕೊಚ್ಚಿಕೊಳ್ಳುವ ಮಾನವನು ಮುಂದೆ ಮೂಕನಾಗುತ್ತಾನೆ. ಗುರುಹಿರಿಯರ ಅಪಮಾನ ಮಾಡಿದವನು ಕ್ರಿಮಿ-ಕೀಟನಾಗುತ್ತಾನೆ. ಸಾಧು-ಸಜ್ಜನರ ಹಣವನ್ನು ಕದಿಯುವವನು ಕುಂಟನಾಗುವನು. ಸಿಟ್ಟಿನಿಂದ ಪೂಜ್ಯ ಪುರುಷರ ಮನಸ್ಸನ್ನು ನೋಯಿಸಿದವನು, ಭಯಂಕರ ತಲೆಶೂಲೆಯಿಂದ ನರಳುವನು. ರಜಸ್ವಲಾ ಸ್ತ್ರೀಯರ ಸಹವಾಸ ಮಾಡಿದವನು ಚಂಡಾಲನಾಗುವನು. ಬಟ್ಟೆಗಳನ್ನು ಕದಿಯುವವನು ಕುಷ್ಠರೋಗಿ ಆಗುವನು. ಬೆಳ್ಳಿಯನ್ನು ಕದ್ದರೆ ಹಾಗೂ ಸುಳ್ಳು ಸಾಕ್ಷಿ ಹೇಳಿದರೆ, ಮುಖರೋಗ, ಪರಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡಿದರೆ ನೇತ್ರರೋಗ, ದಾನಕೊಡುತ್ತೇನೆಂದು ವಚನಕೊಟ್ಟು ಕೊಡದೇ ಇದ್ದರೆ ಆಯುಷ್ಯ ಕ್ಷಯ. ತನ್ನ ಒಡೆಯನ ಹಣವನ್ನು ಅವನ ಕೆಲಸ ಮಾಡದೇ ತಿಂದು ಹಾಕಿದರೆ ಜಲೋದರರೋಗ, ಬಲಿಷ್ಠನಾದರೂ ದುಷ್ಟರಿಂದ ಸಜ್ಜನರನ್ನು ರಕ್ಷಿಸದಿದ್ದರೆ ಅಂಗಹೀನ. ಅನ್ನ ಕದ್ದವನಿಗೆ ಉದರರೋಗ, ವ್ಯವಹಾರದಲ್ಲಿ ಪಕ್ಷಪಾತ ಮಾಡಿದರೆ ಜಿಹ್ವಾರೋಗ. ಧರ್ಮಕಾರ್ಯದಲ್ಲಿ ವಿಘ್ನವನ್ನುಂಟು ಮಾಡುವವನಿಗೆ ಅಕಾಲದಲ್ಲಿ ಪತ್ನಿಯ ಮರಣ. ಮಾಡಿದ ಅಡಿಗೆಯನ್ನು ಇನ್ನೊಬ್ಬರಿಗೆ ಕೊಡದೇ ತಾನೇ ಉಣ್ಣುವವನಿಗೆ ಗಂಟಲು ರೋಗವು ಬರುವದು. ದೇವಯಜ್ಞ, ಪಿತೃಯಜ್ಞ, ಋಷಿಯಜ್ಞ, ಅತಿಥಿಯಜ್ಞ ಹಾಗೂ ಭೂತಯಜ್ಞ, ಇವು ಐದು ಪಂಚ ಮಹಾಯಜ್ಞ ಎನಿಸಿಕೊಳ್ಳುವವು.

## ಪಂಚ ಮಹಾಯಜ್ಞಗಳು

ಅರ್ಥಾತ್ ಶಾಸ್ತ್ರೋಕ್ತ ರೀತಿಯಿಂದ ದೇವರ ಪೂಜೆ ಮಾಡಿ ಭಗವಂತನಿಗೆ ಅನಿಷಿದ್ಧ ಪದಾರ್ಥಗಳನ್ನು ನೈವೇದ್ಯ ಇಟ್ಟು ಪುಷ್ಪಾರ್ಚನೆ, ಮಂಗಳಾರತಿ ಮಾಡುವುದು ದೇವಯಜ್ಞ ಎನಿಸುವದು. ಮರಣದ ದಿನ ಹಾಗೂ ಮಹಾಲಯ, ಪುಣ್ಯ ಕಾಲ, ಪರ್ವಕಾಲ, ತೀರ್ಥಕ್ಷೇತ್ರಗಳಲ್ಲಿ ಪಿತೃಗಳನ್ನು ಉದ್ದೇಶಿಸಿ ತಿಲತರ್ಪಣ, ಜಲತರ್ಪಣ, ಪಿಂಡಪ್ರದಾನ, ಭೂರಿಭೋಜನ, ದಾನ, ದಕ್ಷಿಣಾದಿ ಪ್ರದಾನ ಮುಂತಾದವು ಪಿತೃಯಜ್ಞ ಎಂದು ಕರೆಯಲ್ಪಡುವವು. ನಾಲ್ಕೂ ವೇದ ಹಾಗೂ ವೇದಾಂತ ಅಧ್ಯಯನ ಮಾಡಿ, ಕೊನೆಯ ಪಕ್ಷ ವೇದದ ತನ್ನ ಒಂದು ಶಾಖೆಯನ್ನಾದರೂ ಚೆನ್ನಾಗಿ ಓದಿಕೊಂಡು, ಶಿಷ್ಯರಿಗೆ ಹೇಳಿ ಪಾಠಪ್ರವಚನ ಮಾಡುತ್ತ ಇರುವದು ಋಷಿಯಜ್ಞ ಎಂದು ಕರೆಯಲ್ಪಡುವದು. ಬಂದ ಅತಿಥಿಗಳಿಗೆ ಆದರದಿಂದ ಪೂಜೆ ಮಾಡಿ, ತೃಪ್ತಿ ಆಗುವಂತೆ

ಮೃಷ್ಟಾನ್ನ ಭೋಜನ ಮಾಡಿಸಿ ದಾನ ದಕ್ಷಣೆ ಕೊಟ್ಟು ಸಂತೋಷ ಪಡಿಸುವುದು ಅತಿಥಿಯಜ್ಞ ಎನಿಸುವದು. ಪ್ರತಿನಿತ್ಯವೂ ದೇವರ ಪೂಜೆ ಆದ ಬಳಿಕ ವೈಶ್ವದೇವ ಬಲಿಹರಣಗಳನ್ನು ಮಾಡಿ, ಚಂಡಾಲರವರೆಗೆ ಎಲ್ಲ ಜಾತಿಯವರಿಗೂ ಪಶುಪಕ್ಷಿಗಳಿಗೂ ಆಹಾರ ನೀಡುವುದು, ಬಲಿ ಹಾಕುವದು, ಭೂತಯಜ್ಞ ಎಂದು ಕರೆಯಲ್ಪಡುವುದು. ಹೀಗೆ ಪಂಚ ಮಹಾ ಯಜ್ಞಗಳನ್ನು ಮಾಡದೆ, ದೇವರು ಕೊಟ್ಟ ಅನ್ನವನ್ನು ಇನ್ನೊಬ್ಬರಿಗೆ ನೀಡದೆ ಮನೆಯ ಜನರನ್ನು ಕೂಡ ಬಿಟ್ಟು ತಾನೊಬ್ಬನೆ ಮೊದಲು ತಿಂದು ಮಡದಿ, ಮಕ್ಕಳಿಗೆ ಅರಹೊಟ್ಟೆ ಊಟ ಹಾಕುವವನು, ಮುಂದಿನ ಜನ್ಮದಲ್ಲಿ ಹಂದಿಯಾಗಿ ಅಮೇಧ್ಯ ಭಕ್ಷಣ ಮಾಡುತ್ತ ಹೊಲಸಿನಲ್ಲಿ ಹೊರಳಾಡುತ್ತಾನೆ. ಈಗ ನಮ್ಮ ಕಣ್ಣಿಗೆ ಕಾಣುವ ಹಂದಿಗಳೆಲ್ಲವೂ ಜನ್ಮಾಂತರದಲ್ಲಿ ಪಂಚಯಜ್ಞಗಳನ್ನು ಮಾಡದೇ ತಮ್ಮ ಹೊಟ್ಟೆಯನ್ನು ಮಾತ್ರ ತುಂಬಿಸಿಕೊಂಡ ಹಿಂದಿನ ಉದರಂಭರಿಗಳೇ.

## ಪಾಪಕ್ಕೆ ತಕ್ಕಂತೆ ದುಃಖ ದಂಡ

ಪರ್ವದಿನಗಳಲ್ಲಿ ಸ್ತ್ರೀ ಸಂಗ ಮಾಡಿದವನಿಗೆ ಪ್ರಮೇಹ, ಗನೋರಿಯಾ ಮುಂತಾದ ರೋಗಗಳು ತಗಲುವವು. ಈಗ ಅಂಥ ರೋಗಗಳಿಂದ ಪೀಡಿತರಾದವರು, ಹಿಂದೆ ಇಂಥ ಪಾಪಗಳನ್ನು ಮಾಡಿರುತ್ತಾರೆ ಎಂಬುದರ ಸೂಚಕ, ದ್ರವ್ಯವಿಲ್ಲದೆ ದುಃಖಪಡುವ ಉಪವಾಸ ಬೀಳುವ ಬಂಧು, ಮಿತ್ರ, ಒಡೆಯ, ಸೇವಕ ಮುಂತಾದವರನ್ನು ಕಡೆಗಣಿಸಿ ಸಹಾಯಮಾಡದೇ ತಾನೊಬ್ಬನೇ ಐಶ್ವರ್ಯವಂತನಾಗಿ ನಿರ್ದಯ ಮನಸ್ಸಿನಿಂದ ತನ್ನ ಐಶ್ವರ್ಯ ಸುಖೋಪಭೋಗದಲ್ಲಿಯೇ ಲೋಲಾಡುತ್ತಿರುವ ಮನುಷ್ಯನು, ಮುಂದಿನ ಜನ್ಮದಲ್ಲಿ ದಟ್ಟದರಿದ್ರನಾಗಿ ಒಂದು ತುತ್ತು ಅನ್ನಕ್ಕೂ ಗತಿಯಿಲ್ಲದೇ ಭಿಕ್ಷೆ ಬೇಡುತ್ತ ತಿರುಗಾಡುತ್ತಾನೆ. ತಾಯಿ, ತಂದೆ, ಗುರು ಮತ್ತು ಒಡೆಯರನ್ನು ಸೇವೆ ಮಾಡದವನು ಮುಂದಿನ ಜನ್ಮದಲ್ಲಿ ಕಷ್ಟ ಪಟ್ಟು ಧನವನ್ನು ಗಳಿಸಿದರೂ ಅದರ ಸುಖದಿಂದ ವಂಚಿತ ನಾಗುವನು. ವಿಶ್ವಾಸಘಾತ ಮಾಡಿದವನು ಸರ್ವದಾ ದುಃಖಭಾಗಿ ಆಗುವನು. ದುರ್ಬಲವಾದ ಎತ್ತನ್ನು ಗಾಡಿಗೆ ಹೂಡುವವನು ಸೊಂಟದ ರೋಗದಿಂದ ಬಳಲುವನು. ಗೋಹತ್ಯೆ ಮಾಡುವವನು ಜನ್ಮಾಂಧ ಆಗುವನು, ಸಭೆಯಲ್ಲಿ ಪಕ್ಷಪಾತದಿಂದ ನಿರ್ಣಯ ಕೊಡುವವನು, ಗಂಡಮಾಲಿ ಎಂಬ ಗಂಟಲುರೋಗದಿಂದ ದುಃಖಪಡುವನು. ಯಾವಾಗಲೂ ಸಿಟ್ಟಿಗೇಳುವ ಮುಂಗೋಪಿಯು, ಚಂಡಾಲನಾಗಿ ಹುಟ್ಟುವನು. ಲಂಚ ತಿನ್ನುವವನ ಬಾಯಲ್ಲಿ ಸದಾ ದುರ್ಗಂಧ. ಶಾಸ್ತ್ರಗಳನ್ನು ಓದಿ ಯಾರಿಗೂ ಹೇಳದೇ ಇದ್ದರೆ ಬ್ರಹ್ಮರಾಕ್ಷಸನಾಗುವನು. ಕೆರೆ ಉಪವನ ಉದ್ಯಾನಗಳನ್ನು ನಾಶ ಮಾಡುವವನು ಕೈ ಕಾಲು ಕಳೆದುಕೊಂಡ ಊನ ಮನುಷ್ಯನಾಗುವನು.

ವೈದ್ಯಶಾಸ್ತ್ರವನ್ನು ಓದದೇ ಔಷದ ಕೊಡುವವನು ವಾತರೋಗಿ. ಗುರುಪತ್ನಿ ಗಮನ ಮಾಡಿದವನು ಮಹಾರೋಗಿ. ಪಶುಮೈಥನ ಮಾಡಿದವನು ಪ್ರಮೇಹ ರೋಗಿ. ತನ್ನದೇ ಗೋತ್ರದ ಸ್ತ್ರೀಸಹವಾಸ ಮಾಡಿದವನು ನಿಸ್ಸಂತಾನ. ತನ್ನ ಆತ್ಮೀಯ ಬಳಗದಲ್ಲಿ ಸ್ತ್ರೀಯರ ಸಹವಾಸ ಮಾಡಿದವನು ನಪುಂಸಕ. ಮಾಡಿದ ಉಪಕಾರವನ್ನು ನೆನೆಯದ ಮಾನವನು, ಎಲ್ಲ ಕಾರ್ಯಗಳಲ್ಲಿಯೂ ಅಸಫಲನು, ವ್ಯವಹಾರದಲ್ಲಿ ಮೋಸಮಾಡುವ ಮಾನವನು ತನ್ನ ಸೇವಕರಿಂದಲೇ ಪ್ರಾಣ ಕಳೆದುಕೊಳ್ಳುವನು.

ಒಬ್ಬರನ್ನು ಬೆದರಿಸಿ ಅಥವಾ ಆಸೆ ತೋರಿಸಿ ಜ್ಞಾನ ಪಡೆದವನು ಹುಚ್ಚನಾಗುವನು. ಇನ್ನೊಬ್ಬರಿಗೆ ದುಃಖ ಕೊಡುವವನು ಮುಂದಿನ ಜನ್ಮದಲ್ಲಿ ಸದಾ ಸರ್ವದಾ ದುಃಖಿಯಾಗಿ, ದಾರಿದ್ರ್ಯದಿಂದ ಕಂಗೆಟ್ಟು, ಕಂಡವರ ಎದುರು ಕೈ ಚಾಚಿ ಅಂಗಲಾಚುತ್ತ ಹಸಿವೆಯಿಂದ ಪೀಡಿತನಾಗಿ, ಭಿಕ್ಷುಕನಾಗಿ ತಿರುಗಾಡುವನು.

ಬ್ರಾಹ್ಮಣೋತ್ತಮನೇ ! ನಾನು ಪಾಪಗಳ ಪ್ರಕಾರಗಳನ್ನೂ ಪಾಪಕರ್ಮಗಳ ದುಷ್ಫಲಗಳನ್ನೂ ಸಂಕ್ಷೇಪವಾಗಿ ನಿಮ್ಮೆದುರು ನಿರೂಪಿಸಿದೆ. ಇದನ್ನು ವಿಸ್ತಾರಪೂರ್ವಕವಾಗಿ ಹೇಳುವುದು ಚಿತ್ರಗುಪ್ತರಿಗೂ ಸಾಧ್ಯವಿಲ್ಲ. ಈ ಎಲ್ಲ ಪೂರ್ವೋಕ್ತ ಪಾಪಕರ್ಮಗಳನ್ನು ಮಾಡಿದ ಪಾಪಾತ್ಮರು ಮೊದಲು ನೂರಾರು ನರಕಗಳಲ್ಲಿ ಬಿದ್ದು ಯಮಯಾತನೆಗಳನ್ನು ಅನುಭವಿಸಿ, ಅನಂತರ ನೂರಾರು ದುರ್ಯೋನಿಗಳಲ್ಲಿ ಹುಟ್ಟಿ ದುಃಖ ಅನುಭವಿಸಿ ಅನಂತರ ಮಾನವರಾಗಿ ಹುಟ್ಟಿ ಮೇಲೆ ಹೇಳಿದಂತೆ ಈ ನರಜನ್ಮದಲ್ಲಿ ಈ ಎಲ್ಲ ದುಃಖ-ದುಷ್ಪರಿಣಾಮಗಳನ್ನು ಅನುಭವಿಸುವರು. ಯಾರ ಪಾಪಗಳು ನಷ್ಟವಾಗಿರುವವೋ ಅಥವಾ ಯಾರು ತಮ್ಮ ಪುಣ್ಯ ಕರ್ಮಗಳಿಂದ ಸ್ವರ್ಗಕ್ಕೆ ಹೋಗಿ ಅಲ್ಲಿ ಸುಖೋಪಭೋಗ ಮಾಡಿ, ಪುಣ್ಯ ಸವೆದ ಬಳಿಕ ಮರಳಿ ಬಂದಿರುವರೋ ಅಂಥ ಪುಣ್ಯ ಜೀವಿಗಳು ಮಾತ್ರ, ಎಲ್ಲ ವ್ಯಸನಗಳಿಂದ ಮುಕ್ತರಾಗಿ ಏಕಮಾತ್ರ ಧರ್ಮವನ್ನು ಆಶ್ರಯಿಸುವರು. ಈ ವಿಷಯದಲ್ಲಿ ಹಿರಿಯರು ಹೀಗೆ ಹೇಳುವರು -

**ಧರ್ಮದಾನ ಕೃತಂ ಸೌಖ್ಯಮಧರ್ಮಾದ್ ದುಃಖಸಂಭವಮ್ ।**
**ತಸ್ಮಾದ್ಧರ್ಮಂ ಸುಖಾರ್ಥಾಯ ಕುರ್ಯಾತ್ ಪಾಪಂ ವಿವರ್ಜಯೇತ್ ॥**

**ಲೋಕದ್ವಯೇಽಪಿ ಯತ್ ಸೌಖ್ಯಂ ತತ್ ಧರ್ಮಾತ್ ಪ್ರೋಚ್ಯತೇ ಯತಃ ।**
**ಧರ್ಮ ಏವ ಮತಿಂ ಕುರ್ಯಾತ್ ಸರ್ವಕಾರ್ಯಾರ್ಥಸಿದ್ಧಯೇ ॥**

**ಮೂಹೂರ್ತಮಪಿ ಜೀವೇದ್ಧಿ ನರಃ ಶುಕ್ಲೇನ ಕರ್ಮಣಾ ।**
**ನ ಕಲ್ಪಮಪಿ ಜೀವೇಚ್ಛ ಲೋಕದ್ವಯ ವಿರೋಧಿನಾ ॥**

ಪ್ರಾಣಿಗಳಿಗೆ ಈ ಜನ್ಮದಲ್ಲಿಯೂ ಮುಂದಿನ ಜನ್ಮದಲ್ಲಿಯೂ ಸೌಖ್ಯವು ಧರ್ಮ ಮತ್ತು ದಾನಗಳಿಂದ ಮಾತ್ರ ಉಂಟಾಗುವುದು. ಅ ಧರ್ಮದಿಂದ ಬರೀ ದುಃಖ. ಸುಖವನ್ನು ಬಯಸುವವರೆಲ್ಲರೂ ತಮ್ಮ ನಿರಂತರ ಸುಖಸಂತೋಷಗಳಿಗಾಗಿ ಧರ್ಮಾಚರಣೆಯನ್ನು ಅವಶ್ಯವಾಗಿ ಮಾಡಲೇಬೇಕು. ಪಾಪಕರ್ಮ, ಅಧರ್ಮಗಳ ಆಚರಣ ಮಾಡುವದನ್ನು ಸರ್ವಥಾ ಪರಿತ್ಯಜಿಸಬೇಕು. ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಯಾವುದರಿಂದ ಸೌಖ್ಯ ಉಂಟಾಗುವುದೋ ಅದಕ್ಕೆ ಎನ್ನುವರು ಧರ್ಮ ಎಂದು. ಧರ್ಮದಿಂದಲೇ ಸರ್ವರಿಗೂ ಸರ್ವತ್ರ ಸುಖಶಾಂತಿ ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಮನುಷ್ಯನು ತನ್ನ ಸರ್ವಾಭೀಷ್ಟ ಸಿದ್ಧಿಗಾಗಿ ಸಮಸ್ತ ಕಾಮನಾ ಪೂರ್ತಿಗಾಗಿ, ಧರ್ಮಾಚರಣೆಯಲ್ಲಿಯೇ ಮನಸ್ಸನ್ನು ಇಡಬೇಕು. ಮನುಷ್ಯನು ಒಂದು ಮುಹೂರ್ತ ಮಾತ್ರ ಬದುಕಿದ್ದರೂ ಪುಣ್ಯಕರ್ಮ ಮಾಡುತ್ತಲೇ ಬದುಕಬೇಕು. ಧರ್ಮವನ್ನು ಬಿಟ್ಟು ಒಂದು ಕಲ್ಪಾಯುಷ್ಯ ಕೊಟ್ಟರೂ ಅಧರ್ಮದಿಂದ ಬದುಕಬಾರದು. ಅಧರ್ಮದ ಜೀವನವು ಈ ಲೋಕ, ಪರಲೋಕ ಎರಡೂ ಲೋಕಗಳಿಗೂ ಘಾತಕವಾಗಿದೆ.

''ಅತಿಥಿ ಮಹಾಶಯರೇ, ತಮ್ಮ ಪ್ರಶ್ನೆಗಳಿಗೆಲ್ಲ ನಾನು, ನನ್ನ ಅಲ್ಪ ಜ್ಞಾನಕ್ಕೆ ಅನುಸರಿಸಿ ಉತ್ತರವನ್ನು ನೀಡಿದ್ದೇನೆ. ಗಹನವಾದ ಈ ಶಾಸ್ತ್ರೀಯ ವಿಷಯವನ್ನು

ಪ್ರವಚನ ಮಾಡುವಲ್ಲಿ, ಬಾಲ್ಯ ಸಹಜವಾದ ಏನಾದರೂ ತಪ್ಪು - ತಡೆ ನನ್ನಿಂದ ಆಗಿದ್ದರೆ ಕ್ಷಮಾಶೀಲರಾದ ತಾವು ದಯವಿಟ್ಟು ಕ್ಷಮಿಸಿರಿ. ಇನ್ನು ಮೇಲೆ ತಮ್ಮ ಎದುರು ನಾನು ಬೇರೆ ಯಾವ ವಿಷಯವನ್ನು ಒಪ್ಪಿಸಲಿ? ಅಪ್ಪಣೆಯಾಗಲಿ.''

## ಕೂಸಿನ ತಲೆಯಿಂದ ಸೂಸಿದ ಜ್ಞಾನ

**ನಾರದ :** ಬಾಲಕ ಕಮಠನ ವಯಸ್ಸು ಎಂಟು. ಎಂಬತ್ತು ವರ್ಷದ ಜ್ಞಾನ ವೃದ್ಧರಿಗಿಂತ ಪರಪಕ್ವವಾಗಿತ್ತು ಅವನ ಸುಜ್ಞಾನ. ಅಷ್ಟವರ್ಷೀಯನಾದ ಆ ವಟುವಿಪ್ರನ ಆ ದಿವ್ಯಜ್ಞಾನಾಕಾರವನ್ನೂ ಹಾಗೂ ಜಟಿಲ ವಿಷಯಗಳನ್ನೂ ಬಿಚ್ಚಿ, ಬಿಡಿಸಿ ನಿಚ್ಚಳವಾಗಿ ನಿರೂಪಿಸುವ ಅವನ ವಾಚೋವೈಖರಿಯನ್ನೂ, ಶಾಸ್ತ್ರಾರ್ಥ ಚಾತುರ್ಯವನ್ನೂ ನೋಡಿ, ಅತಿಥಿಯಾಗಿ ವೃದ್ಧಬ್ರಾಹ್ಮಣನ ವೇಷದಿಂದ ಬಂದ ಭಗವಾನ್ ಸೂರ್ಯದೇವನು ವಿಸ್ಮಯ ಸ್ತಿಮಿತವಾಗಿ ನಿಂತುಕೊಂಡ. ಸುಪ್ರಸನ್ನ ಭಾವ ಅವನ ಮುಖದಲ್ಲಿಯೇ ಸೂಸುತ್ತಿತ್ತು. ಈ ಬಾಲ ವಯಸ್ಸಿನ ಪ್ರೌಢ ಪಂಡಿತನನ್ನೂ, ಮತ್ತು ಅವನ ಇಂಥ ಪ್ರಗಾಢ ಜ್ಞಾನವನ್ನೂ, ಇಂಥ ದಿವ್ಯ ಜ್ಞಾನವನ್ನು ಈ ಎಳೆ ಮಿದುಳಿನಲ್ಲಿ ಇಳಿಸಿ, ಮಗುವನ್ನು ಮಹಾ ಮನೀಷಿಯನ್ನಾಗಿ ಮಾರ್ಪಡಿಸಿದ ಹಾರೀತನೇ ಮೊದಲಾದ ಬ್ರಹ್ಮಜ್ಞಾನಿಗಳನ್ನೂ ಬಾಯಿತುಂಬ ಪ್ರಶಂಸಿಸಿದ.

**ಭಗವಾನ್ ಭಾಸ್ಕರ :** ''ಮಹನೀಯರೇ, ಇಂತಹ ಮೇಧಾವಿಗಳಾದ ಮೇದಿನೀಸುರರನ್ನು ಹಡೆದ ಈ ಮಹೀಮಂಡಲವೇ ಧನ್ಯ. ಇಂಥ ಬ್ರಹ್ಮಜ್ಞಾನಿಗಳು ಅಧ್ಯಯನ ಮಾಡಿದ್ದರಿಂದ ಆ ನಾಲ್ಕು ವೇದಗಳೂ ಧನ್ಯವಾಗಿವೆ. ಈ ಸ್ಥಾನದಲ್ಲಿರುವ ಆ ಪ್ರಬುದ್ಧ ವಯಸ್ಸಿನ ಈ ಎಳೆ ಕಂದಮ್ಮಗಳೇ ಇಂಥ ಅಗಾಧ ಜ್ಞಾನದ ಭಂಡಾರದಂತಿರುವಾಗ, ಇಂಥ ಬಾಲ ಬ್ರಹಸ್ಪತಿಗಳನ್ನು ನಿರ್ಮಾಣಮಾಡಿದ ಇಲ್ಲಿರುವ ಹಾರೀತ ಮೊದಲಾದ ತಪೋನಿಧಿಗಳ ಜ್ಞಾನಭಂಡಾರ ಎಂಥ ಅಪೂರ್ವ ಇರಬೇಡ! ಅವರ ಜ್ಞಾನದ ಸಾಗರ ಎಷ್ಟು ಅಗಾಧ! ಅವರ ಬುದ್ಧಿ ಎಷ್ಟು ತೀಕ್ಷ್ಣ! ಇಂಥ ಜ್ಞಾನವೃದ್ಧರಿಗೆ ಈ ಮೂರು ಲೋಕಗಳಲ್ಲಿ ತಿಳಿಯದ ವಿಷಯವು ಯಾವುದಿದೆ? ಇಂಥ ತಪೋವೃದ್ಧರು ಅರಿಯದ ಶಾಸ್ತ್ರ ಯಾವುದಿದೆ? ನಿಜವಾಗಿಯೂ ಧನ್ಯ ಧನ್ಯ ನಾರದ, ಈ ಪುಣ್ಯಸ್ಥಾನ. *(ಈ ವಿಷಯದಲ್ಲಿ ನಾರದರು ಹೇಳಿದ್ದಕ್ಕಿಂತ ಮಿಗಿಲಾಗಿದೆ ಇಲ್ಲಿಯ ಸ್ಥಾನ ಮಹಾತ್ಮೆ)''* ಹೀಗೆ ಮುಕ್ತಕಂಠದಿಂದ ಅವರನ್ನೂ ಅವರ ಜ್ಞಾನದ ನಿಧಿಯನ್ನೂ ಬಾಲಯೋಗಿ ಕಮಠನನ್ನೂ ಆ ಸ್ಥಾನವನ್ನೂ ತುಂಬಾ ಪ್ರಶಂಸೆಮಾಡಿ, ಸಂತೋಷಭರಿತನಾದ ಸೂರ್ಯದೇವನು ಅವರೆದುರು ತನ್ನ ಸ್ವರೂಪ ಪ್ರಕಟಿಸುತ್ತ ಹೇಳಿದನು.

## ಪ್ರಕಟನಾದ ಪ್ರಭಾಕರ

**ಸೂರ್ಯ :** ''ಶ್ರೇಷ್ಠರಾದ ವಿಪ್ರೋತ್ತಮರೇ ! ನಾನು ಆಗಸದ ಅಂಗಳದಲ್ಲಿ ಬೆಳಗುವ ಸೂರ್ಯ. ನಿಮ್ಮನ್ನು ಸಾಕ್ಷಾತ್ತಾಗಿ ಕಂಡು ಮಾತನಾಡಿಸಿ ಹೋಗಬೇಕೆಂದು ಈಗ ಇಲ್ಲಿಗೆ ಬಂದಿದ್ದೇನೆ ಸೌರಲೋಕದಿಂದ. ಇಂದು ನಿಮ್ಮಂಥ ಪೂತಾತ್ಮರ ದರ್ಶನದಿಂದ ನನ್ನ ನೇತ್ರ ಪುಣ್ಯಪಾತ್ರ. ನಿಮ್ಮ ನುಡಿಗಳನ್ನು ಆಲಿಸಿ ನಮ್ಮ ಕಿವಿಗಳೂ ಧನ್ಯ. ನನ್ನ ಜನ್ಮವೇ ಧನ್ಯ. ನಿಮ್ಮಂಥ ಪುಣ್ಯಪುರುಷರ ಸಹವಾಸ, ಸಂಭಾಷಣ ಸಹವಾಸಗಳಿಂದ ಚಂಡಾಲನೂ ಕೂಡ ಪರಮ ಪವಿತ್ರನಾಗುವದರಲ್ಲಿ ಸಂದೇಹವಿಲ್ಲ.

ದೇವರ್ಷಿಯಾದ ನಾರದನು ನಿಜವಾಗಿಯೂ ಧನ್ಯ. ನಿಮಗೆಲ್ಲ ಇಲ್ಲಿ ಒಂದು ಸ್ಥಾನವನ್ನು ಕಲ್ಪಿಸಿ, ನಿಮ್ಮ ಯೋಗಸಾಧನೆ ಹಾಗೂ ತಪೋನುಷ್ಠಾನ, ಜ್ಞಾನೋಪಾಸನೆಗಳಿಗೆ ಸೌಕರ್ಯವನ್ನು ಉಂಟು ಮಾಡಿಕೊಟ್ಟದ್ದರಿಂದ ನಾರದನಿಗೆ ಶ್ರೇಯೋಭಿವೃದ್ಧಿಯಾಗಿದೆ. ವೈಧೃತಿಯೋಗದಲ್ಲಿ ನೀಡಿದ ದಾನದಿಂದ ಪುಣ್ಯವು ಅಭಿವೃದ್ಧಿಗೊಳ್ಳುವಂತೆ, ಈ ಸತ್ಕಾರ್ಯದಿಂದ ನಾರದನಿಗೂ ಪುಣ್ಯಾಭಿವೃದ್ಧಿಯಾಗಿದೆ. ಪರಮಭಗವದ್ಭಕ್ತರಾದ ನಿಮ್ಮೆಲ್ಲರಿಗೂ ನನ್ನ ವಂದನೆ. ವಿದ್ಯಾ ಹಾಗೂ ಸದಾಚಾರ, ಭಗವದ್ಭಕ್ತಿ ಇವು ಮೂರೇ ಮಾನವನ ಮಹನೀಯತೆಗೆ ಹಾಗೂ ಮಾನವೀಯತೆಗೆ ಮುಖ್ಯ ಸಾಧನ. ಈ ಮೂರು ಗುಣಗಳೂ ನಿಮ್ಮಲ್ಲಿ ಮೇಳವಿಸಿದ್ದರಿಂದ ನೀವು ಜಗತ್ತಿಗೆಲ್ಲ ವಂದನೀಯರಾಗಿದ್ದೀರಿ. ನನಗೆ ಮಾನನೀಯರಾಗಿದ್ದೀರಿ. ಹರಿಹರಬ್ರಹ್ಮಾದಿ ತ್ರಿಮೂರ್ತಿಗಳಿಗೂ ಆದರಣೀಯರಾಗಿದ್ದೀರಿ. ಈಗ ನಿಮಗೆ ನಾನು ಪ್ರತ್ಯಕ್ಷನಾಗಿದ್ದೇನೆ ಹಾಗೂ ಪ್ರಸನ್ನನಾಗಿದ್ದೇನೆ. ದೇವತೆಗಳ ಪ್ರಸಾದ ವ್ಯರ್ಥವಾಗಬಾರದು. ಆದ್ದರಿಂದ ಏನಾದರೂ ವರವನ್ನು ಕೇಳಿರಿ. ನಾನು ನೀವು ಬಯಸಿದ್ದನ್ನು ನೀಡಿ ಕೃತಾರ್ಥನಾಗುವೆನು. ''ಆಗಂತುಕನ ಈ ಮಾತುಗಳನ್ನು ಕೇಳಿ ಅಚ್ಚರಿಯಾಯಿತು ಹಾರೀತ ಮೊದಲಾದ ಬ್ರಹ್ಮ ವೃಂದಕ್ಕೆಲ್ಲ. ತಮ್ಮಲ್ಲಿಗೆ ಆಗಂತುಕ ಅತಿಥಿರೂಪನಾಗಿ ಬಂದ ವೃದ್ಧ ಬ್ರಾಹ್ಮಣನು 'ತ್ರಯೀತನು' ಎನಿಸಿದ ಸಾಕ್ಷಾತ್ ಸೂರ್ಯದೇವನೇ ಎಂದು ತಿಳಿದು ಅವರೆಲ್ಲರೂ ವಿಸ್ಮಯಾನ್ವಿತರಾದರು. ಕೂಡಲೇ ಅವರು ಆರ್ಘ್ಯ, ಪಾದ್ಯಗಳನ್ನು ತಂದು ಅವನ ಪೂಜೆ ಮಾಡಿದರು. ಭಕ್ತಿಯಿಂದ ಸಾಷ್ಟಾಂಗ ಪ್ರಣಾಮಗೈದರು. ಎದ್ದುನಿಂತು ಕೈ ಜೋಡಿಸಿ ಮಂಡಲಬ್ರಾಹ್ಮಣ ಹಾಗೂ ಸೌರಸೂಕ್ತ ಮುಂತಾದ ವೇದ ಮಂತ್ರಗಳನ್ನು ಉಚ್ಚಕಂಠದಿಂದ ಹೇಳಿ ಆ 'ಜಗತ್ ಚಕ್ಷು' ಎನಿಸಿದ ಸವಿತೃ ದೇವನನ್ನು ಸ್ತೋತ್ರಮಾಡಿದರು, ಮತ್ತು ಭಕ್ತಿಯಿಂದ ಬಾಗಿ ನಮ್ರತೆಯಿಂದ ಕೇಳಿಕೊಂಡರು.

## ಜಯ ಜಯ ಎಂದಿದ್ದರಿಂದ ಜಯಾದಿತ್ಯ

**ಬ್ರಾಹ್ಮಣರು :** ''ಸೂರ್ಯದೇವನಿಗೆ ಜಯವಾಗಲಿ, ಗಾಯಿತ್ರೀ ಮಂತ್ರದ ದೇವತೆಯಾದ ದಿವಾಕರನಿಗೆ ಜಯವಾಗಲಿ, ವೇದಗಳ ಪಾಲಕನೂ ಕಾಲಚಕ್ರದ ಚಾಲಕನೂ ದಿನರಾತ್ರಿಗಳ ಕಾರಕನೂ ನಮ್ಮೆಲ್ಲರ ಉದ್ಧಾರಕನೂ ಆದ ಸೂರ್ಯ ದೇವನಿಗೆ ಜಯ ಜಯ. ನಿನ್ನ ಕೃಪಾದೃಷ್ಟಿಯು ಬಿದ್ದುದರಿಂದ ಈ ಸ್ಥಾನವು ಇಂದು ಪರಮಪವಿತ್ರ. ನಿನ್ನ ದರ್ಶನದಿಂದ ನಮ್ಮ ಜನ್ಮ ಸಫಲ. ನಿನ್ನ ಪಾದಧೂಳಿಯಿಂದ ಈ ನಮ್ಮ ಮನೆ ಪುಣ್ಯಕ್ಷೇತ್ರ. ನೀನು ನಮಗೆ ವರವನ್ನು ನೀಡಬಯಸುತ್ತಿದ್ದರೆ, ನೀನು ಈ ಸ್ಥಾನವನ್ನು ಬಿಟ್ಟು ಹೋಗಬಾರದು. ಇಲ್ಲಿಯೇ ನಿತ್ಯವೂ ಸನ್ನಿಹಿತನಾಗಿ ಇರಬೇಕು.''

**ಸೂರ್ಯ :** ''ನೀವೆಲ್ಲ ವಾಕ್ಸಿದ್ಧಿಯುಳ್ಳ ಬ್ರಾಹ್ಮಣರು. ನಿಮ್ಮ ಬಾಯಿಂದ ಬಂದದ್ದೇ ಸತ್ಯ. ನೀವು ನುಡಿದದ್ದೇ ವೇದ. ನಡೆದದ್ದೇ ಧರ್ಮ. ನೀವು ಮೊಟ್ಟ ಮೊದಲು ನನಗೆ ''ಆದಿತ್ಯನಿಗೆ ಜಯವಾಗಲಿ'' 'ಜಯಾದಿತ್ಯ' 'ಜಯಾದಿತ್ಯ' ಎಂದು ಮುಂತಾಗಿ ಜಯಘೋಷ ಮಾಡಿ ನನಗೆ ಜಯವನ್ನು ಪ್ರಶಂಸನೆ ಮಾಡಿದ್ದೀರಿ. ಆದ್ದರಿಂದ ನಾನು 'ಜಯಾದಿತ್ಯ' ಎಂಬ ಹೆಸರಿನಿಂದಲೇ ಇಲ್ಲಿ ನೆಲಿಸುತ್ತೇನೆ. ಭೂಮಿಯೂ ಸ್ಥಿರವಾಗಿ ಇರುವವರೆಗೂ, ಸಮುದ್ರವು ತನ್ನ ಮೇರೆಯ ಅಳವಿನಲ್ಲಿಯೇ ಘೂರ್ಮಿಸುವವರೆಗೂ, ಬೆಟ್ಟಗಳು ಗಟ್ಟಿಯಾಗಿರುವವರೆಗೂ, ಗಾಳಿ

ಬೀಸುವವರೆಗೂ, (ಬೆಳಕು ಬೆಳಗುವವರೆಗೂ ನಾನು ಈ ಸ್ಥಾನದಲ್ಲಿಯೇ) ನೆಲೆಸುತ್ತೇನೆ. ಇದನ್ನು ಎಂದೂ ಬಿಡುವದಿಲ್ಲ. ನಾನು ಈ ಸ್ಥಾನದಲ್ಲಿದ್ದುಕೊಂಡು ಭಕ್ತರ ಹಾಗೂ ಉಪಾಸಕರ ಬಡತನ, ಬೇನೆ, ಹಾಗೂ ವಿಶೇಷವಾಗಿ ಚರ್ಮರೋಗ, ಕುಷ್ಠ ಮುಂತಾದ ಉಲ್ಬಣ ರೋಗಗಳನ್ನು ನಾಶಮಾಡುತ್ತೇನೆ. ಇಲ್ಲಿ ಪ್ರತಿಷ್ಠಿತನಾದ ನನ್ನ ಸೂರ್ಯವಿಗ್ರಹವನ್ನು ಪೂಜೆಮಾಡುವವರಿಗೆ ನಾನು ಪ್ರೀತನಾಗಿ ಈಪ್ಸಿತ ವರಗಳನ್ನು ನೀಡುತ್ತೇನೆ.''

ಈ ಮಾತುಗಳನ್ನು ಕೇಳಿ ಹಾರೀತ ಮೊದಲಾದ ದ್ವಿಜವರ್ಯರು ವೇದೋಕ್ತ ವಿಧಿಯಿಂದ ಅಲ್ಲಿ ಆ ದಿನಕರನ ಮೂರ್ತಿಯನ್ನು ಸ್ಥಾಪನೆಮಾಡಿದರು. ಸೂರ್ಯ ಮೂರ್ತಿಯ ಪ್ರತಿಷ್ಠೆಯಾದ ಬಳಿಕ ಅಲ್ಲಿಯೇ ನಿಂತ ಕಮಠ ವಟುವಿಗೆ ಆ ದೇವತೆಗಳು ಹೇಳಿದರು - ''ಮಗೂ ಕಮಠ ! ನಿನಗೆ ಪ್ರಸನ್ನನಾಗಿ ಸೂರ್ಯನಾರಾಯಣನು ಇಲ್ಲಿ ವಿರಾಜಮಾನನಾಗಿದ್ದಾನೆ. ಆದ್ದರಿಂದ ನೀನು ಮೊದಲು ಇಲ್ಲಿ ಈ ಸೂರ್ಯ ನಾರಾಯಣನ ಸದ್ಗುಣಗಳನ್ನು ಸ್ತೋತ್ರ ಮಾಡು. ''ಹಿರಿಯ ಬ್ರಾಹ್ಮಣರ ಆಜ್ಞೆ ಕಮಠ ವಟುವಿಗೆ ಶಿರೋಮಾನ್ಯ. ಅದರಲ್ಲಿಯೂ ತನಗೆ ಪ್ರತ್ಯಕ್ಷ ದರ್ಶನ ನೀಡಿ, ತನ್ನಲ್ಲಿಯ ಜ್ಞಾನವನ್ನು ಪ್ರಕಾಶಪಡಿಸಲು ಅವಕಾಶ ಮಾಡಿಕೊಟ್ಟ, ಆ ಸೂರ್ಯದೇವನ ಬಗ್ಗೆ ಭಕ್ತಿರಸವು ಉಕ್ಕುತ್ತಲೇ ಇತ್ತು ಅವನ ಅಂತರಂಗದಲ್ಲಿ, ತನ್ನ ಹೃದಯದಲ್ಲಿ ಉಕ್ಕುವ ಆ ಭಕ್ತಿಭಾವಕ್ಕೆ ಭಾಷೆಯ ಬೆಡಗು ತೊಡಿಸಿ, ಸ್ತೋತ್ರ ರೂಪದಿಂದ ಸೂರ್ಯ ನಾರಾಯಣನ ಗುಣಗಾಯನ ಮಾಡಿದ.

## ಕಮಠಕೃತ ಜಯಾದಿತ್ಯ ಸ್ತೋತ್ರ

**ತ್ವಂ ನೈವ ದೃಷ್ಟ ಕೇವಲಸಂಶ್ರುತಶ್ಚ । ಯಜೂಂಷ್ಯೇವಂ ವ್ಯಾಹರಂತ್ಯಾದಿ ದೇವಮ್ ॥**
**ಚತುರ್ವಿಧಾ ಭಾರತೀ ದೂರ ದೂರಂ । ದೃಷ್ಟಂ ಸ್ತೌಮಿ ಸ್ವಾರ್ಥಕಾಮಃ ಕ್ಷಮ್ಯೈತತ್ ॥ 1 ॥**

**ಮಾರ್ತಂಡ ಸೂರ್ಯಾಂಶು ರವಿಸ್ತಥೇಂದ್ರೋ । ಭಾನುರ್ಭಗಶ್ಚಾರ್ಯಮಾ ಸ್ವರ್ಣರೇತಾಃ ।**
**ದಿವಾಕರೋ ಮಿತ್ರ ವಿಷ್ಣುಶ್ಚ ದೇವ । ಖ್ಯಾತಸ್ತ್ವಂ ವೈ ದ್ವಾದಶಾತ್ಮಾ ನಮಸ್ತೇ ॥ 2 ॥**

**ಲೋಕತ್ರಯಂ ವೈ ತವ ಗರ್ಭಗೇಹಂ । ಜಲಾಧಾರಃ ಪ್ರೋಚ್ಯತೇ ಖಂ ಸಮಗ್ರಮ್ ।**
**ನಕ್ಷತ್ರಮಾಲಾ ಕುಸಮಾಭಿಮಾಲಾ । ತಸ್ಮೈ ನಮೋ ವ್ಯೋಮಲಿಂಗಾಯ ತುಭ್ಯಂ ॥ 3 ॥**

**ತ್ವಂ ದೇವ ದೇವಸ್ತ್ವಮನಾಥನಾಥ । ಸ್ತ್ವಂ ಪಾಲ್ಯಪಾಲಃ ಕೃಪಣಃ ಕೃಪಾಲುಃ ।**
**ತ್ವಂ ನೇತ್ರನೇತ್ರಂ ಜನಬುದ್ಧಿಬುದ್ಧಿ । ರ್ಬುದ್ದೇಃ ಪರಸ್ತ್ವಂ ಜಯ ಜೀವಜೀವ ॥ 4 ॥**

**ದಾರಿದ್ರ್ಯ ದಾರಿದ್ರ್ಯ ನಿಧೇ ನಿಧೀನಾಂ । ರೋಗಪ್ರರೋಗಃ ಪ್ರಥಿತಃ ಪೃಥಿವ್ಯಾಂ ।**
**ಚಿರಂ ಜಯಾದಿತ್ಯ ಜಯಾಪ್ರಮೇಯ । ವ್ಯಾಧಿಗ್ರಸ್ತಂ ಕುಷ್ಠರೋಗಾಭಿ ಭೂತಮ್ ॥ 5 ॥**

**ಭಗ್ನಘ್ರಾಣಂ ಶೀರ್ಣದೇಹಂ ವಿಸಂಜ್ಞಂ । ಮಾತಾ ಪಿತಾ ಬಾಂಧವಾಃ ಸಂತ್ಯಜಂತಿ**
**ಸರ್ವೈಸ್ತ್ಯಕ್ತಂ ಪಾಸಿ ದೇವೋ ವಿವಸ್ವಂ । ಸ್ವತ್ತೋ ದೇವಃ ಕೋಽಸ್ತಿ ಶ್ರೇಷ್ಠಸ್ತ್ವ ದನ್ಯಃ ॥ 6 ॥**

**ತ್ವಂ ಮೇ ಪಿತಾ ತ್ವಂ ಜನನೀ ತ್ವಮೇವ। ತ್ವಂ ಮೇ ಗುರುರ್ಬಾಂಧವಾಶ್ಚ ತ್ವಮೇವ ।**
**ತ್ವಂ ಮೇ ಧರ್ಮಸ್ತ್ವಂ ಚ ಮೇ ಮೋಕ್ಷಮಾರ್ಗೋ । ದಾಸಸ್ತುಭ್ಯಂ ತ್ಯಜ ಮಾ ರಕ್ಷ ದೇವ ॥7॥**

**ಪಾಪೋಽಸ್ಮಿ ಮೂಢೋಽಸ್ಮಿ ಮಹೋಗ್ರ ಕರ್ಮಾ । ರೌದ್ರೋಽಸ್ಮಿ ಪಾಪಸ್ಯ ನಿಧಾನಮಸ್ಮಿ ।**
**ತಥಾಪಿ ನಿತ್ಯಂ ಪ್ರಣಿಪತ್ಯ ಪಾದಯೋಃ ಭಜಾಮಿ ಭಕ್ತಾನ್ ಪಾಲಯ ಶ್ರೀ ಜಯಾರ್ಕ ॥8॥**

ಆದಿದೇವನಾದ ಪರಬ್ರಹ್ಮನ ಅದಿಷ್ಠಾನಭೂತನಾದ ಶ್ರೀ ಸೂರ್ಯದೇವನೇ ! ನಿನಗೆ ನನ್ನ ನಮಸ್ಕಾರ. ನಿನ್ನನ್ನು ಪೂರ್ಣವಾಗಿ ಯಾರಿಗೂ ತಿಳಿಯಲು ಶಕ್ಯವಿಲ್ಲ. ಮಂದ ಬುದ್ಧಿಯಾದ ನಾನಂತೂ ನಿನ್ನನ್ನು ಅರಿಯಲಾರೆ. ಯಜುರ್ವೇದದ ವಾಜಸನೇಯ ಶಾಖೆಯ ಪ್ರವರ್ತಕನೆಂದು ಮಾತ್ರ ನಿನ್ನನ್ನು ನಾವು ಕೇಳಿದ್ದೇವೆ. ಎಲ್ಲ ವೇದಗಳೂ ನಿನ್ನ ಮಹಾಮಹಿಮೆಯನ್ನು ಕೊಂಡಾಡುತ್ತಿವೆ. ಆದರೂ ಋಗ್ವೇದ, ಯಜುರ್ವೇದ, ಸಾಮವೇದ, ಅಥವರ್ಣವೇದ ಎಂಬ ನಾಲ್ಕು ವಿಧವಾದ ವೇದಗಳು ನಿನ್ನನ್ನು ಪೂರ್ಣವಾಗಿ ತಿಳಿಯಲಾರವು.

1) ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕು ವಿಧವಾದ ವಾಣಿಯು ನಿನ್ನನ್ನು ಸಮಗ್ರವಾಗಿ ಬಣ್ಣಿಸಲಾರದು. ನಿನ್ನಿಂದ ಅದು ಇನ್ನೂ ದೂರವೇ ಇದೆ. ಇಂಥ ನಿನ್ನನ್ನು ನಾನು ಸ್ವಾರ್ಥ ಕಾಮನೆಗಾಗಿ ಬಣ್ಣಿಸುವ ಸಾಹಸಕ್ಕೆ ಇಳಿದಿದ್ದೇನೆ. ನನ್ನ ಈ ಧಾರ್ಷ್ಟ್ಯವನ್ನು ನೀನು ಕ್ಷಮಿಸು.

2) ಸೂರ್ಯದೇವನೇ ನಿನಗೆ ಮಾರ್ತಂಡ, ಸೂರ್ಯ, ರವಿ, ಅಂಶುಮಾಲಿ, ಇಂದ್ರ, ಭಾನು, ಭಗ, ಅರ್ಯಮ, ಸ್ವರ್ಣರೇತಾ, ದಿವಾಕರ, ಮಿತ್ರ ಮತ್ತು ವಿಷ್ಣು ಹೀಗೆ ಹನ್ನೆರಡು ಹೆಸರುಗಳು ಇರುತ್ತವೆ. ಹೀಗೆ ದ್ವಾದಶಾತ್ಮ ಎಂದು ಪ್ರಸಿದ್ಧನಾದ ದಿವಾಕರನೇ ನಿನಗೆ ನನ್ನ ನಮಸ್ಕಾರ.

3) ಈ ಮೂರು ಲೋಕವೆಲ್ಲವೂ ನಿನಗೆ ಗರ್ಭಗೃಹ. ಸಂಪೂರ್ಣ ಆಕಾಶವೇ ನಿನಗೆ ಅಭಿಷೇಕದ ಜಲಧಾರೆ. ನಕ್ಷತ್ರಸಮೂಹವೇ ನಿನಗೊಂದು ಹೂವಿನಹಾರ. ನೀನೊಂದು ಆಕಾಶಲಿಂಗ, ಇಂಥ ಸವಿತೃದೇವನಿಗೆ ನಮೋನಮಃ .

4) ಭಗವನ್ ನೀನು ದೇವತೆಗಳಿಗೆಲ್ಲರಿಗೂ ಅಧಿದೇವತೆ, ಅನಾಥರಿಗೆ ರಕ್ಷಣೆ ಮಾಡುವ ನಾಥನು ನೀನೇ, ಶರಣು ಬಂದವರನ್ನು ರಕ್ಷಣೆ ಮಾಡುವ ಪ್ರಭು ನೀನು. ಕೃಪಣರ ಮೇಲೆ ದೀನ ದುಃಖಿತರ ಮೇಲೆ ದಯದೋರುವ ನೀನು ಪರಮಕೃಪಾಳು.

ನೀನು ಕಣ್ಣಿಗೆ ಕಣ್ಣು. ಚಕ್ಷುರಿಂದ್ರಿಯಕ್ಕೆ ದರ್ಶನಶಕ್ತಿಯನ್ನು ಅನುಗ್ರಹಿಸುವ ಮಹಾಪ್ರಭು. ಜನರ ಬುದ್ಧಿಗೆ ಜ್ಞಾನಶಕ್ತಿಯನ್ನು ಕರುಣಿಸುವ ಕೃಪಾಳು. ನೀನು ಪರಾತ್ಪರ. ಜೀವಕೋಟಿಗೆ ಜೀವಿಸುವ ಚೈತನ್ಯವನ್ನಿತ್ತು ಜೀವಿಗಳ ಜೀವಾತ್ಮ ಆಗಿರುವೆ. ನೀನು ದಾರಿದ್ರಕ್ಕೆ ದಾರಿದ್ರ್ಯವನ್ನು ತಂದು ಕೊಡುವೆ ಎಂದರೆ ನಿನ್ನನ್ನು ಭಜಿಸದವರ ಜ್ಞಾನ ದಾರಿದ್ರ್ಯ, ದ್ರವ್ಯ ದಾರಿದ್ರ್ಯ, ಭಕ್ತಿ ದಾರಿದ್ರ್ಯ, ಭಾಗ್ಯದಾರಿದ್ರ್ಯ ಮುಂತಾದವುಗಳನ್ನು ದೂರಮಾಡಿ ಅವರಿಗೆ ಸಿರಿ - ಸಂಪದಗಳನ್ನಿತ್ತು ಎಲ್ಲ ವಿಧವಾದ ಐಶ್ವರ್ಯ ಪ್ರದನಾದ ಸ್ವಾಮಿಯೂ ನೀನೇ ಆಗಿರುವೆ. ಭಾಗ್ಯನಿಧಿಗಳಿಗೆಲ್ಲ ನೀನೊಂದು ಸೌಭಾಗ್ಯನಿಧಿ. ರೋಗಗಳಿಗೆಲ್ಲ ನೀನೇ ರೋಗ ಎಂದರೆ ಪರಿಹಾರಕ. ನಿನ್ನ ಧ್ಯಾನದಿಂದ ಎಂಥ ರೋಗಗಳೂ ನಾಶವಾಗುವವು. ಆದ್ದರಿಂದ ನೀನು 'ರೋಗ ಪ್ರರೋಗ' ಎಂದು ಪ್ರಸಿದ್ಧನಾಗಿರುವೆ ಭೂಮಂಡಲದಲ್ಲಿ. ಅಪ್ರಮೇಯನಾದ ಆದಿತ್ಯದೇವನೇ ನಿನಗೆ ಜಯವಾಗಲಿ. ಕುಷ್ಠರೋಗದಿಂದ ಗ್ರಸ್ತನಾಗಿ ಬಳಲುವ ನನ್ನನ್ನು ಅನುಗ್ರಹಿಸು. ಈ ಭೀಕರವಾದ ವ್ಯಾಧಿಯಿಂದ ನನ್ನ ಈ ದೇಹವು ಜರ್ಜರಿತವಾಗಿದೆ. ನನ್ನ ಮೂಗು ನಷ್ಟವಾಗಿದೆ. ದೇಹದ ಒಂದೊಂದೇ ಅವಯವಗಳು ಈ ರೋಗದಿಂದ ಕಡಿದುಹೋಗುತ್ತಿವೆ. ಮೇಲಿಂದ ಮೇಲೆ ಮೂರ್ಚ್ಛೆ ಬರುತ್ತಿದೆ. ಇಂಥ

ಮಹಾರೋಗದಿಂದ ಪೀಡಿತನಾದ ರೋಗಿಷ್ಠನನ್ನು ತಾಯಿ ತೊರೆಯುತ್ತಾಳೆ, ತಂದೆ ಬಿಡುತ್ತಾನೆ. ಬಂಧು ಬಳಗದವರೂ ದೂರ ಸರಿಯುತ್ತಾರೆ. ಹೀಗೆ ಎಲ್ಲರೂ ಬಿಟ್ಟರೂ ಸೂರ್ಯದೇವ ನೀನು ಮಾತ್ರ ಎಂದೂ ಕೈ ಬಿಡುವದಿಲ್ಲ. ಕರುಣೆಯಿಂದ ಕಾಪಾಡುವೆ. ಆರೋಗ್ಯಭಾಗ್ಯವನ್ನು ದಯಪಾಲಿಸುವೆ ಎಂದ ಬಳಿಕ ನಿನಗೆ ಮಿಗಿಲಾದ ದೇವತೆಗಳು ಈ ಪ್ರಪಂಚದಲ್ಲಿ ಯಾರಿದ್ದಾರೆ?

ದೇವಾಧಿದೇವ, ನನಗೆ ನೀನೇ ನಿಜವಾದ ತಂದೆ. ತಾಯಿಯೂ ನೀನೇ. ನೀನೇ ನನ್ನ ಗುರು. ನನ್ನ ಬಂಧು - ಬಳಗವೆಂದರೆ ಸೂರ್ಯನೇ. ನನ್ನ ಧರ್ಮವೂ ನೀನು, ನನಗೆ ಮೋಕ್ಷಮಾರ್ಗವನ್ನು ತೋರಿಸುವ ಮಹಾಪ್ರಭು ನೀನೇ. ನಾನು ನಿನ್ನ ದಾಸ, ನಾನು ನಿನಗೆ ಶರಣು ಬಂದಿದ್ದೇನೆ. ನನ್ನನ್ನು ರಕ್ಷಿಸುವದು ಬಿಡುವದು ನಿನಗೆ ಸೇರಿದ್ದು. ಸ್ವಾಮೀ! ನಾನು ಮಹಾಪಾಪಿಷ್ಠ. ಬುದ್ಧಿಯಿಲ್ಲದ ಮೂಢ. ಭಯಂಕರ ಉಗ್ರ ಕರ್ಮಗಳನ್ನು ಮಾಡುವ ಭೀಕರ ಮಾನವನು ನಾನಾಗಿರುತ್ತೇನೆ. ನಾನೊಂದು ಪಾಪದ ನಿಧಿ. ಆದರೂ ನಾನು ಪ್ರತಿನಿತ್ಯವೂ ನಿನ್ನ ಪಾದಗಳನ್ನು ಸ್ಮರಿಸಿ ನಮಸ್ಕಾರ ಮಾಡಿ ಭಜನೆ ಮಾಡುತ್ತೇನೆ. ಶ್ರೀ ಜಯಾದಿತ್ಯನಾದ ಸೂರ್ಯದೇವನೇ ! ಭಕ್ತನಾದ ನನ್ನನ್ನು ನೀನು ರಕ್ಷಣೆ ಮಾಡು.

## ಸೂರ್ಯನಿಂದ ವರಪ್ರದಾನ

**ನಾರದ :** ಮಹಾತ್ಮನಾದ ಕಮಠ ಬಾಲಕನ ಅರ್ಥಭರಿತವಾದ ಈ ಸ್ತೋತ್ರವನ್ನು ಕೇಳಿ ಪರಮ ಸಂತುಷ್ಟನಾದ ಪ್ರಭು ಪ್ರಭಾಕರ. ಸ್ನಿಗ್ಧ ದೃಷ್ಟಿಯಿಂದ ಆ ಕಮಠವನ್ನು ನೋಡಿ ಕರುಣಾರಸದ ಅಮೃತವೃಷ್ಟಿಯನ್ನು ಅವನ ಮೇಲೆ ಸುರಿಸುತ್ತ ಗಂಭೀರ ವಾಣಿಯಿಂದ ಹೇಳಿದ. ''ವತ್ಸ, ಕಮಠ, ನೀನು ನನ್ನನ್ನು ಎಂಟು ಶ್ಲೋಕಗಳನ್ನು ಮಾಡಿ ಸ್ತೋತ್ರ ಮಾಡಿರುವೆ. ಇದರಲ್ಲಿಯ ಪ್ರತಿಯೊಂದು ಪದ್ಯವೂ ಭಕ್ತಿರಸದಿಂದ ಪರಿಪ್ಲುತವಾಗಿದೆ. ಇಂದು, ಜಯಾದಿತ್ಯ ಎಂಬ ಹೆಸರಿನ ಇಲ್ಲಿಯ ನನ್ನ ಕ್ಷೇತ್ರ ಮೂರ್ತಿಯನ್ನು ಸ್ತುತಿಸಿ ಈ ಎಂಟು ಪದ್ಯಗಳನ್ನು ರಚಿಸಿ ಹಾಡಿರುವೆ. ಇದು ಇನ್ನು ಮುಂದೆ ಜಗತ್ತಿನಲ್ಲಿ ಜಯಾದಿತ್ಯಾಷ್ಟಕ ಎಂಬ ಹೆಸರಿನಿಂದ ಪ್ರಸಿದ್ಧವಾಗುವದು. ಈ ಸೂರ್ಯಾಷ್ಟಕವನ್ನು ಪಠಿಸಿ, ನನ್ನ ಸ್ತೋತ್ರ ಮಾಡುವವರ ಕಾಮನೆಗಳನ್ನೆಲ್ಲ ನಾನು ಪೂರ್ಣಗೊಳಿಸುವೆನು. ವಿಶೇಷವಾಗಿ ರವಿವಾರದಂದು ನನ್ನ ಪೂಜೆ ಮಾಡಿ ಈ ಜಯಾದಿತ್ಯಾಷ್ಟಕ ಎಂಬ ಸ್ತೋತ್ರವನ್ನು ಪಾರಾಯಣ ಮಾಡಿದವರ ದಾರಿದ್ರ್ಯ ದೂರವಾಗುವದು. ರೋಗಗಳೆಲ್ಲವೂ ನಷ್ಟವಾಗುವವು. ವತ್ಸನೇ, ನೀನು ನಿನ್ನ ಈ ಸ್ತುತಿಯಿಂದ ನನ್ನನ್ನು ಸಂತೋಷಪಡಿಸಿರುವೆ. ಆದ್ದರಿಂದ ನಾನು ನಿನಗೆ ವರವನ್ನು ಕೊಡುತ್ತೇನೆ. ನಿನಗೆ ಆರೋಗ್ಯ ಭಾಗ್ಯವನ್ನೂ ಕರುಣಿಸಿದ್ದೇನೆ. ಪರಾಪರ ವಿಷಯಗಳ ಸಂಪೂರ್ಣ ಜ್ಞಾನವು ನಿನಗೆ ಪ್ರಾಪ್ತವಾಗಲಿ. ನಾನು ಕರುಣಿಸಿದ ದಿವ್ಯಜ್ಞಾನದಿಂದ ನೀನೊಬ್ಬ ಸರ್ವಜ್ಞ ಎಂದೇ ಪ್ರಸಿದ್ಧಿ ಪಡೆಯುವೆ. ಮುಂದೆ ನೀನು ಮೋಕ್ಷವನ್ನೇ ಹೊಂದುವೆ. ನನ್ನ ದಯೆಯಿಂದ ನಿನ್ನ ತಂದೆಯೂ ಮಹಾಜ್ಞಾನಿಯಾಗಿ

'ಹಾರೀತಸ್ಮೃತಿ' ಎಂಬ ಧರ್ಮಶಾಸ್ತ್ರ ಗ್ರಂಥವನ್ನು ಬರೆಯುವನು. ವತ್ಸ ! ನಾನು ನಿನ್ನ ಅಪೇಕ್ಷೆಯಂತೆ ಈ ಸ್ಥಾನದಲ್ಲಿಯೇ ನಿರಂತರವಾಗಿ ನೆಲೆಸುವೆನು. '' ಭಗವಾನ್ ಸೂರ್ಯನು ಹೀಗೆ ಕಮಠ ಕುಮಾರನ ಮೇಲೆ ಅನುಗ್ರಹ ಮಾಡಿ ನುಡಿದ ಬಳಿಕ, ಅಲ್ಲಿದ್ದ ದ್ವಿಜಶ್ರೇಷ್ಠರೆಲ್ಲರೂ ಕೂಡಿ ಮತ್ತೆ ಆ ಸೂರ್ಯದೇವನನ್ನು ವಿಧ್ಯುಕ್ತ ರೀತಿಯಿಂದ ಪೂಜೆ ಮಾಡಿದರು. ಮತ್ತು ಭಕ್ತಿಯಿಂದ ಸ್ತೋತ್ರ ಮಾಡಿದರು. ಅನಂತರ ಆದಿತ್ಯ ದೇವನು ಒಂದು ರೂಪದಿಂದ ಅಲ್ಲಿಯ ಬಾಲಾದಿತ್ಯ ಮೂರ್ತಿಯಲ್ಲಿ ಸನ್ನಿಹಿತವಾಗಿ ತನ್ನ ಮೂಲರೂಪದಿಂದ ಅಂತರ್ಧಾನ ಹೊಂದಿದನು.

ಕುಂತೀಪುತ್ರ ಅರ್ಜುನ ! ಈ ಭೂಲೋಕದಲ್ಲಿ ಆಶ್ವೀನಮಾಸದಲ್ಲಿ ಜಯಾದಿತ್ಯನ ಪ್ರಾದುರ್ಭಾವ, ಆದ್ದರಿಂದ ಎಲ್ಲ ಮಾಸಗಳಲ್ಲಿ ಆಶ್ವೀನ ಮಾಸವು ಒಂದು ವಿಶೇಷ ಪರ್ವಕಾಲ, ಈ ಆಶ್ವೀನಮಾಸದಲ್ಲಿ ಭಾನುವಾರದಂದು ಕೋಟಿ ತೀರ್ಥದಲ್ಲಿ ಸ್ನಾನಮಾಡಿ, ಜಯಾದಿತ್ಯನನ್ನು ಪೂಜೆಗೈದು ಈ ಜಯಾದಿತ್ಯಾಷ್ಟಕ ಎಂಬ ಸ್ತೋತ್ರವನ್ನು ಪಠಿಸಿದವರ ರೋಗ ರುಜಿನಗಳೆಲ್ಲವೂ ನಾಶವಾಗುವವು. ಈ ಜಯಾದಿತ್ಯ ದೇವನನ್ನು ಕೆಂಪುಬಣ್ಣದ ಹೂಗಳನ್ನು ಏರಿಸಿ, ರಕ್ತ ಚಂದನವನ್ನು ಲೇಪಿಸಿ, ಧೂಪ ದೀಪಗಳನ್ನು ಬೆಳಗಿ, ತುಪ್ಪದಲ್ಲಿ ತಯಾರು ಮಾಡಿದ ಪಕ್ವಾನ್ನಗಳನ್ನು ನೈವೇದ್ಯವಿಟ್ಟು ಪೂಜೆ ಮಾಡಿದವರಿಗೆ, ಸಂಪೂರ್ಣ ಆರೋಗ್ಯ ಭಾಗ್ಯವು ಪ್ರಾಪ್ತವಾಗುವದು. ಬ್ರಹ್ಮಹತ್ಯಾದಿ ಪಂಚಮಹಾಪಾತಕಗಳು ನಾಶವಾಗುವವು.

ಪ್ರತಿಯೊಂದು ರವಿವಾರದಂದು ಮಾನವರು ತಾವು ಎಲ್ಲಿಯೇ ಇರಲಿ ಈ ಜಯಾದಿತ್ಯ ಸ್ತೋತ್ರವನ್ನು ಪಠಣ ಮಾಡಿದರೆ ರೋಗಶಾಂತಿ ಮನಶ್ಶಾಂತಿಯೂ ಇದರಿಂದ ಉಂಟಾಗುವದು. ಸೂರ್ಯಗ್ರಹಣ ಕಾಲದಲ್ಲಿ ಈ ಸೂರ್ಯಕೂಪದಲ್ಲಿ ಸ್ನಾನಮಾಡಿ, ಈ ಜಯಾದಿತ್ಯ ದೇವನ ಸನ್ನಿಧಿಯಲ್ಲಿ ಯಥಾಶಕ್ತಿ ದಾನದಕ್ಷಿಣೆಯನ್ನು ನೀಡಿದವರಿಗೆ ಪ್ರಭಾಸ, ಪುಷ್ಕರ, ಪ್ರಯಾಗ, ಕಾಶಿ, ಕುರುಕ್ಷೇತ್ರ ಮುಂತಾದ ಸಕಲ ತೀರ್ಥಕ್ಷೇತ್ರಗಳಲ್ಲಿ ಸ್ನಾನಮಾಡಿ ಸೂರ್ಯಾರ್ಚನೆ ಮಾಡಿದ ಪುಣ್ಯವು ಪ್ರಾಪ್ತವಾಗುವದು.



**ಶ್ರೀ ಸ್ಕಂದ ಮಹಾಪುರಾಣದಲ್ಲಿ ಮೂವತ್ತಾರನೇ ಅಧ್ಯಾಯ ಮುಗಿದುದು.**

**ಸ್ಕಂದ ಮಹಾಪುರಾಣದ ಮೊದಲನೆಯದಾದ ಪ್ರಥಮಭಾಗ ಸಮಾಪ್ತ**

**ಸಂಶೋಧಕರು - ಅನುವಾದಕರು**

**ಮಹಾಮಹೋಪಾಧ್ಯಾಯ**

**ಪಂಡಿತಪಂಢರೀನಾಥಚಾರ್ಯ ಗಲಿಗಲಿ**